# ಶ್ರೀಮದ್ಭಾಗವತ

## ನವಮಸ್ಕಂಧ



ಅನುವಾದ ಹಾಗೂ ಸಂಪಾದನೆ

ಪಂ. ಪೂ. ಗುತ್ತಲ ರಂಗಾಚಾರ್ಯರು

ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ

ಪ್ರಕಾಶನ : ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 197

# ಶ್ರೀಮದ್ಭಾಗವತ

# ನವಮಸ್ಕಂಧ

... ಅನುವಾದ ಹಾಗೂ ಸಂಪಾದನೆ ...

**ಪಂ.ಪೂಜ್ಯ ಗುತ್ತಲ ರಂಗಾಚಾರ್ಯರು**

ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ

| | |
|---|---|
| ಮೊದಲಾವೃತ್ತಿ ಸಂಶೋಧಕರು | ಪಂ. ಕಟ್ಟಿ ಕೇಶವಾಚಾರ್ಯ<br>ಪಂ.ಕೃಷ್ಣಾಚಾರ್ಯ ಉಪಾಧ್ಯಾಯ |
| ದ್ವಿತೀಯಾವೃತ್ತಿ ಸಂಶೋಧಕರು | ಪಂ ಪ್ರಮೋದಾಚಾರ್ಯ ಪಡಸಲಗಿ<br>ಪಂ.ಸುಹೃತ್ ಆಚಾರ್ಯ ಕಲ್ಲೂರಕರ್<br>ಪಂ. ಪ್ರಭಂಜನಾಚಾರ್ಯ ಕಲ್ಲೂರಕರ್ |

... ಪ್ರಕಾಶನ ...

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಉತ್ತರಾದಿಮಠ

**ವಿಶ್ವಮಧ್ವಮಹಾಪರಿಷತ್**

ಬಸವನಗುಡಿ ಬೆಂಗಳೂರು - 4

**Srimad Bhagavata Navama Skandha**
A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by Sudha Visharada Pandita Poojya **Rangacharya Guttal**, Kulapati of Sri Jayateertha Vidyapitha.

| | |
|---|---|
| Kannada Anuvada by | **Poojya Rangacharya Guttal** |
| Published by | **Vishva Madhwa Maha Parishat** Research Center, Phone : 080 26603692 |

| Edition | Year | Copies | Total |
|---|---|---|---|
| First | 1989 | 1,000 | 1,000 |
| Second | 2019 | 1,000 | 2,000 |

| | |
|---|---|
| No.of Pages | xvi+448=464 |
| © | Reserved |
| Price. | **Rs. 250** |
| Type Setting | V.M.M.P Research wing |
| Cover Design by | Gopalakrishna Davanagere |

**Copies can be had from**

**Vishva Madhwa Maha Parishat**
Research Center, #11, 2nd Floor,
Uttaradi Math Building. Uttaradi Math Road,
Shankarpuram, Basavanagudi
BANGALORE - 4 Phone : 080 26603692

rinted by : **VAGARTHA,**
149, 8th Cross, N.R.Colony, Bangalore-4 Ph.22427677.



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಸಂಸ್ಥಾಪಕರಾದ

**ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ**

ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀ ದಿಗ್ವಿಜಯರಾಮೋ ವಿಜಯತೇ ॥
ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯತ್ವಾದ್ಯನೇಕ ಗುಣಗಣಾಲಂಕೃತ,
ಶ್ರೀಮನ್ಮೂಲಸೀತಾಸಮೇತಶ್ರೀಮನ್ಮೂಲರಾಮ ಶ್ರೀದಿಗ್ವಿಜಯರಾಮವೇದವ್ಯಾಸದೇವರ
ದಿವ್ಯಪಾದಪದ್ಮಾರಾಧಕರಾದ, ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ ೧೦೦೮ ಶ್ರೀ ಸತ್ಯಾಭಿಜ್ಞತೀರ್ಥಕರಕಮಲಸಂಜಾತರಾದ

# ಶ್ರೀಮತ್ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ

# ‘‘ಅನುಗ್ರಹಸಂದೇಶ’’

ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ಮೇಲೆಯೂ, ಧರ್ಮವು ಸುರಕ್ಷಿತವಾಗಿ ಮುಂದುವರೆಯಲೆಂದು ಬಾದರಾಯಣರು ಭಾಗವತ ಪುರಾಣವನ್ನು ರಚಿಸಿರುವರು. ಇದಕ್ಕೆ ಭಕ್ತಿಶಾಸ್ತ್ರವೆಂದು ಪ್ರಸಿದ್ಧಿಯಿದೆ. ಸಮಾಧಿ, ದರ್ಶನ, ಗುಹ್ಯವೆಂಬ ಭಾಷಾತ್ರಯಗಳ ಜ್ಞಾನವಿಲ್ಲದ ಪಾಂಥರಿಗೆ ಪುರಾಣಗಳ ಅಧ್ಯಯನಮಾರ್ಗವನ್ನು ಕ್ರಮಿಸುವುದು ದುಸ್ತರ. ಅದಕ್ಕಾಗಿ ಮಾರ್ಗದರ್ಶಕನಾದ ಗೆಳೆಯನಂತಿದ್ದ ಭಾಗವತ ತಾತ್ಪರ್ಯ ನಿರ್ಣಯವನ್ನು ಶ್ರೀ ಮಧ್ವಾಚಾರ್ಯರು ಅನುಗ್ರಹಿಸಿರುವರು. ಅದೇ ಮಾರ್ಗಕ್ಕೆ ಪ್ರಕಾಶಕವಾದ ದೀಪಗಳಂತಿದ್ದ ವ್ಯಾಖ್ಯಾನಗಳನ್ನು ವಿಜಯಧ್ವಜತೀರ್ಥರು, ಯಾದವಾಚಾರ್ಯರು, ಸತ್ಯಧರ್ಮತೀರ್ಥರು, ಶ್ರೀನಿವಾಸತೀರ್ಥರು ಮೊದಲಾದ ಅನೇಕ ಮಹನೀಯರು ವಿರಚಿಸಿರುವರು.

ವೇದಗಳನ್ನು ಸಾಂಗವಾಗಿ ಓದಿದ ಮೇಲೆಯೂ ಪುರಾಣಗಳನ್ನು ಅಭ್ಯಸಿಸಲೇ ಬೇಕು. ಇಲ್ಲವಾದರೆ ಅವನು ವಿಚಕ್ಷಣನಾಗಲಾರನೆಂದು ಪ್ರಮಾಣವಿದೆ. ಇತಿಹಾಸ ಪುರಾಣಗಳು ವೇದಾರ್ಥಜ್ಞಾನಕ್ಕೆ ಪೂರಕವಾಗಿವೆ.

ನಮ್ಮ ಪ್ರೀತಿಯ ಶಿಷ್ಯರಾದ ಶ್ರೀ ಗುತ್ತಲ ರಂಗಾಚಾರ್ಯರವರು ನವಮಸ್ಕಂಧದ ಕನ್ನಡಾನುವಾದವನ್ನು, ತಾತ್ಪರ್ಯಕ್ಕೂ, ಸಾಂಪ್ರದಾಯಿಕವಾದ ಮೇಲಿನ ವ್ಯಾಖ್ಯಾನಗಳಿಗೂ ಅನುಸರಿಸಿ ಮಾಡಿರುವರು. ಅವರ ಪ್ರಯತ್ನವು ಅಭಿನಂದನೀಯವಾಗಿದೆ. ಸಜ್ಜನರಿಗೆ ಉಪಕಾರಕವಾಗಿದೆ. ಪುರಾಣಗಳೂ ಶಾಸ್ತ್ರವೇ ಆದದ್ದರಿಂದ ಅವುಗಳ ಅಧ್ಯಯನವು ಸಂಪ್ರದಾಯಜ್ಞರೂ ಸದಾಚಾರಶೀಲರೂ ಆದ ಗುರುಗಳ ಮುಖದಿಂದಲೇ ಆಗಬೇಕು. ಕನ್ನಡಾನುವಾದಗಳು ಅದಕ್ಕೆ ಸಹಾಯಕವಾಗಬಲ್ಲವು.

ಅನುವಾದಕರಿಗೂ ಅಧ್ಯೇತೃಗಳಿಗೂ ಸುದೀರ್ಘ ಆಯುರಾರೋಗ್ಯಗಳನ್ನೂ ಜ್ಞಾನ-ಭಕ್ತಿ ವೈರಾಗ್ಯಗಳನ್ನೂ ಅನುಗ್ರಹಿಸಲೆಂದು ಅಸ್ಮದುಪಾಸ್ಯ ಶ್ರೀಮೂಲರಾಮಚಂದ್ರನಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು**



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಪೋಷಕರಾದ

**ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ**

**ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ**

॥ ಶ್ರೀ ದಿಗ್ವಿಜಯರಾಮೋ ವಿಜಯತೇ ॥
ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯತ್ವಾದ್ಯನೇಕ ಗುಣಗಣಾಲಂಕೃತ,
ಶ್ರೀಮನ್ಮೂಲಸೀತಾಸಮೇತಶ್ರೀಮನ್ಮೂಲರಾಮ ಶ್ರೀದಿಗ್ವಿಜಯರಾಮವೇದವ್ಯಾಸದೇವರ
ದಿವ್ಯಪಾದಪದ್ಮಾರಾಧಕರಾದ, ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ ೧೦೦೮ ಶ್ರೀ ಸತ್ಯಾಭಿಜ್ಞತೀರ್ಥಕರಕಮಲಸಂಜಾತರಾದ
ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ವರಕುಮಾರರಾದ

# ಶ್ರೀಮತ್ ಸತ್ಯಾತ್ಮತೀರ್ಥಶ್ರೀಪಾದಂಗಳವರ

# ''ಅನುಗ್ರಹಸಂದೇಶ''

ಮುಕ್ತಿಸಾಧನವಾದ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ನೀಡುವ ಶ್ರೇಷ್ಠವಾದ ಪುರಾಣರಾಜ ಶ್ರೀಮದ್ಭಾಗವತ. ಶ್ರೀಮದ್ಭಾಗವತದ ಒಂದೊಂದು ಶ್ಲೋಕವೂ ಅರ್ಥಗರ್ಭಿತವಾಗಿದೆ. ಮೇಲ್ನೋಟಕ್ಕೆ ಸುಲಭಾಗಿ ತೋರಿದರೂ ಸೂಕ್ಷ್ಮದೃಷ್ಟಿಯಿಂದ ನೋಡಿದಾಗ ಬಹಳ ಗಂಭೀರವಾಗಿ ತೋರುವದು. ಮಹಾನುಭಾವರಾದ ಜ್ಞಾನಿವರೇಣ್ಯರ ವ್ಯಾಖ್ಯಾನಗಳ ಸಹಾಯವಿಲ್ಲದೇ ಅರ್ಥಮಾಡಿಕೊಳ್ಳುವದು ಬಹಳ ಕಷ್ಟ. ಈ ದೃಷ್ಟಿಯಿಂದ ನಮ್ಮ ಸ್ವರೂಪೋದ್ಧಾರಕ ಗುರುಗಳ ಪರಮಪ್ರಿಯ ಶಿಷ್ಯರಾದ ಸುಧಾವಿಶಾರದರಾದ ನಿರಂತರ ಸುಧಾ ವ್ಯಾಸತ್ರಯಾದಿ ಗ್ರಂಥಗಳ ಪಾಠ ಪ್ರವಚನಗಳಲ್ಲಿ ಆಸಕ್ತರಾದ ಪಂಡಿತವರ್ಯ ಗುತ್ತಲಾಚಾರ್ಯರವರು (ರಂಗಾಚಾರ್ಯರವರು) ೩೨ವರ್ಷಗಳ ಹಿಂದೆ ಶ್ರೀಮದ್ಭಾಗವತದ ವ್ಯಾಖ್ಯಾನಸಮೇತವಾದ ವಿಸ್ತೃತವಾದ ಕನ್ನಡ ಅನುವಾದದ ದೊಡ್ಡ ಉಪಕ್ರಮವನ್ನು ಮಾಡಿದರು.

ಈ ಅನವಮ ನವ ಪ್ರಯತ್ನಕ್ಕೆ ಆರಿಸಿಕೊಂಡದ್ದೇ ಅನವಮ ನವಮಸ್ಕಂಧ. ಸೂರ್ಯವಂಶ, ಚಂದ್ರವಂಶಗಳ ವಿಷ್ಣುಭಕ್ತರಾದ ರಾಜರ ಚರಿತ್ರೆಗಳನ್ನು ವರ್ಣಿಸುವ ಈ ನವಮಸ್ಕಂಧವು ವಿಷ್ಣುಭಕ್ತಿಯ ಉದ್ರೇಕವನ್ನು ಉಂಟುಮಾಡುವದರಲ್ಲಿ ಪರಮಸಮರ್ಥವಾಗಿದೆ. ಇದಕ್ಕೆ ಉಪಲಬ್ಧವಾದ ವಿಜಯಧ್ವಜತೀರ್ಥರ ಟಿಪ್ಪಣಿ ಸತ್ಯಧರ್ಮತೀರ್ಥರ ವ್ಯಾಖ್ಯಾನ ಛಲಾರಿಆಚಾರ್ಯರ ಹಾಗೂ ಆಯಿಆಚಾರ್ಯರ ವ್ಯಾಖ್ಯಾನಗಳನ್ನೆಲ್ಲವನ್ನು ಚೆನ್ನಾಗಿ ಪರಾಮರ್ಶಿಸಿ ತಿಳಿಯಾದ ಕನ್ನಡಭಾಷೆಯಲ್ಲಿ ವಿದ್ಯಾರ್ಥಿಗಳಿಗೂ ಹಾಗೂ ವಿದ್ವಾಂಸರಿಗೂ ಉಪಕಾರವಾಗುವಂತೆ ಅನುವಾದ ಕಾರ್ಯವನ್ನು ಆಚಾರ್ಯರವರು ಮಾಡಿದ್ದಾರೆ.

ನವಮಸ್ಕಂಧದಿಂದ ಪ್ರಾರಂಭವಾದ ಈ ಅನುವಾದಕಾರ್ಯ ೧೨ಸ್ಕಂದಗಳಿಗೆ ಪರಿಪೂರ್ಣವಾಗಿ ನಡೆದಿದೆ. ಇದರ ಉಪಯೋಗವನ್ನು ಹತ್ತಾರು ವರ್ಷಗಳಿಂದ ಅನೇಕ ವಿದ್ವಾಂಸರು ವಿದ್ಯಾರ್ಥಿಗಳು ಪಡೆದು ಧನ್ಯತೆಯನ್ನು ಅನುಭವಿಸಿದ್ದಾರೆ.

ಇದೀಗ ಶ್ರೀವಿಶ್ವಮಧ್ವಮಹಾಪರಿಷತ್ತು ಹಾಗೂ ಶ್ರೀಮದ್ ಉತ್ತರಾದಿಮಠದಿಂದ ಪುಸ್ತಕ ಮುದ್ರಣವಾಗುತ್ತಿರುವುದು ಪರಮಸಂತೋಷದ ಸಂಗತಿ ಆಚಾರ್ಯರವರಿಗೆ ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲಸೀತಾಸಮೇತ ಶ್ರೀಮನ್ಮೂಲ-ರಾಮಚಂದ್ರದೇವರು ದಿಗ್ವಿಜಯರಾಮಚಂದ್ರದೇವರು ಶ್ರೀವೇದವ್ಯಾಸದೇವರು ಶ್ರೀವಂಶರಾಮದೇವರು ಶ್ರೀಪ್ರಸನ್ನವಿಠ್ಠಲದೇವರು ಆಯುರಾರೋಗ್ಯಾದಿಗಳನ್ನು ಹಾಗೂ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ನೀಡಿ ಇತೋಽಪ್ಯತಿಶಯವಾಗಿ ಇವರಿಗೆ ಸುಧಾದಿಗ್ರಂಥಗಳ ಪಾಠ ಪ್ರವಚನಗಳನ್ನು ಹಾಗೂ ಗ್ರಂಥರಚನಾಕಾರ್ಯಗಳನ್ನು ಮಾಡಿಸಲೆಂದು ಪ್ರಾರ್ಥಿಸುತ್ತೇವೆ.

ಇತಿ ಶ್ರೀನಾರಾಯಣಸ್ಮರಣೆಗಳು

**ಐನಾಪೂರ**

೨೫.೧೦.೨೦೧೯

ಶ್ರೀಸತ್ಯಾತ್ಮತೀರ್ಥಶ್ರೀಪಾಂದಗಳವರು ಉತ್ತರಾದಿಮಠ

॥ ಶ್ರೀ ವೈಕುಂಠರಾಮೋ ವಿಜಯತೇ ॥

ಶ್ರೀಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಶ್ರೀಪಾದಂಗಳವರ ಸಂಸ್ಥಾನ
ಶಿವಮೊಗ್ಗ -577202,

# ಅನುಗ್ರಹವಚನ

ಅನಾದಿಯಾದ ಭವರೋಗವು ಜೀವರಿಗೇನೇ. ಅವನು ಜನನ-ಮರಣರೂಪವಾದ ಸಂಸಾರದಲ್ಲಿ ಸಿಲುಕಿ ಬಹಳೇ ದುಃಖವನ್ನು ಅನುಭವಿಸುವದು ಸರ್ವಾನುಭವಸಿದ್ಧ.

ತ್ರಿವಿಧ ಜೀವರಾಶಿಗಳಲ್ಲಿ ಸಾತ್ವಿಕಜೀವನ ಸ್ವರೂಪವು ಜ್ಞಾನಾನಂದರೂಪವೇ ಆಗಿದೆ. ಆದರೆ ಇಂತಹ ಸ್ವರೂಪವು ಜೀವನಿಗೆ ಸಂಸಾರದಲ್ಲಿದ್ದಾಗ ಅನುಭವಕ್ಕೆ ಬರುವುದಿಲ್ಲ. ಆದ್ದರಿಂದ ಜೀವನ ಸ್ವರೂಪದ ಮೇಲೆ ಜಡಭೂತವಾದ ಆವರಣವು ಇರಲೇಬೇಕು. ತನ್ಮೂಲಕವಾಗಿ ಜೀವನು ತನ್ನ ಸ್ವರೂಪವನ್ನು ತನಗೆ ಬಿಂಬಮೂಲವಾದ ಪರಮೋಪಕಾರಿಯಾದ ಶ್ರೀಹರಿಯ ಸ್ವರೂಪವನ್ನು ತಿಳಿಯದೇ ಇರುವುದೇ ಬಂಧಕ್ಕೆ ಕಾರಣವಾಗಿದೆ. ''ಅದೃಷ್ಟಾಶ್ರುತವಸ್ತುತ್ವಾತ್ ಸ ಜೀವೋ ಯಃ ಪುನರ್ಭವಃ'' ಬಂಧಕನಾದ ಭಗವಂತನ ಅಪರೋಕ್ಷಜ್ಞಾನವೇ ಮೋಕ್ಷಕ್ಕೆ ಕಾರಣ. ಜ್ಞಾನದಿಂದ ಭಗವಂತನ ಅತ್ಯರ್ಥಪ್ರಸಾದವಾಗಿ ಜೀವನು ಮುಕ್ತನಾಗುವನು. ಈ ಅಪರೋಕ್ಷ ಜ್ಞಾನಕ್ಕೆ ಶ್ರವಣಮನನರೂಪವಾದ ಜಿಜ್ಞಾಸೆಯೇ ಕಾರಣ. ಇಂತಹ ಜಿಜ್ಞಾಸೆಯನ್ನು ಮಾಡಬೇಕಾದರೆ ಭಗವದ್ಭಕ್ತನೇ ಅಧಿಕಾರಿ, ಭಕ್ತಿಯಾದರೂ ಕಾದಾಚಿತ್ಕ ಭಕ್ತಿಯ ಉಪಯೋಗವಿಲ್ಲ. ''ವೈರಾಗ್ಯತೋ ಭಕ್ತಿದಾರ್ಢ್ಯಂ'' ಎಂದು ಹೇಳಿದ ರೀತಿಯಿಂದ ಧೃಢವಾದ ಭಕ್ತಿಯೇ ಕಾರಣ.

ಭಕ್ತಿ ಎಂದರೆ ಭಗವಂತನ ಅಗಾಧವಾದ ಮಾಹಾತ್ಮ ಜ್ಞಾನಪೂರ್ವಕವಾದ ಸ್ನೇಹ. ಇಂತಹ ಭಕ್ತಿಯನ್ನು ಉತ್ಪಾದಿಸಿ ಜೀವನಿಂದ ಅಪೇಕ್ಷಿತವಾದ ಆತ್ಯಂತಿಕ ದುಃಖ-ನಿವೃತ್ತಿಪೂರ್ವಕ ವಿಶಿಷ್ಟ ಪರಮಾನಂದವನ್ನು ಕೊಡತಕ್ಕ ಶಾಸ್ತ್ರ ಎಂದರೆ ಶ್ರೀಮದ್ಭಾಗವತ. ಇದರಲ್ಲಿ ದ್ವಾದಶಸ್ಕಂಧಗಳ ಒಂದೊಂದು ಸ್ಕಂಧವನ್ನು ಭಕ್ತಿ ಪೂರ್ವಕ ಶ್ರವಣ ಮಾಡಿದರೆ ಒಂದೊಂದು ಮಹಾಫಲ.

ಈ ಭಾಗವತವು ಸಂಸ್ಕೃತದಲ್ಲಿದ್ದು ಸರ್ವರಿಗೂ ಅಧ್ಯಯನ ಮಾಡಲಿಕ್ಕೆ ಅಶಕ್ಯವಾದ್ದರಿಂದ ಈ ಭಾಗವತಕ್ಕೆ ವಿಜಯಧ್ವಜೀಯ ಟೀಕಾಸಹಿತ ಶ್ರೀಎನ್. ಕೃಷ್ಣ ಮೂರ್ತಿಗಳು ಅಚ್ಚು ಹಾಕಿಸಿದ್ದರು. ಮುಂದಿನ ಸ್ಕಂಧಗಳ ಅನುವಾದವನ್ನು ಶ್ರೀಪಾದಪುತ್ರರಾದ ಶ್ರೀ ಗುತ್ತಲ ರಂಗಾಚಾರ್ಯರು ಕೈಕೊಂಡಿದ್ದಾರೆ. ನವಮಸ್ಕಂಧವು ಈಗ ಪ್ರಿಂಟಾಗಿ ಬಿಡುಗಡೆಯಾಗುವದಿದೆ. ಸಜ್ಜನರಾದ ತಾವೆಲ್ಲರೂ ಈಗ್ರಂಥದ ಉಪಯೋಗ ಹೊಂದಿ ಕೃತಾರ್ಥರಾಗುವದು.

ನಾರಾಯಣ ಸ್ಮರಣೆಗಳು,

- ಶ್ರೀ ರಘುಪ್ರಿಯತೀರ್ಥ ಶ್ರೀಪಾದಂಗಳವರು.

|| ಶ್ರೀ ಲಕ್ಷ್ಮೀನರಸಿಂಹಃ ಪ್ರಸೀದತು ||

# ಮುನ್ನುಡಿ

ಭಾಗವತಶಾಸ್ತ್ರವೇ ಬಹು ಭಾಗ್ಯವೆಂದು ವಾದಿರಾಜರು ಶಪಥಪೂರ್ವಕವಾಗಿ ಸಾರಿರುವರು. ಆದ್ದರಿಂದಲೇ ಸಿದ್ಧಾಂತಧೌರೇಯರಾದ ಶ್ರೀಯಾದವಾರ್ಯರೇ ಮೊದಲಾದ ಜ್ಞಾನಿವರೇಣ್ಯರು ಭಾಗವತಾಧ್ಯಯನವನ್ನು ನಿತ್ಯಕರ್ಮವನ್ನಾಗಿಟ್ಟುಕೊಂಡು ಶ್ರೀಮದಾಚಾರ್ಯರು ಉಪದೇಶಿಸಿದ ತಾತ್ಪರ್ಯನಿರ್ಣಯವನ್ನು ಉಪಜೀವಿಸಿ, ಭಾಗವತದಲ್ಲಿ ನಿಗೂಢವಾದ ಪ್ರಮೇಯಗಳನ್ನು ಪ್ರಕಾಶಿಸುವ ಅನೇಕ ವ್ಯಾಖ್ಯಾನರತ್ನಗಳನ್ನು ವಿರಚಿಸಿರುವರು.

ಸಂಪ್ರದಾಯಶುದ್ಧವಾದ ರೀತಿಯಿಂದ ಗುರುಮುಖದಿಂದ ಭಾಗವತಶ್ರವಣವು ಅತ್ಯಗತ್ಯ. ಆ ಮೇಲೆಯೇ ಶ್ರುತವಾದ ಅರ್ಥದ ಮನನಕ್ಕಾಗಿ ಮಾತ್ರ ಕನ್ನಡಾನುವಾದಗಳ ಉಪಯೋಗ. ನಮ್ಮ ಪ್ರಿಯಮಿತ್ರರಾದ ದಿವಂಗತ ಶ್ರೀ ನಂದಗುಡಿ ಕೃಷ್ಣಮೂರ್ತಿಯವರು ೮ ಸ್ಕಂಧಗಳಿಗೆ ಕನ್ನಡಾನುವಾದವನ್ನು ವಿಜಯಧ್ವಜೀಯ ಪಾಠ ಮತ್ತು ಸಂಪ್ರದಾಯಾನುಗುಣವಾಗಿ ಬರೆದಿರುವರು. ಸಂಕಲ್ಪವನ್ನು ಪೂರ್ತಿಗೊಳಿಸಲು ಅವರ ಆಯುಃಪರಿಮಿತಿಯು ಅಡ್ಡಿಯಾದದ್ದು ವೈಷ್ಣವ ಸಮಾಜಕ್ಕೆ ಶೋಚನೀಯ.

ಇನ್ನುಳಿದ ಭಾಗಗಳನ್ನು ಪೂರ್ತಿಗೊಳಿಸಲು ಅನೇಕ ಬುಭೂಷುಗಳ ಆಕಾಂಕ್ಷೆಯನ್ನು ಈಡೇರಿಸಲು ನನ್ನ ಈ ನವಮಸ್ಕಂಧದ ಕನ್ನಡಾನುವಾದದ ಪ್ರಯತ್ನ. ಸಾಮಾನ್ಯವಾಗಿ ಪೂರ್ವದ ಪರಿಪಾಠವನ್ನು ಇಲ್ಲಿಯೂ ಅನುಸರಿಸಲಾಗಿದೆ. ಅನ್ವಯಾರ್ಥವನ್ನು ನಿರೂಪಿಸಿದ್ದಲ್ಲದೆ ತಾತ್ಪರ್ಯದೀಪಿಕಾ ಸತ್ಯಧರ್ಮೀಯ, ಛಲಾರಿ ಮುಂತಾದ ಟಿಪ್ಪಣಿಗಳಲ್ಲಿಯ ವಿಶೇಷ ವಿಷಯಗಳನ್ನೂ ವಿವರಿಸಿದ್ದುಂಟು. ಸಂಗತವಾಗುವಂತೆ ಭಾರತದಲ್ಲಿಯ ಪೂರ್ವಾಪರ ಆಖ್ಯಾನಗಳೂ ವರ್ಣಿಸಲ್ಪಟ್ಟಿವೆ. ಓದುಗರಿಗೂ ವಿಮರ್ಶಕರಿಗೂ ಇದರಿಂದ ಸಹಾಯವಾಗುವದೆಂದು ಆಶಿಸಿದ್ದೇನೆ.

ಈ ಕಾರ್ಯದಲ್ಲಿ ಪ್ರವರ್ತಿಸುವದಕ್ಕೂ ಅದರ ನಿರ್ವಾಹಕ್ಕೂ ಹೆಜ್ಜೆ ಹೆಜ್ಜೆಗೂ ಪರಮಪೂಜ್ಯ ಜಗದ್ಗುರುಗಳಾದ ನಮ್ಮ ಶ್ರೀಶ್ರೀಪಾದಂಗಳವರ ಕೃಪಾಲೇಶವೇ ಕಾರಣವು. ಅವರ ಶುಭಾಶೀರ್ವಚನವು ಈ ಪ್ರಯತ್ನವನ್ನು ಮುಂದುವರಿಸಿ ಸಾಂಗವಾಗಿ ಪೂರ್ತಿಗೊಳಿಸಲು ಪ್ರೋತ್ಸಾಹಕವಾಗಿದೆ. ಅವರ ಮಹೋಪಕಾರಕ್ಕಾಗಿ ಅವರ ಪೂಜ್ಯ ಅಡಿದಾವರೆಗಳಲ್ಲಿ ಭಕ್ತಿ ಪರಿಪೂರ್ಣವಾದ ಅನಂತ ಸಾಷ್ಟಾಂಗ ಸಂಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಶ್ರೀಕಟ್ಟಿಕೇಶವಾಚಾರ್ಯರುನನ್ನಅನುವಾದಕಾರ್ಯವುರೂಪಗೊಳ್ಳುವದರಲ್ಲಿ ಬಹುಮುಖವಾಗಿ ಸಹಾಯಕರಾದದ್ದನ್ನು ಇಲ್ಲಿ ಉಲ್ಲೇಖಿಸದಿರಲಾರೆನು. ಅನೇಕ ಟಿಪ್ಪಣಿಗಳನ್ನು ವಿಮರ್ಶಿಸಿ, ಬೇರೆ ಬೇರೆ ನಿರೂಪಣೆಗಳನ್ನು ಒಂದುಗೂಡಿಸಿ ಸುಯೋಜಿತ ಕ್ರಮದಿಂದ ವಿವರಿಸುವ ಮುಂತಾದ ಕಾವ್ಯಗಳಲ್ಲಿ ಅವರ ಸಲಹೆ ಸಹಕಾರಗಳನ್ನು ಮರೆಯುವಂತಿಲ್ಲ. ಅವರಿಗೆ ಜ್ಞಾನಭಕ್ತ್ಯಾದಿಗಳನ್ನು ಅನುಗ್ರಹಿಸಲೆಂದು ಹರಿಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

ಸಂಶೋಧನ ಮುಂತಾದ ಅನೇಕ ಕಾರ್ಯಗಳನ್ನು ಉತ್ಸಾಹದಿಂದ ನೆರವೇರಿಸಿದ ನಮ್ಮ ವಿದ್ಯಾಮಂದಿರದ ಪ್ರಿಯ ವಿದ್ಯಾರ್ಥಿ ಕೃಷ್ಣಾಚಾರ್ಯ ಉಪಾಧ್ಯಾಯ ಇವನಿಗೆ ನನ್ನ ಪ್ರೇಮಪೂರಿತವಾದ ಆಶೀರಾಶಿಗಳು.

ಮುದ್ರಣವನ್ನು ಸಕಾಲದಲ್ಲಿ ಆಸ್ಥೆ ವಹಿಸಿ ಸಾಂಗಗೊಳಿಸಿದ ಶ್ರೀ ಧನಂಜಯ ವರಖೇಡಕರ ಅವರಿಗೂ ನನ್ನ ಹಾರ್ದಿಕವಾದ ಶುಭಾಶಯಗಳು.

ಇನ್ನಿತರ ಸ್ಕಂಧಗಳ ಅನುವಾದವನ್ನು ಈಗಾಗಲೇ ಕೈಕೊಂಡಿದ್ದು ಅದು ಬೇಗನೆ ಪರಿಸಮಾಪ್ತಿಯಾಗುವಂತೆ ಆಶೀರ್ವದಿಸಲೆಂದು ಮತ್ತೊಮ್ಮೆ ಶ್ರೀಪಾದಂಗಳವರಲ್ಲಿ ಅನನ್ಯವಾಗಿ ಸಂಪ್ರಾರ್ಥಿಸಿ ಅವರ ಪೂಜ್ಯ ಚರಣೋಪಾಂತದಲ್ಲಿ ನನ್ನ ಅಲ್ಪ ಸೇವೆಯನ್ನು ಸಮರ್ಪಿಸುತ್ತೇನೆ.

ಸಜ್ಜನವಿಧೇಯ

**ಗುತ್ತಲ ರಂಗಾಚಾರ್ಯ**

(ಮೊದಲನೇ ಆವೃತ್ತಿಯದ್ದು)

★★★

# ವಿಷಯಾನುಕ್ರಮಣಿಕಾ

★★★★



ಶ್ರೀಮದ್ಭಾಗವತೇಽನ್ವವಾದಿ ನವಮಸ್ಕಂಧಸ್ಯ ಭಾಷೋ ಮಯಾ ।
ವ್ಯಾಖ್ಯಾನಾನ್ಯನುರುಧ್ಯ ಮಾನ್ಯವಚಸಾಂ ಪ್ರಾಚಾಂ ಸುಪೂಜ್ಯಾತ್ಮನಾಂ ॥
ಮಾತುಃ ಕ್ಷೇಮಸಮೃದ್ಧಯೇ ಪ್ರಕಟಿತಸ್ತತ್ಷಷ್ಠಿಪೂರ್ತ್ಯುತ್ಸವೇ ।
ಪ್ರೀತ್ಯೈ ಗುತ್ತಲವಂಶಲಬ್ಧಜನುಷಾ ರಂಗಾರ್ಯನಾಮ್ನಾ ಹರೇಃ ॥

# ಶ್ರೀಮದ್ಭಾಗವತೇ ನವಮಸ್ಕಂಧಃ

## ಅಥ ಪ್ರಥಮೋಽಧ್ಯಾಯಃ

ಈ ಸ್ಕಂಧದಲ್ಲಿ ರಾಜರ ವಂಶವನ್ನು ವರ್ಣಿಸಿ ನಾರಾಯಣನಲ್ಲಿ ಭಕ್ತಿ ಉಂಟಾಗಲು ಭಗವಂತನ ಮಾಹಾತ್ಮ್ಯವನ್ನೇ ವಿವರಿಸುತ್ತಾರೆ. ಹಿಂದಿನ ಸ್ಕಂಧಕ್ಕೂ ಮುಂದಿನ ಸ್ಕಂಧಕ್ಕೂ ಸಂಗತಿಯನ್ನು ತಿಳಿಸಲು ಪೂರ್ವವೃತ್ತ (ಹಿಂದೆ ನಡೆದದ್ದನ್ನು) ವನ್ನು ಹೇಳುತ್ತಾ ವೈವಸ್ವತ ಮನುವಿನ ಮಕ್ಕಳ ಅವರ ವಂಶಜರ ಚರಿತ್ರೆಗಳನ್ನು ಪರೀಕ್ಷಿತ್ ರಾಜನು ಶುಕಾಚಾರ್ಯರನ್ನು ಕೇಳುತ್ತಾನೆ- **ಮನ್ವಂತರಾಣಿ** ಎಂದು ಪ್ರಾರಂಭಮಾಡಿ **ವದ ವಿಕ್ರಮಾನ್** ಎಂಬುವವರೆಗೆ.

**ರಾಜೋವಾಚ-**

**ಮನ್ವಂತರಾಣಿ ಸರ್ವಾಣಿ ತ್ವಯೋಕ್ತಾನಿ ಶ್ರುತಾನಿ ಮೇ ।**
**ವೀರ್ಯಾಣ್ಯನಂತವೀರ್ಯಸ್ಯ ಹರೇಸ್ತತ್ರ ಕೃತಾನಿ ಚ ॥೧॥**

**ತ್ವಯೋಕ್ತಾನಿ** ನಿಮ್ಮಿಂದ ಹೇಳಲ್ಪಟ್ಟ, **ಸರ್ವಾಣಿ** ಎಲ್ಲ, **ಮನ್ವಂತರಾಣಿ** ಮನ್ವಂತರಗಳು, **ಮೇ (ಮಯಾ)** ನನ್ನಿಂದ **ಶ್ರುತಾನಿ** ಕೇಳಿ ತಿಳಿಯಲ್ಪಟ್ಟವು, **ತತ್ರ** ಮನ್ವಂತರಗಳಲ್ಲಿ, **ಅನಂತವೀರ್ಯಸ್ಯ** ಅಪರಿಮಿತ ಸಾಮರ್ಥ್ಯವುಳ್ಳ, **ಹರೇಃ** ಪರಮಾತ್ಮನಿಂದ (ತೃತೀಯಾರ್ಥದಲ್ಲಿ ಷಷ್ಠೀ ವಿಭಕ್ತಿಯು ಇದೆ) **ಕೃತಾನಿ** ಮಾಡಲ್ಪಟ್ಟ **ವೀರ್ಯಾಣಿ** ವೀರ್ಯಸಾಧ್ಯವಾದ **ಕೃತಾನಿ** ಕರ್ಮಗಳು, **ಶ್ರುತಾನಿ** ತಿಳಿಯಲ್ಪಟ್ಟವೆ.

**ತಾತ್ಪರ್ಯ :** ಶುಕಾಚಾರ್ಯರೇ, ತಾವು ಪೂರ್ವಸ್ಕಂಧದಲ್ಲಿ, ನಿರೂಪಿಸಿದ ಎಲ್ಲ ಮನ್ವಂತರಗಳನ್ನು ಮತ್ತು ಮನ್ವಂತರಗಳಲ್ಲಿ ಅಪರಿಮಿತ ಪರಾಕ್ರಮಿಯಾದ ಶ್ರೀಹರಿಯು ಆಚರಿಸಿದ ವ್ಯಾಪಾರಗಳನ್ನು ಕೇಳಿ ತಿಳಿದಿರುವೆನು. ॥೧॥

**ಯೋಽಸೌ ಸತ್ಯವ್ರತೋ ನಾಮ ರಾಜರ್ಷಿರ್ದ್ರವಿಡೇಶ್ವರಃ ।**
**ಜ್ಞಾನಂ ಯೋಽತೀತಕಲ್ಪಾಂತೇ ಲೇಭೇ ಪುರುಷಸೇವಯಾ ॥೨॥**

**ಯಃ ಅಸೌ** ಯಾವ ಇವನು, **ಅತೀತಕಲ್ಪಾಂತೇ** ಹಿಂದಿನ ಕಲ್ಪದ ಕೊನೆಗೆ, **ಪುರುಷಸೇವಯಾ** ಮತ್ಸ್ಯರೂಪಿಯಾದ ಪರಮಾತ್ಮನ ಸೇವೆಯಿಂದ, **ಜ್ಞಾನಂ** ತತ್ತ್ವಜ್ಞಾನವನ್ನು, **ಲೇಭೇ** ಹೊಂದಿದನೋ ಮತ್ತು, **ದ್ರವಿಡೇಶ್ವರಃ** ದ್ರವಿಡ ದೇಶಕ್ಕೆ ಒಡೆಯನೋ, **ರಾಜರ್ಷಿಃ** ಜ್ಞಾನಿಯಾದ ರಾಜನೋ, **ಸತ್ಯವ್ರತೋ ನಾಮ** ಸತ್ಯವ್ರತನೆಂಬ ಹೆಸರಿನಿಂದ ಪ್ರಸಿದ್ಧನೋ, ॥೨॥

**ಸ ವೈ ವಿವಸ್ವತಃ ಪುತ್ರೋ ಮನುರಾಸೀದಿತಿ ಶ್ರುತಮ್ ।**
**ತ್ವಯಾ ತಸ್ಯ ಸುತಾಃ ಪ್ರೋಕ್ತಾ ಇಕ್ಷ್ವಾಕುಪ್ರಮುಖಾ ನೃಪಾಃ ॥೩॥**

**ಸಃ ವೈ** ಅವನೇ **ವಿವಸ್ವತಃ** ವಿವಸ್ವಾನ್ ಎಂಬ ಸೂರ್ಯನ, **ಪುತ್ರಃ** ಮಗನು **ಮನುಃ** ಮನುವು **ಆಸೀತ್** ಆಗಿದ್ದನು **ಇತಿ** ಹೀಗೆಂದು **ಶ್ರುತಂ** ಕೇಳಿದೆನು. **ತ್ವಯಾ** ನಿಮ್ಮಿಂದ, **ತಸ್ಯ** ವೈವಸ್ವತಮನುವಿಗೆ, **ಇಕ್ಷ್ವಾಕುಪ್ರಮುಖಾಃ** ಇಕ್ಷ್ವಾಕುವೇ ಮೊದಲಾದ, **ಸುತಾಃ** ಮಕ್ಕಳು, **ಪ್ರೋಕ್ತಾಃ** ಹೇಳಲ್ಪಟ್ಟರು. ॥೩॥

**ತೇಷಾಂ ವಂಶಂ ಪೃಥಗ್ ಬ್ರಹ್ಮನ್ ವಂಶಾನುಚರಿತಾನಿ ಚ ।**
**ಕೀರ್ತಯಸ್ವ ಮಹಾಭಾಗ ನಿತ್ಯಂ ಶುಶ್ರೂಷತಾಂ ಹಿ ನಃ ॥೪॥**

**ಮಹಾಭಾಗ** ಭಾಗ್ಯಶಾಲಿಯಾದ **ಹೇ ಬ್ರಹ್ಮನ್** ಹೇ ಜ್ಞಾನಿಗಳೇ, **ತೇಷಾಂ** ಇಕ್ಷ್ವಾಕು ಮೊದಲಾದವರ, **ಪೃಥಕ್** ಪ್ರತ್ಯೇಕವಾದ, **ವಂಶಂ** ವಂಶವನ್ನು, **ಚ** ಮತ್ತು **ವಂಶಾನುಚರಿತಾನಿ** ವಂಶದಲ್ಲಿ ಬಂದವರ ಚರಿತ್ರೆಯನ್ನು, **ನಿತ್ಯಂ** ಯಾವಾಗಲೂ, **ಶುಶ್ರೂಷತಾಂ** ಕೇಳಲಿಚ್ಛಿಸುವ **ನಃ** ನಮಗೆ **ಕೀರ್ತಯಸ್ವ** ಹೇಳಿರಿ. ॥೪॥

**ಯೇ ಭೂತಾ ಯೇ ಭವಿಷ್ಯಾಶ್ಚ ಭವಂತ್ಯದ್ಯತನಾಶ್ಚ ಯೇ ।**
**ತೇಷಾಂ ನಃ ಪುಣ್ಯಕೀರ್ತೀನಾಂ ಸರ್ವೇಷಾಂ ವದ ವಿಕ್ರಮಾನ್ ॥೫॥**

**ಹೇ ವದ** ವಾಗ್ಮಿಗಳಾದ ಶುಕಾಚಾರ್ಯರೇ, **ಯೇ ಭೂತಾಃ** ಹಿಂದೆ ಆದವರು, **ಯೇ ಭವಿಷ್ಯಾಃ** ಮುಂದೆ ಆಗುವವರೋ, **ಯೇ ಅದ್ಯತನಾಃ** ಈಗ ಇರುವವರೋ, **ಚ** ಮತ್ತು, **ಯೇ ಭವಂತಿ** ಚಿರಂಜೀವಿಗಳಾದ ಅಥವಾ ಮಂಗಲಸ್ವರೂಪರೋ (ಭವಃ ಮಂಗಲಂ, ತದ್ವದಾಚರಂತಿ) **ತೇಷಾಂ** ಆ **ಪುಣ್ಯಕೀರ್ತೀನಾಂ** ಪುಣ್ಯಪ್ರದವಾದ ಯಶಸ್ಸುಳ್ಳ, **ಸರ್ವೇಷಾಂ** ಎಲ್ಲರ **ವಿಕ್ರಮಾನ್** ಪರಾಕ್ರಮಗಳನ್ನು **ನಃ** ನಮಗೆ **ವದ** ಹೇಳಿರಿ. (ಏಷ್ಯಃ ಎಂಬ ಪದದಂತೆ ಭವಿಷ್ಯಃ ಎಂಬ ಅಕಾರಾಂತ ಪದವೂ ಅಭಿಯುಕ್ತರಿಂದ ಪ್ರಯುಕ್ತವಾಗಿದೆ ಎಂದು ಶ್ರೀಸತ್ಯಧರ್ಮತೀರ್ಥರು ವ್ಯಾಖ್ಯಾನಿಸಿದ್ದಾರೆ.)

ಹಿಂದಿನ ಕಲ್ಪದ ಕೊನೆಗೆ ದ್ರವಿಡದೇಶಕ್ಕೆ ರಾಜನಾದ ಸತ್ಯವ್ರತನೆಂಬುವವನು ಮತ್ಸ್ಯರೂಪಿಯಾದ ಹರಿಯಿಂದ ಜ್ಞಾನವನ್ನು ಪಡೆದನು. ಅವನೇ ವಿವಸ್ವತನೆಂಬ ಸೂರ್ಯಪುತ್ರನು ಮನುವು. ಅವನಿಗೆ ಇಕ್ಷ್ವಾಕು ಮೊದಲಾದ ಮಕ್ಕಳು ಇದ್ದರೆಂದು ತಮ್ಮಿಂದ ಕೇಳಿದನು. ಬ್ರಹ್ಮಜ್ಞಾನಿಗಳೇ! ಅವರ ಪ್ರತ್ಯೇಕವಂಶವನ್ನು, ಚರಿತ್ರೆಯನ್ನು ಯಾವಾಗಲೂ ಕೇಳಲಿಚ್ಛಿಸುವ ನಮಗೆ ಹಿಂದೆ ಆದ, ಮುಂದೆ ಬರುವ, ಈಗ ಇರುವ, ಮಂಗಲಸ್ವರೂಪರಾದ ಎಲ್ಲರ ಪುಣ್ಯಪ್ರದವಾದ ಚರಿತ್ರೆಯನ್ನು ಹೇಳಿರಿ.

**ಸೂತ ಉವಾಚ-**

**ಏವಂ ಪರೀಕ್ಷಿತಾ ರಾಜ್ಞಾ ಸದಸಿ ಬ್ರಹ್ಮವಾದಿನಾಮ್ ।**
**ಪೃಷ್ಟಃ ಪ್ರೋವಾಚ ಭಗವಾನ್ ಶುಕಃ ಪರಮಧರ್ಮವಿತ್ ॥೬॥**

ಸೂತರು ಹೇಳುವರು- **ಬ್ರಹ್ಮವಾದಿನಾಂ** ಬ್ರಹ್ಮವಿಷಯಕ ವಿಚಾರ ಮಾಡುವ ಜ್ಞಾನಿಗಳ, **ಸದಸಿ** ಸಭೆಯಲ್ಲಿ, **ರಾಜ್ಞಾ** ಪರೀಕ್ಷಿತನಿಂದ, **ಏವಂ** ಮೇಲೆ ಹೇಳಿದಂತೆ, **ಪೃಷ್ಟಃ** ಪ್ರಶ್ನಿಸಲ್ಪಟ್ಟ, **ಭಗವಾನ್** ಪೂಜ್ಯರಾದ, **ಪರಮಧರ್ಮವಿತ್** ಮುಖ್ಯಧರ್ಮವನ್ನು ತಿಳಿದ ಅಥವಾ **ಪರಮಃ** ಪರಮಾತ್ಮ ಮತ್ತು **ಧರ್ಮ** ಪುಣ್ಯಜನಕ ಕರ್ಮ ಇವೆರಡನ್ನೂ **ವಿತ್** ತಿಳಿದ ಅಥವಾ ರಾಜ್ಯಾಭಿಷಿಕ್ತರಾದವರಿಗೆ ಪ್ರಜಾಪಾಲನೆಯೇ ಮುಖ್ಯ ಧರ್ಮ, ಅದನ್ನು ತಿಳಿದ, **ಶುಕಃ** ಶುಕಾಚಾರ್ಯರು, **ಪ್ರೋವಾಚ** ಹೇಳಿದರು.

ಜ್ಞಾನಿಗಳ ಸಭೆಯಲ್ಲಿ ಪರೀಕ್ಷಿತನಿಂದ ಕೇಳಿಸಿಕೊಂಡ ಶುಕಾಚಾರ್ಯರು ಉತ್ತರವನ್ನು ಹೇಳುವರು-

**ಶ್ರೀಶುಕ ಉವಾಚ-**

**ಶ್ರೂಯತಾಂ ಮಾನವೋ ವಂಶಃ ಸಂಕ್ಷೇಪೇಣ ಪರಂತಪ ।**
**ನ ಶಕ್ಯತೇ ವಿಸ್ತರತೋ ವಕ್ತುಂ ವರ್ಷಶತೈರಪಿ ॥೭॥**

**ಹೇ ಪರಂತಪ** ಶತ್ರುತಾಪಕನಾದ ರಾಜನೇ, **ಮಾನವಃ** ಮನುವಿನ, **ವಂಶಃ** ವಂಶವು, **ಸಂಕ್ಷೇಪೇಣ** ಶಬ್ದದಿಂದ ಸಂಕ್ಷೇಪವಾಗಿ (ಕೆಲವೇ ಮಾತುಗಳಲ್ಲಿ) **(ತ್ವಯಾ)** ನಿನ್ನಿಂದ, **ಶ್ರೂಯತಾಂ** ಕೇಳಲ್ಪಡಲಿ. **ವರ್ಷಶತೈಃ ಅಪಿ** ನೂರು ವರ್ಷಗಳಾದರೂ, **ವಿಸ್ತರತಃ** ವಿಸ್ತಾರವಾಗಿ, **ವಕ್ತುಂ** ಹೇಳಲು **ನ ಶಕ್ಯತೇ** ಸಾಧ್ಯವಾಗುವುದಿಲ್ಲ.

ವಿಸ್ತಾರವಾಗಿ ಹೇಳಲು ನೂರಾರು ವರ್ಷಗಳಾದರೂ ಸಾಲದಿರುವುದರಿಂದ ಸಂಕ್ಷೇಪವಾಗಿ ಹೇಳುವೆನು, ಕೇಳು. ॥೭॥

**ಪರಾವರೇಷಾಂ ಭೂತಾನಾಮಾತ್ಮಾ ಯಃ ಪುರುಷಃ ಪರಃ ।**
**ಸ ಏವಾಸೀದಿದಂ ವಿಶ್ವಂ ಕಲ್ಪಾಂತೇಽನ್ಯನ್ನ ಕಿಂಚನ ॥೮॥**

**ಪರಾವರೇಷಾಂ** ಉತ್ತಮಾಧಮರಾದ, **ಭೂತಾನಾಂ** ಪ್ರಾಣಿಗಳಿಗೆ, **ಆತ್ಮಾ** ಸ್ವಾಮಿಯಾದ, **ಪರಃ** ಉತ್ತಮನಾದ, **ಯಃ ಪುರುಷಃ** ಪುರುಷರೂಪಿಯಾದ ಯಾವ ಪರಮಾತ್ಮನೋ, **ಸಃ ಏವ** ಅವನೇ **ಕಲ್ಪಾಂತೇ** ಪ್ರಲಯಕಾಲದಲ್ಲಿ, **ಇದಂ ವಿಶ್ವಂ** ಈ ಪ್ರಪಂಚದ **(ಅಗ್ರೇ)** ಸೃಷ್ಟಿಯ ಮೊದಲು, **ಆಸೀತ್** ಇದ್ದನು. **ಯತ್ ಕಿಂಚನ ಆಸೀತ್** ಯಾವ ಕೆಲವು ಪ್ರಕೃತ್ಯಾದಿಗಳು ಇದ್ದವೋ, **ತತ್** ಅವು, **ಅನ್ಯತ್** ಪರಮಾತ್ಮನ

ಅನಧೀನವಾಗಿ, **ನ ಆಸೀತ್** ಇರಲಿಲ್ಲ. **ಕಿಂತು ಇದಂ ವಿಶ್ವಂ ಸ ಏವ ಆಸೀತ್** ಎಲ್ಲ ಪ್ರಪಂಚವು ಅವನ ಅಧೀನವಾಗಿಯೇ ಇತ್ತು .

ಪ್ರಲಯಕಾಲದಲ್ಲಿ ಭಗವಂತನೊಬ್ಬನೇ ಸ್ವತಂತ್ರನಾಗಿದ್ದನು, ಮಿಕ್ಕೆಲ್ಲ ಪದಾರ್ಥಗಳು ಅವನ ಅಧೀನವಾಗಿದ್ದವು. ।।೮।।

**ತಸ್ಯ ನಾಭೇರುದಸ್ತಾತ್ಸ ಪದ್ಮಕೋಶೋ ಹಿರಣ್ಮಯಃ ।**
**ತಸ್ಮಿನ್ ಜಜ್ಞೇ ಮಹಾರಾಜ ಸ್ವಯಂಭೂಶ್ಚತುರಾನನಃ ।।೯।।**

**ಹೇ ಮಹಾರಾಜ** ಎಲೋ ರಾಜನೇ, **ತಸ್ಯ** ಪುರುಷನಾಮಕ ಪರಮಾತ್ಮನ **ನಾಭೇಃ** ಹೊಕ್ಕಳಿನಿಂದ, **ಹಿರಣ್ಮಯಃ** ಬಂಗಾರಮಯವಾದ, **ಸ ಪದ್ಮಕೋಶಃ** ಸಾರಭೂತವಾದ ಪದ್ಮವು, **ಉದಸ್ತಾತ್** ಉತ್ಪನ್ನವಾಯಿತು. **ತಸ್ಮಿನ್** ಆ ಪದ್ಮದಲ್ಲಿ **ಸ್ವಯಂಭೂಃ** ಸ್ವತಂತ್ರನಾದ ಪರಮಾತ್ಮನಿಂದ ಉತ್ಪತ್ತಿ ಉಳ್ಳ, **ಚತುರಾನನಃ** ಚತುರ್ಮುಖ ಬ್ರಹ್ಮದೇವರು **ಜಜ್ಞೇ** ಹುಟ್ಟಿದರು.

**ವಿಶೇಷಾರ್ಥ :-**

**ಸ್ವಯಂಭೂಃ ಸ್ವಯಂ** ಸಾಕ್ಷಾತ್ **ಭೂಃ** ರಮಾಭಿಮನ್ಯಮಾನವಾದ ಪದ್ಮಕೋಶವು. ಹೀಗೂ ಅನ್ವಯ ಮಾಡಬಹುದು. **ಪ್ರಾಯಸ್ತೇ ಸ್ವಸುತಾ ಸ್ವಯಂ** ಈ ರೀತಿ ಹೇಳಿದ್ದರಿಂದ ಸ್ವಯಂಭೂ ಎಂದರೇ ಇನ್ನಿತರರೂ ಆಗಬಹುದು. ಆದ ಕಾರಣ **ಚತುರಾನನಃ** ಎಂದಿದ್ದಾರೆ. ಚತುರಾನನ ಎಂಬುವುದಕ್ಕೆ ಒಂದೇ ಮುಖವೇ ಚತುರಚೇಷ್ಟಕಯಂದಾಗಲಿ, **ಚತುರ** ಕುಶಲವಾದ **ಆನನ** ಮುಖ ಪ್ರಮುಖ ಎಂದಾಗಲಿ, ಅಥವಾ ದಶಮುಖ ಷಣ್ಮುಖ ಮೊದಲಾದ ಅನೇಕ ಮುಖವುಳ್ಳವರಲ್ಲೊಬ್ಬನು, ಶತೇ ಪಂಚಾಶತ್ ನ್ಯಾಯದಿಂದ ಚತುರ್ಮುಖ-ನಾಗಬಹುದು. ಕಾರಣ ಸ್ವಯಂಭೂಃ ಎಂದಿದ್ದಾರೆ. ನಾಲ್ಕು ಮುಖವುಳ್ಳವನು ಸ್ವಯಂಭೂ ಆದವನೂ ಯಾವನಾದರೂ ಇರಬಹುದು ಕಾರಣ ಶಂಕೆಯ ವಾರಣವಾಗಲಿಲ್ಲಎಂದು ಶಂಕಿಸಬಾರದು. ಸ್ವಯಂಭೂ ಚತುರಾನನ ಶಬ್ದಗಳು ಯೋಗರೂಢವಾಗಿವೆ. ಯೋಗವು ಎಲ್ಲಿಯಾದರೂ ಬಂದರೂ ರೂಢಿಯಿಲ್ಲ.

ಪುರುಷನಾಮಕ ಪರಮಾತ್ಮನ ನಾಭಿಯಿಂದ ಕಮಲವು ಉತ್ಪನ್ನವಾಯಿತು. ಅದರಲ್ಲಿ ಬ್ರಹ್ಮದೇವರು ಜನಿಸಿದರು. ।।೯।।

**ಮರೀಚಿರ್ಮಾನಸಸ್ತಸ್ಯ ಜಜ್ಞೇ ತಸ್ಯಾಪಿ ಕಶ್ಯಪಃ ।**
**ದಾಕ್ಷಾಯಣ್ಯಾಂ ತತೋಽದಿತ್ಯಾಂ ವಿವಸ್ವಾನಭವತ್ಸುತಃ ।।೧೦।।**

**ತಸ್ಯ** ಚತುರ್ಮುಖ ಬ್ರಹ್ಮದೇವರಿಗೆ, **ಮರೀಚಿಃ** ಮರೀಚಿ ಎಂಬ ಋಷಿಯು, **ಮಾನಸಃ** ಮನಸ್ಸಿನಿಂದ ಉಂಟಾದ **ಸುತಃ** ಮಗನಾಗಿ, **ಜಜ್ಞೇ** ಹುಟ್ಟಿದನು. **ತಸ್ಯ ಅಪಿ** ಆ ಮರೀಚಿ ಋಷಿಗೆ **ಕಶ್ಯಪಃ** ಕಶ್ಯಪ ಋಷಿಯು, **ಜಜ್ಞೇ** ಹುಟ್ಟಿದನು. **ತತಃ** ಕಶ್ಯಪರಿಂದ **ದಾಕ್ಷಾಯಣ್ಯಾಂ** ದಕ್ಷ ಪ್ರಜಾಪತಿಯ ಮಗಳಾದ **ಅದಿತ್ಯಾಂ** ಅದಿತಿ ದೇವಿಯಲ್ಲಿ, **ವಿವಸ್ವಾನ್** ವಿವಸ್ವಾನ್ ಎಂಬ **ಸುತಃ** ಮಗನು **ಅಭವತ್** ಆದನು.

ಬ್ರಹ್ಮದೇವರಿಗೆ ಮರೀಚಿ ಋಷಿಯು ಮಾನಸಪುತ್ರನಾಗಿ ಜನಿಸಿದನು. ಅವನಿಗೆ ಕಶ್ಯಪನು, ಆ ಕಶ್ಯಪನಿಗೆ ದಕ್ಷನ ಮಗಳಾದ ಅದಿತಿಯಲ್ಲಿ ವಿವಸ್ವಾನ್ ಎಂಬ ಮಗನು ಜನಿಸಿದನು. ||೧೦||

**ತತೋ ಮನುಃ ಶ್ರಾದ್ಧದೇವಃ ಸಂಜ್ಞಾಯಾಮಾಸ ಭಾರತ |**
**ಶ್ರದ್ಧಾಯಾಂ ಜನಯಾಮಾಸ ದಶ ಪುತ್ರಾನ್ ಸ ಆತ್ಮವಾನ್ ||೧೧||**

**ಭಾರತ** ಭರತಕುಲೋತ್ಪನ್ನನೇ, **ತತಃ** ಕಶ್ಯಪನ ಮಗನಾದ ವಿವಸ್ವಾನ್ ಎಂಬ ಸೂರ್ಯನಿಂದ, **ಶ್ರಾದ್ಧದೇವಃ** ಶ್ರಾದ್ಧದೇವನೆಂಬ ಹೆಸರುಳ್ಳ, **ಮನುಃ** ಮನುವು, **ಸಂಜ್ಞಾಯಾಂ** ಸಂಜ್ಞಾ ಎಂಬ ಪತ್ನಿಯಲ್ಲಿ, **ಆಸ** ಹುಟ್ಟಿದನು. **ಆತ್ಮವಾನ್** ವಶೀಕೃತ ಮನಸ್ಸುಳ್ಳ (ಪ್ರಶಸ್ತ ಮನಸ್ಸುಳ್ಳ) ಪರಮಾತ್ಮನಲ್ಲಿ **ಸಃ** ಶ್ರಾದ್ಧದೇವನು, **ಶ್ರದ್ಧಾಯಾಂ** ಶ್ರದ್ಧಾ ಎಂಬ ತನ್ನ ಪತ್ನಿಯಲ್ಲಿ, **ದಶ** ಹತ್ತು , **ಪುತ್ರಾನ್** ಮಕ್ಕಳನ್ನು , **ಜನಯಾಮಾಸ** ಹುಟ್ಟಿಸಿದನು.

ವಿವಸ್ವಾನ್ ಎಂಬ ಸೂರ್ಯನಿಂದ ಸಂಜ್ಞಾ ಎಂಬುವಳಲ್ಲಿ ಶ್ರಾದ್ಧದೇವನು ಜನಿಸಿದನು. ಇವನೇ ವೈವಸ್ವತ ಮನುವೆಂದು ಪ್ರಸಿದ್ಧನು. ಇವನು ಶ್ರದ್ಧಾ ಎಂಬ ತನ್ನ ಪತ್ನಿಯಲ್ಲಿ ಹತ್ತು ಜನ ಮಕ್ಕಳನ್ನು ಪಡೆದನು. ||೧೧||

ಹತ್ತು ಮಂದಿ ಹೆಸರನ್ನು ಹೇಳುವರು-

**ಇಕ್ಷ್ವಾಕುನೃಗಶರ್ಯಾತಿದಿಷ್ಟಧೃಷ್ಟಕರೂಷಕಾನ್ |**
**ನರಿಷ್ಯಂತಂ ವೃಷಧ್ರಂ ಚ ನಾಭಾಗಂ ಚ ನಭಂ ಕವಿಮ್ ||೧೨||**

ಇಕ್ಷ್ವಾಕು, ನಗ, ಶರ್ಯಾತಿ, ದಿಷ್ಟ, ಧೃಷ್ಟ, ಕರೂಷಕ, ನರಿಷ್ಯಂತ, ವೃಷಧ್ರ , ನಾಭಾಗ, ನಭ, ಈ ರೀತಿಯಾಗಿ ಹತ್ತು ಪುತ್ರರನ್ನು ಹುಟ್ಟಿಸಿದನು ಎಂದು ಪೂರ್ವಶ್ಲೋಕದಿಂದ ಅನ್ವಯವು. **ಕವಿಂ** ಜ್ಞಾನಿಯಾದ ನರಿಷ್ಯಂತಂ, ಹೀಗೆ ಎಲ್ಲ ಕಡೆಗೆ **ಕವಿಮ್** ಎಂಬುವುದು ವಿಶೇಷಣವೆಂದು ತಿಳಿಯಬೇಕು. **ಕವೀನ್** ಎಂದು ಬಹುವಚನಾಂತವಾಗಿ ಆವೃತ್ತಿ ಮಾಡಿ ಇಕ್ಷ್ವಾಕು... ಕರೂಷಕಾನ್ ಎಂದು ಅನ್ವಯ ಮಾಡಬೇಕು. ||೧೨||

ಮನುವಿಗೆ ಪ್ರಜೋತ್ಪತ್ತಿಯು ಹೇಗಾಯಿತೆಂದು ವಿವರಿಸುವರು-

**ಅಪ್ರಜಸ್ಯ ಮನೋಃ ಪೂರ್ವಂ ವಸಿಷ್ಠೋ ಭಗವಾನ್ ಕಿಲ ।**
**ಮಿತ್ರಾವರುಣಯೋರಿಷ್ಟಿಂ ಪ್ರಜಾರ್ಥಮಕರೋದ್ವಿಭುಃ ॥೧೩॥**

**ಅಪ್ರಜಸ್ಯ** ಪೂರ್ವದಲ್ಲಿ ಸಂತಾನವಿಲ್ಲದ, **ಮನೋಃ** ವೈವಸ್ವತಮನುವಿಗೆ, **ಪೂರ್ವಂ** ಇಕ್ಷ್ವಾಕು ಮೊದಲಾದ ಮಕ್ಕಳು ಹುಟ್ಟುವ ಮೊದಲು, **ಭಗವಾನ್** ಜ್ಞಾನಾದಿಗುಣಸಂಪನ್ನರಾದ, **ವಿಭುಃ** ಕಾರ್ಯಸಾಧನಸಮರ್ಥರಾದ, **ವಸಿಷ್ಠಃ** ವಸಿಷ್ಠರು (ಪುರೋಹಿತರು) **ಪ್ರಜಾರ್ಥಂ** ಸಂತಾನೋತ್ಪತ್ತಿಗೋಸ್ಕರ, **ಮಿತ್ರಾ-ವರುಣಯೋಃ** ಮಿತ್ರಾವರುಣ ದೇವತೆಗಳ, **ಇಷ್ಟಿಂ** ಯಾಗವನ್ನು, **ಅಕರೋತ್ ಕಿಲ** ಮಾಡಿದರಷ್ಟೇ.

ಮನುವಿಗೆ ಮಕ್ಕಳಾಗದಿರಲು ಪುರೋಹಿತರಾದ ವಸಿಷ್ಠರು ಸಂತತಿಗಾಗಿ ಮಿತ್ರಾವರುಣರೆಂಬ ಉಭಯದೇವತಾಕವಾದ ಯಾಗವನ್ನು ಮಾಡಿದರು. ॥೧೩॥

**ತತ್ರ ಶ್ರದ್ಧಾ ಮನೋಃ ಪತ್ನೀ ಹೋತಾರಂ ಸಮಯಾಚತ ।**
**ದುಹಿತ್ರರ್ಥಮುಪಾಗಮ್ಯ ಪ್ರಣಿಪತ್ಯ ಪಯೋವ್ರತಾ ॥೧೪॥**

**ತತ್ರ** ಇಕ್ಷ್ವಾಕು ಮೊದಲಾದ ಮಕ್ಕಳು ಹುಟ್ಟುವ ಮೊದಲು, **ತತ್ರ** ಗಂಡು ಮಕ್ಕಳು ಹುಟ್ಟಬೇಕೆಂಬ ಸಂಕಲ್ಪಸಮಯದಲ್ಲಿ, **ಪಯೋವ್ರತಾ** ಕೇವಲ ಹಾಲನ್ನೇ ಸೇವಿಸುವ ವ್ರತವನ್ನು ಧಾರಣ ಮಾಡಿದ, **ಮನೋಃ ಪತ್ನೀ** ಮನುವಿನ ಹೆಂಡತಿಯಾದ, **ಶ್ರದ್ಧಾ** ಶ್ರದ್ಧಾದೇವಿಯು, **ಹೋತಾರಂ** ಹೋತಾ ಎಂಬ ಋತ್ವಿಜನನ್ನು, **ಉಪಾಗಮ್ಯ** ಹೊಂದಿ, **ಪ್ರಣಿಪತ್ಯ** ನಮಸ್ಕರಿಸಿ, **ದುಹಿತ್ರರ್ಥಂ** ಹೆಣ್ಣುಮಗುವಿಗಾಗಿ **ಸಮಯಾಚತ** ಪ್ರಾರ್ಥಿಸಿದಳು. ॥೧೪॥

**ಪ್ರೇಷಿತೋಽಧ್ವರ್ಯುಣಾ ಹೋತಾ ದಧ್ಯೌ ತತ್ಸುಸಮಾಹಿತಃ ।**
**ಗೃಹೀತೇ ತೇನ ಹವಿಷಿ ವಷಟ್ಕಾರಂ ಗೃಣನ್ ದ್ವಿಜಃ ॥೧೫॥**

**ಅಧ್ವರ್ಯುಣಾ** ಅಧ್ವರ್ಯುವಿನಿಂದ, **ಪ್ರೇಷಿತಃ** ಯಾಗಮಾಡೆಂದು ಪ್ರೇರಿತನಾದ, **ಹೋತಾ** ಹೋತೃವು, **ತೇನ** ಅಧ್ವರ್ಯುವಿನಿಂದ, **ಹವಿಷಿ** ಹವಿಸ್ಸು, **ಗೃಹೀತೇ ಸತಿ** ಸ್ವೀಕರಿಸುತ್ತಿರಲು, **ವಷಟ್ಕಾರಂ** ವೌಷಟ್ ಎಂದು, **ಗೃಣನ್** ಉಚ್ಚರಿಸುವವನಾಗಿ, **ದ್ವಿಜಃ** ಹೋತೃವು, **ಸುಸಮಾಹಿತಃ** ಏಕಾಗ್ರಚಿತ್ತನಾಗಿ, **ತತ್** ಶ್ರದ್ಧಾದೇವಿಯು ಹೇಳಿದಂತೆ ಹೆಣ್ಣು ಮಗು ಹುಟ್ಟುವಂತೆ, **ದಧ್ಯೌ** ಧ್ಯಾನ ಮಾಡಿದನು.

ಅಧ್ವರ್ಯುವಿನಿಂದ ಹೋಮ ಮಾಡೆಂದು ಪ್ರೇರಿತನಾದ ಹೋತೃವು ಅಧ್ವರ್ಯುವು ಹವಿಸ್ಸನ್ನು ಹವನ ಮಾಡಲು ಸಿದ್ಧನಾದ ಸಮಯದಲ್ಲಿ ವೌಷಟ್ ಎಂದು ಸ್ವೀಕರಿಸಿದ ಮಂತ್ರವನ್ನು ಉಚ್ಚಾರ ಮಾಡುವಾಗ ಏಕಾಗ್ರಮನಸ್ಸಿನಿಂದ ಹೆಣ್ಣು ಮಗುವಾಗುವಂತೆ ಧ್ಯಾನಮಾಡಿದನು. ||೧೫||

**ಹೋತುಸ್ತದ್ವ್ಯಭಿಚಾರೇಣ ಕನ್ಯೇಲಾ ನಾಮ ಸಾಽಭವತ್ ।**
**ತಾಂ ವಿಲೋಕ್ಯ ಮನುಃ ಪ್ರಾಹ ನಾತಿಹೃಷ್ಟಮನಾ ಗುರುಮ್ ||೧೬||**

**ಹೋತುಃ** ಹೋತೃವಿನ, **ತದ್ವ್ಯಭಿಚಾರೇಣ ತಸ್ಯ** ಸಂಕಲ್ಪಿತವಾದ ಗಂಡು ಮಗುವಿನ ಉದ್ದೇಶಕವಾದ ಕರ್ಮದ, **ವ್ಯಭಿಚಾರೇಣ** ವಿಪರೀತಧ್ಯಾನರೂಪ ದೋಷದಿಂದ, **ಇಲಾ ನಾಮ** ಇಲಾ ಎಂಬ ಹೆಸರಿನ, **ಕನ್ಯಾ** ಹೆಣ್ಣು ಮಗಳು, **ಅಭವತ್** ಹುಟ್ಟಿದಳು. **ತಾಂ** ಆ ಕನ್ಯೆಯನ್ನು, **ವಿಲೋಕ್ಯ** ನೋಡಿ, **ನಾತಿಹೃಷ್ಟಮನಾಃ** ಪೂರ್ಣ ಸಂತೋಷಪಡದಲೆ (ತನ್ನ ವಂಶದ ಬೆಳವಣಿಗೆಗೆ ಸಾಕ್ಷಾತ್ ಕಾರಣವಾಗದಿರುವದರಿಂದ), **ಗುರುಂ** ವಸಿಷ್ಠರನ್ನು ಕುರಿತು, **ಮನುಃ** ಮನುವು, **ಪ್ರಾಹ** ಮಾತನಾಡಿದನು. (ಇಲಾ ಎಂದರೆ ವಾಕ್ಯವು. ಸಂಕಲ್ಪವಾಕ್ಯ-ದೋಷದಿಂದ ಹುಟ್ಟಿದ್ದರಿಂದ ಇಲಾ ಎಂಬ ಹೆಸರು ಬಂತು)

ಹೋತೃವಿನ ಸಾಂಕಲ್ಪಿಕವಾಕ್ಯವು ವಿಪರೀತವಾದ್ದರಿಂದ ಇಲಾ ಎಂಬ ಮಗಳು ಜನಿಸಿದಳು. ಸಾಕ್ಷಾತ್ತಾಗಿ ವಂಶದ ಬೆಳವಣಿಗೆಗೆ ಕಾರಣವಾಗದ್ದರಿಂದ ಅವಳನ್ನು ನೋಡಿ ಹೆಚ್ಚು ಸಂತೋಷಿಸದೆ ಮನುವು ವಸಿಷ್ಠರನ್ನು ಕೇಳಿದನು. ||೧೬||

**ಭಗವನ್ ಕಿಮಿದಂ ಜಾತಂ ಕರ್ಮ ವೋ ಬ್ರಹ್ಮವಾದಿನಾಮ್ ।**
**ವಿಪರೀತಮಹೋ ಕಷ್ಟಂ ಮೈವಂ ಸ್ಯಾದ್ ಬ್ರಹ್ಮವಿಕ್ರಿಯಾ ||೧೭||**

**ಹೇ ಭಗವನ್** ಪೂಜ್ಯರೇ, **ಬ್ರಹ್ಮವಾದಿನಾಂ** ಬ್ರಹ್ಮಜ್ಞಾನಿಗಳಾದ, **ವಃ** ತಮ್ಮ **ಕರ್ಮ** ಗಂಡುಮಗುವಿಗಾಗಿ ಮಾಡಿದ ಯಾಗರೂಪವಾದ ಕ್ರಿಯೆಯು, **ಕಿಂ** ಯಾವ ಕಾರಣದಿಂದ, **ವಿಪರೀತಂ** ಹೆಣ್ಣು ಮಗುಹುಟ್ಟುವಂತೆ, **ಜಾತಂ** ಆಯಿತು, **ಇದಂ** ಹೆಣ್ಣು ಮಗುವಿನ ಜನನವು, **ಕಷ್ಟಂ** ನನಗೆ ದುಃಖದಾಯಕವು. **ಬ್ರಹ್ಮವಿಕ್ರಿಯಾ** ತಮ್ಮಂಥ ಪೂಜ್ಯ ಬ್ರಾಹ್ಮಣರಿಂದ ಆಚರಿಸಲ್ಪಟ್ಟ ವೇದೋಕ್ತವಾದ ವಿಶಿಷ್ಟಕರ್ಮವು, **ಏವಂ** ಅನಿಷ್ಟಕಾರಕವು, **ಮಾ ಏವಂ ಸ್ಯಾತ್** ಹೀಗೆ ಆಗಲಾರದು, ಆದ್ದರಿಂದ **ಅಹೋ** ಆಶ್ಚರ್ಯವು.

ಜ್ಞಾನಿಗಳಾದ ವಸಿಷ್ಠರೇ! ಬ್ರಹ್ಮಜ್ಞಾನಿಗಳು ಮಾಡುವ ಕ್ರಿಯೆಗಳು ಎಂದೂ ವಿಪರೀತ ಫಲ ಕೊಡಲಾರವು. ಈಗಂತೂ ವಿಪರೀತಫಲವಾಗಿದೆ. ಮುಂದೆ

ಎಂದೂ ಹೀಗಾಗದಿರಲಿ. ಹೀಗಾಗಲು ಒಂದು ಬಲಿಷ್ಠ ಕಾರಣ ಇರಲೇಬೇಕು. ಆ ಕಾರಣ ಏನೆಂದು ಆಶ್ಚರ್ಯದಿಂದ ಕೇಳುವೆನು. ।।೧೭।।

ತಮ್ಮಂಥವರು ಮಾಡಿದ ಕ್ರಿಯೆಯು ವಿಪರೀತವಾಗುವುದು ಅಸಂಭಾವಿತ ಎಂದು ಹೇಳುವೆನು-

**ಯೂಯಂ ಮಂತ್ರವಿದೋ ಯುಕ್ತಾಸ್ತಪಸಾ ದಗ್ಧಕಿಲ್ಬಿಷಾಃ ।**
**ಕುತಃ ಸಂಕಲ್ಪವೈಷಮ್ಯಮನೃತಂ ವಿಬುಧೇಷ್ವಿವ ।।೧೮।।**

**ಯೂಯಂ** ತಾವು **ಮಂತ್ರವಿದಃ** ''**ಮೈತ್ರಾವರುಣೀಂ ಇಷ್ಟಿಂ ಕುರ್ಯಾತ್ ಪುತ್ರಕಾಮಃ**'' ಎಂಬ ಮಂತ್ರದ ಅಭಿಪ್ರಾಯವನ್ನು ತಿಳಿದವರು. **ತಪಸಾ** ತಪಸ್ಸಿನಿಂದ **ಯುಕ್ತಾಃ** ಮನೋಯೋಗ ಉಳ್ಳವರು. ಅಂದರೆ ಯಾವ ದೇವತೆಗೆ ಹವಿಸ್ಸನ್ನು ಕೊಡಬೇಕೋ ಅದೇ ದೇವತೆಯನ್ನು ಧ್ಯಾನಿಸಬೇಕೆಂಬ ಉಪಾಯವನ್ನರಿತವರು, **ತಪಸಾ ದಗ್ಧ ಕಿಲ್ಬಿಷಾಃ** ತಪಸ್ಸಿನಿಂದ ಎಲ್ಲ ದೋಷಗಳನ್ನು ಸುಟ್ಟು ಹಾಕಿದವರು ಇಂಥ ತಮ್ಮಲ್ಲಿ, **ಸಂಕಲ್ಪವೈಷಮ್ಯಂ** ಸಂಕಲ್ಪವಿರುದ್ಧಫಲವು, **ಕುತಃ** ಹೇಗಾದೀತು? ಆಗಲಾರದು. ಇದಕ್ಕೆ ದೃಷ್ಟಾಂತವನ್ನು ಹೇಳುತ್ತಾರೆ- **ವಿಬುಧೇಷು** ದೇವತೆಗಳಲ್ಲಿ, **ಅನೃತಂ** ಅಸತ್ಯವು, **ಇವ** ಅದೇ ಪ್ರಕಾರ, ದೇವತೆಗಳಂತೆ ನಿಮ್ಮಲ್ಲಿಯೂ ಸಹ ಈ ರೀತಿಯಾದ ಅನೃತವೆಂಬ ದೋಷವು ಅಸಂಭಾವಿತವು.

ತಾವು ಮಂತ್ರಾಭಿಪ್ರಾಯಜ್ಞರೂ, ತಪಸ್ಸಿನಿಂದ ಮನವನ್ನು ಗೆದ್ದವರೂ, ಇನ್ನಿತರ ದೋಷದೂರರೂ, ದೇವತೆಗಳಲ್ಲಿ ಅನೃತದೋಷವು ಅಸಂಭವವಾದಂತೆ ನಿಮ್ಮಲ್ಲಿಯೂ ಸಂಕಲ್ಪವಿಪರೀತವಾಗುವದು ಬಹಳ ಆಶ್ಚರ್ಯವು. ಇದು ಶಕ್ಯವಿಲ್ಲ. ಹೀಗೆ ವಿಪರೀತವಾಗಲೂ ಏನಾದರೂ ಪ್ರಬಲವಾದ ಕಾರಣ ಇರಲೇ ಬೇಕು. ಆದ್ದರಿಂದ ಇದಕ್ಕೆ ಅಂಥ ಮಹತ್ತರ ಕಾರಣವು ಯಾವುದು ತಿಳಿಸಿರಿ ಎಂದು ಪ್ರಶ್ನಿಸಿದನು. ।।೧೮।।

**ತನ್ನಿಶಮ್ಯ ವಚಸ್ತಸ್ಯ ಭಗವಾನ್ ಪ್ರಪಿತಾಮಹಃ ।**
**ಹೋತುರ್ವ್ಯತಿಕ್ರಮಂ ಜ್ಞಾತ್ವಾ ಬಭಾಷೇ ರವಿನಂದನಮ್ ।।೧೯।।**

**ಭಗವಾನ್** ಪೂಜ್ಯರಾದ, **ತಸ್ಯ** ಮನುವಿಗೆ, **ಪ್ರಪಿತಾಮಹಃ** ಮುತ್ತಾತ ಮರೀಚ್ಯಾದಿ ಸೋದರರಾದ ವಸಿಷ್ಠರು, **ತಸ್ಯ** ಮನುವಿನ, **ತತ್ ವಚಃ** ಆ ಮಾತನ್ನು **ನಿಶಮ್ಯ** ಕೇಳಿ, **ತತ್** ಫಲವೈರೂಪ್ಯವನ್ನು, **ಹೋತುಃ** ಹೋತೃವಿನ, **ವ್ಯತಿಕ್ರಮಂ** ವಿಪರೀತಧ್ಯಾನರೂಪ ದೋಷದಿಂದ ಆದದ್ದೆಂದು **ಜ್ಞಾತ್ವಾ** ತಿಳಿದು, **ರವಿನಂದನಂ** ವೈವಸ್ವತನನ್ನು ಕುರಿತು, **ಬಭಾಷೇ** ಮಾತನಾಡಿದರು.

ಮನುವಿನ ಮಾತನ್ನು ಕೇಳಿ ವಸಿಷ್ಠರು ಜ್ಞಾನದೃಷ್ಟಿಯಿಂದ ಹೋತೃವಿನ ದೋಷವನ್ನು ತಿಳಿದು ವೈವಸ್ವತ ಮನುವಿಗೆ ಹೀಗೆ ಹೇಳಿದರು. ।।೧೯।।

**ಏತತ್ಸಂಕಲ್ಪವೈಷಮ್ಯಂ ಹೋತುಸ್ತೇ ವ್ಯಭಿಚಾರತಃ ।**
**ತಥಾಪಿ ಸಾಧಯಿಷ್ಯೇಽಹಂ ಸುಪ್ರಜಾಸ್ತ್ವಂ ಸ್ವತೇಜಸಾ ।।೨೦।।**

**ಏತತ್** ಈ **ಸಂಕಲ್ಪವೈಷಮ್ಯಂ** ಸಂಕಲ್ಪದ ವಿಪರೀತ ಫಲವು, **ಹೋತುಃ** ಹೋತೃವಿನ **ವ್ಯಭಿಚಾರತಃ** ವಿಪರೀತಧ್ಯಾನರೂಪ ದೋಷದ ಫಲವು. **ತಥಾಪಿ** ಹೀಗಿದ್ದರೂ, **ತೇ** ನಿನಗೆ **ಸುಪ್ರಜಾಸ್ತ್ವಂ** ಗಂಡು ಮಗುವಾಗುವಂತೆ **ಸ್ವತೇಜಸಾ** ನನ್ನ ಸಾಮರ್ಥ್ಯದಿಂದ **ಸಾಧಯಿಷ್ಯೇ** ಮಾಡುವೆನು.

ಗಂಡುಮಗುವಾಗುವಂತೆ ಸಂಕಲ್ಪಿಸಿದ್ದರೂ ಹೋಮ ಮಾಡುವಾಗ ಹೋತೃವು ಹೆಣ್ಣು ಮಗು ಆಗುವಂತೆ ಧ್ಯಾನ ಮಾಡಿದ್ದರಿಂದ ಈ ರೀತಿ ಆಗಿದೆ. ಹೀಗೆ ಆಗಲಿಕ್ಕೆ ನಿನ್ನ ಮಡದಿಯ ಪ್ರಾರ್ಥನೆಯೇ ಕಾರಣವಾಗಿದೆ. ಆದರೂ ನನ್ನ ಸಾಮರ್ಥ್ಯದಿಂದ ನಿನಗೆ ಗಂಡುಮಗು ಇರುವಂತೆ ಮಾಡುವೆನು. ಸುಪ್ರಜಾಸ್ತ್ವಂ ಎಂಬುದು ದೈವಿಕ ಮಂತ್ರದ ಅನುವಾದ ರೂಪವಾದ್ದರಿಂದ ಶಬ್ದದೋಷಕ್ಕೆ ಅವಕಾಶವಿಲ್ಲ. ।।೨೦।।

**ಏವಂ ವ್ಯವಸಿತೋ ರಾಜನ್ ಭಗವಾನ್ ಸ ಮಹಾಯಶಾಃ ।**
**ಅಸ್ತೌಷೀದಾದಿಪುರುಷಮಿಲಾಯಾಃ ಪುಂಸ್ತ್ವಕಾಮ್ಯಯಾ ।।೨೧।।**

**ರಾಜನ್** ಪರೀಕ್ಷಿತನೇ! **ಏವಂ** ಈ ರೀತಿಯಾಗಿ, **ವ್ಯವಸಿತಃ** ನಿಶ್ಚಯಿಸಿದ **ಭಗವಾನ್** ಪೂಜ್ಯರಾದ, **ಮಹಾಯಶಾಃ** ಕೀರ್ತಿಶಾಲಿಗಳಾದ **ಸಃ** ವಸಿಷ್ಠರು, **ಇಲಾಯಾಃ** ಇಲಾಳಿಗೆ, **ಪುಂಸ್ತ್ವಕಾಮ್ಯಯಾ** ಪುರುಷತ್ವವನ್ನು ಇಚ್ಛಿಸಿ, **ಆದಿಪುರುಷಂ** ಶ್ರೀನಾರಾಯಣನನ್ನು **ಅಸ್ತೌಷೀತ್** ಸ್ತುತಿಸಿದರು.

ಈ ರೀತಿಯಾಗಿ ನಿಶ್ಚಯಿಸಿದ ವಸಿಷ್ಠರು ಇಲಾಳಿಗೆ ಪುರುಷತ್ವ ಬರುವುದಕ್ಕಾಗಿ ನಾರಾಯಣನನ್ನು ಸ್ತುತಿಸಿದರು. ।।೨೧।।

**ತಸ್ಮೈ ಕಾಮವರಂ ತುಷ್ಟೋ ಭಗವಾನ್ ಹರಿರೀಶ್ವರಃ ।**
**ದದಾವಿಲಾಽಭವತ್ತೇನ ಸುದ್ಯುಮ್ನಃ ಪುರುಷರ್ಷಭಃ ।।೨೨।।**

**ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ, **ಈಶ್ವರಃ** ಜಗದೊಡೆಯನಾದ, **ಹರಿಃ** ಪರಮಾತ್ಮನು, **ತುಷ್ಟಃ** ಸಂತುಷ್ಟನಾಗಿ, **ತಸ್ಮೈ** ವಸಿಷ್ಠರಿಗೆ **ಕಾಮವರಂ** ಇಷ್ಟವಾದ ವರವನ್ನು, **ದದೌ** ಕೊಟ್ಟನು. **ತೇನ** ಅದರಿಂದ, **ಇಲಾ** ಇಲಾಳು, **ಸುದ್ಯುಮ್ನಃ** ಸುದ್ಯುಮ್ನನೆಂಬ, **ಪುರುಷರ್ಷಭಃ** ಪುರುಷಶ್ರೇಷ್ಠನು **ಅಭವತ್** ಆದನು.

ವಸಿಷ್ಠರ ಸ್ತೋತ್ರದಿಂದ ಸಂತುಷ್ಟನಾದ ಹರಿಯು ಇವರಿಂದ ಅಪೇಕ್ಷಿತವಾದ ಇಲೆಯು ಪುರುಷನಾಗಬೇಕೆಂಬ ವರವನ್ನು ಕೊಟ್ಟನು. ಅದರಿಂದ ಇಲೆಯು ಸುದ್ಯುಮ್ನನೆಂಬ ಪುರುಷನಾದಳು. ।।೨೨।।

**ಸ ಏಕದಾ ಮಹಾರಾಜ ವಿಚರನ್ ಮೃಗಯಾಂ ವನೇ ।**
**ವೃತಃ ಕತಿಪಯಾಮಾತ್ಯೈರಶ್ವಮಾರುಹ್ಯ ಸೈಂಧವಮ್ ।।೨೩।।**

**ಹೇ ಮಹಾರಾಜ** ಎಲೋ ಚಕ್ರವರ್ತಿಯೇ, **ಸಃ** ಸುದ್ಯುಮ್ನನು, **ಏಕದಾ** ಒಂದು ಸಲ, **ಕತಿಪಯಾಮಾತ್ಯೈಃ** ಕೆಲವು ಮಂತ್ರಿಗಳಿಂದ, **ವೃತಃ** ಸುತ್ತುಗಟ್ಟಲ್ಪಟ್ಟವನಾಗಿ (ಮಂತ್ರಿಗಳಿಂದ ಕೂಡಿಕೊಂಡು) **ಸೈಂಧವಂ** ಸಿಂಧು ದೇಶದಲ್ಲಿ ಹುಟ್ಟಿದ, **ಅಶ್ವಂ** ಕುದುರೆಯನ್ನು, **ಆರುಹ್ಯ** ಹತ್ತಿಕೊಂಡು, **ಮೃಗಯಾಂ** ಬೇಟೆಗಾಗಿ, **ವನೇ** ಅಡವಿಯಲ್ಲಿ, **ಚರನ್** ಸಂಚರಿಸುತ್ತಾ, **ಉತ್ತರಾಂ ದಿಶಂ ಜಗಾಮ** (ಮುಂದಿನ ಶ್ಲೋಕದಿಂದ ಅನ್ವಯ). ಉತ್ತರ ದಿಕ್ಕಿಗೆ ಹೋದನು.

ಒಂದು ಸಲ ಸುದ್ಯುಮ್ನನು ಸಿಂಧು ದೇಶದ ಗಂಡು ಕುದುರೆಯನ್ನೇರಿ ಕೆಲವು ಮಂತ್ರಿಗಳಿಂದ ಕೂಡಿಕೊಂಡು ಬೇಟೆಗಾಗಿ ವನದಲ್ಲಿ ಸಂಚರಿಸುತ್ತಾ ಉತ್ತರದಿಕ್ಕಿಗೆ ಹೋದನು. ।।೨೩।।

**ಪ್ರಗೃಹ್ಯ ರುಚಿರಂ ಚಾಪಂ ಶರಾಂಶ್ಚ ಪರಮಾದ್ಭುತಾನ್ ।**
**ದಂಶಿತೋಽನುಮೃಗಂ ವೀರೋ ಜಗಾಮ ದಿಶಮುತ್ತರಾಮ್ ।।೨೪।।**

**ರುಚಿರಂ** ಮನೋಹರವಾದ, **ಚಾಪಂ** ಧನುಸ್ಸನ್ನು, **ಪರಮಾದ್ಭುತಾನ್** ಅತ್ಯಂತ ಆಶ್ಚರ್ಯಕರಗಳಾದ **ಶರಾನ್**, ಬಾಣಗಳನ್ನು **ಪ್ರಗೃಹ್ಯ** ತೆಗೆದುಕೊಂಡು **ದಂಶಿತಃ** ಕವಚವನ್ನು ಧರಿಸಿದ, **ವೀರಃ** ಪರಾಕ್ರಮಿಯಾದ ಸುದ್ಯುಮ್ನನು, **ಅನುಮೃಗಂ** ಮೃಗಗಳನ್ನು ಅನುಸರಿಸಿ (ಬೆನ್ನಟ್ಟಿ) **ಉತ್ತರಾಂ ದಿಶಂ** ಉತ್ತರ ದಿಕ್ಕನ್ನು ಕುರಿತು, **ಜಗಾಮ** ಹೋದನು.

ಸುಂದರವಾದ ಬಿಲ್ಲು ಮತ್ತು ಅದ್ಭುತವಾದ ಬಾಣಗಳನ್ನು ಸ್ವೀಕರಿಸಿ ಬೇಟೆಯಾಡುತ್ತಾ ಮೃಗಗಳನ್ನು ಬೆನ್ನಟ್ಟಿ ಸುದ್ಯುಮ್ನನುಉತ್ತರದಿಕ್ಕಿಗೆ ಹೋದನು.

**ಸುಕುಮಾರವನಂ ಮೇರೋರಧಸ್ತಾತ್ ಪ್ರವಿವೇಶ ಹ ।**
**ಯತ್ರಾಸ್ತೇ ಭಗವಾನ್ ಶಂಭೋ ರಮಮಾಣಃ ಸಹೋಮಯಾ ।।೨೫।।**

**ಯತ್ರ** ಎಲ್ಲಿ **ಭಗವಾನ್** ಪೂಜ್ಯನಾದ, **ಶಂಭುಃ** ರುದ್ರದೇವರು, **ಉಮಯಾ** ಪಾರ್ವತಿಯಿಂದ **ಸಹ** ಕೂಡಿಕೊಂಡು, **ರಮಮಾಣಃ** ಕ್ರೀಡಿಸುತ್ತಾ, **ಆಸ್ತೇ** ಇದ್ದರೋ, **ಮೇರೋಃ** ಮೇರುಪರ್ವತದ **ಅಧಸ್ತಾತ್** ಕೆಳಗೆ **(ಸ್ಥಿತಂ)** ಇರುವ

**ತತ್** ಆ **ಸುಕುಮಾರವನಂ** ಸುಕುಮಾರವೆಂಬ ವನವನ್ನು, **ಪ್ರವಿವೇಶ** ಪ್ರವೇಶ ಮಾಡಿದನು. **ಹ** ಪ್ರಸಿದ್ಧವು.

ಪೂಜ್ಯರಾದ ರುದ್ರದೇವರು ಪಾರ್ವತಿಯ ಜೊತೆ ಕ್ರೀಡಿಸುತ್ತಿದ್ದ ಮೇರುಪರ್ವತದ ಕೆಳಗೆ ಇರುವ ಪ್ರಸಿದ್ಧವಾದ ಆ ಸುಕುಮಾರನೆಂಬ ವನವನ್ನು ಸುದ್ಯುಮ್ನನು ಪ್ರವೇಶಿಸಿದನು. ॥೨೫॥

**ತಸ್ಮಿನ್ ಪ್ರವಿಷ್ಟ ಏವಾಸೌ ಸುದ್ಯುಮ್ನಃ ಪರವೀರಹಾ ।**
**ಅಪಶ್ಯತ್ ಸ್ತ್ರಿಯಮಾತ್ಮಾನಮಶ್ವಂ ಚ ವಡವಾಂ ನೃಪ ॥೨೬॥**

**ಹೇ ನೃಪ** ಹೇ ರಾಜನೇ! **ತಸ್ಮಿನ್** ಆ ಸುಕುಮಾರವನದಲ್ಲಿ, **ಪ್ರವಿಷ್ಟ ಏವ** ಪ್ರವೇಶಿಸಿದೊಡನೆಯೇ, **ಅಸೌ ಪರವೀರಹಾ** ಶತ್ರುವೀರರನ್ನು ನಾಶಗೊಳಿಸುವ, **ಸುದ್ಯುಮ್ನಃ** ಸುದ್ಯುಮ್ನನು, **ಆತ್ಮಾನಂ** ತನ್ನನ್ನು, **ಸ್ತ್ರಿಯಂ** ಸ್ತ್ರೀ ಆದದ್ದನ್ನು **ಅಶ್ವಂ ಚ** ಕುದುರೆಯನ್ನು ಸಹ, **ವಡವಾಂ** ಹೆಣ್ಣು ಕುದುರೆ ಆದದ್ದನ್ನು **ಅಪಶ್ಯತ್** ನೋಡಿದನು.

ಶತ್ರುಭಯಂಕರನಾದ ಸುದ್ಯುಮ್ನನು ಸುಕುಮಾರವನವನ್ನು ಪ್ರವೇಶಿಸಿ-ದೊಡನೆಯೇ ತಾನು, ತನ್ನ ಕುದುರೆಯು ಹೆಣ್ಣಾದದ್ದನ್ನು ಕಂಡನು. ॥೨೬॥

**ತಥಾ ತದನುಗಾಃ ಸರ್ವ ಆತ್ಮಲಿಂಗವಿಪರ್ಯಯಮ್ ।**
**ದೃಷ್ಟ್ವಾ ವಿಮನಸೋಽಭೂವನ್ ವೀಕ್ಷ್ಯಮಾಣಾಃ ಪರಸ್ಪರಮ್ ॥೨೭॥**

**ತಥಾ** ಅದರಂತೆ **ತದನುಗಾಃ ಸರ್ವೇ** ಸುದ್ಯುಮ್ನನ ಅನುಯಾಯಿಗಳಾದ ಮಂತ್ರಿಗಳಾದವರು, **ಆತ್ಮಲಿಂಗವಿಪರ್ಯಯಂ** ದೇಹದ, ಪುರುಷಚಿಹ್ನ ಹೋಗಿ ಸ್ತ್ರೀಚಿಹ್ನೆ ಬಂದದ್ದನ್ನು, **ದೃಷ್ಟ್ವಾ** ನೋಡಿ, **ಪರಸ್ಪರಂ** ಒಬ್ಬರೊಬ್ಬರನ್ನು, **ವೀಕ್ಷ್ಯಮಾಣಾಃ** ನೋಡುವವರಾಗಿ, **ವಿಮನಸಃ** ದುಃಖಿತವಾದ ಮನಸ್ಸುಳ್ಳವರು, **ಅಭೂವನ್** ಆದರು.

ಸುದ್ಯುಮ್ನನಂತೆ ಎಲ್ಲ ಮಂತ್ರಿ ಮೊದಲಾದವರೂ ತಮ್ಮ ದೇಹದ ಚಿಹ್ನ ಬದಲಾದದ್ದು ನೋಡಿ ಪರಸ್ಪರರನ್ನು ನೋಡುತ್ತಾ ಮನಸ್ಸಿನಲ್ಲಿ ವ್ಯಾಕುಲ ಗೊಂಡರು. ॥೨೭॥

**★ ॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಪ್ರಥಮೋಧ್ಯಾಯಃ ॥ ★**

# ಅಥ ದ್ವಿತೀಯೋಽಧ್ಯಾಯಃ

**ರಾಜೋವಾಚ-**

**ಕಥಮೇವಂಗುಣೋ ದೇಶಃ ಕೇನ ವಾ ಭಗವನ್ ಕೃತಃ ।**
**ಪ್ರಶ್ನಮೇನಂ ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥೧॥**

ಪರೀಕ್ಷಿತರಾಜನು ಕೇಳುತ್ತಾನೆ -

**ಹೇ ಭಗವನ್** ಪೂಜ್ಯರಾದ ಶುಕಾಚಾರ್ಯರೇ! **ದೇಶಃ** ಸುಕುಮಾರವನ ಪ್ರದೇಶವು, **ಏವಂಗುಣಃ** ತನ್ನಲ್ಲಿ ಪ್ರವೇಶ ಮಾಡಿದ ಪುರುಷರಿಗೆ ಸ್ತ್ರೀತ್ವವನ್ನು ತಂದುಕೊಡುವ ಗುಣ ಉಳ್ಳದ್ದು, **ಕಥಂ** ಹೇಗೆ? **ಕೇನ** ಯಾರಿಂದ **ಕೃತಃ** ಮಾಡಲ್ಪಟ್ಟಿತು? **ಹಿ** ಏಕೆಂದರೆ, **ನಃ** ಈ ವಾರ್ತೆಯನ್ನು ಕೇಳಿದ ನಮಗೆ, **ಪರಂ** ಬಹಳ **ಕೌತೂಹಲಂ** ಉತ್ಸುಕತೆಯು ಉಂಟಾಗಿದೆ. ಕಾರಣ, **ಏನಂ ಪ್ರಶ್ನಂ** ನನ್ನಿಂದ ಮಾಡಿದ ಪ್ರಶ್ನೆಗೆ **(ಉತ್ತರಂ)** ಉತ್ತರವನ್ನು **ಸಮಾಚಕ್ಷ್ವ** ಹೇಳಿರಿ.

ಸುದ್ಯುಮ್ನ ಮೊದಲಾದವರು ಸ್ತ್ರೀಯಾದದ್ದು ಕೇಳಿ ಪರೀಕ್ಷಿತನು ಆಶ್ಚರ್ಯ ಚಕಿತನಾದನು. ಈ ಪ್ರದೇಶಕ್ಕೆ ಸ್ತ್ರೀತ್ವ ತಂದು ಕೊಡುವ ಸಾಮರ್ಥ್ಯ ಹೇಗೆ ಬಂತು? ಯಾರು ತಂದು ಕೊಟ್ಟರು? ಎಂಬ ಪ್ರಶ್ನೆಗೆ ಸಮಾಧಾನ ಹೇಳಿರಿ ಎಂದು ಕೇಳಿದನು.

**ಶ್ರೀಶುಕ ಉವಾಚ-**

**ಏಕದಾ ಗಿರೀಶಂ ದ್ರಷ್ಟುಮೃಷಯಸ್ತತ್ರ ಸುವ್ರತಾಃ ।**
**ದಿಶೋ ವಿತಿಮಿರಾ ಭಾಸಾ ಕುರ್ವಂತಸ್ತಮುಪಾಗಮನ್ ॥೨॥**

ಶುಕಾಚಾರ್ಯರು ಹೇಳಿದರು -

**ಏಕದಾ** ಒಂದು ಸಲ, **ಗಿರೀಶಂ** ರುದ್ರದೇವರನ್ನು, **ದ್ರಷ್ಟುಂ** ನೋಡಲು **ಸುವ್ರತಾಃ** ಸಮೀಚೀನವ್ರತ ಧಾರಣ ಮಾಡಿದ **ಋಷಯಃ** ಋಷಿಗಳು **ತತ್ರ** ಸುಕುಮಾರ ವನದಲ್ಲಿ, **ಭಾಸಾ** ತಮ್ಮ ತೇಜಸ್ಸಿನಿಂದ **ದಿಶಃ** ದಿಕ್ಕುಗಳನ್ನು, **ವಿತಿಮಿರಾಃ** ಕತ್ತಲೆ ಇಲ್ಲದವುಗಳನ್ನಾಗಿ **ಕುರ್ವಂತಃ ಸಂತಃ** ಮಾಡುವವರಾಗಿ, **ತಂ** ರುದ್ರದೇವರನ್ನು **ಉಪಾಗಮನ್** ಹೊಂದಿದರು.

ಒಂದು ಸಲ ಋಷಿಗಳೆಲ್ಲರೂ ರುದ್ರದೇವರನ್ನು ದರ್ಶನ ಮಾಡಲು ತಮ್ಮ ಕಾಂತಿಯಿಂದ ದಿಕ್ಕುಗಳಲ್ಲಿಯ ಕತ್ತಲೆಯನ್ನು ಕಳೆಯುತ್ತ ರುದ್ರದೇವರನ್ನು ಸಮೀಪಿಸಿದರು. ॥೨॥

ವಿಶೇಷಾರ್ಥ :-

**ವಿತಿಮಿರಾಭಾಸಾಃ** ಎಂಬುದು ಸಮಸ್ತ ಪದವು. ಋಷಿಗಳ ಉಜ್ವಲವಾದ ದೇಹಕಾಂತಿಯಿಂದ ಕತ್ತಲೆಯು ನಾಶವಾಗುವುದಲ್ಲದೆ ಅಲ್ಲಿಯ ಆಭಾಸ ಇನ್ನಿತರ ಪ್ರಕಾಶಗಳೂ ಸಹ ಅಡಗಿ ಹೋದವು. **ತಿಮಿರಾಣಿ ಚ ಆಭಾಸಾಶ್ಚ ತಿಮಿರಾಭಾಸಾಃ ವಿಗತಾಃ ತಿಮಿರಾಭಾಸಾಃ ಯಾಭ್ಯಃ ತಾಃ** ಎಂದು ವಿಗ್ರಹವು.

**ತಾನ್ವಿಲೋಕ್ಯಾಂಬಿಕಾದೇವೀ ವಿವಸ್ತ್ರಾ ವ್ರೀಡಿತಾ ಭೃಶಮ್ ।**
**ಭರ್ತುರಂಕಾತ್ಸಮುತ್ಥಾಯ ನೀವೀಮಾಶ್ವಥ ಪರ್ಯಧಾತ್ ॥೩॥**

**ತಾನ್** ಋಷಿಗಳನ್ನು, **ವಿಲೋಕ್ಯ** ನೋಡಿ, **ವಿವಸ್ತ್ರಾ** ವಸ್ತ್ರರಹಿತಳಾದ, **ಅಂಬಿಕಾದೇವೀ** ಪಾರ್ವತೀದೇವಿಯು, **ಭೃಶಂ** ಬಹಳ **ವ್ರೀಡಿತಾ ಸತೀ** ಲಜ್ಜಿತಳಾಗಿ, **ಭರ್ತುಃ** ಪತಿಯ, **ಅಂಕಾತ್** ಸಮೀಪದಿಂದ (ಸಮೀಪೋತ್ಸಂಗಯೋರಂಕಃ ಇತ್ಯಭಿಧಾನಮ್) **ಸಮುತ್ಥಾಯ** ಎದ್ದು **ಅಥ** ಅನಂತರ **ಆಶು** ಶೀಘ್ರವಾಗಿ **ನೀವೀಂ** ವಸ್ತ್ರವನ್ನು **ಪರ್ಯಧಾತ್** ಉಟ್ಟುಕೊಂಡಳು.

ಋಷಿಗಳನ್ನು ನೋಡಿ ಲಜ್ಜಿತಳಾದ ಪಾರ್ವತಿಯು ಲಗುಬಗೆಯಿಂದ ಎದ್ದು ವಸ್ತ್ರವನ್ನುಟ್ಟಳು. ॥೩॥

**ಋಷಯೋಽಪಿ ತಯೋರ್ವೀಕ್ಷ್ಯ ಪ್ರಸಂಗಂ ರಮಮಾಣಯೋಃ ।**
**ನಿವೃತ್ತಾಃ ಪ್ರಯಯುಸ್ತಸ್ಮಾನ್ನರನಾರಾಯಣಾಶ್ರಮಮ್ ॥೪॥**

**ಋಷಯೋಽಪಿ** ಋಷಿಗಳೂ ಸಹ, **ರಮಮಾಣಯೋಃ** ಕ್ರೀಡಿಸತಕ್ಕ **ತಯೋಃ** ಆ ಶಿವ-ಪಾರ್ವತಿಯರ, **ಪ್ರಸಂಗಂ** ಪರಸ್ಪರ ಅಂಗಸಂಗವನ್ನು, **ವೀಕ್ಷ್ಯ** ನೋಡಿ, **ತಸ್ಮಾತ್** ಆ ಸುಕುಮಾರವನದಿಂದ **ನಿವೃತ್ತಾಃ** ತಿರುಗಿ **ನರನಾರಾಯಣಾಶ್ರಮಂ** ನರನಾರಾಯಣಾಶ್ರಮಕ್ಕೆ **ಪ್ರಯಯುಃ** ಪ್ರಯಾಣ ಬೆಳೆಸಿದರು.

ಋಷಿಗಳು ಈ ಪ್ರಸಂಗವನ್ನು ನೋಡಿದರು. ವಿಚಾರಿಸಿದರು. ಸ್ತ್ರೀ ಪುರುಷರಿರುವ ಈ ಸ್ಥಳಕ್ಕೆ ಬಂದದ್ದರಿಂದ ಈ ಅಘವು ಘಟಿಸಿದೆ. ನಾವು ಇಲ್ಲಿಗೆ ಬಂದದ್ದಕ್ಕಾಗಿ ಶಿವ-ಪಾರ್ವತಿಯರ ಸಂಗಕ್ಕೆ ವಿಘ್ನವಾಯಿತು. ಈ ಪಾಪ ನಮ್ಮಿಂದ ಆಯಿತು. ಆದ್ದರಿಂದ ಕೇವಲ ಪುರುಷರಿದ್ದಾರೋ, ಅಂಥ ಸ್ಥಳಕ್ಕೆ ಹೋದರೇ ಈ ವಿಧವಾದ ಪಾಪವು ಘಟಿಸುವುದಿಲ್ಲ. ಯಾವ ಚಿಂತೆಯೂ ಇರುವುದಿಲ್ಲ. ಹೀಗೆ ವಿಚಾರಿಸಿ ನರನಾರಾಯಣಾಶ್ರಮಕ್ಕೆ ತೆರಳಿದರು. ॥೪॥

**ತದ್ಯೈವಂ ಭಗವಾನಾಹ ಪ್ರಿಯಾಯಾಃ ಪ್ರಿಯಕಾಮ್ಯಯಾ ।**
**ಸ್ಥಾನಂ ಯಃ ಪ್ರವಿಶೇದೇತತ್ಸ ವೈ ಯೋಷಿದ್ಭವೇದಿತಿ ॥೫॥**

**ತದಾ** ಆಗ **ಭಗವಾನ್** ಪೂಜ್ಯರಾದ ರುದ್ರದೇವರು, **ಯಃ** ಯಾರು, **ಏತತ್ ಸ್ಥಾನಂ** ಈ ಸ್ಥಾನವನ್ನು **ಪ್ರವಿಶೇತ್** ಪ್ರವೇಶಿಸುವರೋ, **ಸಃ** ಅವರು **ಯೋಷಿತ್** ಸ್ತ್ರೀಯು **ಭವೇತ್** ಆಗುತ್ತಾರೆ. **ಏವಂ** ನಿಶ್ಚಯ (ಏವಂ ಶಬ್ದವು ಅವಧಾರಣಾರ್ಥಕವೂ ಇದೆ). **ಇತಿ** ಈ ರೀತಿಯಾಗಿ, **ಪ್ರಿಯಾಯಾಃ** ಹೆಂಡತಿಯಾದ ಪಾರ್ವತಿದೇವಿಗೆ, **ಪ್ರಿಯಕಾಮ್ಯಯಾ** ಪ್ರೀತಿಯಾಗಬೇಕೆಂಬ ಇಚ್ಛೆಯಿಂದ **ಆಹ** ಹೇಳಿದರು. **ವೈ** ತನ್ನ ಅನುಗ್ರಹವಿಲ್ಲದೇ ಸ್ತ್ರೀಭಾವವು ಪರಿಹಾರವಾಗಲಾರದು.

ರುದ್ರದೇವರು ಪತ್ನಿಯ ಸಮಾಧಾನಕ್ಕಾಗಿ, ಈ ಸ್ಥಾನಕ್ಕೆ ಯಾರು ಪ್ರವೇಶಿಸುವರೋ, ಅವರು ನಿಶ್ಚಯವಾಗಿ ಹೆಣ್ಣಾಗಲಿ ಎಂದು ಹೇಳಿದರು.

ಯಾರು ಈ ಸ್ಥಾನವನ್ನು ಪ್ರವೇಶಿಸುವರೋ ಅವರು ಎಂದುದರಿಂದ ತನ್ನನ್ನು ಬಿಟ್ಟು ಎಂಬ ಅರ್ಥವು ಸೂಚಿತವಾಗುವದು. ವೈ ಎಂಬ ಶಬ್ದದಿಂದ ತನ್ನ ಅನುಗ್ರಹವಿಲ್ಲದೇ ಸ್ತ್ರೀತ್ವಮೋಚನವಾಗಲಾರದೆಂದು ಸೂಚಿಸಿರುವರು. ।।೫।।

**ತತ ಊರ್ಧ್ವಂ ವನಂ ತದ್ವೈ ಪುರುಷಾ ವರ್ಜಯಂತಿ ಹಿ ।**
**ಸ ಚಾನುಚರಸಂಯುಕ್ತೋ ವಿಚಚಾರ ವನಾದ್ವನಮ್ ।।೬।।**

**ಹಿ** ಯಾವ ಕಾರಣ, ಹರನು ಸ್ತ್ರೀತ್ವವು ಬರಲೆಂದು ಹೇಳಿದನೋ, ಆ ಕಾರಣದಿಂದ **ತತಃ ಊರ್ಧ್ವಂ** ಅಂದಿನಿಂದ, **ಪುರುಷಾಃ** ಪುರುಷರು, **ತತ್ ವನಂ** ಸ್ತ್ರೀತ್ವವನ್ನು ತಂದುಕೊಡುವ ಆ ವನವನ್ನು, **ವರ್ಜಯಂತಿ ವೈ** ಬಿಟ್ಟು ಬಿಡುವರು, ಅಲ್ಲಿ ಸಂಚರಿಸುವುದಿಲ್ಲ. **ಸ ಚ** ಸುದ್ಯುಮ್ನನಾದರೋ, **ಅನುಚರಸಂಯುಕ್ತಃ** ತನ್ನ ಸೇವಕರಿಂದ ಕೂಡಿಕೊಂಡು, **ವನಾತ್ ವನಂ** ವನದಿಂದ ವನಕ್ಕೆ **ವಿಚಚಾರ** ಸಂಚರಿಸಿದನು.

ರುದ್ರದೇವರ ಶಾಪವಿರುವುದರಿಂದ ಈಗಲೂ ಸುಕುಮಾರವನದಲ್ಲಿ ಪುರುಷರು ಸಂಚರಿಸುವುದಿಲ್ಲ. ಸ್ತ್ರೀತ್ವವನ್ನು ಹೊಂದಿದ ಸುದ್ಯುಮ್ನನು ಪಟ್ಟಣಕ್ಕೆ ತೆರಳದೇ ವನದಲ್ಲೇ ತನ್ನ ಅನುಚರರಿಂದ ಕೂಡಿಕೊಂಡು ಸಂಚರಿಸುತ್ತಿದ್ದನು.

ಇಲ್ಲಿ ಸ ಚ ಎಂದು ಪುಲ್ಲಿಂಗ ಪ್ರಯೋಗ ಮಾಡಿದ್ದು ಪೂರ್ವಾವಸ್ಥೆಯಿಂದಾಗಲಿ ಮುಂದೆ ಶಿವನ ವರದಿಂದ ಪುರುಷನಾಗುವನು ಎಂಬ ಅಭಿಪ್ರಾಯದಿಂದ ಎಂದು ತಿಳಿಯಬೇಕು. ಅನುಚರರು ಸ್ತ್ರೀಯರಾಗಿಯೇ ಗುಡ್ಡಗಾಡು ಪ್ರದೇಶದಲ್ಲಿ ವಾಸ ಮಾಡಿದರು. ರಾಮಾಯಣದಲ್ಲಿ ಶಿವ ಪಾರ್ವತಿಯರು ವರ ಕೊಟ್ಟರೆಂದು ಹೇಳಿದ್ದು ಕಲ್ಪಾಂತರ ವಿಷಯವೆಂದು ತಿಳಿಯಬೇಕು. ।।೬।।

**ಅಥ ತಾಮಾಶ್ರಮಾಭ್ಯಾಶೇ ಚರಂತೀಂ ಪ್ರಮದೋತ್ತಮಾಮ್ ।**
**ಸ್ತ್ರೀಭಿಃ ಪರಿವೃತಾಂ ವೀಕ್ಷ್ಯ ಚಕಮೇ ಭಗವಾನ್ ಬುಧಃ ।।೭।।**

**ಅಥ** ಅನಂತರ, **ಆಶ್ರಮಾಭ್ಯಾಸೇ** ಆಶ್ರಮದ ಸಮೀಪದಲ್ಲಿ, **ಚರಂತೀಂ** ಸಂಚರಿಸುವ **ಸ್ತ್ರೀಭಿಃ** ಸ್ತ್ರೀಯರಿಂದ, **ಪರಿವೃತಾಂ** ಸುತ್ತುವರೆಯಲ್ಪಟ್ಟ, **ತಾಂ ಪ್ರಮದೋತ್ತಮಾಂ** ಆ ಉತ್ತಮ ಸ್ತ್ರೀಯನ್ನು **ವೀಕ್ಷ್ಯ** ನೋಡಿ, **ಭಗವಾನ್ ಬುಧಃ** ಚಂದ್ರನ ಮಗನಾದ ಜ್ಞಾನಿಯಾದ ಬುಧನು, **ಚಕಮೇ** ಇಚ್ಛಿಸಿದನು.

ಆಶ್ರಮ ಸಮೀಪದಲ್ಲಿ ಅನುಚರರಿಂದೊಡಗೂಡಿ ಸಂಚರಿಸುವ ಸುಂದರ ಸ್ತ್ರೀಯಳನ್ನು ನೋಡಿ ಬುಧನು ವಿವಾಹವಾಗಲು ಇಚ್ಛಿಸಿದನು. ।।೭।।

ಮದುವೆಯಾಗಲು ಕೇವಲ ಒಬ್ಬರ ಇಚ್ಛೆಯು ಸಾಲದು ಕಾರಣ ಇವಳ ಸಮ್ಮತಿ ಇದೆ ಎಂದು ಹೇಳುವರು -

**ಸಾಽಪಿ ತಂ ಚಕಮೇ ಸುಭ್ರೂಃ ಸೋಮರಾಜಸುತಂ ಪತಿಮ್ ।**
**ಸ ತಸ್ಯಾ ಜನಯಾಮಾಸ ಪುರೂರವಸಮಾತ್ಮಜಮ್ ।।೮।।**

**ಸುಭ್ರೂಃ** ಸುಂದರವಾದ ಹುಬ್ಬುಗಳುಳ್ಳ, **ಸಾ ಅಪಿ** ಆ ಸ್ತ್ರೀಯು ಸಹ, **ಸೋಮರಾಜಸುತಂ** ಚಂದ್ರನ ಮಗನಾದ, **ತಂ** ಬುಧನನ್ನು, **ಪತಿಂ ಚಕಮೇ** ಗಂಡನಾಗಲೆಂದು ಇಚ್ಛಿಸಿದಳು. **ಸಃ** ಬುಧನು **ತಸ್ಯಾಂ** ಅವಳಲ್ಲಿ **ಪುರೂರವಸಂ** ಪುರೂರವಸನೆಂಬ **ಆತ್ಮಜಂ** ಮಗನನ್ನು, **ಜನಯಾಮಾಸ** ಹುಟ್ಟಿಸಿದನು.

ಸುಂದರಳಾದ ಇಲಾದೇವಿಯೂ ಸಹ ಬುಧನನ್ನು ವರಿಸಿದಳು. ಬುಧನು ಇವಳಲ್ಲಿ ಪುರೂರವಸನೆಂಬ ಮಗನನ್ನು ಪಡೆದನು.

ಸತ್ಯ- ಈ ಶ್ಲೋಕದಲ್ಲಿ ಸೋಮರಾಜಸುತಂ ಎಂಬ ಪದದಿಂದ ಕೇವಲ ಬೃಹಸ್ಪತಿಪತ್ನಿ ತಾರಾ ಮತ್ತು ಚಂದ್ರನ ಸಮ್ಮತಿಯಿಂದಲೇ ಹುಟ್ಟಿದ ಇವನಿಗೆ ಕೇವಲ ತಮ್ಮಿಬ್ಬರ ಸಮ್ಮತಿಯಿಂದಲೇ ರಮಣವು ಯುಕ್ತವೆಂದು ಸೂಚಿಸುವರು. ।।೮।।

**ಏವಂ ಸ್ತ್ರೀತ್ವಮನುಪ್ರಾಪ್ತಃ ಸುದ್ಯುಮ್ನೋ ಮಾನವೋ ನೃಪಃ ।**
**ಸಸ್ಮಾರ ಸ್ವಕುಲಾಚಾರ್ಯಂ ವಸಿಷ್ಠಮಿತಿ ಶುಶ್ರುಮಃ ।।೯।।**

**ಏವಂ** ಈ ರೀತಿಯಾಗಿ, **ಸ್ತ್ರೀತ್ವಂ** ಸ್ತ್ರೀಭಾವವನ್ನು **ಅನುಪ್ರಾಪ್ತಃ** ಹೊಂದಿದ, **ಮಾನವಃ** ಮನುಪುತ್ರನಾದ, **ನೃಪಃ** ರಾಜನಾದ **ಸುದ್ಯುಮ್ನಃ** ಸುದ್ಯುಮ್ನನು **ಸ್ವಕುಲಾಚಾರ್ಯಂ** ತನ್ನ ಕುಲಗುರುವಾದ, **ವಸಿಷ್ಠಂ** ವಸಿಷ್ಠರನ್ನು **ಸಸ್ಮಾರ** ಸ್ಮರಿಸಿದನು. **ಇತಿ** ಹೀಗೆ **ಶುಶ್ರುಮಃ** ಕೇಳಿದ್ದೇವೆ.

ಹೀಗೆ ಸ್ತ್ರೀಭಾವವನ್ನು ಹೊಂದಿ ವ್ಯಾಕುಲಗೊಂಡ ಮನುಪುತ್ರನಾದ ಸುದ್ಯುಮ್ನನು ತನ್ನ ಕುಲಗುರುಗಳಾದ ವಸಿಷ್ಠರನ್ನು ಸ್ಮರಿಸಿದನೆಂದು ಹಿರಿಯರಿಂದ ಕೇಳಿದ್ದೇವೆ. ।।೯।।

**ಸ ತಸ್ಯಾಂ ತಾಂ ದಶಾಂ ದೃಷ್ಟ್ವಾ ಕೃಪಯಾ ಭೃಶಪೀಡಿತಃ ।**
**ಸುದ್ಯುಮ್ನಸ್ಯಾಶಯನ್ ಪುಂಸ್ತ್ವಮುಪಾಧಾವತ ಶಂಕರಮ್ ॥೧೦॥**

**ಸಃ** ವಸಿಷ್ಠರು, **ತಾಂ ದಶಾಂ** ಆ ಸ್ತ್ರೀತ್ವಾವಸ್ಥೆಯನ್ನು, **ದೃಷ್ಟ್ವಾ** ನೋಡಿ, **ತಸ್ಯಾಂ** ಇವಳಲ್ಲಿ **ಕೃಪಯಾ** ದಯೆಯಿಂದ, **ಭೃಶಪೀಡಿತಃ** ಅತ್ಯಂತ ದುಃಖಿತರಾಗಿ, **ಸುದ್ಯುಮ್ನಸ್ಯ** ಸುದ್ಯುಮ್ನನಿಗೆ **ಪುಂಸ್ತ್ವಂ** ಪುರುಷತ್ವವನ್ನು **ಆಶಯನ್** ಇಚ್ಛಿಸಿ, **ಶಂಕರಂ** ರುದ್ರದೇವರನ್ನು **ಉಪಾಧಾವತ** ಸೇವಿಸಿದರು.

ವಸಿಷ್ಠರು ಸುದ್ಯುಮ್ನನ ದುರವಸ್ಥೆಯನ್ನು ಕಂಡು ಮಮ್ಮಲರಾಗಿ ಮರುಗಿ ಮತ್ತೆ ಪುರುಷನಾಗಲೆಂದು ಶಿವನನ್ನು ಆರಾಧಿಸಿದರು. ॥೧೦॥

**ತುಷ್ಟಃ ಸ ತಸ್ಮೈ ಭಗವಾನೃಷಯೇ ಪ್ರೀತಿಮಾವಹನ್ ।**
**ಸ್ವಾಂ ಚ ವಾಚಮೃತಾಂ ಕುರ್ವನ್ನಿದಮಾಹ ವಿಶಾಂಪತೇ ॥೧೧॥**

**ಹೇ ವಿಶಾಂಪತೇ ವಿಶಾಂ** ಮನುಷ್ಯರಿಗೆ **ಪತೇ** ಒಡೆಯನಾದ ರಾಜನೇ, **ಭಗವಾನ್ ಸಃ** ರುದ್ರದೇವರು, **ತಸ್ಮೈ** ವಸಿಷ್ಠರಲ್ಲಿ, **ತುಷ್ಟಃ** ಸಂತುಷ್ಟನಾಗಿ, **ಋಷಯೇ** ವಸಿಷ್ಠರಿಗೆ, ಮತ್ತು ತನ್ನ ಪತ್ನಿಗೂ ಪ್ರೀತಿಯನ್ನು, **ಆವಹನ್** ಉಂಟುಮಾಡುವವನಾಗಿ, **ಸ್ವಾಂ** ತನ್ನ, **ವಾಚಂ ಚ** ಮಾತನ್ನೂ ಸಹ, **ಋತಾಂ** ಸತ್ಯವನ್ನಾಗಿ, **ಕುರ್ವನ್** ಮಾಡುವವನಾಗಿ, **ಇದಂ** ಮುಂದೆ ಹೇಳುವುದನ್ನು, **ಆಹ** ಹೇಳಿದರು.

ವಸಿಷ್ಠರು ಮಾಡಿದ ತಪಸ್ಸಿನಿಂದ ರುದ್ರದೇವರು ಪ್ರೀತರಾದರು. ಪಾರ್ವತಿಗೆ, ವಸಿಷ್ಠರಿಗೆ ಸಂತೋಷವಾಗುವ ರೀತಿಯಲ್ಲಿ ಮತ್ತು ತಮ್ಮ ಮಾತು ಕೂಡಾ ಸತ್ಯವಾಗುವಂತೆ ವಸಿಷ್ಠರಿಗೆ ವರವನ್ನು ನೀಡಿದರು.

**ಮಾಸಂ ಪುಮಾನ್ಸ ಭವಿತಾ ಸ್ತ್ರೀ ಮಾಸಂ ತಪಸಾ ತವ ।**
**ಇತಿ ವ್ಯವಸ್ಥಯಾ ಕಾಮಂ ಸುದ್ಯುಮ್ನೋಽವತು ಮೇದಿನೀಮ್ ॥೧೨॥**

**ತವ** ನಿನ್ನ **ತಪಸಾ** ತಪಸ್ಸಿನಿಂದ, **ಮಾಸಂ** ಒಂದು ತಿಂಗಳು ಪೂರ್ಣವಾಗಿ, **ಪುಮಾನ್** ಗಂಡಸು, **ಭವಿತಾ** ಆಗುತ್ತಾನೆ, **ಮಾಸಂ** ಒಂದು ತಿಂಗಳು ಪೂರ್ಣವಾಗಿ, **ಸ್ತ್ರೀ ಭವಿತಾ** ಹೆಣ್ಣಾಗುತ್ತಾನೆ, **ಇತಿ** ಈ ರೀತಿಯಾಗಿ, **ವ್ಯವಸ್ಥಯಾ** ವ್ಯವಸ್ಥೆಯಿಂದ **ಕಾಮಂ** ಯಥೇಷ್ಟವಾಗಿ, **ಸುದ್ಯುಮ್ನಃ** ಸುದ್ಯುಮ್ನನು, **ಮೇದಿನೀಂ** ರಾಜ್ಯವನ್ನು **ಅವತು** ರಕ್ಷಿಸಲಿ.

ಆರಾಧನೆಯಿಂದ ಸಂತುಷ್ಟನಾದ ಶಿವನು ವಸಿಷ್ಠರಿಗೆ ಮತ್ತು ತನ್ನ ಪತ್ನಿಗೆ ಪ್ರೀತಿಯಾಗುವಂತೆ, ತನ್ನ ಮಾತೂ ನಿಜವಾಗುವಂತೆ ವ್ಯವಸ್ಥಿತವಾಗಿ ಒಂದು

ತಿಂಗಳು ಹೆಣ್ಣಾಗಿ ಒಂದು ತಿಂಗಳು ಗಂಡಾಗಿ ರಾಜ್ಯಭಾರ ಮಾಡಲೆಂದು ವರವನ್ನು ನೀಡಿದನು. ||೧೨||

**ಆಚಾರ್ಯಾನುಗ್ರಹಾತ್ಕಾಮಂ ಲಬ್ಧ್ವಾ ಪುಂಸ್ತ್ವಂ ವ್ಯವಸ್ಥಯಾ |**
**ಪಾಲಯಾಮಾಸ ಜಗತೀಂ ನಾಭ್ಯನಂದನ್ ಸ್ಮ ತಂ ಪ್ರಜಾಃ ||೧೩||**

**ಆಚಾರ್ಯಾನುಗ್ರಹಾತ್** ಗುರುಗಳ ಅನುಗ್ರಹದಿಂದ ತಾನು ಬಯಸಿದ ಪುರುಷತ್ವವನ್ನು, **ವ್ಯವಸ್ಥಯಾ** ಹಿಂದೆ ಹೇಳಿದ ವ್ಯವಸ್ಥೆಯಿಂದ, **ಲಬ್ಧ್ವಾ** ಹೊಂದಿ **ಜಗತೀಂ** ರಾಜ್ಯವನ್ನು **ಪಾಲಯಾಮಾಸ** ರಕ್ಷಿಸಿದನು. **ತಂ** ಸುದ್ಯುಮ್ನನನ್ನು **ಪ್ರಜಾಃ** ಪ್ರಜೆಗಳು, **ನ ಅಭ್ಯನಂದನ್ ಸ್ಮ** ಅನುಮೋದಿಸಲಿಲ್ಲ.

ವಸಿಷ್ಠರ ಅನುಗ್ರಹದಿಂದ ತಾನು ಬಯಸಿದ ಪುರುಷತ್ವವನ್ನು ವ್ಯವಸ್ಥೆಯಿಂದ ಪಡೆದು ರಾಜ್ಯಭಾರ ಮಾಡಿದನು. ಆದರೆ ಸ್ತ್ರೀ ಆದ ಒಂದು ತಿಂಗಳು ಪೂರ್ಣ ರಾಜದರ್ಶನವಿಲ್ಲದಂತಾಗುವುದರಿಂದ ಇವನನ್ನು ಪ್ರಜೆಗಳು ಒಪ್ಪಲಿಲ್ಲ. ||೧೩||

**ತಸ್ಯೋತ್ಕಲೋ ಗಯೋ ರಾಜನ್ ವಿಮಲಶ್ಚ ಸುತಾಸ್ತ್ರಯಃ |**
**ದಕ್ಷಿಣಾಪಥರಾಜಾನೋ ಬಭೂವುರ್ಧರ್ಮವತ್ಸಲಾಃ ||೧೪||**

**ರಾಜನ್** ಪರೀಕ್ಷಿತನೇ! **ತಸ್ಯ** ಆ ಸುದ್ಯುಮ್ನನಿಗೆ, **ಉತ್ಕಲಃ** ಉತ್ಕಲನು, **ಗಯಃ** ಗಯನು, **ವಿಮಲಃ** ವಿಮಲನು ಹೀಗೆ, **ತ್ರಯಃ** ಮೂವರು, **ಧರ್ಮವತ್ಸಲಾಃ** ಧರ್ಮಾಸಕ್ತರಾದ, **ಸುತಾಃ** ಮಕ್ಕಳು, **ದಕ್ಷಿಣಾಪಥರಾಜಾನಃ** ದಕ್ಷಿಣಾಪಥವೆಂಬ ದೇಶದ ರಾಜರುಗಳು, **ಬಭೂವುಃ** ಆದರು.

ಸುದ್ಯುಮ್ನನಿಗೆ ಉತ್ಕಲ, ಗಯ, ವಿಮಲನೆಂಬ ಮೂರು ಮಕ್ಕಳು. ಇವರು ದಕ್ಷಿಣಾಪಥದೇಶಕ್ಕೆ ರಾಜರಾದರು. ||೧೪||

**ತತಃ ಪರಿಣತಃ ಕಾಲೇ ಪ್ರತಿಷ್ಠಾನಪತಿಃ ಪ್ರಭುಃ |**
**ಪುರೂರವಸ ಉತ್ಸೃಜ್ಯ ಗಾಂ ಪುತ್ರಾಯ ಗತೋ ವನಮ್ ||೧೫||**

**ತತಃ** ಅನಂತರ, **ಪರಿಣತಃ** ವೃದ್ಧನಾದ, **ಪ್ರತಿಷ್ಠಾನಪತಿಃ** ಪ್ರತಿಷ್ಠಾನ ನಗರಕ್ಕೆ ಒಡೆಯನಾದ, **ಪ್ರಭುಃ** ಸಮರ್ಥನಾದ ಸುದ್ಯುಮ್ನನು, **ಕಾಲೇ** ಯೋಗ್ಯಕಾಲದಲ್ಲಿ, **ಪುರೂರವಸೇ ಪುತ್ರಾಯ** ಪುರೂರವಸನೆಂಬ ಮಗನಿಗೆ, **ಗಾಂ** ಭೂಮಿಯನ್ನು, **ಉತ್ಸೃಜ್ಯ** ಕೊಟ್ಟು, **ವನಂ** ಅಡವಿಗೆ **ಗತಃ** ಹೋದನು.

ವೃದ್ಧಾಪ್ಯಕಾಲದಲ್ಲಿ ಸುದ್ಯುಮ್ನನು ತಾನು ಸ್ತ್ರೀ ಆದಾಗ ಬುಧನಿಂದ ಜನಿಸಿದ ಪುರೂರವಸನಿಗೆ ರಾಜ್ಯಭಾರವನ್ನು ಒಪ್ಪಿಸಿ ತಪವಗೈಯ್ಯಲು ವನಕ್ಕೆ ತೆರಳಿದನು.

**★ || ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ದ್ವಿತೀಯೋಽಧ್ಯಾಯಃ || ★**

# ಅಥ ತೃತೀಯೋಽಧ್ಯಾಯಃ

**ಶ್ರೀಶುಕ ಉವಾಚ–**

**ಏವಂ ಗತೇಽಥ ಸುದ್ಯುಮ್ನೇ ಮನುರ್ವೈವಸ್ವತಃ ಸುತೇ ।**
**ಪುತ್ರಕಾಮಸ್ತಪಸ್ತೇಪೇ ಯಮುನಾಯಾಂ ಶತಂ ಸಮಾಃ ॥೧॥**

**ಏವಂ** ಪುರೂರವಸನಿಗೆ ರಾಜ್ಯವನ್ನು ಒಪ್ಪಿಸಿ, **ಸುತೇ** ಮಗನಾದ **ಸುದ್ಯುಮ್ನೇ** ಸುದ್ಯುಮ್ನನು, **ಗತೇ ಸತಿ** ವನಕ್ಕೆ ಹೋಗುತ್ತಿರಲು, **ವೈವಸ್ವತಃ ಮನುಃ** ಶ್ರಾದ್ಧದೇವನು, **ಪುತ್ರಕಾಮಃ** ಸಂತಾನಾಪೇಕ್ಷೆಯಿಂದ, **ಯಮುನಾಯಾಂ** ಯಮುನಾತೀರದಲ್ಲಿ, **ಶತಂ ಸಮಾಃ** ನೂರುವರ್ಷ ಕಾಲ, **ತಪಃ** ತಪಸ್ಸನ್ನು, **ತೇಪೇ** ಮಾಡಿದನು.

ಸುದ್ಯುಮ್ನನು ವನಕ್ಕೆ ತೆರಳಲು ಪುತ್ರಾರ್ಥಿಯಾಗಿ ಮನುವು ಯಮುನಾ ದಡದಲ್ಲಿ ನೂರು ವರುಷ ತಪವಗೈದನು. ॥೧॥

**ತತೋಽಯಜನ್ಮನುರ್ದೇವಮಪತ್ಯಾರ್ಥಂ ಹರಿಂ ಪ್ರಭುಮ್ ।**
**ಇಕ್ಷ್ವಾಕುಪೂರ್ವಜಾನ್ ಪುತ್ರಾನ್ ಲೇಭೇ ಸ್ವಸದೃಶಾನ್ ದಶ ॥೨॥**

**ಮನುಃ** ವೈವಸ್ವತಮನುವು **ಅಪತ್ಯಾರ್ಥಂ** ಗಂಡು ಸಂತತಿಗಾಗಿ, **ಪ್ರಭುಂ** ಸಮರ್ಥನಾದ, **ಹರಿಂ ದೇವಂ** ವಾಸುದೇವನನ್ನು, **ಅಯಜತ್** ಪೂಜಿಸಿದನು. **ತತಃ** ಅನಂತರ, **ಇಕ್ಷ್ವಾಕುಪೂರ್ವಜಾನ್** ಇಕ್ಷ್ವಾಕುವೇ ಅಣ್ಣನಾಗಿ ಉಳ್ಳ, **ಸ್ವಸದೃಶಾನ್** ಗುಣದಿಂದ ತನ್ನನ್ನು ಹೋಲುವ, **ದಶ** ಹತ್ತು, **ಪುತ್ರಾನ್** ಮಕ್ಕಳನ್ನು **ಲೇಭೇ** ಹೊಂದಿದನು.

ನೂರು ವರ್ಷ ತಪಸ್ಸು ಮಾಡಿ ಮಕ್ಕಳಿಗಾಗಿ ವಾಸುದೇವನನ್ನು ಆರಾಧಿಸಿ ಇಕ್ಷ್ವಾಕು ಮೊದಲಾದ ಹತ್ತು ಜನ ತನಗೆ ಅನುರೂಪವಾದ ಮಕ್ಕಳನ್ನು ಪಡೆದನು.

**ವೃಷಧ್ರಸ್ತು ಮನೋಃ ಪುತ್ರೋ ಗೋಪಾಲೋ ಗುರುಣಾ ಕೃತಃ ।**
**ಪಾಲಯಾಮಾಸ ಗಾ ಯತ್ತೋ ರಾತ್ರ್ಯಾಂ ವೀರಾಸನವ್ರತಃ ॥೩॥**

**ಮನೋಃ** ಶ್ರಾದ್ಧದೇವನ, **ಪುತ್ರಃ** ಎಂಟನೆಯ ಮಗನಾದ **ವೃಷಧ್ರಃ ತು** ವೃಷಧ್ರನಾದರೂ (**ವೃಷಾನ್** ಗೋಗಳನ್ನು **ಧಾರಯತಿ** ಧಾರಣ ಮಾಡುವ ಸಾಮರ್ಥ್ಯವುಳ್ಳವನಾದ್ದರಿಂದ ವೃಷಧ್ರನೆಂಬ ಹೆಸರುಳ್ಳವನು) **ಗುರುಣಾ** ವಸಿಷ್ಠರಿಂದ, **ಗೋಪಾಲಃ** ಆಕಳುಗಳ ರಕ್ಷಕನಾಗಿ, **ಕೃತಃ** ಮಾಡಲ್ಪಟ್ಟನು. **ಯತ್ತಃ** ಸನ್ನದ್ಧನಾಗಿ (ಕಾಯಲು ಸಿದ್ಧನಾಗಿ) **ರಾತ್ರ್ಯಾಂ** ರಾತ್ರಿಕಾಲದಲ್ಲಿ, **ವೀರಾಸನವ್ರತಃ** ಗೋರಕ್ಷಣದಲ್ಲಿ, ನಿಷ್ಠೆಯಿಂದ ಕಣ್ಣು ತೆರೆದುಕೊಂಡೇ ಗೋಗಳ ಹತ್ತಿರ ಇದ್ದವನಾಗಿ **ಗಾಃ** ಆಕಳುಗಳನ್ನು **ಪಾಲಯಾಮಾಸ** ರಕ್ಷಿಸಿದನು.

ಎಂಟನೆಯವನಾದರೂ ವೃಷಧ್ರನಿಗೆ ಮಕ್ಕಳಿಲ್ಲದ್ದರಿಂದ ಸ್ವಲ್ಪದರಲ್ಲಿಯೇ ಅವನ ವಿಷಯ ಹೇಳಬಹುದು ಎಂದು ಅವನ ಕಾರ್ಯವನ್ನೇ ಮೊದಲು ಹೇಳುವರು. ಕುಲಗುರುವಾದ ವಸಿಷ್ಠರು ವೃಷಧ್ರನಿಗೆ ಒಂದು ಆಕಳನ್ನು ಕೊಟ್ಟು ಇದನ್ನು ಸಾವಿರವನ್ನಾಗಿ ಮಾಡಿಕೊಂಡು ಬರಲು ಅಪ್ಪಣೆ ಮಾಡಿದರು. ಅವನೂ ಸಹ ನಿಷ್ಠೆಯಿಂದ ಹಗಲಿರುಳು ಎವೆ ಇಕ್ಕದೇ ಆಕಳನ್ನು ಸಂರಕ್ಷಣ ಮಾಡುತ್ತಿದ್ದನು. ಕ್ರಮವಾಗಿ ಗೋಸಂತತಿಯೂ ವಿಸ್ತಾರಗೊಂಡಿತು. ।।೩।।

**ಏಕಥಾ ಪ್ರಾವಿಶದ್ಗೋಷ್ಠಂ ಶಾರ್ದೂಲೋ ನಿಶಿ ವರ್ಷತಿ ।**
**ಶಯಾನಾ ಗಾವ ಉತ್ಥಾಯ ಭೀತಾಸ್ತಾ ಬಭ್ರುವುರ್ವ್ರಜೇ ।।೪।।**

**ಏಕದಾ** ಒಂದು ಸಲ, **ನಿಶಿ** ರಾತ್ರಿಯಲ್ಲಿ, **ವರ್ಷತಿ** ಮೋಡಗಳು ಮಳೆಗರೆ-ಯುತ್ತಿರಲು, **ಗೋಷ್ಠಂ** ಗೋಶಾಲೆಯನ್ನು, **ಶಾರ್ದೂಲಃ** ಹುಲಿಯು, **ಪ್ರಾವಿಶತ್** ಪ್ರವೇಶಿಸಿತು. **ಶಯಾನಾಃ** ಮಲಗಿರುವ, **ಗಾವಃ** ಆಕಳುಗಳು, **ಭೀತಾಃ** ಭಯಗೊಂಡು, **ಉತ್ಥಾಯ** ಎದ್ದು, **ವ್ರಜೇ** ಕೊಟ್ಟಿಗೆಯಲ್ಲಿ, **ಬಭ್ರಮುಃ** ಅತ್ತಿತ್ತ ತಿರುಗಾಡಿದವು.

ವೃಷಧ್ರನು ಗೋಸಂರಕ್ಷಣ ಮಾಡುವಾಗ ಒಂದು ದಿನ ರಾತ್ರಿ ಮಳೆ ಬರುತ್ತಿರುವಾಗ ಒಂದು ಹುಲಿಯು ದನದ ಕೊಟ್ಟಿಗೆಯನ್ನು ಪ್ರವೇಶಿಸಿತು. ಅದನ್ನು ಕಂಡು ಮಲಗಿದ ಆಕಳುಗಳು ಭಯದಿಂದ ಎದ್ದು ಅತ್ತಿತ್ತ ತಿರುಗಾಡಲಾರಂಭಿಸಿದವು.

**ಏಕಾಂ ಜಗ್ರಾಹ ಬಲವಾನ್ ಸಾ ಚುಕ್ರೋಶ ಭಯಾತುರಾ ।**
**ತಸ್ಯಾಸ್ತು ಕ್ರಂದಿತಂ ಶ್ರುತ್ವಾ ವೃಷಧ್ರೋಽಭಿಸಸಾರ ಹ ।।೫।।**

**ಬಲವಾನ್** ಬಲಿಷ್ಠವಾದ ಹುಲಿಯು, **ಏಕಾಂ** ಒಂದು ಆಕಳನ್ನು, **ಜಗ್ರಾಹ** ಹಿಡಿಯಿತು. **ಸಾ** ಆ ಆಕಳು, **ಭಯಾತುರಾ** ಭಯಗೊಂಡು **ಚುಕ್ರೋಶ** ಒದರಿತು. **ತಸ್ಯಾಃ** ಆ ಆಕಳಿನ **ಕ್ರಂದಿತಂ** ಆಕ್ರಂದನವನ್ನು **ಶ್ರುತ್ವಾ** ಕೇಳಿ, **ತಾಂ** ಆಕಳನ್ನು, **ಅಭಿಸಸಾರ** ಎದುರಾಗಿ ಹೋದನು. **ಹ** ಕಷ್ಟವು.

ಹುಲಿಯು ಒಂದು ಆಕಳನ್ನು ಹಿಡಿದುಕೊಂಡಿತು. ಆಗ ಆಕಳು ಆರ್ತ ಧ್ವನಿಯಿಂದ ಕೂಗಿತು. ಕೂಗನ್ನು ಕೇಳಿ ವೃಷಧ್ರನು ಆಕಳಿನತ್ತ ಸಾಗಿ ಬಂದನು.

**ಖಡ್ಗಮಾದಾಯ ತರಸಾ ಪ್ರಲೀನೋಡುಗಣೇ ನಿಶಿ ।**
**ಅಜಾನನ್ನಹನದ್ಬಭ್ರೋಃ ಶಿರಃ ಶಾರ್ದೂಲಶಂಕಯಾ ।।೬।।**

**ತರಸಾ** ವೇಗದಿಂದ **ಖಡ್ಗಂ** ಕತ್ತಿಯನ್ನು, **ಆದಾಯ** ತೆಗೆದುಕೊಂಡು, **ನಿಶಿ** ರಾತ್ರಿಯಲ್ಲಿ, **ಉಡುಗಣೇ** ನಕ್ಷತ್ರಸಮೂಹವು, **ಪ್ರಲೀನೇ** ಮೋಡದಿಂದ

ಮುಚ್ಚಿರಲು **ಅಜಾನನ್** ತಿಳಿಯದಲೆ, **ಶಾರ್ದೂಲಶಂಕಯಾ** ಹುಲಿ ಎಂದು ತಿಳಿದು **ಬಭ್ರೋಃ** ಆಕಳಿನ (ಬಭ್ರುರ್ಗೌಃ ಸೌರಭೇಯೀ ಚ ಮಾಹೇಯೀ ಗೋಮತಲ್ಲಿಕಾ ಎಂದು ಅಭಿಧಾನವಿರುವುದು). **ಶಿರಃ** ತಲೆಯನ್ನು, **ಅಹನತ್** ಕತ್ತರಿಸಿದನು.

**ನಲೋಪಃ ಪ್ರಾತಿಪಾದಿಕಾಂತಸ್ಯ** ಎಂಬ ಸೂತ್ರಾನುಸಾರವಾಗಿ ಪ್ರಲೀನೇ ಎಂಬುವಲ್ಲಿ ವಿಭಕ್ತಿ ಇಲ್ಲದಂತೆ ಪ್ರಲೀನ ಎಂದು ಪ್ರಯೋಗವಿದೆ. ॥೬॥

**ವ್ಯಾಘ್ರೋ ವಿವೃಕ್ಣಶ್ರವಣೋ ನಿಸ್ತ್ರಿಂಶಾಗ್ರಹತಸ್ತತಃ ।**
**ನಿಶ್ಚಕ್ರಾಮ ಭೃಶಂ ಭೀತೋ ರಕ್ತಂ ಪಥಿ ಸಮುತ್ಸೃಜನ್ ॥೭॥**

**ನಿಸ್ತ್ರಿಂಶಾಗ್ರಹತಃ** ನಿಸ್ತ್ರಿಂಶ ಖಡ್ಗದ, **ಅಗ್ರ** ತುದಿಯಿಂದ, **ಹತಃ** ಹೊಡೆಯಲ್ಪಟ್ಟ ಆದ್ದರಿಂದಲೇ, **ವಿವೃಕ್ಣಶ್ರವಣಃ** ಕತ್ತರಿಸಲ್ಪಟ್ಟ ಕಿವಿ ಉಳ್ಳದ್ದಾಗಿ, **ಭೃಶಂ** ಬಹಳ, **ಭೀತಃ** ಹೆದರಿ, **ತತಃ** ಕೊಟ್ಟಿಗೆಯಿಂದ, **ಪಥಿ** ದಾರಿಯಲ್ಲಿ, **ರಕ್ತಂ** ರಕ್ತವನ್ನು **ಉತ್ಸೃಜನ್** ಸುರಿಸುತ್ತ , **ನಿಶ್ಚಕ್ರಾಮ** ಓಡಿಹೋಯಿತು.

ವೃಷಧ್ರನು ಹೊಡೆಯುವಾಗ ಖಡ್ಗದ ತುದಿಯು ತಾಕಿ ಹುಲಿಯ ಕಿವಿಯೂ ಕತ್ತರಿಸಿತು. ಭಯಗೊಂಡ ಹುಲಿಯೂ ರಕ್ತವನ್ನು ಸುರಿಸುತ್ತ ಅಲ್ಲಿಂದ ಹೊರಟು ಹೋಯಿತು. ॥೭॥

**ಮನ್ಯಮಾನೋ ಹತಂ ವ್ಯಾಘ್ರಂ ವೃಷಧ್ರಃ ಪರವೀರಹಾ ।**
**ಅದ್ರಾಕ್ಷೀತ್ ಸ್ವಹತಾಂ ಬಭ್ರುಂ ವ್ಯುಷ್ಟಾಯಾಂ ನಿಶಿ ದುಃಖಿತಃ ॥೮॥**

**ಪರವೀರಹಾ** ಶತ್ರುತಾಪಕನಾದ, **ವೃಷಧ್ರಃ** ವೃಷಧ್ರನು, **ನಿಶಿ** ರಾತ್ರಿಯಲ್ಲಿ, **ವ್ಯಾಘ್ರಂ** ಹುಲಿಯನ್ನು, **ಹತಂ** ಕೊಲ್ಲಲ್ಪಟ್ಟದ್ದನ್ನಾಗಿ, **ಮನ್ಯಮಾನಃ** ತಿಳಿದವನಾಗಿ, **ನಿಶಿ** ರಾತ್ರಿಯು, **ವ್ಯುಷ್ಟಾಯಾಂ** ಬೆಳಗಾಗುತ್ತಿರಲು, **ಸ್ವಹತಾಂ** ತನ್ನಿಂದ ಸಂಹೃತವಾದ, **ಬಭ್ರುಂ** ಆಕಳನ್ನು **ಅದ್ರಾಕ್ಷೀತ್** ನೋಡಿದನು. ಕಾರಣ **ದುಃಖಿತಃ** ಖೇದಪಟ್ಟನು.

ವೃಷಧ್ರನು ಕತ್ತಲೆಯಲ್ಲಿ ಹುಲಿಯನ್ನು ಕೊಂದನೆಂದು ತಿಳಿದು ಪ್ರಾತಃಕಾಲದಲ್ಲಿ ತನ್ನಿಂದ ಘಟಿಸಿದ ಗೋಹತ್ಯೆಯಿಂದ ಬಹಳ ದುಃಖಿತನಾದನು. ॥೮॥

**ತಂ ಶಶಾಪ ಕುಲಾಚಾರ್ಯಃ ಕೃತಾಗಸಮಕಾಮತಃ ।**
**ನ ಕ್ಷತ್ರಬಂಧುಃ ಶೂದ್ರಸ್ತ್ವಂ ಕರ್ಮಣಾ ಭವಿತಾಽಮುನಾ ॥೯॥**

**ಕುಲಾಚಾರ್ಯಃ** ವಸಿಷ್ಠರು, **ಅಕಾಮತಃ** ಆಕಳನ್ನು ಕೊಲ್ಲುವ ಇಚ್ಛೆ ಇಲ್ಲದಲೆ **ಕೃತಾಗಸಂ** ಅಪರಾಧ ಮಾಡಿದ, **ತಂ** ವೃಷಧ್ರನನ್ನು, **ಅಮುನಾ ಕರ್ಮಣಾ** ಈ ಕ್ರೂರ ಕೆಲಸದಿಂದ, **ತ್ವಂ** ನೀನು, **ಕ್ಷತ್ರಬಂಧುಃ ನ** ಕ್ಷತ್ರಿಯಾಭಾಸನೂ ಸಹ ಅನಿಸಲು

ಅರ್ಹನಲ್ಲ, **ತ್ವಂ** ನೀನು, **ಶೂದ್ರಃ** ಶೂದ್ರನು **ಭವಿತಾ** ಆಗುವಿ, ಹೀಗೆ **ಶಶಾಪ** ಶಪಿಸಿದನು.

ತಿಳಿಯದಲೆ ಗೋಹತ್ಯೆ ಮಾಡಿದ್ದರಿಂದ ಶೂದ್ರಧರ್ಮವುಳ್ಳವನಾಗುವಿ, ಕ್ಷತ್ರಿಯಕುವರನೆನಿಸಲು ಯೋಗ್ಯನಲ್ಲ ಎಂದು ಶಪಿಸಿದರು. ।।೯।।

**ಏವಂ ಶಪ್ತಸ್ತು ಗುರುಣಾ ಪ್ರತ್ಯಗೃಹ್ಣಾತ್ ಕೃತಾಂಜಲಿಃ ।**
**ಅಧಾರಯತ್ ವ್ರತಂ ವೀರ ಊರ್ಧ್ವರೇತಾ ಮುನಿಪ್ರಿಯಮ್ ।।೧೦।।**

**ಗುರುಣಾ** ವಸಿಷ್ಠರಿಂದ, **ಶಪ್ತಃ ತು** ಶಪಿಸಲ್ಪಟ್ಟ ವೃಷಧ್ರನಾದರೂ, **ಕೃತಾಂಜಲಿಃ** ಬೊಗಸೆಯೊಡ್ಡಿ **ಪ್ರತ್ಯಗೃಹ್ಣಾತ್** ಸ್ವೀಕರಿಸಿದನು. **ಊರ್ಧ್ವರೇತಾಃ** ಬ್ರಹ್ಮಚರ್ಯ ಧಾರಣ ಮಾಡಿದ **ವೀರಃ** ಶೂರನಾದ ವೃಷಧ್ರನು, **ಮುನಿಪ್ರಿಯಂ** ಮುನಿಗಳಿಗೆ ಪ್ರಿಯವಾದ, **ವ್ರತಂ** ವನವಾಸ, ಉಪವಾಸ ಮೊದಲಾದ ವ್ರತವನ್ನು **ಅಧಾರಯತ್** ಧಾರಣ ಮಾಡಿದನು.

ವಸಿಷ್ಠರು ಶಾಪವನ್ನು ಕೊಟ್ಟಾಗ ಬುದ್ಧಿಪೂರ್ವಕ ಮಾಡಿದ್ದರಿಂದ ಕ್ಷಮಿಸಿರಿ ಎಂದು ಕೇಳದೇ (ಅವಕಾಶವಿದ್ದರೂ) ನಿಮಿಯಂತೆ ಪ್ರತಿಭಟಿಸದೇ, ಚಿತ್ರಕೇತುವಿನಂತೆ ಸಂತಾಪ ಪಡದೇ, ಕೈಗಳೇ ಅಪರಾಧ ಮಾಡಿದ್ದರಿಂದ ಕೈಯೊಡ್ಡಿ ಸಂತೋಷದಿಂದ ಶಾಪವನ್ನು ಸ್ವೀಕರಿಸಿದನು. ಮತ್ತು ಬ್ರಹ್ಮಚಾರಿಯಾಗಿ ವನವಾಸ ಉಪವಾಸಗಳನ್ನು ಮಾಡುವ ನಿಶ್ಚಯ ಮಾಡಿದನು. ತು, ಕೃತಾಂಜಲಿಃ, ಎನ್ನುವ ಶಬ್ದಗಳಿಂದ ಮೇಲಿನ ಅಭಿಪ್ರಾಯ ಸೂಚಿತವಾಗುವುದು. ।।೧೦।।

**ವಾಸುದೇವೇ ಭಗವತಿ ಸರ್ವಾತ್ಮನ್ಯಮಲೇಽಪರೇ ।**
**ಏಕಾಂತಿತ್ವಂ ಗತೋ ಭಕ್ತ್ಯಾ ಸರ್ವಭೂತಸುಹೃತ್ಸಮಃ ।।೧೧।।**

**ಸರ್ವಾತ್ಮನಿ** ಸರ್ವನಿಯಾಮಕನಾದ, **ಭಗವತಿ** ಷಡ್ಗುಣಸಂಪನ್ನನಾದ, **ಅಮಲೇ** ನಿರ್ದೋಷನಾದ, **ಪರೇ** ಸರ್ವೋತ್ತಮನಾದ, **ವಾಸುದೇವೇ** ಹರಿಯಲ್ಲಿ, **ಭಕ್ತ್ಯಾ** ಭಕ್ತಿಯಿಂದ, **ಏಕಾಂತಿತ್ವಂ ಏಕಃ** ಪರಮಾತ್ಮನೊಬ್ಬನೇ, **ಅಂತಃ** ತಾರತಮ್ಯದ ಕೊನೆಯವನು ಎಂಬ ಭಾವವುಳ್ಳವನು ಏಕಾಂತಿ, ಅವನ ಧರ್ಮ ಏಕಾಂತಿತ್ವಂ ಇದನ್ನು **ಗತಃ** ಹೊಂದಿದನು. **ಸರ್ವಭೂತಸುಹೃತ್** ಸರ್ವ ಪ್ರಾಣಿಗಳಲ್ಲಿ ನಿರ್ವ್ಯಾಜ ಪ್ರೇಮ ಮಾಡುವವನು, **ಸಮಃ** ದ್ವಂದ್ವಸಹಿಷ್ಣುವು ಇತ್ಯಾದಿ ವ್ರತ ಧಾರಣ ಮಾಡಿದನು.

ಸರ್ವೋತ್ತಮನೂ, ನಿರ್ದೋಷನೂ, ಸರ್ವನಿಯಾಮಕನೂ ತಾರತಮ್ಯದ ಕೊನೆಯ ಅವಧಿಯೂ ಆದ ಭಗವಂತನಲ್ಲಿ ಭಕ್ತಿ , ಸಜ್ಜನರಲ್ಲಿ ಪ್ರೇಮ, ಸುಖ

ದುಃಖಲಾಭಾಲಾಭ ಜಯಾಜಯಗಳಲ್ಲಿ ಸಮತೆ, ಮುಂತಾದ ಮುನಿಪ್ರಿಯ ವ್ರತಗಳನ್ನು ಧಾರಣ ಮಾಡಿದನು. ।।೧೧।।

**ವಿಮುಕ್ತಸಂಗಃ ಶಾಂತಾತ್ಮಾ ಸಂಯತಾಕ್ಷೋಽಪರಿಗ್ರಹಃ ।**
**ಯದೃಚ್ಛಯೋಪಪನ್ನೇನ ಕಲ್ಪಯನ್ ವೃತ್ತಿಮಾತ್ಮನಃ ।।೧೨।।**

**ವಿಮುಕ್ತಸಂಗಃ** ವಿಷಯಾಸಕ್ತಿ ಇಲ್ಲದವನಾದ **ಶಾಂತಾತ್ಮಾ** ಭಗವಂತನಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ, **ಸಂಯತಾಕ್ಷಃ** ಇಂದ್ರಿಯನಿಗ್ರಹ ಉಳ್ಳವನಾಗಿ, **ಅಪರಿಗ್ರಹಃ** ಅಧಿಕವಾದ ಏನನ್ನೂ ಅಪೇಕ್ಷಿಸದೇ **ಯದೃಚ್ಛಯಾ** ಅಪ್ರಾರ್ಥಿತವಾಗಿ ಹರಿ ಇಚ್ಛೆಯಿಂದಲೇ, **ಉಪಪನ್ನೇನ** ಬಂದುದರಿಂದ, **ಆತ್ಮನಃ** ತನ್ನ **ವೃತ್ತಿಂ** ಜೀವನೋಪಾಯವನ್ನು, **ಕಲ್ಪಯನ್** ಕಲ್ಪಿಸುತ್ತಾ , **ವಿಚಚಾರ** ಸಂಚರಿಸಿದನು ಎಂದು ಮುಂದಿನ ಶ್ಲೋಕದಿಂದ ಅನ್ವಯವು.

ವಿಷಯಸಂಗರಹಿತನಾಗಿ, ಇಂದ್ರಿಯನಿಗ್ರಹ ಉಳ್ಳವನಾಗಿ ಅಧಿಕವಾದದ್ದನ್ನು ಅಪೇಕ್ಷಿಸದೇ ಹರಿ ಇಚ್ಛೆಯಿಂದ ಬಂದದ್ದನ್ನು ಭೋಗಿಸುತ್ತಾ, ಜೀವನ ಸಾಗಿಸುತ್ತಾ ಸಂಚರಿಸಿದನು. ।।೧೨।।

**ಆತ್ಮನ್ಯಾತ್ಮಾನಮಾಧಾಯ ಜ್ಞಾನತೃಪ್ತಃ ಸಮಾಹಿತಃ ।**
**ವಿಚಚಾರ ಮಹೀಮೇತಾಂ ಜಡಾಂಧಬಧಿರಾಕೃತಿಃ ।।೧೩।।**

**ಆತ್ಮನಿ** ತನ್ನ ಮನಸ್ಸಿನಲ್ಲಿ, **ಆತ್ಮಾನಂ** ಪರಮಾತ್ಮನನ್ನು , **ಆಧಾಯ** ಇಟ್ಟುಕೊಂಡು (ಭಗವಂತನಲ್ಲಿ ಮನಸ್ಸಿಟ್ಟು) **ಜ್ಞಾನತೃಪ್ತಃ** ಹರಿಯ ಜ್ಞಾನದಿಂದಲೇ ಸಂತುಷ್ಟನಾಗಿ, **ಸಮಾಹಿತಃ** ಏಕಾಗ್ರಚಿತ್ತನಾಗಿ, **ಏತಾಂ ಮಹೀಂ** ಈ ಭೂಮಿಯನ್ನು , **ಜಡಾಂಧಬಧಿರಾಕೃತಿಃ** ದಡ್ಡ, ಕುರುಡ, ಕಿವುಡರಂತೆ, **ವಿಚಚಾರ** ಸಂಚರಿಸಿದನು.

**ತಾತ್ಪರ್ಯ-** ಭಗವಂತನನ್ನೇ ಧ್ಯಾನಮಾಡುತ್ತಾ ಜ್ಞಾನದಿಂದಲೇ ಸಂತೋಷಪಡುತ್ತಾ, ಸಮಾಧಾನ ಮನಸ್ಸಿನಿಂದ, ಅಜ್ಞಾನಿ, ಕಿವುಡ, ಕುರುಡರಂತೆ ತೋರುತ್ತಾ ಭೂಮಿಯಲ್ಲಿ ಸಂಚರಿಸಿದನು. ।।೧೩।।

**ಏವಂವ್ರತೋ ವನಂ ಗತ್ವಾ ದೃಷ್ಟ್ವಾ ದಾವಾಗ್ನಿಮುತ್ಥಿತಮ್ ।**
**ತೇನೋಪಯುಕ್ತಕರಣೋ ಬ್ರಹ್ಮ ಪ್ರಾಪ ಪರಂ ಮುನಿಃ ।।೧೪।।**

**ಏವಂವ್ರತಃ** ಈ ರೀತಿ ತಪಶ್ಚರ್ಯೆಯನ್ನು ಸ್ವೀಕರಿಸಿದವನಾಗಿ, **ವನಂ** ಅಡವಿಯನ್ನು ಕುರಿತು **ಗತ್ವಾ** ಹೋಗಿ, **ಉತ್ಥಿತಂ** ಉತ್ಪನ್ನವಾದ, **ದಾವಾಗ್ನಿಂ** ಕಾಡ್ಗಿಚ್ಚನ್ನು, **ದೃಷ್ಟ್ವಾ** ನೋಡಿ, **ತೇನ** ಕಾಡ್ಗಿಚ್ಚಿನಿಂದ, **ಉಪಯುಕ್ತಕರಣಃ**

ಸ್ವೀಕೃತವಾದ ದೇಹ ಉಳ್ಳವನಾಗಿ (ಸುಟ್ಟಲ್ಪಟ್ಟ ದೇಹವುಳ್ಳವನಾಗಿ) **ಮುನಿಃ** ಋಷಿವ್ರತಸ್ಥನಾದ ವೃಷಧ್ರನು, **ಪರಂ ಬ್ರಹ್ಮ** ಪರಮಾತ್ಮನನ್ನು, **ಪ್ರಾಪ** ಹೊಂದಿದನು.

**ತಾತ್ಪರ್ಯ-** ತಪಸ್ಸು ಮಾಡುತ್ತಾ ಸಂಚರಿಸುವಾಗ, ಅಡವಿಯಲ್ಲಿ ಕಾಡ್ಗಿಚ್ಚಿನಿಂದ ದೇಹವು ಭಸ್ಮವಾಗಿ ಪರಮಾತ್ಮನನ್ನು ಹೊಂದಿದನು. ।।೧೪।।

ಸಂಗ್ರಹವಾಗಿ ವೃಷಧ್ರನ ಕಾರ್ಯವನ್ನು ಮುಂದಿನ ಶ್ಲೋಕದಿಂದ ಹೇಳುವರು-

**ಕವಿಸ್ತದಾಯಂ ವಿಷಯೇಷು ನಿಸ್ಪೃಹೋ**
**ವಿಸೃಜ್ಯ ಸಂಗಂ ಸಹ ಬಂಧುಭಿರ್ವನಮ್ ।**
**ನಿವೇಶ್ಯ ಚಿತ್ತೇ ಪುರುಷಂ ಸ್ವರೋಚಿಷಂ**
**ವಿವೇಶ ಕೈಶೋರವಯಾಃ ಪರಂಗತಃ ।।೧೫।।**

**ತದಾ** ಯಾವಾಗ ಶಾಪವನ್ನು ಪಡೆದನೋ ಆಗ, **ಕವಿಃ** ಜ್ಞಾನಿಯಾದ, **ಅಯಂ** ವೃಷಧ್ರನು, **ವಿಷಯೇಷು** ಭೋಗ್ಯವಸ್ತುಗಳಲ್ಲಿ, **ನಿಸ್ಪೃಹಃ** ಆಶೆಯನ್ನು ತೊರೆದು **ಬಂಧುಭಿಃ ಸಹ** ತನ್ನ ಎಲ್ಲ ಬಂಧುಗಳೊಡನೆ, **ಸಂಗಂ** ಆಸಕ್ತಿಯನ್ನು, **ವಿಸೃಜ್ಯ** ಬಿಟ್ಟು, **ವನಂ** ಅಡವಿಯನ್ನು, **ವಿವೇಶ** ಪ್ರವೇಶ ಮಾಡಿದನು. **ಪರಂ** ಅನಂತರ, **ಸ್ವರೋಚಿಷಂ** ಸ್ವಪ್ರಕಾಶನಾದ, **ಪುರುಷಂ** ಪೂರ್ಣಷಡ್ಗುಣನಾದ ಹರಿಯನ್ನು, **ಚಿತ್ತೇ** ಮನಸ್ಸಿನಲ್ಲಿ, **ನಿವೇಶ್ಯ** ಇಟ್ಟುಕೊಂಡು, **ಕೈಶೋರವಯಾಃ** ತಾರುಣ್ಯದಲ್ಲೇ, **ಪರಂ** ಹರಿಯನ್ನು, **ಗತಃ** ಹಿಂದೆ ಹೇಳಿದಂತೆ ದಾವಾಗ್ನಿಯಲ್ಲಿ ದೇಹ ಭಸ್ಮವಾಗಿ ಹರಿಯ ಪದವನ್ನು ಹೊಂದಿದನು.

**ತಾತ್ಪರ್ಯ-** ಶಾಪವಾದೊಡನೆ ಜ್ಞಾನಿಯಾದ ವೃಷಧ್ರನು ಬಂಧುಸ್ನೇಹವನ್ನು ತ್ಯಜಿಸಿ, ವೈರಾಗ್ಯವನ್ನು ಹೊಂದಿ ವನಕ್ಕೆ ತೆರಳಿ ಭಗವಂತನ ಧ್ಯಾನ ಮಾಡುತ್ತಾ ಕಾಡ್ಗಿಚ್ಚಿನಿಂದ ಭಸ್ಮೀಭೂತಶರೀರನಾಗಿ ಭಗವಂತನ ಚರಣಾರವಿಂದವನ್ನು ಸೇರಿದನು. ।।೧೫।।

ಮೇಲೆ ಬರೆದ ಅರ್ಥವು ವಿಜಯಧ್ವಜೀಯ ಮತ್ತು ಸತ್ಯಧರ್ಮೀಯ ವ್ಯಾಖ್ಯಾನಾನುಸಾರವು. ಈ ಶ್ಲೋಕಕ್ಕೆ ಛಲಾರಿ ಆಚಾರ್ಯರು ಬೇರೆ ರೀತಿ ವ್ಯಾಖ್ಯಾನ ಮಾಡಿರುವರು. ಈ ಶ್ಲೋಕವು ವೃಷಧ್ರನ ಚರಿತ್ರೆಯನ್ನು ಹೇಳುವುದಿಲ್ಲ. ಆದರೆ ಕವಿ ಎಂಬ ಹೆಸರಿನವನು ಮನುವಿನ ಸ್ವತಂತ್ರ ಪುತ್ರನು ಹತ್ತನೆಯವನು ಎಂದಿಟ್ಟುಕೊಂಡು ಅವನ ಚರಿತ್ರೆಯನ್ನು ಈ ಶ್ಲೋಕದಲ್ಲಿ ಹೇಳಿದೆ ಎಂದು, ಈ ರೀತಿ ವ್ಯಾಖ್ಯಾನ ಮಾಡಲು ಕಾರಣವೇನೆಂದರೆ, ಇವರು ಮುಂದಿನ ''ನಭಪುತ್ರೋಽಥ ಬಲವಾನ್'' ಎಂಬ ಶ್ಲೋಕಕ್ಕೆ ಇದ್ದ ''ಮಾನವಾಚ್ಚ

ನೃಗಾತ್'' ಪಾಠಾಂತರವನ್ನು ಇಟ್ಟುಕೊಂಡಿರುವರು. ಆ ಪಾಠದಂತೆ ಕವಿಯು ಪ್ರತ್ಯೇಕ ಪುತ್ರನೆಂದು ಹೇಳದ ಹೊರತು ಮನುವಿಗೆ ಹತ್ತು ಪುತ್ರರೆಂಬುವ ಮಾತು ಹೊಂದುವದಿಲ್ಲ. ಈ ವ್ಯಾಖ್ಯಾನದ ಪ್ರಕಾರ ಇದಕ್ಕೆ ಹಿಂದಿನ ಅಧ್ಯಾಯ ೧ ಶ್ಲೋಕ ೧೨ ದಲ್ಲಿಯ ಉತ್ತರಾರ್ಧದಲ್ಲಿ **ನಭಂ ಕವಿಂ** ಎಂಬ ಸತ್ಯಧರ್ಮತೀರ್ಥರ ಪಾಠದ ಸ್ಥಾನದಲ್ಲಿ **ಕವಿಂ ವಿಭುಃ** ಎಂಬ ಪಾಠವನ್ನು ಇಟ್ಟುಕೊಂಡಿರುವರು. ಪಾಠಾಂತರವಿರುವುದರಿಂದ ಯಾವ ಪರಸ್ಪರ ವಿರೋಧವಿಲ್ಲ. ಈ ವಿಷಯವನ್ನು ಸತ್ಯಧರ್ಮರು ವಿವರಿಸಿರುವರು. ।।೧೮।।

**ಕರೂಶಾನ್ಮಾನವಾದಾಸನ್ ಕಾರೂಶಾಃ ಕ್ಷತ್ರಜಾತಯಃ ।**
**ಉತ್ತರಾಪಥಗೋಪ್ತಾರೋ ಬ್ರಹ್ಮಣ್ಯಾ ಧರ್ಮವತ್ಸಲಾಃ ।।೧೯।।**

**ಮಾನವಾತ್** ವೈವಸ್ವತ ಮನುವಿನ ಆರನೆಯ ಮಗನಾದ, **ಕರೂಶಾತ್** ಕರೂಶನೆಂಬುವನಿಂದ, **ಧರ್ಮವತ್ಸಲಾಃ** ಧರ್ಮದಲ್ಲಿ ಪ್ರೀತಿಯುಳ್ಳ, **ಬ್ರಹ್ಮಣ್ಯಾಃ** ಬ್ರಾಹ್ಮಣರಲ್ಲಿ ಗೌರವಭಾವವುಳ್ಳ **ಉತ್ತರಾಪಥಗೋಪ್ತಾರಃ** ಉತ್ತರಾಪಥ ಎಂಬ ದೇಶವನ್ನು ರಕ್ಷಿಸುವ, **ಕ್ಷತ್ರಜಾತಯಃ** ಕ್ಷತ್ರಿಯೋಚಿತ ವ್ಯಾಪಾರವನ್ನೇ ಮಾಡುವ (ವೃಷಧ್ರನಂತೆ ಗೋರಕ್ಷಣಾದಿ ವೃತ್ತಿಯನ್ನು ಆಶ್ರಯಿಸದ) **ಕಾರೂಶಾಃ** ಕಾರೂಶರೆಂದೇ ಪ್ರಸಿದ್ಧರಾದ ಮಕ್ಕಳು, **ಆಸನ್** ಹುಟ್ಟಿದರು(ಆದರು).

ಕರೂಶನಿಗೆ ಕಾರೂಶರೆಂದು ಪ್ರಸಿದ್ಧರಾದ ಮಕ್ಕಳು ಜನಿಸಿದರು. ಅವರು ಕ್ಷತ್ರಿಯೋಚಿತ ಜೀವನವನ್ನು ಸಾಗಿಸಿದರು. ಧರ್ಮರಕ್ಷಕರೂ ಬ್ರಾಹ್ಮಣಾಭಿಮಾನಿಗಳೂ, ಬ್ರಹ್ಮಜ್ಞಾನಿಗಳೂ, ಆಗಿ ಉತ್ತರಾಪಥ ದೇಶವನ್ನಾಳಿದರು. ।।೧೯।।

**ಧೃಷ್ಟಾದ್ಧಾರ್ಷ್ಟಮಭೂತ್ ಕ್ಷತ್ರಂ ಬ್ರಹ್ಮಭೂತಂ ಗತಂ ಕ್ಷಿತೌ ।**
**ನಭಪುತ್ರೋऽಭಿಬಲವಾನ್ ಸ್ವಾತಿಮೂಲೋऽಭವದ್ವಸುಃ ।।೨೦।।**

**ಧೃಷ್ಟಾತ್** ಐದನೆಯವನಾದ ಧೃಷ್ಟನೆಂಬುವನಿಂದ, **ಧಾರ್ಷ್ಟಂ** ಧಾರ್ಷ್ಟನೆಂಬ ಮಗನು, **ಅಭೂತ್** ಹುಟ್ಟಿದನು. **ಕ್ಷತ್ರಂ** ಅವನು **ಯದ್ಯಪಿ** ಕ್ಷತ್ರಿಯ ಜಾತಿಯವನೇ ಆದರೂ, **ಬ್ರಹ್ಮಭೂತಂ** ಶ್ರೋತ್ರಿಯನಾಗಿ (ಬ್ರಾಹ್ಮಣ ವೃತ್ತಿಯನ್ನಾಶ್ರಯಿಸಿ) **ಕ್ಷಿತೌ** ಭೂಮಿಯಲ್ಲಿರುವ ತೀರ್ಥಕ್ಷೇತ್ರಗಳನ್ನು, **ಗತಂ** ಸಂಚರಿಸಿದನು. (ಶ್ರೋತ್ರಿಯತ್ವಂ ಗತಂ ಎಂದೂ ಅನ್ವಯ ಮಾಡಿರುವರು). **ನಭಪುತ್ರಃ** ಹತ್ತನೆಯವನಾದ ನಭನ ಮಗನು **ಅಭಿಬಲವಾನ್** ಬಲಿಷ್ಠನಾದ, **ಸ್ವಾತಿಮೂಲಃ** ಸ್ವಾತಿಮೂಲನೆಂಬುವನು, **ಅಭವತ್** ಆದನು. **(ತಸ್ಯ) ವಸುಃ** ವಸು ಎಂಬುವನು ಸ್ವಾತಿಮೂಲನ ಮಗನು ಆದನು.

**ವಸೋಃ ಪ್ರತೀಕಸ್ತತ್ಪುತ್ರ ಓಘವಾನ್ನೋಘವತ್ಸ್ವಸಾ ।**
**ಕನ್ಯಾ ಚೋಘವತೀ ನಾಮ ಸುದರ್ಶನ ಉವಾಹ ತಾಮ್ ॥೧೮॥**

**ವಸೋಃ** ವಸುವಿಗೆ **ಪ್ರತೀಕಃ** ಪ್ರತೀಕನೆಂಬುವವನು ಮಗನಾದನು. **ತತ್ಪುತ್ರಃ** ಪ್ರತೀಕನ ಮಗನು, **ಓಘವಾನ್** ಓಘವಾನ್ ಎಂಬುವನು, **ಓಘವತೀ ನಾಮ ಕನ್ಯಾ ಚ** ಓಘವತೀ ಎಂಬ ಹೆಸರುಳ್ಳ ಹೆಣ್ಣುಮಗುವೂ ಸಹ, **ಓಘವತ್ಸ್ವಸಾ** ಓಘವಂತನ ಸಹೋದರಿಯಾಗಿ ಜನಿಸಿದಳು. **ತಾಂ** ಇವಳನ್ನು, **ಸುದರ್ಶನಃ** ಸುದರ್ಶನನೆಂಬ ರಾಜನು, **ಉವಾಹ** ಮದುವೆಯಾದನು. ॥೧೮॥

**ಚಿತ್ರಸೇನೋ ನರಿಷ್ಯಂತಾದ್ದಕ್ಷಸ್ತಸ್ಯ ಸುತೋಽಭವತ್ ।**
**ತಸ್ಯ ಮೀಢ್ವಾಂಸ್ತತಃ ಕೂರ್ಚ ಇಂದ್ರಸೇನಸ್ತು ತತ್ಸುತಃ ॥೧೯॥**

**ನರಿಷ್ಯಂತಾತ್** ಏಳನೆಯವನಾದ ನರಿಷ್ಯಂತನಿಂದ **ಚಿತ್ರಸೇನಃ** ಚಿತ್ರಸೇನನು, **ತಸ್ಯ** ಚಿತ್ರಸೇನನಿಗೆ **ದಕ್ಷಃ** ದಕ್ಷನು **ಸುತಃ** ಮಗನು. **ತಸ್ಯ** ದಕ್ಷನಿಗೆ **ಮೀಢ್ವಾನ್** ಮೀಢ್ವಾನ್ ಎಂಬುವನು, **ತತಃ** ಮೀಢ್ವಾನನಿಂದ **ಕೂರ್ಚಃ** ಕೂರ್ಚನು **ತತ್ಸುತಃ** ಕೂರ್ಚನ ಮಗನು, **ಇಂದ್ರಸೇನಃ** ಇಂದ್ರಸೇನನು **ಅಭವತ್** ಆದನು. ॥೧೯॥

**ವೀತಿಹೋತ್ರಸ್ತ್ವಿಂದ್ರಸೇನಾತ್ತಸ್ಯ ಸತ್ಯಶ್ರವಾ ಅಭೂತ್ ।**
**ಉರುಶ್ರವಾಃ ಸುತಸ್ತಸ್ಯ ದೇವದತ್ತಸ್ತತೋಽಭವತ್ ॥೨೦॥**

**ಇಂದ್ರಸೇನಾತ್** ಇಂದ್ರಸೇನನಿಂದ **ವೀತಿಹೋತ್ರಃ** ವೀತಿಹೋತ್ರನು **ತಸ್ಯ** ವೀತಿಹೋತ್ರನಿಗೆ, **ಸತ್ಯಶ್ರವಾಃ** ಸತ್ಯಶ್ರವನು **ತಸ್ಯ** ಸತ್ಯಶ್ರವನಿಗೆ **ಉರುಶ್ರವಾಃ** ಉರುಶ್ರವನೆಂಬುವನು, **ಸುತಃ** ಮಗನು **ತತಃ** ಉರುಶ್ರವನಿಂದ **ದೇವದತ್ತಃ** ದೇವದತ್ತನು, **ಅಭವತ್** ಹುಟ್ಟಿದನು. ॥೨೦॥

**ದೇವದತ್ತಸ್ಯ ಭಗವಾನಗ್ನಿಃ ಸ್ವಯಮಭೂತ್ಸುತಃ ।**
**ಕಾನೀನ ಇತಿ ವಿಖ್ಯಾತೋ ಜಾತೂಕರ್ಣ್ಯೋ ಮಹಾನ್ ಋಷಿಃ ॥೨೧॥**

**ದೇವದತ್ತಸ್ಯ** ದೇವದತ್ತನಿಗೆ, **ಭಗವಾನ್** ಪೂಜ್ಯನಾದ, **ಮಹಾನ್ ಋಷಿಃ** ಶ್ರೇಷ್ಠ ಜ್ಞಾನಿಯಾದ **ಅಗ್ನಿಃ** ಅಗ್ನಿದೇವರು, **ಸ್ವಯಂ** ತಾವೇ **ಸುತಃ** ಮಗನು, **ಅಭೂತ್** ಆದರು. **ಜಾತೂಕರ್ಣ್ಯಃ** ಜಾತೂಕರ್ಣ್ಯರೆಂದು **ಕಾನೀನಃ** ಕಾನೀನ- ರೆಂದು, **(ಕನ್ಯಾಯಾಂ ಜಾತಃ ಕಾನೀನಃ)** **ವಿಖ್ಯಾತಃ** ಪ್ರಸಿದ್ಧರಾದರು. ॥೨೧॥

**ತತೋ ಬ್ರಹ್ಮಕುಲಂ ಜಾತಮಾಗ್ನಿವೇಶ್ಯಾಯನಂ ನೃಪ ।**
**ನರಿಷ್ಯಂತಾನ್ವಯಃ ಪ್ರೋಕ್ತೋ ದಿಷ್ಟವಂಶಮತಃ ಶೃಣು ॥೨೨॥**

**ನೃಪ** ರಾಜನೇ! **ತತಃ** ಜಾತೂಕರ್ಣ್ಯನಿಂದ, **ಬ್ರಹ್ಮಕುಲಂ** ಬ್ರಾಹ್ಮಣಕುಲವು **ಅಗ್ನಿವೇಶ್ಯಾಯನಂ** ಅಗ್ನಿವೇಶ್ಯಾಯನನೆಂಬ ಹೆಸರಿನಿಂದ, **ಜಾತಂ** ಹುಟ್ಟಿತು. **ನರಿಷ್ಯಂತಾನ್ವಯಃ** ನರಿಷ್ಯಂತನ ವಂಶವು **ಪ್ರೋಕ್ತಃ** ಹೇಳಲ್ಪಟ್ಟಿತು. **ಅತಃ** ಮುಂದೆ **ದಿಷ್ಟವಂಶಂ** ನಾಲ್ಕನೆಯ ಮನುಪುತ್ರನಾದ ದಿಷ್ಟನ ವಂಶವನ್ನು **ಶೃಣು** ಕೇಳು. ।।೨೨

**ನಾಭಾಗೋ ದಿಷ್ಟಪುತ್ರೋಽನ್ಯಃ ಕರ್ಮಣಾ ವೈಶ್ಯತಾಂ ಗತಃ ।**
**ಭಲಂದನಃ ಸುತಸ್ತಸ್ಯ ವತ್ಸಪ್ರೀತಿರ್ಭಲಂದನಾತ್ ।।೨೩।।**

**ದಿಷ್ಟಪುತ್ರಃ** ದಿಷ್ಟನ ಮಗನು, **ಅನ್ಯಃ ನಾಭಾಗಃ** ಮನುವಿನ ಮಗನಾದ ಅಂಬರೀಷನ ತಂದೆಯಾದ ನಾಭಾಗನಿಂದ ಭಿನ್ನನಾದ ನಾಭಾಗನೆಂಬುವನು (**ಅನ್ಯಃ** ಬೇರೆ ಜಾತಿಯವನು ಎಂದು ಅರ್ಥ ಮಾಡಿರುವರು). **ಕರ್ಮಣಾ** ವ್ಯಾಪಾರ ಮುಂತಾದ ಕ್ರಿಯೆಯಿಂದ, **ವೈಶ್ಯತಾಂ** ವೈಶ್ಯಜಾತಿಯನ್ನು **ಗತಃ** ಹೊಂದಿದನು. **ತಸ್ಯ** ನಾಭಾಗನಿಗೆ **ಭಲಂದನಃ** ಭಲಂದನನೆಂಬುವನು **ಸುತಃ** ಮಗನು **ಭಲಂದನಾತ್** ಭಲಂದನನಿಂದ **ವತ್ಸಪ್ರೀತಿಃ** ವತ್ಸಪ್ರೀತಿ ಎಂಬುವನು ಹುಟ್ಟಿದನು. ।।೨೩।।

**ವತ್ಸಪ್ರೀತೇಃ ಸುತಃ ಪ್ರಾಂಶುಸ್ತತ್ಸುತಃ ಪ್ರಮಿತಿರ್ವಿಭುಃ ।**
**ಖನಿತ್ರಃ ಪ್ರಮಿತೇಸ್ತಸ್ಮಾಚ್ಚಾಕ್ಷುಷೋಽಥ ವಿವಿಂಶತಿಃ ।।೨೪।।**

**ವತ್ಸಪ್ರೀತೇಃ** ವತ್ಸಪ್ರೀತಿಗೆ, **ಪ್ರಾಂಶುಃ** ಪ್ರಾಂಶುವು, **ಸುತಃ** ಮಗನು. **ತತ್ಸುತಃ** ಪ್ರಾಂಶುವಿನ ಮಗನು, **ವಿಭುಃ** ಸಮರ್ಥನಾದ, **ಪ್ರಮಿತಿಃ** ಪ್ರಮಿತಿಯು, **ಪ್ರಮಿತೇಃ** ಪ್ರಮಿತಿಗೆ, **ಖನಿತ್ರಃ** ಖನಿತ್ರನು, **ತಸ್ಮಾತ್** ಖನಿತ್ರನಿಂದ, **ಚಾಕ್ಷುಷಃ** ಚಾಕ್ಷುಷನು **ಅಥ** ಚಾಕ್ಷುಷನಿಂದ, **ವಿವಿಂಶತಿಃ** ವಿವಿಶಂತಿ ಎಂಬ ಮಗನು, ಹೀಗೆ ಇವರೆಲ್ಲ ಹುಟ್ಟಿದರು.

**ವಿವಿಂಶತಿಸುತೋ ರಂಭಃ ಖನಿನೇತ್ರೋಽಸ್ಯ ಧಾರ್ಮಿಕಃ ।**
**ಕರಂಧಮೋ ಮಹಾರಾಜ ತಸ್ಯಾಸೀದಾತ್ಮಜೋ ನೃಪಃ ।।೨೫।।**

**ಮಹಾರಾಜ** ಎಲೋ ರಾಜನೇ, **ವಿವಿಂಶತಿಸುತಃ** ವಿವಿಂಶತಿಯ ಮಗನು, **ರಂಭಃ** ರಂಭ ಎಂಬುವನು **ಅಸ್ಯ** ಈ ರಂಭನಿಗೆ **ಧಾರ್ಮಿಕಃ** ಧರ್ಮಿಷ್ಠನಾದ **ಖನಿನೇತ್ರಃ** ಖನಿನೇತ್ರನು **ತಸ್ಯ** ಆ ಖನಿನೇತ್ರನಿಗೆ **ನೃಪಃ** ರಾಜನಾದ **ಕರಂಧಮಃ** ಕರಂಧಮನು **ಆತ್ಮಜಃ** ಮಗನು **ಆಸೀತ್** ಆದನು. ।।೨೫।।

**ತಸ್ಯಾವಿಕ್ಷಿತ್ಸುತೋ ಯಸ್ಯ ಮರುತ್ತಶ್ಚಕ್ರವರ್ತ್ಯಭೂತ್ ।**
**ಸಂವರ್ತೋಽಯಾಜಯದ್ಯಂ ವೈ ಮಹಾಯೋಗ್ಯಂಗಿರಃ ಸುತಃ ।।೨೬।।**

**ತಸ್ಯ** ಕರಂಧಮನಿಗೆ **ಅವಿಕ್ಷಿತ್** ಅವಿಕ್ಷಿತನು **ಸುತಃ** ಮಗನು **ಯಸ್ಯ** ಯಾವ ಅವಿಕ್ಷಿತನಿಗೆ **ಚಕ್ರವರ್ತೀ** ಸಮಸ್ತ ಭೂಮಂಡಲಕ್ಕೆ ಒಬ್ಬನೇ ಒಡೆಯನಾದ **ಮರುತ್ತಃ**

ಮರುತನೆಂಬುವನು **ಸುತಃ** ಮಗನು ಆದನು **ಮಹಾಯೋಗೀ** ದೊಡ್ಡ ತಪಸ್ವಿಯಾದ **ಅಂಗೀರಃಸುತಃ** ಅಂಗೀರ ಋಷಿ ಪುತ್ರನಾದ **ಸಂವರ್ತಃ** ಸಂವರ್ತನೆಂಬುವನು **ಯಂ** ಯಾವ ಮರುತ್ತನನ್ನು **ಅಯಾಜಯತ್** ಯಜ್ಞ ಮಾಡಿಸಿದನೋ ಈ ಮರುತ್ತನು **ಅವಿಕ್ಷಿತನ** ಮಗನು. ।।೨೬।।

**ಮರುತ್ತಸ್ಯ ಯಥಾ ಯಜ್ಞೋ ನ ತಥಾಽನ್ಯೋಽಸ್ತಿ ಕಶ್ಚನ ।**
**ಸರ್ವಂ ಹಿರಣ್ಮಯಂ ತ್ವಾಸೀದ್ಯತ್ಕಿಂಚಾಸ್ಯತಿಶೋಭನಮ್ ।।೨೭।।**

**ಮರುತ್ತಸ್ಯ** ಮರುತ್ತನ, **ಯಜ್ಞಃ** ಯಜ್ಞವು **ಯಥಾ** ಹೇಗೆ ಇತ್ತೋ, **ತಥಾ** ಹಾಗೆ **ಕಶ್ಚನ ಅನ್ಯಃ** ಬೇರೆ ಯಾವ ಯಜ್ಞವೂ, **ನ ಅಸ್ತಿ** ಇರುವದಿಲ್ಲ. ಏಕೆಂದರೆ, **ಯತ್ಕಿಂಚಿತ್ ಅಸ್ತಿ** ಏನೇನು ಯಜ್ಞಸಾಧನಗಳಿದ್ದವೋ ಅವೆಲ್ಲವೂ **ಹಿರಣ್ಮಯಂ ಆಸೀತ್** ಬಂಗಾರದ್ದೇ ಇದ್ದವು. ಆದ್ದರಿಂದ **ಅತಿಶೋಭನಂ** ಪರಮ ಮಂಗಳಕರವಾದದ್ದು.

ಅಥವಾ **ಶೋಭನಂ** ಶುಭವಾದ ಯಜ್ಞಕರ್ಮವನ್ನು, **ಅತಿ** ಮುಗಿಸಿದ ಮೇಲೆ, **ಯತ್ಕಿಂಚಿತ್ ಹಿರಣ್ಮಯಂ** ಏನು ಸುವರ್ಣಾದಿಗಳು ಉಳಿದಿದ್ದವೋ, **ತತ್** ಅದೆಲ್ಲವೂ, **ಅಸ್ತಿ** ಬ್ರಾಹ್ಮಣರಿಂದ ಭೂಮಿಯಲ್ಲಿ ನಿಕ್ಷಿಪ್ತವಾಗಿ ಇದ್ದಿತು. ಈ ವಿಷಯದಲ್ಲಿ ಮಹಾಭಾರತದ ಆಶ್ವಮೇಧಿಕ ಪರ್ವದಲ್ಲಿ ಉಲ್ಲೇಖವಿದೆ. ಇದೇ ದ್ರವ್ಯವನ್ನೇ ತೆಗೆದುಕೊಂಡು ಧರ್ಮರಾಜನು ಯಜ್ಞವನ್ನು ಮಾಡಿದನು. ಇಲ್ಲಿ ವಿಶೇಷವೇನೆಂದರೆ ಈ ಯಜ್ಞವನ್ನು ಅಂಗೀರಸ ಋಷಿಗಳ ಮಕ್ಕಳಾದ ಬೃಹಸ್ಪತಿ ಋಷಿಗಳ ಸೋದರರಾದ ಸಂವರ್ತರೆಂಬ ಋಷಿಗಳು ಮಾಡಿಸಿರುವರು. ಇವರು ಮಹಾಮಹಿಮಾಶಾಲಿಗಳು, ಇವರು ಮಾಡಿದ ಮರುತ್ತನ ಮಹಾಭಿಷೇಕವು ವೇದದಲ್ಲಿ **ತದಪ್ಯೇಷ ಶ್ಲೋಕೋ ಭವತಿ** ಎಂಬುದಾಗಿ ಶ್ಲೋಕರೂಪದಿಂದ ಸಂಗ್ರಹವಾಗಿ ಪ್ರಶಂಸಿಲ್ಪಟ್ಟಿದೆ. ಈ ಶ್ಲೋಕವು ಹೀಗಿದೆ.

ಮರುತಃ ಪರಿವೇಷ್ಟಾರೋ ಮರುತ್ತಸ್ಯಾವಸನ್ ಗೃಹೇ ।
ಆವಿಕ್ಷಿತಸ್ಯ ಕಾಮಪ್ರೇರ್ವಿಶ್ವೇದೇವಾಃ ಸಭಾಸದಃ ಇತಿ ।।

ಮರುತ್ತಸ್ಯ ಮರುತ್ತ ರಾಜನ ಗೃಹೇ ಅರಮನೆಯಲ್ಲಿ ಮರುತಃ ಮರುತ್ಸಂಜ್ಞರಾದ ದೇವತೆಗಳು, ಪರಿವೇಷ್ಟಾರಃ ಭೋಜನಕಾಲದಲ್ಲಿ ಅನ್ನಾದಿಗಳನ್ನು ಬಡಿಸುವವರಾಗಿ, **ಅವಸನ್** ಇದ್ದರು. ಆವಿಕ್ಷಿತಸ್ಯ ಆವಿಕ್ಷಿತನ ಪುತ್ರನಾದ, **ಕಾಮಪ್ರೇಃ** ಸಜ್ಜನರ ಮನೋರಥಪೂರಕನಾದ ರಾಜನಿಗೆ, **ವಿಶ್ವೇದೇವಾಃ ವಿಶ್ವೇ** ಸಮಸ್ತರಾದ **ದೇವಾಃ** ದೇವತೆಗಳು, **ಸಭಾಸದಃ** ಸಭೆಯಲ್ಲಿ ಪ್ರತ್ಯಕ್ಷ ಕುಳಿತುಕೊಂಡು ಕಾರ್ಯಕಲಾಪಗಳನ್ನು ವಿಚಾರಿಸುತ್ತಿದ್ದರು.

ಈ ವಿಷಯ ಅಶ್ವಮೇಧಪರ್ವದಲ್ಲಿ ವರ್ಣಿಸಿದೆ. ಸಂವರ್ತ ಋಷಿಗಳು ಇಂದ್ರನಿಗೆ ಪ್ರಾರ್ಥಿಸಿದರು. ನೀನು ನನ್ನ ಮೇಲೆ ಪ್ರೀತನಾಗಿರುತ್ತಿ, ಕಾರಣ ಈ ಯಜ್ಞದಲ್ಲಿ ನೀನೇ ಎಲ್ಲ ವಿಧಾನಗಳನ್ನು ಮಾಡಿಸು. ಎಲ್ಲ ಜನರು ಈ ಯಜ್ಞದ ಮಾಹಾತ್ಮ್ಯವನ್ನು ಅರಿಯಲಿ. ಈ ರೀತಿ ಸಂವರ್ತರಿಂದ ಪ್ರಾರ್ಥಿತನಾದ ಇಂದ್ರನು ತಾನಾಗಿಯೇ ದೇವತೆಗಳಿಗೆ ಅಪ್ಪಣೆ ಮಾಡಿದನು. ನೀವೆಲ್ಲರೂ ಯಜ್ಞಮಂಟಪಗಳನ್ನು ಮತ್ತು ವೈಭವದ ನಿವಾಸಗಳನ್ನು ಗಂಧರ್ವರು ಅಪ್ಸರೆಯರು ಇವರಿಗೆ ಗಾನ-ನರ್ತನಕ್ಕೆ ಉಚಿತವಾದ ರಂಗಗಳನ್ನು ಯಜ್ಞಮಂಟಪದಲ್ಲಿ ನಿರ್ಮಿಸಿರಿ. ದೇವತೆಗಳು ಅದೇ ರೀತಿ ಭಾಗಗೊಂಡಿದ್ದರಿಂದ ಯಜ್ಞವು ಪರಮ ಸಮೃದ್ಧಿಯನ್ನು ಹೊಂದಿತು. ಇಂದ್ರನು ಸ್ವತಃ ಬ್ರಾಹ್ಮಣರಿಂದ ಪೂಜಿತನಾಗಿ ಸಭೆಯನ್ನಲಂಕರಿಸಿದನು. ಹೀಗೆ ಸಂವರ್ತ ಋಷಿಗಳ ತಪೋಮಹಿಮೆಯ ಫಲವಾಗಿ ಈ ಯಜ್ಞವು ಅತ್ಯುತ್ತಮವಾದ ಸಮೃದ್ಧಿಯಿಂದ ನೆರವೇರಿತು. ಅಸದೃಶವಾದದ್ದು, ಅಭೂತಪೂರ್ವವು ಎಂದು ಹೇಳಿದೆ. ॥೨೭॥

**ಅಮಾದ್ಯದಿಂದ್ರಃ ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ।**
**ಮರುತಃ ಪರಿವೇಷ್ಟಾರೋ ವಿಶ್ವೇದೇವಾಃ ಸಭಾಸದಃ ॥೨೮॥**

**ಇಂದ್ರಃ** ಇಂದ್ರನು **ಸೋಮೇನ** ಪ್ರತ್ಯಕ್ಷವಾಗಿ ಬಂದು ಸೋಮಪಾನ ಮಾಡಿ, **ಅಮಾದ್ಯತ್** ಸಂತೋಷಪಟ್ಟನು. **ದ್ವಿಜಾತಯಃ** ಬ್ರಾಹ್ಮಣರು, **ದಕ್ಷಿಣಾಭಿಃ** ದಕ್ಷಿಣೆಗಳಿಂದ **ಅಮಾದ್ಯನ್** ಹರ್ಷಪಟ್ಟರು. **ಮರುತಃ** ವಾಯುಗಳು, **ಪರಿವೇಷ್ಟಾರಃ** ಬಡಿಸತಕ್ಕವರು, **ವಿಶ್ವೇದೇವಾಃ** ಎಲ್ಲ ದೇವತೆಗಳು **ಸಭಾಸದಃ** ಸಭೆಯಲ್ಲಿ ಪ್ರತ್ಯಕ್ಷವಾಗಿ ಕುಳಿತು ಎಲ್ಲವನ್ನು ವಿಚಾರಿಸತಕ್ಕವರು ಆಗಿದ್ದರು.

ಸಂವರ್ತನ ಪ್ರಾರ್ಥನೆಯ ಮೇರೆಗೆ ಇಂದ್ರನು ಪ್ರತ್ಯಕ್ಷನಾಗಿ ಸೋಮಪಾನ ಮಾಡಿದನು. ಅಷ್ಟೇ ಅಲ್ಲದೆ ಎಲ್ಲ ದೇವತೆಗಳನ್ನು ಬರಮಾಡಿ ಕೊಂಡನು. ಅವರೆಲ್ಲರೂ ಶ್ರೇಷ್ಠವಾದ ಸೋಮರಸವನ್ನು ಪಾನಮಾಡಿ ಸಂತುಷ್ಟರಾಗಿ, ರಾಜನ ಅನುಜ್ಞೆ ಪಡೆದು ಮರಳಿದರು. ರಾಜನು ಪುನಃ ಪುನಃ ಪ್ರದಾನ ಮಾಡಿದ ಸುವರ್ಣ ಮೊದಲಾದ ದಾನಗಳನ್ನು ಸ್ವೀಕರಿಸಿ ಬ್ರಾಹ್ಮಣರು ತೃಪ್ತರಾದರು. ಮರುದ್ಗಣಗಳು ಭೋಜನಕಾಲದಲ್ಲಿ ಬಡಿಸಿದರು. ಮತ್ತು ಸಮಸ್ತ ದೇವತೆಗಳು ಸಭೆಯನ್ನು ಅಲಂಕರಿಸಿದರು. ॥೨೮॥

**ಮರುತ್ತಸ್ಯ ದಮಃ ಪುತ್ರಸ್ತಸ್ಯಾಸೀದ್ರಾಜವರ್ಧನಃ ।**
**ಸುಧೃತಿಸ್ತತ್ಸುತೋ ಜಜ್ಞೇ ಸೌಧೃತೇಯೋ ನರಃ ಸುತಃ ॥೨೯॥**

**ಮರುತ್ತಸ್ಯ** ಮರುತ್ತನಿಗೆ, **ದಮಃ** ದಮನು, **ಪುತ್ರಃ** ಮಗನು **ತಸ್ಯ** ದಮನಿಗೆ **ರಾಜವರ್ಧನಃ** ರಾಜವರ್ಧನನು **ಆಸೀತ್** ಹುಟ್ಟಿದನು. **ಸುಧೃತಿಃ** ಸುಧೃತಿಯು **ತತ್ಸುತಃ ಸನ್** ರಾಜವರ್ಧನನ ಮಗನಾಗಿ **ಜಜ್ಞೇ** ಹುಟ್ಟಿದನು **ಸೌಧೃತೇಯಃ** ಸುಧೃತಿಯ ಮಗನಾದ ಸೌಧೃತಿಗೆ **ನರಃ** ನರನು **ಸುತಃ** ಮಗನು (ಹುಟ್ಟಿದನು).

**ತತ್ಸುತಃ ಕೇವಲಸ್ತಸ್ಮಾದ್ಬಂಧುಮಾನ್ವೇಗವಾಂಸ್ತತಃ ।**
**ಬಂಧುಸ್ತಸ್ಯಾಭವದ್ಯಸ್ಯ ತೃಣಬಿಂದುರ್ಮಹೀಪತಿಃ ॥೩೦॥**

**ತತ್ಸುತಃ** ಆ ನರನ ಮಗನು **ಕೇವಲಃ** ಕೇವಲನು **ತಸ್ಮಾತ್** ಕೇವಲನಿಂದ **ಬಂಧುಮಾನ್** ಬಂಧುಮಾನ್ ಎಂಬುವವನು, **ತತಃ** ಆ ಬಂಧುಮಾನನಿಂದ, **ವೇಗವಾನ್** ವೇಗವಾನ್ ಎಂಬುವವನು **ತಸ್ಯ** ಆ ವೇಗವಾನನಿಗೆ, **ಬಂಧುಃ** ಬಂಧುವು, **ಯಸ್ಯ** ಯಾವ ಬಂಧುವಿಗೆ, **ಮಹೀಪತಿಃ** ರಾಜನಾದ **ತೃಣಬಿಂದುಃ** ತೃಣಬಿಂದುವು **ಅಭವತ್** ಹುಟ್ಟಿದನು. ಅಭವತ್ ಎಂದು ಪ್ರತ್ಯೇಕ ಅನ್ವಯ ಮಾಡಿಕೊಳ್ಳಬೇಕು.

**ತಂ ಭೇಜೇಽಲಂಬುಸಾದೇವೀ ಭಜನೀಯಗುಣಾಲಯಮ್ ।**
**ವರಾಪ್ಸರಾ ಯತಃ ಪುತ್ರಾಃ ಕನ್ಯಾ ಚೇಲಿಬಿಲಾಽಭವತ್ ॥೩೧॥**

**ವರಾಪ್ಸರಾ** ಶ್ರೇಷ್ಠ ಅಪ್ಸರೆಯಾದ **ಅಲಂಬುಸಾದೇವೀ** ಅಲಂಬುಸಾ ಎಂಬುವವಳು, **ಭಜನೀಯಗುಣಾಲಯಂ** ಆಶ್ರಯಿಸಲು ಬೇಕಾದ ಗುಣಗಳಿಗೆ ಆಶ್ರಯನಾದ, **ತಂ** ತೃಣಬಿಂದುವನ್ನು, **ಭೇಜೇ** ವಿವಾಹವಾದಳು. (ಹೊಂದಿದಳು) **ಯತಃ** ಯಾವ ತೃಣಬಿಂದುವಿನಿಂದ, **ಯಸ್ಯಾಂ** ಅಲಂಬುಸಾಳಲ್ಲಿ, **ಪುತ್ರಾಃ** ಮೂರು ಮಂದಿ ಗಂಡು ಮಕ್ಕಳು, **ಅಭವನ್** ಹುಟ್ಟಿದರು. **ಇಲಿಬಿಲಾ ಇತಿ** ಇಲಿಬಿಲಾ ಎಂಬ, **ಕನ್ಯಾ ಚ** ಕನ್ಯೆಯೂ ಸಹ, **ಅಭವತ್** ಹುಟ್ಟಿದಳು. ।।೩೧।।

**ಯಸ್ಯಾಮುತ್ಪಾದಯಾಮಾಸ ವಿಶ್ರವಾಶ್ಚ ಧನಾಧಿಪಮ್ ।**
**ಪ್ರದಾಯ ವಿದ್ಯಾಂ ಪರಮಾಮೃಷಿರ್ಯೋಗೇಶ್ವರಃ ಪಿತುಃ ॥೩೨॥**

**ಯೋಗೇಶ್ವರಃ** ಯೋಗಿಶ್ರೇಷ್ಠನಾದ, **ವಿಶ್ರವಾಃ ಋಷಿಃ** ಪುಲಸ್ತ್ಯನ ಮಗನಾದ ವಿಶ್ರವಸನೆಂಬ ಋಷಿಯು, **ಪಿತುಃ** ಇಲಿಬಿಲೆಯ ತಂದೆಯಾದ ತೃಣಬಿಂದುವಿಗೆ, **ಪರಮಾಂ ವಿದ್ಯಾಂ** ಶ್ರೇಷ್ಠವಾದ ವಿದ್ಯೆಯನ್ನು **ಪ್ರದಾಯ** ಕೊಟ್ಟು **ತಾಂ** ಆ ಇಲಿಬಿಲೆಯನ್ನು (**ಉದ್ವಾಹ್ಯ** ಮದುವೆಯಾಗಿ) **ಯಸ್ಯಾಂ** ಯಾವ ಇಲಿಬಿಲೆಯಲ್ಲಿ **ಧನಾಧಿಪಂ** ಕುಬೇರನನ್ನು, **ಉತ್ಪಾದಯಾಮಾಸ** ಹುಟ್ಟಿಸಿದನೋ ಅವನಿಗೆ ವೈಶ್ರವಣನೆಂದು ಹೆಸರು. ।।೩೨।।

ಗಂಡು ಮಕ್ಕಳನ್ನು ಹೇಳುವರು -

**ವಿಶಾಲಃ ಶೂನ್ಯಬಂಧುಶ್ಚ ಧೂಮಕೇತುಶ್ಚ ತತ್ಸುತಾಃ ।**
**ವಿಶಾಲೋ ವಂಶಕೃದ್ರಾಜಾ ವೈಶಾಲೀಂ ನಿರ್ಮಮೇ ಪುರೀಮ್ ॥೩೩॥**

**ವಿಶಾಲಃ ಶೂನ್ಯಬಂಧುಃ ಧೂಮಕೇತುಃ** ವಿಶಾಲ, ಶೂನ್ಯಬಂಧು, ಧೂಮಕೇತು ಹೀಗೆ **ತತ್ಸುತಾಃ** ತೃಣಬಿಂದುವಿನ ಮಕ್ಕಳು **ವಿಶಾಲಃ** ವಿಶಾಲನೆಂಬುವ ರಾಜನು, **ವಂಶಕೃತ್** ಗೃಹಸ್ಥಾಶ್ರಮಿಯು, **ವೈಶಾಲೀಂ ಪುರೀಂ** ವೈಶಾಲೀ ಎಂಬ ಪಟ್ಟಣವನ್ನು **ನಿರ್ಮಮೇ** ನಿರ್ಮಾಣ ಮಾಡಿದನು. ॥೩೩॥

**ಹೇಮಚಂದ್ರಃ ಸುತಸ್ತಸ್ಯ ಧೂಮ್ರಾಕ್ಷಸ್ತಸ್ಯ ಚಾತ್ಮಜಃ ।**
**ತತ್ಪುತ್ರಃ ಸಹದೇವಸ್ತು ಕೃಶಾಶ್ವಃ ಸಹದೇವಜಃ ॥೩೪॥**

**ತಸ್ಯ** ವಿಶಾಲನಿಗೆ, **ಹೇಮಚಂದ್ರಃ** ಹೇಮಚಂದ್ರನು **ಸುತಃ** ಮಗನು ತಸ್ಯ ಹೇಮಚಂದ್ರನಿಗೆ **ಧೂಮ್ರಾಕ್ಷಃ** ಧೂಮ್ರಾಕ್ಷನು **ಆತ್ಮಜಃ** ಮಗನು **ತತ್ಪುತ್ರಃ ತು** ಧೂಮ್ರಾಕ್ಷನ ಮಗನಾದರೋ **ಸಹದೇವಃ** ಸಹದೇವನು **ಸಹದೇವಜಃ** ಸಹದೇವನ ಮಗನು **ಕೃಶಾಶ್ವಃ** ಕೃಶಾಶ್ವನು. ॥೩೪॥

**ಕೃಶಾಶ್ವಾತ್ಸೋಮದತ್ತೋಽಭೂದ್ಯೋಽಶ್ವಮೇಧೈರಿಡಸ್ಪತಿಮ್ ।**
**ಇಷ್ಟ್ವಾ ಪುರುಷಮಾಪಾಗ್ರ್ಯಾಂ ಗತಿಂ ಯೋಗೇಶ್ವರಾಶ್ರಿತಾಮ್ ॥೩೫॥**

**ಯಃ** ಯಾರು **ಇಡಸ್ಪತಿಂ** ವಾಕ್ಪತಿಯಾದ, ಅನ್ನಪತಿಯಾದ **ಪುರುಷಂ** ಹರಿಯನ್ನು **ಅಶ್ವಮೇಧೈಃ** ಅಶ್ವಮೇಧಯಾಗಗಳಿಂದ **ಇಷ್ಟ್ವಾ** ಪೂಜಿಸಿ **ಯೋಗೇಶ್ವರಾಶ್ರಿತಾಂ** ಯೋಗಿಗಳಿಂದ ಆವಾಸಿಸಲ್ಪಟ್ಟ, **ಅಗ್ರ್ಯಾಂ ಗತಿಂ** ಉತ್ತಮವಾದ ವೈಕುಂಠವನ್ನು **ಆಪ** ಹೊಂದಿದನೋ, **ಸಃ** ಅಂಥ, **ಸೋಮದತ್ತಃ** ಸೋಮದತ್ತನು, **ಕೃಶಾಶ್ವಾತ್** ಕೃಶಾಶ್ವನಿಂದ **ಅಭೂತ್** ಹುಟ್ಟಿದನು. ॥೩೫॥

**ಸೌಮದತ್ತಿಸ್ತು ಸುಮತಿಸ್ತತ್ಸುತೋ ಜನಮೇಜಯಃ ।**
**ಏತೇ ವೈಶಾಲಭೂಪಾಲಸ್ತೃಣಬಿಂದೋರ್ಯಶೋಧರಾಃ ॥೩೬॥**

**ಸುಮತಿಃ** ಸುಮತಿಯು **ಸೌಮದತ್ತಿಃ** ಸೋಮದತ್ತನ ಮಗನು **ತತ್ಸುತಃ** ಸುಮತಿಯ ಮಗನು **ಜನಮೇಜಯಃ** ಜನಮೇಜಯನು **ಏತೇ** ಮೇಲೆ ಹೇಳಿದವರೆಲ್ಲರೂ **ವೈಶಾಲಭೂಪಾಲಾಃ** ವಿಶಾಲರಾಜನ ಕುಲದಲ್ಲಿ ಹುಟ್ಟಿದವರು **ತೃಣಬಿಂದೋಃ** ಬಿಂದುವಿನ ಮಗನಾದ ತೃಣಬಿಂದುವಿನ **ಯಶೋಧರಾಃ** ಕೀರ್ತಿಯನ್ನು ಹರಡಿಸಿದರು. ॥೩೬॥

★ **॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ತೃತೀಯೋಽಧ್ಯಾಯಃ ॥** ★

# ಅಥ ಚತುರ್ಥೋಽಧ್ಯಾಯಃ

**ಶ್ರೀಶುಕ ಉವಾಚ-**

**ಶರ್ಯಾತಿರ್ಮಾನವೋ ರಾಜನ್ ಬ್ರಹ್ಮಿಷ್ಠಃ ಸಂಬಭೂವ ಹ ।**
**ಯೋ ವಾ ಅಂಗಿರಸಾಂ ಸತ್ರೇ ದ್ವಿತೀಯಮಹರಧ್ಯಗಾತ್ ॥೧॥**

**ಹೇ ರಾಜನ್** ಎಲೋ ಪರೀಕ್ಷಿತ್‌ರಾಜನೇ! **ಮಾನವಃ** ವೈವಸ್ವತ ಮನುವಿನ ಮೂರನೆಯ ಮಗನಾದ, **ಶರ್ಯಾತಿಃ** ಶರ್ಯಾತಿ ರಾಜನು, **ಬ್ರಹ್ಮಿಷ್ಠಃ** ಪರಬ್ರಹ್ಮ ಜ್ಞಾನಿಯು, ವೇದಪಾರಂಗತನೂ, **ಸಂಬಭೂವ** ಆಗಿದ್ದನು. **ಹ** ಪ್ರಸಿದ್ಧವು. ಆದ್ದರಿಂದಲೇ **ಯಃ ವಾ** ಯಾವ ಶರ್ಯಾತಿಯೇ, **ಅಂಗಿರಸಾಂ** ಅಂಗೀರಸ ಋಷಿಗಳು ಮಾಡಿದ, **ಸತ್ರೇ** ಬಹಳ ದಿನಗಳು ಮಾಡುವ ಯಜ್ಞದಲ್ಲಿ **ದ್ವಿತೀಯಂ** ಎರಡನೆಯ **ಅಹಃ** ದಿನದಲ್ಲಿ ಹೇಳಬೇಕಾದ ಮಂತ್ರವನ್ನು, **ಅಧ್ಯಗಾತ್** ಹೇಳಿದನು.

**ತಾತ್ಪರ್ಯ-** ಮನುವಿನ ಮೂರನೆಯ ಮಗನಾದ ಶರ್ಯಾತಿಯು ಬ್ರಹ್ಮಜ್ಞಾನಿಯು, ವೇದ ಪಾರಂಗತನು ಆಗಿದ್ದನು. ಇವನು ಅಂಗಿರಸರು ಮಾಡಿದ ಸತ್ರದಲ್ಲಿ ಭಾಗವಹಿಸಿದರು. ಆ ಸತ್ರಕಲ್ಪದಲ್ಲಿ ಹೇಳಿದ ಫಲ ಬರುವುದಕ್ಕಾಗಿ ಎರಡನೇ ದಿನ ಹೇಳಬೇಕಾದ ಮಂತ್ರವನ್ನು ಋಷಿಗಳು ಮರೆತಾಗ, ಈ ಅಂಗಿರಸರು ಹೇಳಿದರು. ॥೧॥

ಇಂದ್ರನ ಹಸ್ತಸ್ತಂಭನ ಮೊದಲಾದ ಚ್ಯವನ ಋಷಿಯ ಮಹಾತ್ಮ್ಯದಿಂದ ಕೂಡಿದ್ದರಿಂದ ಗಂಡು ಸಂತತಿಗಿಂತ ಮೊದಲು ಕನ್ಯೆಯ ವೃತ್ತಾಂತವನ್ನೇ ಹೇಳುವರು-

**ಸುಕನ್ಯಾ ನಾಮ ತಸ್ಯಾಸೀತ್ಕನ್ಯಾ ಕಮಲಲೋಚನಾ ।**
**ತಯಾ ಸಾರ್ಧಂ ವನಗತೋ ಹ್ಯಗಮತ್ ಚ್ಯವನಾಶ್ರಮಮ್ ॥೨॥**

**ತಸ್ಯ** ಶರ್ಯಾತಿಗೆ **ಕಮಲಲೋಚನಾ** ಕಮಲದಂತಿರುವ ಕಣ್ಣುಗಳುಳ್ಳ, **ಸುಕನ್ಯಾ ನಾಮ** ಸುಕನ್ಯೆ ಎಂಬ **ಕನ್ಯಾ** ಹೆಣ್ಣು ಮಗಳು, **ಆಸೀತ್** ಇದ್ದಳು, **ತಯಾ** ಮಗಳಿಂದ **ಸಾರ್ಧಂ** ಕೂಡಿಕೊಂಡು **ವನಗತಃ** ವನಕ್ಕೆ ಬಂದವನಾಗಿ, ಅಲ್ಲಿರುವ **ಚ್ಯವನಾಶ್ರಮಂ** ಚ್ಯವನಋಷಿಯ ಆಶ್ರಮಕ್ಕೆ, **ಅಗಮತ್** ಹೋದನು.

**ತಾತ್ಪರ್ಯ-** ಶರ್ಯಾತಿಗೆ ಸುಕನ್ಯೆ ಎಂಬ ಮಗಳಿದ್ದಳು. ಅವಳಲ್ಲಿ ವಿಶೇಷ ಪ್ರೀತಿ ರಾಜನಿಗೆ. ಕಾರಣ ಅವಳನ್ನು ಕರೆದುಕೊಂಡೇ ಬೇಟೆಗಾಗಿ ಅಡವಿಗೆ ಹೋದನು. ದೈವವಶಾತ್ ಚ್ಯವನಾಶ್ರಮ ಇರುವ ಪ್ರದೇಶಕ್ಕೆ ಬಂದನು. ॥೨॥

**ಸಾ ಸಖೀಭಿಃ ಪರಿವೃತಾ ವಿಚಿನ್ವಂತ್ಯಂಘ್ರಿಪಾನ್ವನೇ ।**
**ವಲ್ಮೀಕರಂಧ್ರೇ ದದೃಶೇ ಖದ್ಯೋತೇ ಇವ ಜ್ಯೋತಿಷೀ ॥೩॥**

**ವನೇ** ವನದಲ್ಲಿ, **ಸಾ** ಸುಕನ್ಯೆಯು, **ಸಖೀಭಿಃ** ಗೆಳತಿಯರಿಂದ, **ಪರಿವೃತಾ** ಸುತ್ತುಗಟ್ಟಲ್ಪಟ್ಟವಳಾಗಿ, **ಅಂಘ್ರಿಪಾನ್** ಫಲಪುಷ್ಪಗಳುಳ್ಳ ಗಿಡಗಳನ್ನು, **ವಿಚಿನ್ವಂತೀ** ಹುಡುಕುತ್ತ , **ವಲ್ಮೀಕರಂಧ್ರೇ** ಹುತ್ತದ ರಂಧ್ರದಲ್ಲಿ, **ಖದ್ಯೋತೇ ಇವ** ಸೂರ್ಯರಂತೆ (ದೀಪದ ಹುಳದಂತೆ) **ಜ್ಯೋತಿಷೀ** ಪ್ರಕಾಶಗಳನ್ನು (ಪ್ರಕಾಶರೂಪವಾದ ಕಣ್ಣುಗಳನ್ನು) **ದದೃಶೇ** ನೋಡಿದಳು.

**ತಾತ್ಪರ್ಯ-** ಸಖಿಯರಿಂದ ಕೂಡಿದ ಸುಕನ್ಯೆಯು ವನದಲ್ಲಿ ಫಲಪುಷ್ಪವುಳ್ಳ ಗಿಡಗಳನ್ನು ಹುಡುಕುವವಳಾಗಿ ಹುತ್ತದಲ್ಲಿ ದೀಪದ ಹುಳದಂತೆ ಇರುವ ಪ್ರಕಾಶವನ್ನು (ಪ್ರಕಾಶಮಾನವಾದ ಕಣ್ಣುಗಳನ್ನು) ನೋಡಿದಳು.

ಇಲ್ಲಿ ಇವ **ಜ್ಯೋತಿಷೀ** ಎಂಬ ವ ಎಂಬ ವರ್ಣವು, ಜ್ಯ ಎಂಬ ಸಂಯುಕ್ತಾಕ್ಷರ ವಿದ್ದದ್ದರಿಂದ ವ್ಯಾಕರಣದಂತೆ ಗುರು ಎಂದು ಪರಿಗಣಿಸಬೇಕು. ಆದರೆ, ಪದ್ಯದಲ್ಲಿ ಅದನ್ನು ಲಘುವಾಗಿ ಉಪಯೋಗ ಮಾಡಿದ್ದರಿಂದ ಇದು ರಾಜನಿಗೆ ಬಂದೊದಗಿದ ಲಾಘವವನ್ನು ಅಂದರೆ ವಿಪತ್ತನ್ನು ಸೂಚಿಸುವುದು. ಇದನ್ನೇ ಸತ್ಯಧರ್ಮರು, **ಜ್ಯೋತಿಷೀ ಇತ್ಯತ್ರತ್ಯೋ ಜ್ಯಕಾರೋ ಲಘು, ವಂ ಕುರ್ವನ್ ಸನ್ ರಾಜ್ಞಃ ತಾತ್ಕಾಲಿಕಲಾಘವಂ ಸೂಚಯತಿ** ಎಂದು ವಿವರಿಸಿರುವರು. ॥೩॥

**ದೈವೇನ ಚೋದಿತಾ ಬಾಲಾ ಜ್ಯೋತಿಷೀ ಕಂಟಕೇನ ಸಾ ।**
**ಅವಿಧ್ಯನ್ಮುಗ್ಧಭಾವೇನ ಸುಸ್ರಾವಾಸೃಕ್ ತತೋ ಬಹು ॥೪॥**

**ಸಾ ಬಾಲಾ** ಆ ಸುಕನ್ಯೆಯು, **ದೈವೇನ** ಅದೃಷ್ಟದಿಂದ, **ಚೋದಿತಾ** ಪ್ರೇರಿತಳಾಗಿ, **ಜ್ಯೋತಿಷೀ** ಪ್ರಕಾಶಗಳನ್ನು (ತೇಜೋರೂಪವಾದ ಕಣ್ಣುಗಳನ್ನು) **ಕಂಟಕೇನ** ಮುಳ್ಳಿನಿಂದ, **ಮುಗ್ಧಭಾವೇನ** ಮೂಢತನದಿಂದ, **ಅವಿಧ್ಯತ್** ಗಾಯಗೊಳಿಸಿದಳು. **ತತಃ** ಗಾಯಗೊಂಡ ಕಣ್ಣಿನಿಂದ, **ಅಸೃಕ್** ರಕ್ತವು **ಬಹು** ಬಹಳವಾಗಿ **ಸುಸ್ರಾವ** ಹರಿಯಿತು.

**ತಾತ್ಪರ್ಯ-** ಆ ಸುಕನ್ಯೆಯು ದೈವವಶಾತ್ ತೇಜೋರೂಪವಾದ ಕಣ್ಣುಗಳನ್ನು ಮುಳ್ಳಿನಿಂದ ಮೂಢತನದಿಂದ ಚುಚ್ಚಿದಳು. ಗಾಯಗೊಂಡ ಕಣ್ಣಿನಿಂದ ರಕ್ತವು ಬಹಳ ಹರಿಯಿತು. ॥೪॥

**ಶಕೃನ್ಮೂತ್ರನಿರೋಧೋಽಭೂತ್ಸೈನಿಕಾನಾಂ ಚ ತತ್ಕ್ಷಣಾತ್ ।**
**ರಾಜರ್ಷಿಸ್ತಮುಪಾಲಭ್ಯ ಪುರುಷಾನ್ವಿಸ್ಮಿತೋಽಬ್ರವೀತ್ ॥೫॥**

**ತತ್‌ಕ್ಷಣಾತ್** ಆ ಕ್ಷಣದಲ್ಲಿಯೇ, **ಸೈನಿಕಾನಾಂ** ರಾಜಸೇವಕರಿಗೆ, **ಶಕೃನ್ಮೂತ್ರ-ನಿರೋಧಃ** ಮಲಮೂತ್ರಪ್ರತಿಬಂಧವು, **ಅಭೂತ್** ಆಯಿತು. **ರಾಜರ್ಷಿಃ** ಶರ್ಯಾತಿಯು, **ತಂ** ಮಲಮೂತ್ರನಿರೋಧವನ್ನು, **ಉಪಾಲಭ್ಯ** ನೋಡಿ, **ವಿಸ್ಮಿತಃ** ಆಶ್ಚರ್ಯಗೊಂಡು, **ಪುರುಷಾನ್** ತನ್ನ ಜನರನ್ನು ಕುರಿತು **ಅಬ್ರವೀತ್** ಮಾತನಾಡಿದನು.

**ತಾತ್ಪರ್ಯ-** ಆ ಕ್ಷಣದಲ್ಲಿಯೇ ಸೈನಿಕರಿಗೆ ಮಲಮೂತ್ರಗಳ ಪ್ರತಿಬಂಧ-ವಾಯಿತು. ಅದನ್ನು ನೋಡಿ ಶರ್ಯಾತಿಯು ಆಶ್ಚರ್ಯಗೊಂಡು ತನ್ನ ಜನರನ್ನು ಕೇಳಿದನು. ॥೫॥

**ಅಪ್ಯಭದ್ರಂ ನ ಯುಷ್ಮಾಭಿರ್ಭಾರ್ಗವಸ್ಯ ವಿಚೇಷ್ಟಿತಮ್ ।**
**ವ್ಯಕ್ತಂ ಕೇನಾಪಿ ನಸ್ತಸ್ಯ ಕೃತಮಾಶ್ರಮದೂಷಣಮ್ ॥೬॥**

**ಯುಷ್ಮಾಭಿಃ** ನಿಮ್ಮಿಂದ **ಭಾರ್ಗವಸ್ಯ** ಚ್ಯವನ ಋಷಿಗಳಿಗೆ, **ಅಭದ್ರಂ** ಅಪರಾಧವು, **ಅಪಿ ನ ವಿಚೇಷ್ಟಿತಂ** ಮಾಡಿಲ್ಲವಷ್ಟೇ? ಎಂದು ಮೊದಲು ಸಂದೇಹದಿಂದ ಕೇಳಿದನು. ಅಪರಾಧ ಮಾಡದಿದ್ದರೇ ಈ ರೀತಿ ಪ್ರಾಣಸಂಕಟ ಒದಗುತ್ತಿರಲಿಲ್ಲ. ಕಾರಣ, **ವ್ಯಕ್ತಂ** ಸ್ಪಷ್ಟವೇ, **ನಃ** ನಮ್ಮ ಮಧ್ಯದಲ್ಲಿ, **ಕೇನಾಪಿ** ಯಾವನೋ ಒಬ್ಬನಿಂದ, **ತಸ್ಯ** ಆ ಚ್ಯವನರ **ಆಶ್ರಮದೂಷಣಂ ವಿಚೇಷ್ಟಿತಂ ಕೃತಂ** ಆಶ್ರಮವನ್ನು ಮಲಿನಗೊಳಿಸುವ ಕೆಲಸವು ಮಾಡಲ್ಪಟ್ಟಿದೆ, ಆದ್ದರಿಂದ **ತಸ್ಯ** ಆ ಚ್ಯವನರ **ವಿಚೇಷ್ಟಿತಂ** ಸೇನೆಯ ಮಲಮೂತ್ರನಿರೋಧರೂಪ ವ್ಯಾಪಾರವೆಂದು, **ವ್ಯಕ್ತಂ** ಸ್ಪಷ್ಟವಾಯಿತು. ॥೬॥

**ತಾತ್ಪರ್ಯ-** ನಿಮ್ಮಲ್ಲಿ ಚ್ಯವನರಿಗೆ ಯಾರಾದರೂ ಅಪರಾಧ ಮಾಡಿದ್ದೀರಾ? ಅಪರಾಧ ಮಾಡದಿದ್ದರೇ ಈ ರೀತಿಯಾಗಿ ಪ್ರಾಣಸಂಕಟ ಬರುತ್ತಿರಲಿಲ್ಲ. ಯಾರೋ ಒಬ್ಬರು ಚ್ಯವನ ಋಷಿಯ ಆಶ್ರಮ ಮಲಿನಗೊಳಿಸಿದ್ದೀರಿ. ಆದ್ದರಿಂದ ಈ ಸೇನೆಯ ಮಲಮೂತ್ರಗಳು ನಿರುದ್ಧವಾಗಿವೆ. ಇದು ಚ್ಯವನ ಋಷಿಯ ಪ್ರಭಾವದಿಂದ ಎಂಬುವುದು ವ್ಯಕ್ತವಾಗುತ್ತದೆ. ॥೬॥

**ಸುಕನ್ಯಾ ಪ್ರಾಹ ಪಿತರಂ ಭೀತಾ ಕಿಂಚಿತ್ಕೃತಂ ಮಯಾ ।**
**ದ್ವೇ ಜ್ಯೋತಿಷೀ ಅಜಾನಂತ್ಯಾ ನಿರ್ಭಿನ್ನೇ ಕಂಟಕೇನ ತೇ ॥೭॥**

**ತಾತ್ಪರ್ಯ- ಭೀತಾ** ಭೀತಳಾದ, **ಸುಕನ್ಯಾ** ಸುಕನ್ಯೆಯು, **ಪಿತರಂ** ತಂದೆಯನ್ನು ಕುರಿತು, **ಅಜಾನಂತ್ಯಾ** ತಿಳುವಳಿಕೆ ಇಲ್ಲದವಳಾದ, **ಮಯಾ** ನನ್ನಿಂದ, **ಕಿಂಚಿತ್** ಸ್ವಲ್ಪ, ಏನೋ ಅಪರಾಧವು, **ಕೃತಂ** ಮಾಡಲ್ಪಟ್ಟಿತು. ಆ ಅಪರಾಧವೇನೆಂದರೆ **ತೇ** ಆ ವಲ್ಮೀಕದಲ್ಲಿ **ದ್ವೇ** ಎರಡು **ಜ್ಯೋತಿಷೀ** ಪ್ರಕಾಶಗಳು (ಕಣ್ಣುಗಳು) **ಕಂಟಕೇನ** ಮುಳ್ಳಿನಿಂದ, **ನಿರ್ಭಿನ್ನೇ** ಸೀಳಲ್ಪಟ್ಟಿವೆ.

**ತಾತ್ಪರ್ಯ-** ಆಗ ಸುಕನ್ಯೆಯು ತಂದೆಗೆ ಹೇಳಿದಳು. ನಾನು ಈ ವನದಲ್ಲಿ ಸಂಚರಿಸುತ್ತಿರುವಾಗ ಹುತ್ತದಲ್ಲಿ ಎರಡು ತೇಜಸ್ಸುಗಳನ್ನು ನೋಡಿದೆ. ಅದೇನೆಂದು ತಿಳಿಯುವ ಕುತೂಲಹದಿಂದ ಮುಳ್ಳಿನಿಂದ ಚುಚ್ಚಿದ್ದೇನೆ. ।।೭।।

**ದುಹಿತುಸ್ತದ್ವಚಃ ಶ್ರುತ್ವಾ ಶರ್ಯಾತಿರ್ಜಾತಸಾಧ್ವಸಃ ।**
**ಮುನಿಂ ಪ್ರಸಾದಯಾಮಾಸ ವಲ್ಮೀಕಾಂತರ್ಹಿತಂ ಶನೈಃ ।।೮।।**

**ಶರ್ಯಾತಿಃ** ಶರ್ಯಾತಿರಾಜನು, **ದುಹಿತುಃ** ಮಗಳ, **ತದ್ವಚಃ** ಆ ಮಾತನ್ನು, **ಶ್ರುತ್ವಾ** ಕೇಳಿ, **ಜಾತಸಾಧ್ವಸಃ** ಭಯಗ್ರಸ್ತನಾಗಿ **ವಲ್ಮೀಕಾಂತರ್ಹಿತಂ** ಹುತ್ತದೊಳಗೆ ಅಡಗಿದ, **ಮುನಿಂ** ಚ್ಯವನ ಋಷಿಯನ್ನು, **ಶನೈಃ** ಮೆಲ್ಲಗೆ **ಪ್ರಸಾದಯಾಮಾಸ** ಪ್ರಸನ್ನೀಕರಿಸಿಕೊಂಡನು.

**ತಾತ್ಪರ್ಯ-** ಶರ್ಯಾತಿ ರಾಜನು ಮಗಳ ಮಾತನ್ನು ಕೇಳಿ ಭಯಗೊಂಡವನಾಗಿ ವಲ್ಮೀಕದಲ್ಲಿ ಅಡಗಿ ಕೂತಿರುವ ಮುನಿಯನ್ನು ಮೆಲ್ಲಗೆ ಪ್ರಸನ್ನೀಕರಿಸಿಕೊಂಡನು.

**ತದಭಿಪ್ರಾಯಮಾಜ್ಞಾಯ ಪ್ರಾದಾದ್ದುಹಿತರಂ ಮುನೇಃ ।**
**ಕೃಚ್ಛ್ರಾನ್ಮುಕ್ತಸ್ತಮಾಮಂತ್ರ್ಯ ಪುರಂ ಪ್ರಾಯಾತ್ಸಹಾನುಗಃ ।।೯।।**

**ಸಃ** ಆ ರಾಜನು, **ತದಭಿಪ್ರಾಯಂ** ಆ ಮುನಿಯ, ಅಭಿಪ್ರಾಯವನ್ನು **ಆಜ್ಞಾಯ** ತಿಳಿದು, **ಮುನೇಃ** ಆ ಮುನಿಗೆ, **ದುಹಿತರಂ** ಮಗಳನ್ನು, **ಕೃಚ್ಛ್ರಾತ್** ಬಹುಕಷ್ಟದಿಂದ, **ಪ್ರಾದಾತ್** ಕೊಟ್ಟನು. **ಕೃಚ್ಛ್ರಾತ್** (ಮಲಮೂತ್ರರೋಗದಿಂದ ಉಂಟಾದ) ಕಷ್ಟದಿಂದ, **ಮುಕ್ತಃ** ಬಿಡಲ್ಪಟ್ಟವನಾಗಿ, **ತಂ** ಅಳಿಯನಾದ, ಋಷಿಯನ್ನು, **ಆಮಂತ್ರ್ಯ** ಹೋಗಿಬರುತ್ತೇನೆಂದು ಹೇಳಿ **ಸಹಾನುಗಃ** ಅನುಚರರಿಂದ ಸಹಿತನಾಗಿ, **ಪುರಂ** ನಗರವನ್ನು ಕುರಿತು, **ಪ್ರಾಯಾತ್** ಹೊರಟುಹೋದನು.

**ತಾತ್ಪರ್ಯ-** ಶರ್ಯಾತಿ ರಾಜನು ಮುನಿಗಳನ್ನು ಪ್ರಾರ್ಥಿಸಿದನು. ಮುನಿಗಳೇ! ನನ್ನ ಮಗಳು ಮುಗ್ಧಳು. ತಿಳಿಯದೇ ತಮ್ಮಲ್ಲಿ ಅಪರಾಧ ಮಾಡಿದ್ದಾಳೆ. ನನ್ನನ್ನು ಕ್ಷಮಿಸಬೇಕು. ಹೀಗೆ ಪ್ರಾರ್ಥಿಸಿದಾಗ, ಮುನಿಯು ರಾಜನನ್ನು ಪ್ರಶ್ನೆ ಮಾಡಿದ್ದೇನೆಂದರೆ, ''ರಾಜನೇ, ನಿನ್ನ ಮಗಳ ವಯಸ್ಸು ಏನು? ವಿವಾಹವಾಗಿದೆಯೇ?'' ಎಂದು ಕೇಳಿದ ಪ್ರಶ್ನೆಗೆ ''ಈ ಮುನಿಗಳಿಗೆ ಇವಳನ್ನು ವಿವಾಹ ಮಾಡಿಕೊಳ್ಳುವ ಅಪೇಕ್ಷೆ ಇದೆ'' ಎಂದು ತಿಳಿದು ವೃದ್ಧನಾದರೂ ತನಗೆ ಸಂಭವಿಸಿರುವ ಆಪತ್ತಿಗೆ ಈ ಕನ್ಯಾದಾನವೇ ಪರಿಹಾರವೆಂದು ತಿಳಿದು ಬೇರೆ ಯಾವ ಮಾರ್ಗವೂ ತೋರದೇ ಕನ್ಯೆಯನ್ನು ಪ್ರದಾನ ಮಾಡಿದನು. ಅನಂತರದಲ್ಲಿ ಸುಕನ್ಯಾ ಮತ್ತು ಚ್ಯವನಋಷಿಗಳಿಂದ ಬಿಳ್ಕೊಡಲ್ಪಟ್ಟು ಸೈನಿಕರಿಗೆ ಉಂಟಾದ

ಮಲಮೂತ್ರನಿರೋಧರೂಪವಾದ ಕಷ್ಟದಿಂದ ಮೋಚಿತನಾಗಿ ತನ್ನ ಅನುಚರ ಸಹಿತನಾಗಿ ಪಟ್ಟಣಕ್ಕೆ ಹಿಂದುರುಗಿದನು. ।।೯।।

**ಸುಕನ್ಯಾ ಚ್ಯವನಂ ಪ್ರಾಪ್ಯ ಪತಿಂ ಪರಮಕೋಪನಮ್ ।**
**ಪ್ರೀಣಯಾಮಾಸ ಚಿತ್ತಜ್ಞಾ ಅಪ್ರಮತ್ತಾನುವೃತ್ತಿಭಿಃ ।।೧೦।।**

**ಸುಕನ್ಯಾ** ಸುಕನ್ಯೆಯು, **ಪರಮಕೋಪನಂ** ಪರಮಕೋಪಿಯಾದ, **ಚ್ಯವನಂ** ಚ್ಯವನ ಋಷಿಯನ್ನು, **ಪತಿಂ** ಪತಿಯನ್ನಾಗಿ **ಪ್ರಾಪ್ಯ** ಹೊಂದಿ, **ಚಿತ್ತಜ್ಞಾ** ಅವರ ಮನಸ್ಸನ್ನು ತಿಳಿದವಳಾಗಿ, **ಅಪ್ರಮತ್ತಾನುವೃತ್ತಿಭಿಃ** ಪ್ರಮಾದವಿಲ್ಲದ ಸೇವೆಗಳಿಂದ, **ಪ್ರೀಣಯಾಮಾಸ** ಸಂತೋಷಪಡಿಸಿದಳು. (ತತ್ವಜ್ಞಾ ಎಂದು ಪಾಠಾಂತರವಿದೆ. ಧರ್ಮವನ್ನು ತಿಳಿದವಳು ಎಂದರ್ಥವು)

**ತಾತ್ಪರ್ಯ-** ಆ ಸುಕನ್ಯೆಯು, ಪರಮಕೋಪಿಯಾದ, ಚ್ಯವನ ಋಷಿಯನ್ನೇ ಪತಿಯನ್ನಾಗಿ ವರಿಸಿ ಅವರ ಮನಸ್ಸನ್ನು ಅರಿತು ಪ್ರಮಾದವಿಲ್ಲದವಳಾಗಿ ಸೇವೆಯನ್ನು ಮಾಡಿ ಅವರನ್ನು ಸಂತೋಷ ಪಡಿಸಿದಳು. ।।೧೦।।

**ಕಸ್ಯ ಚಿತ್ತ್ವಥ ಕಾಲಸ್ಯ ನಾಸತ್ಯಾವಾಶ್ರಮಂ ಗತೌ ।**
**ತೌ ಪೂಜಯಿತ್ವಾ ಪ್ರೋವಾಚ ವಯೋ ಮೇ ದತ್ತಮೀಶ್ವರೌ ।।೧೧।।**

**ಅಥ** ಶರ್ಯಾತಿರಾಜನು ಹಿಂದಕ್ಕೆ ತಿರುಗಿ ಹೋದ ನಂತರ, **ಕಸ್ಯ ಚಿತ್** ಕೆಲವು **ಕಾಲಸ್ಯ** ಕಾಲದ, **ಅಥ** ಅನಂತರ, **ನಾಸತ್ಯೌ** ಅಶ್ವಿನೀದೇವತೆಗಳು **ಆಶ್ರಮಂ** ಚ್ಯವನ ಋಷಿಗಳ ಆಶ್ರಮವನ್ನು ಕುರಿತು, **ಗತೌ** ಬಂದರು. (**ಚ್ಯವನಃ** ಚ್ಯವನ ಋಷಿಗಳು) **ತೌ** ಆ ಅಶ್ವಿನೀದೇವತೆಗಳನ್ನು **ಪೂಜಯಿತ್ವಾ** ಪೂಜಿಸಿ, **ಹೇ ಈಶ್ವರೌ** ಸಮರ್ಥರಾದ, **ಯುವಾಂ** ತಾವುಗಳು, **ಮೇ** ನನಗೆ, **ವಯಃ** ಯೌವ್ವನವನ್ನು **ದತ್ತಂ** ಕೊಡುವವರಾಗಬೇಕು **ಇತಿ** ಈ ರೀತಿಯಾಗಿ, **ಪ್ರೋವಾಚ** ಕೇಳಿಕೊಂಡರು.

**ತಾತ್ಪರ್ಯ-** ಶರ್ಯಾತಿರಾಜನು ಹಿಂದಕ್ಕೆ ತಿರುಗಿಹೋದ ಕೆಲವು ಕಾಲಾನಂತರದಲ್ಲಿ ಅಶ್ವಿನೀದೇವತೆಗಳು ಚ್ಯವನರ ಆಶ್ರಮಕ್ಕೆ ಬಂದರು. ಪ್ರಾಪ್ತರಾದ ಅಶ್ವಿನೀದೇವತೆಗಳನ್ನು ಚ್ಯವನರು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದರು. ''ತಾವು ವೈದ್ಯಶ್ರೇಷ್ಠರಾಗಿದ್ದೀರಿ. ಕಾರಣ ನನಗೆ ತಾರುಣ್ಯವನ್ನು ಕರುಣಿಸಿರಿ'' ಎಂದು ಕೇಳಿಕೊಂಡರು. ।।೧೧।।

ಅಶ್ವಿನೀ ದೇವತೆಗಳು ವೈದ್ಯಶ್ರೇಷ್ಠರಾದ್ದರಿಂದ ಏನಾದರೂ ಪ್ರತಿಫಲ ಅಪೇಕ್ಷಿಸಬಹುದೆಂದು ಭಾವಿಸಿ ಚ್ಯವನರು ಕೇಳುತ್ತಾರೆ-

**ಗ್ರಹಂ ಗ್ರಹೀಷ್ಯೇ ಸೋಮಸ್ಯ ಯಜ್ಞೇ ವಾಮಪ್ಯಸೋಮಯೋಃ ।**
**ಕ್ರಿಯತಾಂ ಮೇ ವಯೋ ರೂಪಂ ಪ್ರಮದಾನಾಂ ಯದೀಪ್ಸಿತಮ್॥೧೨॥**

**ಅಸೋಮಯೋಃ** ಸೋಮಪಾನವಿಲ್ಲದ, **ವಾಂ** ನಿಮಗೆ **ಯಜ್ಞೇ** ಯಜ್ಞದಲ್ಲಿ, **ಸೋಮಸ್ಯ** ಸೋಮರಸದ **ಗ್ರಹಂ** ಆಹುತಿವಿಶೇಷವನ್ನು, **ಗೃಹೀಷ್ಯೇ** ಕೊಡುತ್ತೇನೆ. **ಪ್ರಮಾದಾನಾಂ** ತರುಣಿಯರಿಗೆ **ಯದೀಪ್ಸಿತಂ** ಯಾವುದು ಅಪೇಕ್ಷಿತ-ವಾಗಿರುವುದೋ ಅಂಥಾ, **ವಯೋ ರೂಪಂ** ವಯಸ್ಸು ಮತ್ತು ರೂಪವು, **ಮೇ** ನನಗೆ **ಕ್ರಿಯತಾಂ** ಮಾಡಲ್ಪಡಲಿ.

**ತಾತ್ಪರ್ಯ-** ಸೋಮಪಾನವಿಲ್ಲದಿರುವ ನಿಮಗೆ ಯಜ್ಞದಲ್ಲಿ ಸೋಮಪಾನ ರೂಪವಾದ ಆಹುತಿವಿಶೇಷವನ್ನು ಕೊಡುತ್ತೇನೆ. ಯುವತಿಯರು ತಮ್ಮ ಪುರುಷನಲ್ಲಿರಬೇಕಾಗಿ ಇಚ್ಛಿಸುವ ರೂಪಯೌವ್ವನಗಳನ್ನು ನನ್ನಲ್ಲಿ ಉಂಟು ಮಾಡಿರಿ ಎಂದು ಕೇಳಿಕೊಂಡರು.

**ಪ್ರಮದಾನಾಂ** ಎಂದರೆ ಪತಿಯ ರಮಣದಿಂದ ಉಂಟಾದ ಸುಖಭೋಗ ಉಳ್ಳವರಿಗೆ ಎಂದರ್ಥ. ಸುಕನ್ಯಾ ಒಬ್ಬಳೇ ಇದ್ದರೂ ಲೋಕದಲ್ಲಿ ಎಲ್ಲ ಸ್ತ್ರೀಯರೂ ಪತಿಗೆ ಯೌವ್ವನ, ರೂಪ, ಇಚ್ಛಿಸುವರು ಎಂದು ಸೂಚಿಸಲು ಬಹುವಚನ ಪ್ರಯೋಗಿಸಿರುವರು. ॥೧೨॥

**ಬಾಢಮಿತ್ಯೂಚತುರ್ವಿಪ್ರಮಭಿನಂದ್ಯ ಭಿಷಕ್ತಮೌ ।**
**ನಿಮಜ್ಜತಾಂ ಭವಾನಸ್ಮಿನ್ ಹ್ರದೇ ಸಿದ್ಧವಿನಿರ್ಮಿತೇ ॥೧೩॥**

**ಭಿಷಕ್ತಮೌ** ವೈದ್ಯಶ್ರೇಷ್ಠರು **ವಿಪ್ರಂ** ಚ್ಯವನಋಷಿಗಳನ್ನು ಕುರಿತು, **ಬಾಢಂ** ಹಾಗೇ ಆಗಲಿ ಎಂದು, **ಅಭಿನಂದ್ಯ** ಅನುಮೋದಿಸಿ, **ಸಿದ್ಧವಿನಿರ್ಮಿತೇ** ಸಿದ್ಧರಿಂದ ನಿರ್ಮಿತವಾದ, **ಅಸ್ಮಿನ್** ಈ **ಹ್ರದೇ** ಸರೋವರದಲ್ಲಿ, **ಭವಾನ್** ತಾವು **ನಿಮಜ್ಜತಾಂ** ಸ್ನಾನಮಾಡಿರಿ ಎಂದು **ಊಚತುಃ** ಹೇಳಿದರು.

**ತಾತ್ಪರ್ಯ-** ಅಶ್ವಿನೀ ದೇವತೆಗಳು ಹಾಗೇ ಆಗಲಿ ಎಂದು ಅನುಮೋದಿಸಿ ಸಿದ್ಧರಿಂದ ನಿರ್ಮಿತವಾದ ಈ ಸರೋವರದಲ್ಲಿ ಸ್ನಾನಮಾಡಿರಿ ಎಂದು ಹೇಳಿದರು. ॥೧೩॥

**ಇತ್ಯುಕ್ತೋ ಜರಯಾ ಗ್ರಸ್ತದೇಹೋ ಧಮನಿಸಂತತಃ ।**
**ಹ್ರದಂ ಪ್ರವೇಶಿತೋಽಶ್ವಿಭ್ಯಾಂ ಸ್ವಯಂ ಚಾಮಜ್ಜತಾಂ ಹ್ರದೇ ॥೧೪॥**

**ತಾಭ್ಯಾಂ** ಆ ಅಶ್ವಿನೀದೇವತೆಗಳಿಂದ, **ಇತಿ** ಈ ರೀತಿಯಾಗಿ, **ಉಕ್ತಃ** ಹೇಳಿಸಿಕೊಳ್ಳಲ್ಪಟ್ಟ, **ಜರಯಾ** ಮುಪ್ಪಿನಿಂದ, **ಗ್ರಸ್ತದೇಹಃ** ಆವೃತವಾದ ದೇಹವುಳ್ಳ, **ಧಮನಿಸಂತತಃ** ನರಗಳಿಂದ ವ್ಯಾಪ್ತವಾದ ದೇಹವುಳ್ಳ, **ಸಃ** ಆ ಚ್ಯವನಋಷಿಯು

**ಅಶ್ವಿಭ್ಯಾಂ** ಅಶ್ವಿನೀದೇವತೆಗಳಿಂದ, **ಹ್ರದಂ** ಸರೋವರವನ್ನು, **ಪ್ರವೇಶಿತಃ** ಪ್ರವೇಶಿ-ಸಲ್ಪಟ್ಟನು. **ಸ್ವಯಂ** ಆ ಅಶ್ವಿನೀದೇವತೆಗಳು **ಹ್ರದೇ** ಸರೋವರದಲ್ಲಿ, **ಅಮಜ್ಜತಾಂ** ಮುಳುಗಿದರು.

**ತಾತ್ಪರ್ಯ-** ಅಶ್ವಿನೀದೇವತೆಗಳಿಂದ ಈ ರೀತಿಯಾಗಿ ಹೇಳಲ್ಪಟ್ಟ, ಮುಪ್ಪಿನಿಂದ ಆವೃತವಾದ ಮತ್ತು ನರಗಳಿಂದ ವ್ಯಾಪ್ತನಾದ ದೇಹವುಳ್ಳ ಆ ಚ್ಯವನ ಋಷಿಯು, ಅಶ್ವಿನೀದೇವತೆಗಳಿಂದ ಸರೋವರವನ್ನು ಪ್ರವೇಶಿಲ್ಪಟ್ಟನು. ಆ ಅಶ್ವಿನೀದೇವತೆಗಳೂ ಸಹ ಸರೋವರದಲ್ಲಿ ಮುಳುಗಿದರು. ಚ್ಯವನರು ಅಸಮರ್ಥರಾದ್ದರಿಂದ ಅವರನ್ನು ಹಿಡಿದುಕೊಳ್ಳಲು ಮತ್ತು ದೊಡ್ಡವರ ಸಂಗಡ ಸ್ನಾನ ಮಾಡುವುದರಿಂದ ಸ್ನಾನಕ್ಕೆ ಒಂದು ಸಂಸ್ಕಾರ ವಿಶೇಷ ತಂದುಕೊಡಲು ಅಶ್ವಿನೀದೇವತೆಗಳು ತಾವೂ ಸಹ ಸ್ನಾನ ಮಾಡಿದರು. ||೧೪||

**ಪುರುಷಾಸ್ತ್ರಯ ಉತ್ತಸ್ಥುರಾಪೀಚ್ಯಾ ವನಿತಾಪ್ರಿಯಾಃ ।**
**ರುಕ್ಮಸ್ರಜಃ ಕುಂಡಲಿನಸ್ತುಲ್ಯರೂಪಾಸ್ಸುವಾಸಸಃ ||೧೫||**

**ಆಪೀಚ್ಯಾಃ** ಹದಿನಾರು ವರ್ಷ ವಯಸ್ಸುಳ್ಳ, **ವನಿತಾಪ್ರಿಯಾಃ** ಸ್ತ್ರೀ ಮನೋಹರರಾದ, **ರುಕ್ಮಸ್ರಜಃ** ಸುವರ್ಣಮಾಲಾಧಾರಿಗಳಾದ, **ಕುಂಡಲಿನಃ** ಕುಂಡಲಧಾರಿಗಳಾದ, **ಸುವಾಸಸಃ** ಉತ್ತಮವಾದ ಬಟ್ಟೆಯನ್ನು ಧರಿಸಿದ, **ತುಲ್ಯರೂಪಾಃ** ಸಮಾನವಾದ ರೂಪಗಳುಳ್ಳ, **ತ್ರಯಃ** ಮೂವರು **ಪುರುಷಾಃ** ಪುರುಷರು, **(ಹ್ರದಾತ್** ಸರೋವರದಿಂದ) **ಉತ್ತಸ್ಥುಃ** ಮೇಲಕ್ಕೆ ಬಂದರು.

**ತಾತ್ಪರ್ಯ-** ಹದಿನಾರು ವರ್ಷ ವಯಸ್ಸುಳ್ಳ, ಸ್ತ್ರೀಯರಿಗೆ ಮನೋಹರರಾದ ಸುವರ್ಣ ಮಾಲಾಧಾರಿಗಳಾದ ಕುಂಡಲಧಾರಿಗಳಾದ, ಉತ್ತಮ ವಸ್ತ್ರಧಾರಿಗಳಾದ, ಸಮಾನ ರೂಪಧಾರಿಗಳಾದ ಮೂವರು ಪುರುಷರು ಸರೋವರದಿಂದ ಮೇಲಕ್ಕೆ ಬಂದರು. ||೧೫||

**ತಾನ್ನಿರೀಕ್ಷ್ಯ ವರಾರೋಹಾ ಸರೂಪಾಂ ಸೂರ್ಯವರ್ಚಸಃ ।**
**ಅಜಾನತೀ ಪತಿಂ ಸಾಧ್ವೀ ಅಶ್ವಿನೌ ಶರಣಂ ಯಯೌ ||೧೬||**

**ವರಾರೋಹಾ** ಸುಂದರವಾದ ತೊಡೆಗಳುಳ್ಳ, **ಸಾಧ್ವೀ** ಸಾಧ್ವಿಯು, **ಸೂರ್ಯ-ವರ್ಚಸಃ** ಸೂರ್ಯನಂತೆ ಕಾಂತಿ ಉಳ್ಳ, **ಸರೂಪಾನ್** ಏಕರೂಪವಾದ ಆಕೃತಿ ಉಳ್ಳ **ತಾನ್** ಆ ಮೂವರನ್ನು, **ನಿರೀಕ್ಷ್ಯ** ನೋಡಿ, **ಪತಿಂ** ಚ್ಯವನ ಋಷಿಗಳನ್ನು **ಅಜಾನತೀ** ತಿಳಿಯದವಳಾಗಿ, **ಅಶ್ವಿನೌ** ಅಶ್ವಿನೀದೇವತೆಗಳನ್ನು, **ಶರಣಂ ಯಯೌ** ಮೊರೆ ಹೋದಳು.

**ತಾತ್ಪರ್ಯ-** ಸುಂದರವಾದ ತೊಡೆಗಳುಳ್ಳ ಪತಿವ್ರತೆಯಾದ ಆ ಸುಕನ್ಯೆಯು ಸೂರ್ಯಕಾಂತಿಯಂತೆ ಕಾಂತಿ ಉಳ್ಳ, ಎಲ್ಲರೂ ಒಂದೇರೂಪದಲ್ಲಿ ಇದ್ದದ್ದನ್ನು ನೋಡಿ ತನ್ನ ಪತಿ ಯಾರು ಎಂದು ತಿಳಿಯದೇ ಪತಿಯನ್ನು ತಿಳಿದುಕೊಳ್ಳುವುದಕ್ಕಾಗಿ ಅಶ್ವಿನೀದೇವತೆಗಳನ್ನು ನನ್ನ ಪಾತಿವ್ರತ್ಯವನ್ನು ರಕ್ಷಿಸಿರಿ, ಎಂದು ಮೊರೆ ಹೊಕ್ಕಳು.

ವನಪರ್ವ ನಲೋಪಾಖ್ಯಾನದಲ್ಲಿ ದೇವತೆಗಳಿಗೆ ಭೂಸ್ಪರ್ಶವಿಲ್ಲವೆಂದು, ಬ್ರಾಹ್ಮಣರಿಗೆ ಭೂಸ್ಪರ್ಶ ಉಂಟೆಂದು ಅವರಿಬ್ಬರ ಸ್ವಭಾವವನ್ನು ವರ್ಣಿಸಿದ್ದಾರೆ. ಈ ವಿಷಯವು ಸುಕನ್ಯೆಗೆ ತಿಳಿಯಲಾರದು. ಆದ್ದರಿಂದ ಶರಣು ಹೊಂದಿದಳು. ಅಥವಾ ಸುಕನ್ಯೆಗೆ ಲಕ್ಷಣ ಗೊತ್ತಿದ್ದರೂ ಸಹ ಸಂದೇಹವುಂಟಾಯಿತು. ಈ ದೇವತೆಗಳಿಗೆ ತನ್ನ ಪಾತಿವ್ರತ್ಯ ಪರೀಕ್ಷೆಗಾಗಿ ಒಂದು ಕ್ಷಣ ತಮ್ಮ ದೇವತಾ ಲಕ್ಷಣವನ್ನು ಬಿಟ್ಟು ಭೂಮಿಯಲ್ಲಿ ಮನುಷ್ಯರಾಗಿ ನಿಂತಿರುವುದರ ಬಗ್ಗೆ ವಿಚಾರ ಉಂಟಾಗಿ ಸಂದೇಹವನ್ನು ಪರಿಹರಿಸಿಕೊಳ್ಳಲು ಪ್ರಾರ್ಥಿಸಿದಳು. ||೧೬||

**ದರ್ಶಯಿತ್ವಾ ಪತಿಂ ತಸ್ಯೈ ಪಾತಿವ್ರತ್ಯೇನ ತೋಷಿತೌ ।**
**ಋಷಿಮಾಮಂತ್ರ್ಯ ಯಯತುಃ ವಿಮಾನೇನ ತ್ರಿವಿಷ್ಟಪಮ್ ||೧೭||**

**ಪಾತಿವ್ರತ್ಯೇನ** ಅವಳ ಪಾತಿವ್ರತ್ಯದಿಂದ, **ತೋಷಿತೌ** ಸಂತೋಷಗೊಂಡ **ತೌ** ಆ ಅಶ್ವಿನೀದೇವತೆಗಳು, **ತಸ್ಯೈ** ಆ ಸುಕನ್ಯೆಗೆ **ಪತಿಂ** ಪತಿಯಾದ ಚ್ಯವನ ಋಷಿಗಳನ್ನು, **ದರ್ಶಯಿತ್ವಾ** ತೋರಿಸಿ, **ಋಷಿಂ** ಚ್ಯವನ ಋಷಿಗಳಿಗೆ ಹೋಗಿ ಬರುತ್ತೇವೆಂದು **ಆಮಂತ್ರ್ಯ** ಹೇಳಿ, **ವಿಮಾನೇನ** ವಿಮಾನದಿಂದ **ತ್ರಿವಿಷ್ಟಪಂ** ಸ್ವರ್ಗವನ್ನು ಕುರಿತು, **ಯಯತುಃ** ಹೊರಟು ಹೋದರು.

**ತಾತ್ಪರ್ಯ-** ಅಶ್ವಿನೀದೇವತೆಗಳು ಸುಕನ್ಯೆಯ ಪಾತಿವ್ರತ್ಯಕ್ಕೆ ಮೆಚ್ಚಿ ಅವಳಿಗೆ ಅವಳ ಪತಿಯನ್ನು ತೋರಿಸಿ ಚ್ಯವನ ಋಷಿಗಳಿಗೆ ಹೋಗಿಬರುತ್ತೇವೆಂದು ಹೇಳಿ ವಿಮಾನಾರೂಢರಾಗಿ ಸ್ವರ್ಗಲೋಕವನ್ನು ಕುರಿತು ಹೋದರು. ||೧೭||

**ಯಕ್ಷ್ಯಮಾಣೋಽಥ ಶರ್ಯಾತಿಶ್ಚ್ಯವನಸ್ಯಾಶ್ರಮಂ ಗತಃ ।**
**ದದರ್ಶ ದುಹಿತುಃ ಪಾರ್ಶ್ವೇ ಪುರುಷಂ ಸೂರ್ಯವರ್ಚಸಮ್ ||೧೮||**

**ಅಥ** ಅನಂತರದಲ್ಲಿ **ಯಕ್ಷ್ಯಮಾಣಃ** ಯಾಗಮಾಡಲು ಉದ್ಯುಕ್ತನಾದ, **ಶರ್ಯಾತಿಃ** ಶರ್ಯಾತಿ ರಾಜನು **ಚ್ಯವನಸ್ಯ** ಚ್ಯವನ ಋಷಿಗಳ, **ಆಶ್ರಮಂ** ಆಶ್ರಮವನ್ನು ಕುರಿತು, **ಗತಃ** ಹೋದನು. **ದುಹಿತುಃ** ತನ್ನ ಮಗಳ, **ಪಾರ್ಶ್ವೇ** ಪಕ್ಕದಲ್ಲಿ **ಸೂರ್ಯವರ್ಚಸಂ** ಸೂರ್ಯನ ಕಾಂತಿಯಂತೆ ಕಾಂತಿಯುಳ್ಳ (**ಸೂರೇಃ** ಜ್ಞಾನಿಯಾದ ಚ್ಯವನ ಋಷಿಗೆ ಸಮಾನವಾದ ಕಾಂತಿ ಇಲ್ಲದಿರುವ) **ಪುರುಷಂ** ಪುರುಷನನ್ನು,

**ದದರ್ಶ** ನೋಡಿದನು. (ಹೀಗೆ ಅರ್ಥ ಮಾಡಿದ್ದರಿಂದ ಹೇಳಲ್ಪಟ್ಟಿರುವ ಶಂಕೆಯು ಸೂಕ್ತವಾಗಿರುತ್ತದೆ)

**ತಾತ್ಪರ್ಯ-** ಅನಂತರದಲ್ಲಿ ಮುಂದೆ ಯಾಗ ಮಾಡಲು ಉದ್ಯುಕ್ತನಾದ ಶರ್ಯಾತಿ ರಾಜನು ಚ್ಯವನ ಋಷಿಗಳ ಆಶ್ರಮವನ್ನು ಕುರಿತು ಹೋದನು. ಅಲ್ಲಿ ತನ್ನ ಮಗಳ ಪಾರ್ಶ್ವದಲ್ಲಿ ಸೂರ್ಯಕಾಂತಿಗೆ ಸಮಾನವಾದ ಕಾಂತಿ ಉಳ್ಳ ಪುರುಷನನ್ನು ಕಂಡನು. ||೧೮||

**ರಾಜಾ ದುಹಿತರಂ ಪ್ರಾಹ ಕೃತಪಾದಾಭಿವಂದನಾಮ್ ।**
**ಆಶಿಷಶ್ಚಾಪ್ರಯುಂಜಾನೋ ನಾತಿಪ್ರೀತಮನಾ ಇವ ||೧೯||**

**ರಾಜಾ** ರಾಜನು, **ಕೃತಪಾದಾಭಿವಂದನಾಂ** ಪಾದಗಳಲ್ಲಿ ನಮಸ್ಕಾರ ಮಾಡಿದ, **ದುಹಿತರಂ** ಮಗಳನ್ನು ಕುರಿತು, **ಆಶಿಷಃ** ಆಶೀರ್ವಾದಗಳನ್ನು **ಅಪ್ರಯುಂಜಾನಃ** ಮಾಡದಲೇ, **ನಾತಿಪ್ರೀತಿಮನಾ ಇವ** ಹೆಚ್ಚು ಪ್ರೀತನಾಗದವನಂತೆ **ಪ್ರಾಹ** ಹೇಳಿದನು.

**ತಾತ್ಪರ್ಯ-** ರಾಜನು ತನ್ನ ಪಾದದಲ್ಲಿ ನಮಸ್ಕರಿಸಿದ ಮಗಳನ್ನು ಕುರಿತು ಆಶೀರ್ವಾದವನ್ನು ಮಾಡದೇ ಹೆಚ್ಚು ಪ್ರೀತನಾಗದವನಂತೆ ಹೇಳಿದನು. ||೧೯||

**ಚಿಕೀರ್ಷಿತಂ ತೇ ಕಿಮಿದಂ ಪತಿಸ್ತ್ವಯಾ**
**ಪ್ರಲಂಭಿತೋ ಲೋಕನಮಸ್ಕೃತೋ ಮುನಿಃ ।**
**ಯಾ ತ್ವಂ ಜರಾಗ್ರಸ್ತಮಸತ್ಯಸಮ್ಮತಂ**
**ವಿಹಾಯ ಜಾರಂ ಭಜಸೇಽಮುಮಧ್ವಗಮ್ ||೨೦||**

**ಹೇ ಅಸತಿ** ಹೇ ದುರಾಚಾರಿಣಿಯೇ! **ತೇ** ನಿನ್ನ **ಚಿಕೀರ್ಷಿತಂ** ಇಚ್ಛಿಸಲ್ಪಟ್ಟದ್ದು, **ಇದಂ** ಈ ಕಾರ್ಯವು, **ಕಿಂ** ಏನು? ಏನು ಮಾಡಿದೆ ಎಂದರೆ, **ಲೋಕನಮಸ್ಕೃತಃ** ಸರ್ವಲೋಕವಂದ್ಯರಾದ, **ಮುನಿಃ** ಚ್ಯವನಋಷಿಗಳು (ಪತಿಯು) **ತ್ವಯಾ** ನಿನ್ನಿಂದ, **ಪ್ರಲೋಭಿತಃ** ವಂಚಿತರಾಗಿದ್ದಾರೆ. (ನಾನು ಹೀಗೆ ನಿಂದಿಸಲು ಕಾರಣವೇನೆಂದರೇ) **ಯಾ** ಯಾವ **ತ್ವಂ** ನೀನು, **ಜರಾಗ್ರಸ್ತಂ** ಮುಪ್ಪಿನಿಂದ ಪೀಡಿತರಾದ (ಆದ್ದರಿಂದ) **ಅಸಮ್ಮತಂ** ನಿನಗೆ ಸಮ್ಮತವಲ್ಲದ ಚ್ಯವನ ಋಷಿಗಳನ್ನು, **ವಿಹಾಯ** ತ್ಯಜಿಸಿ, **ಅಮುಂ** ಈ **ಅಧ್ವಗಂ** ದಾರಿಹೋಕನಾದ, **ಜಾರಂ** ಉಪಪತಿಯನ್ನು, **ಭಜಸೇ** ಸೇವಿಸುತ್ತಿದ್ದೀಯೇ.

**ತಾತ್ಪರ್ಯ-** ಹೇ ದುರಾಚಾರಿಣಿಯೇ! ಲೋಕಮಾನ್ಯರಾದ ಚ್ಯವನಋಷಿಗಳನ್ನು ಮುಪ್ಪಿನವರೆಂದು ತ್ಯಜಿಸಿ, ಮೋಸಮಾಡಿ, ದಾರಿಹೋಕನಾದ, ಈ

ಪರಪುರುಷನನ್ನು ಉಪಪತಿಯನ್ನಾಗಿ ಸೇವಿಸುತ್ತಿರುವಿ. ಹೀಗೆ ಮಾಡುತ್ತಾ ನಿನ್ನ ಪತಿಯಾದ, ಸಕಲಜನರಿಂದ ವಂದ್ಯರಾದ ಚ್ಯವನ ಋಷಿಗಳನ್ನು ವಂಚಿಸುತ್ತಿರುವಿ. ಇದು ಅಕಾರ್ಯವಾಗಿದೆ. ॥೨೦॥

**ಕಥಂ ಮತಿಸ್ತೇಽಂಬ ಗತಾನ್ಯಥಾ ಸತಾಂ**
**ಮಾರ್ಗಂ ತ್ವಿಯಂ ಮತ್ಕುಲದೂಷಣಂ ತ್ವಿದಮ್ ।**
**ಬಿಭರ್ಷಿ ಜಾರಂ ಯದಪತ್ರಪಾಕುಲಂ**
**ಪಿತುಶ್ಚ ಭರ್ತುಶ್ಚ ನಯಸ್ಯಧಸ್ತಮಃ ॥೨೧॥**

**ಹೇ ಅಂಬ!** ಎಲೋ ತಾಯಿಯೇ! (ಪ್ರೀತಿಯಿಂದ ನುಡಿದ ಮಾತು) **ತೇ** ನಿನ್ನ **ಇಯಂ** ಈ **ಮತಿಃ** ಬುದ್ಧಿಯು, **ಕಥಂ** ಹೇಗೆ? **ಅನ್ಯಥಾ** ಬೇರೆ ಮಾರ್ಗಕ್ಕೆ, **ಗತಾ** ಹೋಯಿತು? **ಅಸತಾಂ** ದುಷ್ಟರ **ಮಾರ್ಗಂ** ಮಾರ್ಗವನ್ನು **ಗತಾ** ಹೊಂದಿತು? **ಇದಂ** ಈ ಅಸನ್ಮಾರ್ಗವರ್ತನವು, **ಮತ್ಕುಲದೂಷಣಂ** ನಮ್ಮ ವಂಶಕ್ಕೆ ಕಳಂಕ ತರತಕ್ಕದ್ದಾಗಿದೆ, ಅಂಥಾ ಕರ್ಮವು ಏನೆಂದರೆ **ಅಪತ್ರಪಾ** ಲಜ್ಜಾ ಹೀನಳಾದ ನೀನು, **ಜಾರಂ** ಉಪಪತಿಯನ್ನು, **ಬಿಭರ್ಷಿ** ಹೊಂದಿರುತ್ತೀಯೇ, ಇದರಿಂದ **ಪಿತುಃ** ತಂದೆಯಾದ, ನನ್ನ ಹಾಗೂ **ಭರ್ತುಃ** ಪತಿಯಾದ, ಚ್ಯವನ ಋಷಿಯ **ಕುಲಂ** ಕುಲವನ್ನು **ತಮಃ** ಅಂಧಕಾರಯುಕ್ತವಾದ, **ಅಧಃ** ನರಕವನ್ನು **ನಯಸಿ** ಹೊಂದಿಸುತ್ತೀಯೇ. ॥೨೧॥

**ತಾತ್ಪರ್ಯ-** ನಿನಗೆ ಈ ದುರ್ಮತಿಯು ಹೇಗೆ ಬಂದಿರುವುದಾಗಿದೆ. ದುಷ್ಟವಾದ ಈ ಮಾರ್ಗಕ್ಕೆ ನಿನ್ನ ಮನಸ್ಸು ಹೇಗೆ ತಾನೇ ಹೋಗಿದೆ. ನೀನು ಮಾಡಿರುವ ಈ ಅಸತ್ಕಾರ್ಯವು ನಮ್ಮ ಕುಲಕ್ಕೆ ಕಲಂಕ ತರುವುದಾಗಿದೆ. ಲೋಕವಂದ್ಯರಾದ ಪತಿಯನ್ನು ಪರಿತ್ಯಜಿಸಿ ಈ ಉಪಪತಿಯಲ್ಲಿ ಆಸಕ್ತಳಾಗಿರುವುದು ನೀನು ಮಾಡಿದ ಮಹಾ ಅಪರಾಧ. ನೀನು ಮಾಡಿದ ಈ ಅಪರಾಧದಿಂದ ನಮ್ಮ ಕುಲ ಮತ್ತು ನಿನ್ನ ಪತಿಯ ಕುಲ ಎರಡೂ ನರಕದಲ್ಲಿ ಬೀಳುವಂತಾಗಿದೆ.

**ಏವಂ ಬ್ರುವಾಣಂ ಪಿತರಂ ಸ್ಮಯಮಾನಾ ಶುಚಿಸ್ಮಿತಾ ।**
**ಉವಾಚ ತಾತ ಜಾಮಾತಾ ತವೈಷ ಭೃಗುನಂದನಃ ॥೨೨॥**

**ಸ್ಮಯಮಾನಾ** ಭಯಪಡದಿರುವ, **ಶುಚಿಸ್ಮಿತಾ** ಮಂದಹಾಸವುಳ್ಳ ಆ ಸುಕನ್ಯೆಯು, **ಏವಂ** ಈ ರೀತಿಯಾಗಿ **ಬ್ರುವಾಣಂ** ಮಾತಾಡುತ್ತಿರುವ, **ಪಿತರಂ** ತಂದೆಯನ್ನು ಕುರಿತು, **ತಾತ!** ಎಲೋ ತಂದೆಯೇ! **ಏಷಃ** ಇವನು, **ಭೃಗುನಂದನಃ** ಭೃಗುವಂಶಜನಾದ ಋಷಿಯು, **ತವ** ನಿನ್ನ **ಜಾಮಾತಾ** ಅಳಿಯನಾಗಿರುತ್ತಾನೆ, **ಇತಿ** ಹೀಗೆಂದು **ಉವಾಚ** ಹೇಳಿದಳು.

**ತಾತ್ಪರ್ಯ-** ಮನಸ್ಸಿನಲ್ಲಿ ಭೀತಿಗೊಳ್ಳದೇ ಮಂದಹಾಸದಿಂದ ನಗುತ್ತಿರುವ ಆ ಸುಕನ್ಯೆಯು ಈ ರೀತಿ ಮಾತನಾಡುವ ತನ್ನ ತಂದೆಯನ್ನು ಕುರಿತು, ಭೋ ತಾತನೇ! ಈ ಭಾರ್ಗವವಂಶಜನಾದ ಋಷಿಯು ನಿನ್ನ ಅಳಿಯನಾಗಿರುತ್ತಾನೆ ಎಂದು ಹೇಳಿದಳು. ಇಲ್ಲಿ **ಭೃಗುನಂದನ** ಎಂದದ್ದರಿಂದ ನಾನು ವರಿಸಿದ ಜಾರನು ನಿನಗೆ ಅಳಿಯನಂತೆಯೇ ಎಂದಲ್ಲ ನಿಜವಾಗಿ ಮದುವೆ ಮಾಡಿಕೊಟ್ಟ ಪತಿಯೇ ಎಂದು ಸೂಚಿಸುವಳು. ।।೨೨।।

**ಶಶಂಸ ಪಿತ್ರೇ ತತ್ಸರ್ವಂ ವಯೋರೂಪಾಭಿಲಂಭನಮ್ ।**
**ವಿಸ್ಮಿತಃ ಪರಮಃ ಪ್ರೀತಃ ತನಯಾಂ ಪರಿಷಸ್ವಜೇ ।।೨೩।।**

**ಸಾ** ಆ ಸುಕನ್ಯೆಯು, **ಪಿತ್ರೇ** ತಂದೆಗೋಸ್ಕರ, **ವಯೋರೂಪಾಭಿಲಂಭನಂ** ವಯಸ್ಸು, ರೂಪ ಇವುಗಳು ಚ್ಯವನಋಷಿಗಳಿಂದ ಪ್ರಾಪ್ತವಾದ, **ತತ್ಸರ್ವಂ** ಆ ಎಲ್ಲಾ ವೃತ್ತಾಂತವನ್ನು, **ಶಶಂಸ** ಹೇಳಿದಳು. **ವಿಸ್ಮಿತಃ** ಆಶ್ಚರ್ಯಗೊಂಡ **ಪರಮಃ ಪ್ರೀತಃ** ಬಹುಪ್ರೀತನಾದ, ರಾಜನು, **ತನಯಾಂ** ಮಗಳನ್ನು, **ಪರಿಷಸ್ವಜೇ** ಆಲಿಂಗನ ಮಾಡಿಕೊಂಡನು.

**ತಾತ್ಪರ್ಯ-** ಆ ಸುಕನ್ಯೆಯು ತನ್ನ ತಂದೆಗೋಸ್ಕರ ಚ್ಯವನಋಷಿಗಳಿಂದ ಲಭಿಸಿದ ವಯಸ್ಸು, ರೂಪ ಇತ್ಯಾದಿ ಎಲ್ಲ ವಿಷಯಗಳನ್ನು ಹೇಳಿದಳು. ಇದರಿಂದ ಆಶ್ಚರ್ಯಗೊಂಡು, ಪರಮಪ್ರೀತನಾದ ರಾಜನು ತನ್ನ ಮಗಳನ್ನು ಆಲಿಂಗನ ಮಾಡಿಕೊಂಡನು. ।।೨೩।।

**ಸೋಮೇನ ಯಾಜಯನ್ ವೀರಂ ಗ್ರಹಂ ಸೋಮಸ್ಯ ಚಾಗ್ರಹೀತ್ ।**
**ಅಸೋಮಯೋರಪ್ಯಶ್ವಿನೋಶ್ಚ್ಯವನಃ ಸ್ವೇನ ತೇಜಸಾ ।।೨೪।।**

**ಚ್ಯವನಃ** ಚ್ಯವನಋಷಿಯು, **ಸ್ವೇನ** ತನ್ನದಾದ **ತೇಜಸಾ** ತೇಜಸ್ಸಿನಿಂದ (ತಪಸ್ಸಿನ ಪ್ರಭಾವದಿಂದ) **ಅಶ್ವಿನೋಃ** ಆ ಅಶ್ವಿನೀದೇವತೆಗಳಿಗೆ **ಅಸೋಮಯೋಃ ಅಪಿ** ಸೋಮಪಾನರಹಿತರಾಗಿದ್ದರೂ ಸಹ, **ವೀರಂ** ವೀರನಾದ, **ಶರ್ಯಾತಿಂ** ಶರ್ಯಾತಿ ರಾಜನನ್ನು **ಸೋಮೇನ ಯಾಜಯನ್** ಸೋಮಯಾಗವನ್ನು ಮಾಡಿಸುತ್ತಾ, **ಸೋಮಸ್ಯ** ಸೋಮಪಾನದ **ಗ್ರಹಂ** ಪಾತ್ರವಾದ ಆಹುತಿಯನ್ನು, **ಅಗ್ರಹೀತ್** ಪ್ರದಾನ ಮಾಡಿದನು.

**ತಾತ್ಪರ್ಯ-** ಆ ಚ್ಯವನಋಷಿಯು ತನ್ನ ತಪಸ್ಸಿನ ಪ್ರಭಾವದಿಂದ ಅಶ್ವಿನೀದೇವತೆಗಳಿಗೆ ಅವರು ಸೋಮಪಾನ ರಹಿತರಾಗಿದ್ದರೂ ಸಹ ವೀರನಾದ ಶರ್ಯಾತಿರಾಜನಿಂದ ಸೋಮಯಾಗ ಮಾಡಿಸಿ ಅವರಿಗೆ ಸೋಮಪಾನದ ಆಹುತಿಯನ್ನು ಪ್ರದಾನ ಮಾಡಿದನು. ।।೨೪।।

**ಹಂತುಂ ತಮಾದದೇ ವಜ್ರಂ ಸದ್ಯೋಮನ್ಯುರಮರ್ಷಿತಃ ।**
**ಸವಜ್ರಂ ಸ್ತಂಭಯಾಮಾಸ ಭುಜಮಿಂದ್ರಸ್ಯ ಭಾರ್ಗವಃ ॥೨೫॥**

**ಸದ್ಯೋಮನ್ಯುಃ** ಆಗಲೇ ಕ್ರೋಧ ಹೊಂದಿದ, **ಅಮರ್ಷಿತಃ** ಉದ್ವಿಗ್ನನಾದ ಇಂದ್ರನು **ತಂ** ಚ್ಯವನಋಷಿಯನ್ನು, **ಹಂತುಂ** ಸಂಹರಿಸುವುದಕ್ಕೆ, **ವಜ್ರಂ** ವಜ್ರಾಯುಧವನ್ನು, **ಆದದೇ** ಮೇಲಕ್ಕೆ ಎತ್ತಿದನು. **ಭಾರ್ಗವಃ** ಚ್ಯವನ ಋಷಿಯು, **ಇಂದ್ರಸ್ಯ** ಇಂದ್ರನ **ಸವಜ್ರಂ** ವಜ್ರಸಹಿತವಾದ, **ಭುಜಂ** ಭುಜವನ್ನು, **ಸ್ತಂಭಯಾಮಾಸ** ನಿಶ್ಚಲವಾಗಿ ನಿಲ್ಲಿಸಿದನು.

**ತಾತ್ಪರ್ಯ-** ಆಗ ಕೋಪದಿಂದ ಉದ್ವಿಗ್ನನಾದ ಇಂದ್ರನು ಚ್ಯವನ ಋಷಿಯನ್ನು ಸಂಹರಿಸಲು ವಜ್ರಾಯುಧವನ್ನು ಮೇಲಕ್ಕೆ ಎತ್ತಿದನು. ಚ್ಯವನ ಋಷಿಯು ಇಂದ್ರನ ವಜ್ರಸಹಿತವಾದ ಭುಜವನ್ನು ಕೆಳಗೆ ಇಳಿಯದಂತೆ ಸ್ತಂಭದಂತೆ ನಿಲ್ಲಿಸಿದನು. (ಈ ತರಹದ ತಪಃಪ್ರಭಾವದಿಂದ ದೇವೇಂದ್ರನಿಗೆ ತಕ್ಷಣ ಪರಾಭವವಾಯಿತು) ಎಂದು ಭಾವವು. ॥೨೫॥

**ಅನ್ವಜಾನಂಸ್ತತಃ ಸರ್ವೇ ಗ್ರಹಂ ಸೋಮಸ್ಯ ಚಾಶ್ವಿನೋಃ ।**
**ಭಿಷಜಾವಿತಿ ಯತ್ಪೂರ್ವಂ ಸೋಮಾಹುತ್ಯಾ ಬಹಿಷ್ಕೃತೌ ॥೨೬॥**

**ಪೂರ್ವಂ** ಪೂರ್ವದಲ್ಲಿ, **ಯತ್** ಯಾವ ಕಾರಣದಿಂದ **ಭಿಷಜೌ ಇತಿ** ಅವರು ವೈದ್ಯರೆಂದು, **ಸೋಮಾಹುತ್ಯಾ** ಸೋಮದ ಆಹುತಿಯಿಂದ **ಪೂರ್ವಂ** ಆ ಮೊದಲು, **ಬಹಿಷ್ಕೃತೌ** ತಿರಸ್ಕರಿಸಲ್ಪಟ್ಟಿದ್ದರು. **ತತಃ** ಅನಂತರದಲ್ಲಿ, **ಸರ್ವೇ** ಎಲ್ಲಾ ದೇವತೆಗಳು, **ಅಶ್ವಿನೋಃ** ಅಶ್ವಿನೀದೇವತೆಗಳ, **ಸೋಮಸ್ಯ** ಸೋಮರಸದ, **ಗ್ರಹಂ** ಆಹುತಿ ಅಂಗೀಕರಿಸಿರುವುದನ್ನು, **ಅನ್ವಜಾನನ್** ಸಮ್ಮತಿಸಿದರು.

**ತಾತ್ಪರ್ಯ-** ಅನಂತರದಲ್ಲಿ ಎಲ್ಲಾ ದೇವತೆಗಳೂ ಅಶ್ವಿನೀದೇವತೆಗಳ ಸೋಮರಸದ ಆಹುತಿಯನ್ನು ಸಮ್ಮತಿಸಿದರು. ಪೂರ್ವದಲ್ಲಿ ಇವರು ವೈದ್ಯ ವೃತ್ತಿಯವರೆಂದು ಈ ಆಹುತಿಯಿಂದ ರಹಿತರಾಗಿದ್ದರು. ಈಗ ಅವರಿಗೆ ಆಹುತಿ ಕೊಡುವುದನ್ನು ಎಲ್ಲಾ ದೇವತೆಗಳೂ ಸಮ್ಮತಿಸಿದರು. ॥೨೬॥

**ಉತ್ತಾನಬರ್ಹಿರಾನರ್ತೋ ಭೂರಿಷೇಣ ಇತಿ ತ್ರಯಃ ।**
**ಶರ್ಯಾತೇರಭವನ್ ಪುತ್ರಾ ಅನರ್ತಾದ್ರೇವತೋಽಭವತ್ ॥೨೭॥**

**ಶರ್ಯಾತೇಃ** ಶರ್ಯಾತಿರಾಜನಿಗೆ, **ಉತ್ತಾನಬರ್ಹಿಃ** ಉತ್ತಾನಬರ್ಹಿ ಎಂಬುವ **ಆನರ್ತಃ** ಆನರ್ತನೆಂಬುವ, **ಭೂರಿಷೇಣಃ** ಭೂರಿಷೇಣ ಎಂಬ, **ಇತಿ** ಈ ರೀತಿಯಾಗಿ, **ತ್ರಯಃ** ಮೂರು ಜನ **ಪುತ್ರಾಃ** ಮಕ್ಕಳು, **ಅಭವನ್** ಆದರು. **ಅನರ್ತಾತ್** ಅನರ್ತನ ದೆಸೆಯಿಂದ **ರೇವತಃ** ರೇವತನು, **ಅಭವತ್** ಜನಿಸಿದನು.

**ತಾತ್ಪರ್ಯ-** ಶರ್ಯಾತಿ ರಾಜನಿಗೆ ಉತ್ತಾನಬರ್ಹಿ, ಭೂರಿಷೇಣ, ಆನರ್ತ, ಎಂಬುವ ಮೂರುಜನ ಮಕ್ಕಳು ಜನಿಸಿದರು. ಈ ಆನರ್ತನ ದೆಸೆಯಿಂದ ರೇವತನು ಜನಿಸಿದನು. ।।೨೭।।

**ಸೋಽಂತಃ ಸಮುದ್ರೇ ನಗರೀಂ ವಿನಿರ್ಮಾಯ ಕುಶಸ್ಥಲೀಮ್ ।**
**ಆಸ್ಥಿತೋಽಭುಂಕ್ತ ವಿಷಯಾನಾನರ್ತಾದೀನರಿಂದಮ ।।೨೮।।**

**ಅರಿಂದಮ** ಶತ್ರುನಾಶಕನೇ! **ಸಃ** ಆ ರೇವತನು, **ಅಂತಃಸಮುದ್ರೇ** ಸಮುದ್ರ ಮಧ್ಯದಲ್ಲಿ **ಕುಶಸ್ಥಲೀಂ** ಕುಶಸ್ಥಲೀ ಎಂಬ (ದ್ವಾರಕಾ) **ನಗರೀಂ** ನಗರವನ್ನು **ವಿನಿರ್ಮಾಯ** ನಿರ್ಮಿಸಿ, **ಆಸ್ಥಿತಃ** ವಾಸಮಾಡಿದನು. **ಆನರ್ತಾದೀನ್** ಆನರ್ತ ದೇಶವೇ ಮೊದಲಾದ, **ವಿಷಯಾನ್** ದೇಶಗಳನ್ನು, **ಅಭುಂಕ್ತ** ಭೋಗಿಸಿದನು.

**ತಾತ್ಪರ್ಯ-** ಹೇ ಶತ್ರುತಾಪನನೇ! ಆ ರೇವತನು ಸಮುದ್ರದ ಮಧ್ಯದಲ್ಲಿ ದ್ವಾರಕಾ ನಗರವನ್ನು ನಿರ್ಮಿಸಿ ಅಲ್ಲಿ ವಾಸ ಮಾಡಿದನು. ಆನರ್ತದೇಶವೇ ಮೊದಲಾದ ದೇಶಗಳನ್ನು ಪಾಲನ ಮಾಡುತ್ತಾ ಭೋಗಿಸಿದನು. ಈ ದ್ವಾರಕೆಯನ್ನೇ ಕೃಷ್ಣನು ವಿಸ್ತಾರಗೊಳಿಸಿದನು. ಕಾರಣ ರೇವತ ನಿರ್ಮಾಣ ಮಾಡಿದ್ದು ಅಂತ ಕೆಲವೆಡೆ ಇದೆ, ಕೃಷ್ಣ ನಿರ್ಮಿಸಿದ್ದು ಅಂತ ಕಲವು ಕಡೆ ಇದೆ. ಇವುಗಳಲ್ಲಿ ವಿರೋಧವಿಲ್ಲ. ।।೨೮।।

**ತಸ್ಯ ಪುತ್ರಶತಂ ಜಜ್ಞೇ ಕಕುದ್ಮಿಜ್ಯೇಷ್ಠಮುತ್ತಮಮ್ ।**
**ಕಕುದ್ಮೀ ರೇವತೀಂ ಕನ್ಯಾಂ ಸ್ವಾಮಾದಾಯ ವಿಭುಂ ಗತಃ ।।೨೯।।**

**ತಸ್ಯ** ಆ ರೇವತನಿಗೆ, **ಕಕುದ್ಮಿಜ್ಯೇಷ್ಠಂ** ಕಕುದ್ಮಿ ಎಂಬುವನೇ ಹಿರಿಯವನಾಗಿ ಉಳ್ಳ, **ಉತ್ತಮಂ** ಶ್ರೇಷ್ಠರಾದ, **ಪುತ್ರಶತಂ** ನೂರು ಮಕ್ಕಳು, **ಜಜ್ಞೇ** ಹುಟ್ಟಿದರು. **ಕಕುದ್ಮೀ** ಕಕುದ್ಮಿಯು, (ರೇವತನು) **ಸ್ವಾಂ** ತನ್ನವಳಾದ, **ಕನ್ಯಾಂ** ಮಗಳಾದ, **ರೇವತೀಂ** ರೇವತಿಯನ್ನು, **ಆದಾಯ** ಕರೆದುಕೊಂಡು, **ವಿಭುಂ** ಬ್ರಹ್ಮನನ್ನು ಕುರಿತು **ಗತಃ** ಹೋದನು.

**ತಾತ್ಪರ್ಯ-** ಆ ರೇವತನಿಗೆ, ಕಕುದ್ಮೀ ಎಂಬ ಹಿರಿಯ ಮಗನು, ನಂತರ ತೊಂಭತ್ತೊಂಭತ್ತು ಹೀಗೆ, ನೂರು ಜನ ಉತ್ತಮ ಮಕ್ಕಳು ಜನಿಸಿದರು. ಈ ರೇವತನು ತನ್ನ ಮಗಳಾದ ರೇವತಿಯನ್ನು ಕರೆದುಕೊಂಡು ಬ್ರಹ್ಮದೇವನ ಹತ್ತಿರ ಹೋದನು.

ಈ ಶ್ಲೋಕದಲ್ಲಿ ಮುಂದೆ ರೇವತೀವೃತ್ತಾಂತ ಹೇಳುವುದರಿಂದ ರೇವತೀ ಎಂಬ ಮಗಳೂ ಸಹ ಜನಿಸಿದಳು ಎಂದು ಇಟ್ಟುಕೊಳ್ಳಬೇಕು. ಶ್ಲೋಕದ ಉತ್ತರಾರ್ಧದಲ್ಲಿ

ಕಕುದ್ಮಿ ಎಂಬ ಸ್ಥಳದಲ್ಲಿ ರೇವತೋ ಎಂದಿದ್ದರೆ ಅನುಕೂಲವಾಗುವುದು. ದಶಮಸ್ಕಂಧದಲ್ಲಿ **ಪೂರ್ವಂ** ಪೂರ್ವದಲ್ಲಿ, **ಯತ್** ಯಾವ ಕಾರಣದಿಂದ **ಭಿಷಜೌ ಇತಿ** ಅವರು ವೈದ್ಯರೆಂದು, **ಸೋಮಾಹುತ್ಯಾ** ಸೋಮದ ಆಹುತಿಯಿಂದ **ಪೂರ್ವಂ** ಆ ಮೊದಲು, **ಬಹಿಷ್ಕೃತೌ** ತಿರಸ್ಕರಿಸಲ್ಪಟ್ಟಿದ್ದರು. **ರೇವತೋ ರೇವತೀಂ ಸುತಾಮ್** ''ರೇವತೋ ನಾಮ ರಾಜಾಸೀತ್'' ''ತತಸ್ತಾನ್ ರೇವತಃ ಪ್ರಾಹ'' ಎಂದು ವಾಕ್ಯಗಳಿರುವುವು. ಅದರಂತೆ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ''ಸ ರೇವತೋ ಬಲಾಯ ತಾಂ'' ಎಂದು ಇದೆ. ಇನ್ನು ''ಕಕುದ್ಮೀ ರೇವತೀಂ ಕನ್ಯಾಂ'' ಎಂಬ ಉತ್ತರಾರ್ಧದಲ್ಲಿ ಕಕುದ್ಮಿ ಎಂಬ ಶಬ್ದಕ್ಕೆ ಮೇಲೆ ಉದಾಹರಿಸಿದ ಪ್ರಮಾಣದಂತೆ ರೇವತ ಎಂದೇ ಅರ್ಥವನ್ನು ಹೇಳಬೇಕು. ಹಾಗಾದರೆ ಇಲ್ಲಿ ತಂದೆಯಾದ ರೇವತನನ್ನು ಮಗನಾದ ಕಕುದ್ಮಿಯ ಹೆಸರಿನಿಂದ ಕರೆದಂತಾಯಿತಲ್ಲ ಎಂದರೆ, ಇದು ವಿರುದ್ಧವಲ್ಲ. ಲೋಕಶಾಸ್ತ್ರಗಳಲ್ಲಿ ಈ ರೀತಿ ಪ್ರಯೋಗವು ಬಹಳ ಇದೆ.

ಮೊಮ್ಮಕ್ಕಳನ್ನು ಅಜ್ಜನ ಹೆಸರಿನಿಂದ ಕರೆಯುವುದುಂಟು ಇದರಂತೆ, ''ಗೋಭಿಃ ಶ್ರೀಣೀತ ಮತ್ಸರಂ'' ಎನ್ನುವಲ್ಲಿ, ಕಾರಣವಾಚಕವಾದ ಗೋಶಬ್ದವನ್ನು ಕಾರ್ಯವಾದ ಗೋಕ್ಷೀರದಲ್ಲಿ ಪ್ರಯೋಗಿಸಿರುವರು. (ಸೋಮರಸವನ್ನು ಗೋಕ್ಷೀರದಿಂದ ಮಿಶ್ರಣ ಮಾಡಬೇಕೆಂದು ಮೇಲಿನ ವಾಕ್ಯದ ಅರ್ಥವು). ಮತ್ತು **ಬ್ರಹ್ಮಾದಿಕಂ ಮುಖಂ** ಎಂಬಲ್ಲಿ ಮುಖಜನ್ಯರಾದ ಬ್ರಾಹ್ಮಣ ವರ್ಣದಲ್ಲಿ, ಜನಕವಾದ ಮುಖಶಬ್ದವನ್ನು ಉಪಯೋಗಿಸಿರುವರು. **ಮಹತಶ್ಚತುರ್ಮುಖಾತ್** ಎಂಬುವಲ್ಲಿ ಅಭಿಮನ್ಯಮಾನವಾಚಕವಾದ ಮಹಚ್ಛಬ್ಧವನ್ನು ಅಭಿಮಾನಿಯಾದ ಚತುರ್ಮುಖನಲ್ಲಿ ಉಪಯೋಗಿಸಿರುವರು. **ಯಮಗ್ನಿಂ ಮೇಧ್ಯಾತಿಥಿಃ ಕಣ್ವಃ** ಎಂಬ ಋಗ್ಭಾಷ್ಯ ಟೀಕೆಯಲ್ಲಿ ತಂದೆ ಮಕ್ಕಳಲ್ಲಿ ಉಪಚಾರದಿಂದ ಅಭೇದವನ್ನು ಅಂಗೀಕರಿಸಿ ಕಣ್ವಸುತನೆಂದು ಅರ್ಥ ಮಾಡಿರುವರು. ಈ ಎಲ್ಲ ಪ್ರಯೋಗಾನುಸಾರ ಮತ್ತು **ಸ್ವಾಂ ಕನ್ಯಾಂ** ಎಂಬ ವಾಕ್ಯಕ್ಕೆ ಸ್ವರಸವಾದ ಅರ್ಥವಾಗಲು ಕಕುದ್ಮಿ ಎಂದರೇ ರೇವತನೆಂದೇ ಅರ್ಥವನ್ನು ತಿಳಿಯಬೇಕು. ।।೨೯।।

**ಪುತ್ರ್ಯಾ ವರಂ ಪರಿಪ್ರಷ್ಟುಂ ಬ್ರಹ್ಮಲೋಕಮಪಾವೃತಮ್ ।**
**ಆವರ್ತಮಾನೇ ಗಾಂಧರ್ವೇ ಸ್ಥಿತೋಽಲಬ್ಧಕ್ಷಣಃ ಕ್ಷಣಮ್ ।।೩೦।।**

**ಅಪಾವೃತಂ** ಪ್ರಕಾಶಮಾನವಾದ, **ಬ್ರಹ್ಮಲೋಕಂ** ಬ್ರಹ್ಮಲೋಕವನ್ನು, **ಪುತ್ರ್ಯಾಃ** ತನ್ನ ಮಗಳಿಗೆ, **ಅಪಾವೃತಂ** ತೇಜಸ್ವಿಯಾದ, **ವರಂ** ವರನನ್ನು **ಪರಿಪ್ರಷ್ಟುಂ** ಕೇಳಿ ತಿಳಿದುಕೊಳ್ಳುವುದಕ್ಕಾಗಿ, **ಗತಃ** ಹೋದನು. **ಗಾಂಧರ್ವೇ** ಗಂಧರ್ವಗಾನವು

**ಆವರ್ತಮಾನೇ** ವಿಶೇಷವಾಗಿ ನಡೆಯುತ್ತಿರಲು, **ಅಲಬ್ಧಕ್ಷಣಃ** ಅವಕಾಶ ದೊರೆಯದವನಾಗಿ, **ಕ್ಷಣಂ** ಸ್ವಲ್ಪಕಾಲ **ಸ್ಥಿತಃ** ಸುಮ್ಮನೆ ನಿಂತನು.

**ತಾತ್ಪರ್ಯ-** ಈ ರಾಜನು ಪ್ರಕಾಶಮಾನವಾದ ಬ್ರಹ್ಮಲೋಕದಲ್ಲಿರುವ ಬ್ರಹ್ಮದೇವರನ್ನು, ತನ್ನ ಮಗಳಿಗೆ ತೇಜಸ್ವಿಯಾದ ವರ ಯಾರು? ಎಂಬುದನ್ನು ಕೇಳುವುದಕ್ಕಾಗಿ ಆ ಬ್ರಹ್ಮದೇವರ ಸಭೆಗೆ ಹೋದನು. ಅಲ್ಲಿ ಗಂಧರ್ವರು ಗಾನ ಮಾಡುತ್ತಿರಲು, ಪ್ರಶ್ನೆ ಕೇಳಲು ಅವಕಾಶ ದೊರೆಯದೇ ಕ್ಷಣಕಾಲ ತಟಸ್ಥನಾಗಿ ನಿಂತನು.

**ತದಂತೇ ವಿಭುಮಾನಮ್ಯ ಸ್ವಾಭಿಪ್ರಾಯಂ ನ್ಯವೇದಯತ್ ।**
**ತಚ್ಛ್ರುತ್ವಾ ಭಗವಾನ್ ಬ್ರಹ್ಮಾ ಪ್ರಹಸ್ಯ ತಮುವಾಚ ಹ ॥೩೧॥**

**ತದಂತೇ** ಗಾನ ಮುಗಿದ ನಂತರದಲ್ಲಿ, **ವಿಭುಂ** ಬ್ರಹ್ಮನನ್ನು, **ಆನಮ್ಯ** ನಮಸ್ಕರಿಸಿ, **ಸ್ವಾಭಿಪ್ರಾಯಂ** ತನ್ನ ಅಭಿಲಾಷೆಯನ್ನು, **ನ್ಯವೇದಯತ್** ಹೇಳಿಕೊಂಡನು. **ಭಗವಾನ್** ಪೂಜ್ಯನಾದ **ಬ್ರಹ್ಮಾ** ಬ್ರಹ್ಮನು, **ತಚ್ಛ್ರುತ್ವಾ** ಅದನ್ನು ಕೇಳಿ, **ಪ್ರಹಸ್ಯ** ನಕ್ಕು, **ತಂ** ರೇವತನನ್ನು ಕುರಿತು, **ಉವಾಚ** ಹೇಳಿದನು. ॥೩೧॥

**ತಾತ್ಪರ್ಯ-** ಗಂಧರ್ವಗಾನ ಮುಗಿಯುತ್ತಿರಲು ರೇವತನು ಬ್ರಹ್ಮದೇವರಿಗೆ ನಮಸ್ಕರಿಸಿದನು. ತನ್ನ ಮನದ ಅಭಿಲಾಷೆಯನ್ನು ಬ್ರಹ್ಮದೇವರ ಮುಂದೆ ಹೇಳಿಕೊಂಡನು. ಪೂಜ್ಯರಾದ ಬ್ರಹ್ಮದೇವರು ರೇವತನ ಮಾತನ್ನು ಕೇಳಿ ನಕ್ಕನು. ನಂತರ ರೇವತನನ್ನು ಕುರಿತು ಹೀಗೆ ಹೇಳಿದನು.

**ಅಹೋ ರಾಜನ್ನಿರುದ್ಧಾಸ್ತೇ ಕಾಲೇನ ಹೃದಿ ಯೇ ಕೃತಾಃ ।**
**ತತ್ಪುತ್ರಪುತ್ರನಪ್ತ್ರೂಣಾಂ ಗೋತ್ರಾಣಿ ನ ಚ ಶೃಣ್ಮಹೇ ॥೩೨॥**

**ರಾಜನ್** ಹೇ ರಾಜನ್! **ಯೇ** ಯಾರು, **ಹೃದಿ** ನಿನ್ನ ಮನಸ್ಸಿನಲ್ಲಿ, **ಕೃತಾಃ** ಯೋಚಿಸಲ್ಪಟ್ಟಿದ್ದಾರೋ, **ತೇ** ಆ ರಾಜರೆಲ್ಲಾ, **ಕಾಲೇನ** ಕಾಲಾನುಸಾರ, **ನಿರುದ್ಧಾಃ** ಮರಣ ಹೊಂದಿರುವರು. ಅಲ್ಲದೇ, **ತತ್ಪುತ್ರಪುತ್ರನಪ್ತ್ರೂಣಾಂ** ಆತನ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳ, **ಗೋತ್ರಾಣಿ** ಗೋತ್ರಗಳನ್ನು **ನ ಶೃಣ್ಮಹೇ** ನಾವು ಕೇಳುತ್ತಾ ಇಲ್ಲಾ.

**ತಾತ್ಪರ್ಯ-** ಹೇ ರಾಜನೇ, ಯಾರು ನಿನ್ನ ಮನಸ್ಸಿನಲ್ಲಿ ವರನೆಂದು ಯೋಚಿಸಲ್ಪಟ್ಟಿದ್ದಾರೋ ಆ ರಾಜರೆಲ್ಲರೂ ಕಾಲವಶರಾಗಿ ಮರಣ ಹೊಂದಿರುತ್ತಾರೆ. ಅವರ ಮಕ್ಕಳು ಮೊಮ್ಮಕ್ಕಳು, ಮರಿಮಕ್ಕಳೆಲ್ಲರೂ, ಮೃತರಾಗಿರುತ್ತಾರೆ, ಅವರ ಗೋತ್ರಗಳನ್ನು ಸಹ ನಾವು ಕೇಳುತ್ತಾ ಇಲ್ಲ. ॥೩೨॥

**ಮುಹೂರ್ತಂ ಶೃಣ್ವತೋಽಶ್ರಾವ್ಯಂ ಪ್ರತಿಯಾತಸ್ಯ ತೇಽನಘ ।**
**ಕಾಲೋ ಯಾತಸ್ತ್ರಿನವಭಿಶ್ಚತುರ್ಯುಗವಿಕಲ್ಪಿತಃ ॥೩೩॥**

**ಹೇ ಅನಘ** ಎಲೈ ಪಾಪರಹಿತನೇ! **ಪ್ರತಿಯಾತಸ್ಯ** ಬಂದಂಥಾ, **ಅಶ್ರಾವ್ಯಂ** ಮನುಷ್ಯರಿಂದ ಕೇಳಲಿಕ್ಕೆ ಅಯೋಗ್ಯವಾದ ಗಾನವನ್ನು, **ಮುಹೂರ್ತಂ** ಒಂದು ಮುಹೂರ್ತಕಾಲ, **ಶೃಣ್ವತಃ** ಕೇಳುತ್ತಿರುವ, **ತೇ** ನಿನಗೆ, **ತ್ರಿನವಭಿಃ** ಇಪ್ಪತ್ತೇಳು **ಚತುರ್ಯುಗವಿಕಲ್ಪಿತಃ** ಮಹಾಯುಗಗಳಿಂದ ಯುಕ್ತವಾದ **ಕಾಲಃ** ಕಾಲವು **ಯಾತಃ** ಗತಿಸಿತು.

**ತಾತ್ಪರ್ಯ-** ಹೇ ಪಾಪದೂರನೇ! ಇಲ್ಲಿಗೆ ಬಂದು ಇಲ್ಲಿ ಮಾನವರಿಂದ ಕೇಳಲಿಕ್ಕೆ ಯೋಗ್ಯವಲ್ಲದ ಗಾನವನ್ನು ಒಂದು ಮುಹೂರ್ತಕಾಲ ಕೇಳುತ್ತಿರುವ ನಿನಗೆ ಇಪ್ಪತ್ತೇಳು ಮಹಾಯುಗಗಳು ಕಳೆದವು. ॥೩೩॥

**ತದ್ಗಚ್ಛ ದೇವದೇವಾಂಶೋ ಬಲದೇವೋ ಮಹಾಬಲಃ ।**
**ಕನ್ಯಾರತ್ನಮಿದಂ ರಾಜನ್ ನರರತ್ನಾಯ ದೇಹಿ ಭೋ ॥೩೪॥**

**ಭೋ ಹೇ ರಾಜನ್**! ಎಲೋ ರಾಜನೇ! **ದೇವದೇವಾಂಶಃ** ಭಗವಂತನ ಶುಕ್ಲಕೇಶ ಅಂಶದಿಂದ ಕೂಡಿದ, **ಮಹಾಬಲಃ** ಮಹಾಬಲಿಷ್ಠನಾದ, **ಬಲದೇವಃ** ಬಲರಾಮನು, **ವರ್ತತೇ** ಇರುವನು, **ತದ್ಗಚ್ಛ** ಅವನನ್ನು ಕುರಿತು ಹೋಗು, **ಇದಂ** ಈ **ಕನ್ಯಾರತ್ನಂ** ಕನ್ಯಾರತ್ನವನ್ನು, **ನರರತ್ನಾಯ** ಆ ನರಶ್ರೇಷ್ಠನಿಗೆ, **ದೇಹಿ** ದಾನಮಾಡು.

**ತಾತ್ಪರ್ಯ-** ಹೇ ರಾಜನೇ! ಶುಕ್ಲಕೇಶಾವೇಶದಿಂದ ಕೂಡಿದ ಬಲರಾಮನು ಈಗ ಭೂಲೋಕದಲ್ಲಿದ್ದಾನೆ. ನೀನು ಅವನಲ್ಲಿಗೆ ಹೋಗಿ ಈ ಕನ್ಯಾರತ್ನವನ್ನು ಆ ಮಾನವಶ್ರೇಷ್ಠನಿಗೆ ದಾನಮಾಡು. ॥೩೪॥

**ಭುವೋ ಭಾರಾವತಾರಾಯ ಭಗವಾನ್ ಭೂತಭಾವನಃ ।**
**ಅವತೀರ್ಣೋ ನಿಜಾಂಶೇನ ಪುಣ್ಯಶ್ರವಣಕೀರ್ತನಃ ॥೩೫॥**

**ಭೂತಭಾವನಃ** ಜಗದುತ್ಪಾದಕನಾದ, **ಪುಣ್ಯಶ್ರವಣಕೀರ್ತನಃ** ಪವಿತ್ರವಾದ ಶ್ರಾವ್ಯವಾದ ನಾಮಧೇಯ ಉಳ್ಳ, **ಭಗವಾನ್** ಭಗವಂತನು, **ಭುವಃ** ಭೂಮಿಯ **ಭಾರಾವತಾರಾಯ** ಭಾರವನ್ನು ಇಳಿಸುವುದಕ್ಕಾಗಿ, **ಅವತೀರ್ಣಃ** ಅವತರಿಸಿರುವನು, (**ಇತಿ** ಈ ಕಾರಣ **ತತ್ಸೇವಾರ್ಥಂ** ಪರಮಾತ್ಮನ ಸೇವೆಗಾಗಿ) ಶೇಷದೇವರು, **ನಿಜಾಂಶೇನ** ಒಂದಂಶದಿಂದ, **ಅವತೀರ್ಣಃ** ಬಲರಾಮನಾಗಿ ಅವತರಿಸಿರುವರು.

**ತಾತ್ಪರ್ಯ-** ಜಗತ್ಸೃಷ್ಟಿಕರ್ತನಾದ ಉತ್ತಮವಾದ ನಾಮಧೇಯ ಉಳ್ಳ ಭಗವಂತನು, ಭೂಭಾರ ಇಳಿಸುವುದಕ್ಕಾಗಿ ಶ್ರೀಕೃಷ್ಣನಾಗಿ ಅವತರಿಸಿರುವನು. ಈ ಕಾರಣದಿಂದ ಭಗವಂತನ ಸೇವೆಗಾಗಿ ಶೇಷಾಂಶನಾದ ಬಲರಾಮನು ಅವತರಿಸಿರುವನು. ।।೩೫।।

**ಇತ್ಯಾದಿಷ್ಟೋಽಭಿವಂದ್ಯಾಜಂ ನೃಪಃ ಸ್ವಪುರಮಾಗತಃ ।**
**ತ್ಯಕ್ತಾಂ ಪುಣ್ಯಜನತ್ರಾಸಾತ್ ಭ್ರಾತೃಭಿರ್ದಿಕ್ಷ್ವವಸ್ಥಿತೈಃ ।।೩೬।।**

**ಇತಿ** ಈ ರೀತಿಯಾಗಿ **ಆದಿಷ್ಟಃ** ಆಜ್ಞಪ್ತನಾದ, **ನೃಪಃ** ರೈವತರಾಜನು, **ಅಜಂ** ಬ್ರಹ್ಮನನ್ನು **ಅಭಿವಂದ್ಯ** ನಮಸ್ಕರಿಸಿ, **ಪುಣ್ಯಜನತ್ರಾಸಾತ್** ರಾಕ್ಷಸರ ಭಯದಿಂದ, **ದಿಕ್ಷು** ದಿಕ್ಕುಗಳಲ್ಲಿ, **ಅವಸ್ಥಿತೈಃ** ಇರತಕ್ಕ **ಭ್ರಾತೃಭಿಃ** ಸಹೋದರರಿಂದ, **ತ್ಯಕ್ತಾಂ** ಬಿಡಲ್ಪಟ್ಟ, **ಸ್ವಪುರಂ** ತನ್ನ ಪಟ್ಟಣವನ್ನು ಕುರಿತು **ಆಗತಃ** ಬಂದನು.

**ತಾತ್ಪರ್ಯ-** ಈ ರೀತಿ ಆಜ್ಞಪ್ತನಾದ ರೈವತರಾಜನು ಬ್ರಹ್ಮದೇವರಿಗೆ ನಮಸ್ಕರಿಸಿ ರಾಕ್ಷಸರ ಭಯದಿಂದ ದಿಕ್ಕು ದಿಕ್ಕುಗಳಲ್ಲಿ ವಾಸಮಾಡಿದ ಸಹೋದರರಿಂದ ಬಿಡಲ್ಪಟ್ಟ ತನ್ನ ನಗರವನ್ನು ಕುರಿತು ಬಂದನು. ।।೩೬।।

**ಸುತಾಂ ದತ್ವಾಽನವದ್ಯಾಂಗೀಂ ಬಲಾಯ ಬಲಶಾಲಿನೇ ।**
**ಬದರ್ಯಾಖ್ಯಂ ಯಯೌ ರಾಜಾ ತಪ್ತುಂ ನಾರಾಯಣಾಶ್ರಮಮ್।।೩೭।।**

**ರಾಜಾ** ರೈವತರಾಜನು, **ಅನವದ್ಯಾಂಗೀಂ** ಸುಂದರಾವಯವಗಳುಳ್ಳ, **ಸುತಾಂ** ಮಗಳನ್ನು, **ಬಲಶಾಲಿನೇ** ಬಲಿಷ್ಠನಾದ, **ಬಲಾಯ** ಬಲರಾಮನಿಗೋಸ್ಕರ, **ದತ್ವಾ** ಕೊಟ್ಟು, **ತಪ್ತುಂ** ತಪಸ್ಸು ಮಾಡುವುದಕ್ಕಾಗಿ, **ಬದರ್ಯಾಖ್ಯಂ** ಬದರೀ ಎಂಬುವ **ನಾರಾಯಣಾಶ್ರಮಂ** ನಾರಾಯಣಾಶ್ರಮವನ್ನು ಕುರಿತು, **ಯಯೌ** ಹೋದನು.

**ತಾತ್ಪರ್ಯ-** ರೈವತರಾಜನು ಸುಂದರಾವಯವಗಳುಳ್ಳ ಮಗಳನ್ನು ಬಲಶಾಲಿಯಾದ ಬಲರಾಮನಿಗೋಸ್ಕರ ಪ್ರದಾನಮಾಡಿ ತಪವನ್ನು ಮಾಡುವುದಕ್ಕಾಗಿ ಬದರಿ ಎಂಬುವ ನಾರಾಯಣಾಶ್ರಮವನ್ನು ಕುರಿತು ಹೋದನು. ।।೩೭।।

**।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಚತುರ್ಥೋಽಧ್ಯಾಯಃ ।।**

★★★

## ಅಥ ಪಂಚಮೋಽಧ್ಯಾಯಃ

**ಶ್ರೀ ಶುಕ ಉವಾಚ-**

**ನಾಭಾಗೋಽನ್ಯಸ್ತತಃ ಪ್ರಾಜ್ಞೋ ಯಂ ಮತ್ವಾ ಭ್ರಾತರಃ ಕವಿಮ್ ।**
**ಯವಿಷ್ಠಂ ವ್ಯಭಜನ್ ದಾಯಂ ಬ್ರಹ್ಮಚಾರಿಣಮಾಹ ಸಃ ॥೧॥**

**ತತಃ** ದಿಷ್ಟನ ಮಗನಾದ ನಾಭಾಗನಿಂದ, **ಅನ್ಯಃ** ಬೇರೆಯವನಾದ (ಮನು-ಪುತ್ರನಾದ) **ನಾಭಾಗಃ** ನಾಭಾಗನೆಂಬ ಮನುಪುತ್ರನು **ಆಸೀತ್** ಇದ್ದನು. **ಭ್ರಾತರಃ** ಅಣ್ಣಂದಿರು, **ಯಂ** ಯಾವಾತನನ್ನು, **ಯವಿಷ್ಠಂ** ಕನಿಷ್ಠನಾದ, **ಬ್ರಹ್ಮಚಾರಿಣಂ** ಗುರುಕುಲದಲ್ಲಿ ವಾಸಮಾಡಿದ **ಕವಿಂ** ಜ್ಞಾನಿಯನ್ನಾಗಿ **ಮತ್ವಾ** ತಿಳಿದು **ದಾಯಂ** ಆಸ್ತಿ ವಿಭಾಗವನ್ನು, **ವ್ಯಭಜನ್** ತಮ್ಮಲ್ಲಿ (ಅವನಿಗೆ ವಿಭಾಗ ಕೊಡದೇ) ವಿಭಾಗ ಮಾಡಿಕೊಂಡರು. **ಪ್ರಾಜ್ಞಃ** ತ್ರಿಕಾಲಜ್ಞಾನಿಯಾದ, **ಸಃ** ಆ ನಾಭಾಗನು, **ಆಹ** ಗುರುಕುಲದಿಂದ ಬಂದವನಾಗಿ ಅಣ್ಣಂದಿರನ್ನು ಕುರಿತು ಹೇಳಿದನು.

**ತಾತ್ಪರ್ಯ-** ದಿಷ್ಟನ ಪುತ್ರನಾದ ನಾಭಾಗನಿಂದ ಭಿನ್ನನಾದ, ಮನುಪುತ್ರನಾದ ತ್ರಿಕಾಲಜ್ಞಾನಿಯಾದ ನಾಭಾಗನು ಇದ್ದನು. ಈತನು ವಿವಾಹ ಮಾಡಿಕೊಳ್ಳದೇ ಗುರುಕುಲಕ್ಕೆ ಹೋಗಿದ್ದನು. ಈತನು ಆತ್ಮಜ್ಞಾನಿಯಾದ್ದರಿಂದ ಆಸ್ತಿಯಲ್ಲಿ ಆಶೆ ಇಲ್ಲವೆಂದು ತಿಳಿದ ಅವನ ಸಹೋದರರು ಆಸ್ತಿಯನ್ನು ತಮ್ಮಲ್ಲೇ ವಿಭಾಗ ಮಾಡಿಕೊಂಡರು. ಈ ನಾಭಾಗನು ಗುರುಕುಲದಿಂದ ಮರಳಿ ಬಂದು ಸಹೋದರರನ್ನು ಕುರಿತು ಹೇಳಿದನು.

ಇಲ್ಲಿನಾಭಾಗ ಶಬ್ದವು **ನಭಗಸ್ಯ ಅಪತ್ಯ** (ಮಗ) ಎಂಬ ಅರ್ಥದಲ್ಲಿಇರುವುದಿಲ್ಲ. ಹಾಗಿದ್ದಲ್ಲಿ ಮೊದಲನೇ ವರ್ಣಕ್ಕೆ ಮಾತ್ರ ವೃದ್ಧಿಯು ಬಂದು ''ನಾಭಗಃ'' ಎಂದು ಆಗಬೇಕಿತ್ತು . ಆದರೆ ನಾಭಾಗ ಎಂದು ಇದ್ದದ್ದರಿಂದ ಬೇರೆ ಪ್ರವೃತ್ತಿನಿಮಿತ್ತವನ್ನು ಹೇಳಬೇಕು. ಹೇಗೆಂದರೆ? ''ನ ಭಾಗಃ ದಾಯವಿಭಾಗಃ ಯಸ್ಯ ಸಃ ಅಭಾಗಃ ಅಭಾಗೋ ನ ಭವತಿ ಇತಿ ನಾಭಾಗಃ'' ಇದು ಸಮಾಸವಾದ್ದರಿಂದ ''ಅನಭಾಗ'' ಎಂದು ಆಗಿರುವುದಿಲ್ಲ. ಈ ರೀತಿ ನಿರ್ವಚನ ಮಾಡಿದ್ದರಿಂದ ಅವನಿಗೆ ಉಳಿದ ಅಣ್ಣಂದಿರಿಗಿಂತ ಅತಿಶಯವಾದ ಭೋಗಸಾಧನದ ಭಾಗವಿದ್ದಿತು, ಎಂದು ತಿಳಿಯುವುದು. ಇತರರಿಗೆ ತಂದೆಯಿಂದ ಬಂದ ಧನ ಭಾಗವಷ್ಟೇ ಇದ್ದಿತು ಇವನಿಗೆ ಮಾತ್ರ ರುದ್ರದೇವರ ಅನುಗ್ರಹದಿಂದ ಉಂಟಾದ ಮೋಕ್ಷಸಾಧನವಾದ ಜ್ಞಾನಸಂಪತ್ತು , ಮತ್ತು ಸತ್ರದಲ್ಲಿ ಉಳಿದ ಧನಸಂಪತ್ತು , ಎರಡೂ ಇದ್ದದ್ದರಿಂದ, ಇತರರಿಗಿಂತ ಅತಿಶಯವು. ಮೇಲೆ ಎರಡು ನಿಷೇಧಗಳಿರುವ ನಿರ್ವಚನದಿಂದ, ಇವನು ಮುಖ್ಯಭಾಗವುಳ್ಳವನು ಎಂದು ತಿಳಿಯುವುದು. ಆದ್ದರಿಂದ ''ನಾಭಾಗಃ'' ಎನ್ನುವ ಪ್ರಯೋಗ ಸಾಧುವಾಗಿದೆ. ॥೧॥

ಪ್ರಶ್ನಪ್ರಕಾರವನ್ನು ಹೇಳುತ್ತಾರೆ -

**ಭ್ರಾತರೋಽಭಾಂಕ್ತ ಕಿಂ ಮಹ್ಯಂ ಭಜಾನ ಪಿತರಂ ತವ ।**
**ಕಿಂ ಮ ಆರ್ಯಾಸ್ತತಾಭಾಂಕ್ಷುರ್ಮಾ ಪುತ್ರಕ ತದಾದೃಥಾಃ ॥೨॥**

**ಹೇ ಭ್ರಾತರಃ** ಎಲೋ ಸಹೋದರರನೇ! (ಯೂಯಂ ನೀವುಗಳು) **ಮಹ್ಯಂ** ನನಗೋಸ್ಕರ, **ಕಿಂ ಅಭಾಂಕ್ತ** ಏನು ವಿಭಾಗ ಮಾಡಿದಿರಿ ಎಂದು ಪ್ರಶ್ನಿಸಿದನು, ಅಣ್ಣಂದಿರು ಉತ್ತರ ಹೇಳಿದರು. ಎಲೋ ನಾಭಾಗನೇ! **ತವ** ನಿನ್ನ, **ಪಿತರಂ** ತಂದೆಯಾದ ವೈವಸ್ವತಮನುವನ್ನು ಕುರಿತು **ಅನ** ಹೋಗು. ಅನಂತರದಲ್ಲಿ **ಪಿತರಂ** ತಂದೆಯನ್ನು **ಭಜ** ಸೇವಿಸು ವಿಚಾರಿಸು. ಈತನು ತಂದೆಯಲ್ಲಿ ಸಹೋದರರಿಂದ ಸಹಿತ ಹೋಗಿ **ಹೇ ತಾತ !** ಎಲೋ ತಂದೆಯೇ! **ಮೇ** ನನ್ನ **ಆರ್ಯಾಃ** ಅಣ್ಣಂದಿರು **ಕಿಂ ಅಭಾಂಕ್ಷುಃ** ನಾನು ಗುರುಕುಲಕ್ಕೆ ಹೋದಾಗ ನನಗೆ ಏನು ವಿಭಾಗ ಮಾಡಿದ್ದಾರೆ. ಎಂದು ಕೇಳಿದನು. ಆಗ ತಂದೆಯು ಹೇಳಿದನು. **ಹೇ ಪುತ್ರಕ!** ಎಲೋ ಮಗನೇ! **ತತ್** ಆದಾಯ ವಿಷಯದಲ್ಲಿ **ಮಾ ಆದೃಥಾಃ** ಆದರ ಮಾಡಬೇಡ.

**ತಾತ್ಪರ್ಯ-** ಹೇ ಸಹೋದರರನೇ! ನೀವುಗಳು ನನಗೋಸ್ಕರ ಏನು ವಿಭಾಗ ಮಾಡಿದಿರಿ ಎಂದು ನಾಭಾಗನು ಕೇಳಿದನು. ಇದಕ್ಕೆ ಅಣ್ಣಂದಿರು ''ನಾಭಾಗನೇ! ನಿನ್ನ ತಂದೆಯಾದ ವೈವಸ್ವತ ಮನುವನ್ನು ಕುರಿತು ಹೋಗು, ಅವನನ್ನು ಸೇವಿಸು, ವಿಚಾರಿಸು'' ಎಂದು ಹೇಳಿದರು. ಆತನು ಸಹೋದರಸಹಿತನಾಗಿ ಹೋಗಿ ''ತಂದೆಯೇ ನನ್ನ ಅಣ್ಣಂದಿರು ನಾನು ಗುರುಕುಲಕ್ಕೆ ಹೋದಾಗ ನನಗೆ ಏನು ವಿಭಾಗ ಮಾಡಿದ್ದಾರೆ. ಏಕೆ ಭಾಗ ಕೊಡಲಿಲ್ಲ'' ಎಂದು ಕೇಳಿದನು. ಆಗ ತಂದೆಯು ''ಹೇ ಮಗನೇ ! ಆದಾಯ ವಿಷಯದಲ್ಲಿ ಆದರ ಮಾಡಬೇಡ'' ಎಂದನು.

ನನ್ನ ಜೀವನೋಪಾಯವೇನೆಂದು ನಾಭಾಗನು ತಂದೆಯನ್ನು ಕೇಳಲು ತಂದೆಯು ಹೇಳುತ್ತಾನೆ. -

**ಇಮೇ ಅಂಗೀರಸಸ್ಸತ್ರಮಾಸತೇಽದ್ಯ ಸುಮೇಧಸಃ ।**
**ಷಷ್ಠಂ ಷಷ್ಠಮುಪೇತ್ಯಾಹಃ ಕವೇ ಮುಹ್ಯಂತಿ ಕರ್ಮಣಿ ॥೩॥**

**ಹೇ ಕವೇ!** ನಾಭಾಗನೇ! **ಸುಮೇಧಸಃ** ಒಳ್ಳೇ ಜ್ಞಾನಿಗಳಾದ, **ಇಮೇ ಅಂಗೀರಸಃ** ಈ ಅಂಗೀರಸನು (ಋಷಿಗಳು) **ಸತ್ರಂ** ಯಾಗವನ್ನು **ಆಸತೇ** ಮಾಡುತ್ತಾರೆ. **ತೇ** ಆ ಋಷಿಗಳು, **ಷಷ್ಠಂ ಷಷ್ಠಂ ಅಹಃ (ಪ್ರತಿ)** ಆರನೇ ಆರನೇ ದಿವಸವನ್ನು **ಉಪೇತ್ಯ** ಹೊಂದಿ **ಕರ್ಮಣಿ** ಆರನೇ ದಿನದ ಕ್ರಿಯಾವಿಶೇಷದಲ್ಲಿ (ಆರನೇ ದಿನದಲ್ಲಿನ ಮಾಡತಕ್ಕ ವಿಶ್ವೇದೇವ ಸಂಬಂಧಿಯಾದ ಯಾಗದಲ್ಲಿ ಪಠನೀಯವಾದ ಮಂತ್ರಗಳನ್ನು) **ಮುಹ್ಯಂತಿ** ಮರೆಯುತ್ತಾರೆ.

**ತಾತ್ಪರ್ಯ-** ಹೇ ನಾಭಾಗನೇ! ಒಳ್ಳೆ ಜ್ಞಾನಿಗಳಾದ ಅಂಗೀರಸ ಋಷಿಗಳು ಯಾಗವನ್ನು ಮಾಡುತ್ತಾರೆ. ಈ ಋಷಿಗಳು ಪ್ರತಿ ಆರನೇ ದಿವಸದಲ್ಲಿ ಆ ದಿನದ ಕ್ರಿಯಾವಿಶೇಷದಲ್ಲಿ ವಿಶ್ವೇದೇವ ಸಂಬಂಧಿಯಾದ ಯಾಗದಲ್ಲಿ ಪಠಿಸಬೇಕಾದ ಮಂತ್ರವನ್ನು ಮರೆಯುತ್ತಾರೆ. ।।೩।।

**ತಾಂಸ್ತ್ವಂ ಶಂಸಯ ಸೂಕ್ತೇ ದ್ವೇ ವೈಶ್ವದೇವೇ ಮಹಾತ್ಮನಃ ।**
**ತೇ ಸ್ವರ್ಯಂತೋ ಧನಂ ಸತ್ರಪರಿಶೇಷಿತಮಾತ್ಮನಃ ।।೪।।**

**ತ್ವಂ** ನೀನು **ಮಹಾತ್ಮನಃ** ಮಹಾತ್ಮರಾದ **ತಾನ್** ಆ ಋಷಿಗಳನ್ನು ಕುರಿತು **ವೈಶ್ವದೇವೇ** ವಿಶ್ವೇದೇವತೆಗಳಿಗೆ ಸಂಬಂಧಿಸಿದ **ದ್ವೇ** ಆ ಎರಡು **ಸೂಕ್ತೇ** ಸೂಕ್ತಗಳನ್ನು **ಶಂಸಯ** ಹೇಳು **ಸ್ವರ್ಯಂತಃ** ಸ್ವರ್ಗವನ್ನು ಕುರಿತು ಹೋಗುತ್ತಿರುವ ಅವರು **ಆತ್ಮನಃ** ತಮ್ಮ **ಸತ್ರಪರಿಶೇಷಿತಂ** ಯಾಗದಲ್ಲಿ ಉಳಿದ **ಧನಂ** ಸಂಪತ್ತನ್ನು **ತೇ** ನಿನಗೆ **ದಾಸ್ಯಂತೇ** ಕೊಡುತ್ತಾರೆ.

**ತಾತ್ಪರ್ಯ-** ಎಲೈ ಪುತ್ರನೇ! ನೀನು ಮಹಾತ್ಮರಾದ ಆ ಋಷಿಗಳನ್ನು ಕುರಿತು ವಿಶ್ವೇದೇವತೆಗಳಿಗೆ ಸಂಬಂಧಿಸಿದ ಎರಡು ಸೂಕ್ತಗಳನ್ನು ಹೇಳು. ಸ್ವರ್ಗಕ್ಕೆ ಹೋಗುತ್ತಿರುವ ಅವರು ಯಾಗವನ್ನು ಮಾಡಿ ಉಳಿದ ಧನವನ್ನು ನಿನಗೆ ಕೊಡುತ್ತಾರೆ. ।।೪।।

**ದಾಸ್ಯಂತೇ ತೇಽಥ ತಾನ್ ಗಚ್ಛ ತಥಾ ಸ ಕೃತವಾನ್ಯಥಾ ।**
**ತಸ್ಮೈ ದತ್ವಾ ಯಯುಃ ಸ್ವರ್ಗಂ ತೇ ಸತ್ರಪರಿವೇಷಣಮ್ ।।೫।।**

ಪುತ್ರನೇ! **ಅಥ** ಅನಂತರದಲ್ಲಿ, **ತಾನ್** ಆ ಋಷಿಗಳನ್ನು ಕುರಿತು **ಗಚ್ಛ** ಹೋಗು, **ತೇ** ಅವರುಗಳು, **ತೇ** ನಿನಗೆ **ದಾಸ್ಯಂತೇ** ಕೊಡುತ್ತಾರೆ ಎಂದು ಹೇಳಿದರು. **ಅಥ** ಅನಂತರದಲ್ಲಿ **ಸಃ** ಆತನು **ಯಥಾ** ಹೇಗೆ ತಂದೆ ಹೇಳಿದರೋ, **ತಥಾ** ತಂದೆ ಹೇಳಿದಂತೆ, **ಕೃತವಾನ್** ಮಾಡಿದನು. **ತೇ** ಆ ಋಷಿಗಳು, **ಸತ್ರಪರಿವೇಷಣಂ** ಯಾಗದ ಉಳಿದ ಭಾಗವನ್ನು, **ದತ್ವಾ** ಕೊಟ್ಟು, **ಯಯುಃ** ಹೋದರು.

**ತಾತ್ಪರ್ಯ-** ಪುತ್ರನೇ! ನೀನು ಆ ಋಷಿಗಳನ್ನು ಕುರಿತು ಹೋಗು. ಅವರು ನಿನಗೆ ಸಂಪತ್ತನ್ನು ಕೊಡುತ್ತಾರೆ ಎಂದು ತಂದೆ ಹೇಳಿದನು. ಆತನು ತಂದೆ ಹೇಳಿದಂತೆ ಮಾಡಿದನು. ಆ ಋಷಿಗಳು ಯಾಗದಲ್ಲಿ ಉಳಿದ ಭಾಗವನ್ನು ಆ ನಾಭಾಗನಿಗೆ ಕೊಟ್ಟು ಸ್ವರ್ಗವನ್ನು ಕುರಿತು ಹೋದರು. ।।೫।।

**ತಂ ಕಶ್ಚಿತ್ ಸ್ವೀಕರಿಷ್ಯಂತಂ ಪುರುಷಃ ಕೃಷ್ಣದರ್ಶನಃ ।**
**ಉವಾಚೋತ್ತರತೋಽಭ್ಯೇತ್ಯ ಮಮೇದಂ ವಾಸ್ತವಂ ವಸು ।।೬।।**

**ಕೃಷ್ಣದರ್ಶನಃ** ಕಪ್ಪುಬಣ್ಣ ಉಳ್ಳವನಂತೆ ತೋರುತ್ತಿರುವ, **ಕಶ್ಚಿತ್** ಒಬ್ಬ **ಪುರುಷಃ** ಲೋಕವಿಲಕ್ಷಣರಾದ ಮಹರುದ್ರದೇವರು, **ಉತ್ತರತಃ** ಯಜ್ಞಶಾಲಾ ಉತ್ತರ ದಿಕ್ಕಿನಿಂದ, **ಅಭ್ಯೇತ್ಯ** ಮೇಲಕ್ಕೆ ಬಂದು, **ತಂ** ಯಾಗದಲ್ಲಿ ಉಳಿದದ್ದನ್ನು **ಸ್ವೀಕರಿಷ್ಯಂತಂ** ತೆಗೆದುಕೊಳ್ಳುತ್ತಿರುವ ನಾಭಾಗನನ್ನು ಕುರಿತು, **ಉವಾಚ** ಹೇಳಿದನು. ಏನು ಹೇಳಿದನು? ಎಂದರೆ **ಇದಂ** ಈ **ವಾಸ್ತವಂ** ಯಜ್ಞಶಾಲಾದಲ್ಲಿ ಉಳಿದಿರುವ **ವಸು** ಧನವು, **ಮಮ** ನನ್ನದಾಗಿರುತ್ತದೆ'' ಎಂದು ಹೇಳಿದನು.

**ತಾತ್ಪರ್ಯ-** ಯಜ್ಞಶಾಲೆಯ ಉತ್ತರಭಾಗದಿಂದ ಕಪ್ಪುವರ್ಣಸಹಿತರಾದ ರುದ್ರದೇವರು ಮೇಲಕ್ಕೆ ಬಂದು, ಯಾಗದಲ್ಲಿ ಉಳಿದ ಭಾಗವನ್ನು ಸಂಗ್ರಹಿಸುತ್ತಿರುವ ನಾಭಾಗನನ್ನು ಕುರಿತು ಯಜ್ಞಶಾಲೆಯಲ್ಲಿ ಉಳಿದ ಧನವು ನನಗೆ ಸೇರಬೇಕಾದದ್ದು ಎಂದು ಹೇಳಿದನು. ।।೬।।

**ಮಮೇದಮೃಷಿಭಿರ್ದತ್ತಮಿತಿ ತರ್ಹಿ ಸ್ಮ ಮಾನವ ।**
**ಸ್ಯಾನ್ನೌ ತೇ ಪಿತರಿ ಪ್ರಶ್ನಃ ಸ ಗತಃ ಪಿತರಂ ಯಥಾ ।।೭।।**

**ಹೇ ಮಾನವ!** ಹೇ ಮನುಪುತ್ರನೇ! **ಋಷಿಭಿಃ** ಋಷಿಗಳಿಂದ **ದತ್ತಮಿತಿ** ಕೊಡಲ್ಪಟ್ಟಿದೆ ಎಂಬ ಕಾರಣದಿಂದ, **ಇದಂ** ಈ ಧನವು, **ಮಮ** ನನ್ನದು ಎಂದು (**ವದಸಿ** ಹೇಳಿತ್ತಿದ್ದೀಯೇ) **ತರ್ಹಿ** ಹಾಗಾದರೆ, **ತೇ** ನಿನ್ನ, **ಪಿತರಿ** ತಂದೆಯಲ್ಲಿ **ನೌ** ನಮ್ಮಿಬ್ಬರ **ಪ್ರಶ್ನಃ** ವಿವಾದ ಪ್ರಶ್ನವು **ಸ್ಯಾತ್** ಆಗಲಿ. (ಆತನನ್ನು ಅಂದರೆ ತಂದೆಯನ್ನು ಕೇಳು) ಎಂದು ರುದ್ರದೇವರು ಹೇಳಿದರು. **ಸಃ** ಆ ನಾಭಾಗನು, **ಪಿತರಂ** ತಂದೆಯನ್ನು ಕುರಿತು, **ಗತಃ** ಹೋದನು. **ಯಥಾ** ಹೋಗಿ ಯಥಾವತ್ತಾದ ವಿಷಯವನ್ನು ನಿಶ್ಚಯಮಾಡಿ ನನಗೆ ಸತ್ಯವನ್ನು ಹೇಳು ಎಂದು ಕೇಳಿದನು.

**ತಾತ್ಪರ್ಯ-** ರುದ್ರನು ಹೇಳುತ್ತಾನೆ. ಹೇ ಮನುಪುತ್ರನೇ! ಋಷಿಗಳು ಕೊಟ್ಟಿದ್ದರಿಂದ ಈ ಧನವು ನನ್ನದು ಎಂದು ಹೇಳುತ್ತಿದ್ದೀಯೇ? ನಮ್ಮಿಬ್ಬರ ಈ ವಿವಾದವನ್ನು ನಿಮ್ಮ ತಂದೆಯಲ್ಲಿ ಕೇಳೋಣ ಎಂದು ಹೇಳಿದನು. ಅಂತೆಯೇ ನಾಭಾಗನು ತನ್ನ ತಂದೆಯ ಹತ್ತಿರ ಹೋಗಿ ಈ ಧನ ಯಾರದ್ದು? ಎನ್ನುವುದನ್ನು ಸತ್ಯವಾಗಿ ಹೇಳು ಎಂದು ಕೇಳಿದನು. ।।೭।।

**ಯಜ್ಞವಾಸ್ತುಗತಂ ಸರ್ವಮುಚ್ಛಿಷ್ಟಮೃಷಯಃ ಕ್ವಚಿತ್ ।**
**ಚಕ್ರುರ್ಹಿ ಭಾಗಂ ರುದ್ರಾಯ ಸ ದೇವಃ ಸರ್ವಮರ್ಹತಿ ।।೮।।**

**ಋಷಯಃ** ಋಷಿಗಳು, **ಕ್ವಚಿತ್** ದಕ್ಷಾಧ್ವರಧ್ವಂಸ ಸಮಯದಲ್ಲಿ **ಯಜ್ಞವಾಸ್ತುಗತಂ** ಯಜ್ಞದ ಭೂಮಿಯಲ್ಲಿ ಉಳಿದಿರುವ ಧನವನ್ನು, **ಸರ್ವಂ ಉಚ್ಛಿಷ್ಟಂ** ಎಲ್ಲಾ

ಉಚ್ಛಿಷ್ಟವನ್ನು, **ರುದ್ರಾಯ** ಮಹರುದ್ರನಿಗೋಸ್ಕರ, **ಭಾಗಂ** ಭಾಗವನ್ನಾಗಿ, **ಚಕ್ರುಃ** ಮಾಡಿದರು. (ಕೊಟ್ಟಿರುತ್ತಾರೆ). **ಅತಃ** ಆ ಕಾರಣದಿಂದ, **ಸಃ ದೇವಃ** ಆ ದೇವನು **ಸರ್ವಂ** ಯಜ್ಞದಲ್ಲಿ ಉಳಿದ ಎಲ್ಲಾ ಭಾಗವನ್ನು, **ಅರ್ಹತಿ** ಹೊಂದುವುದಕ್ಕೆ ಅರ್ಹನಾಗಿರುತ್ತಾನೆ.

**ತಾತ್ಪರ್ಯ-** ದಕ್ಷಪ್ರಜಾಪತಿ ಯಜ್ಞ ಮಾಡುವಾಗ ಋಷಿಗಳೆಲ್ಲರೂ ಯಜ್ಞಭೂಮಿಯಲ್ಲಿ ಉಳಿದ ಎಲ್ಲಾ ಧನವನ್ನು ರುದ್ರದೇವರಿಗಾಗಿ ಬಿಟ್ಟಿರುತ್ತಾರೆ. ಆದ್ದರಿಂದ ಆ ಧನವನ್ನು ಹೊಂದಲು ರುದ್ರದೇವನು ಅರ್ಹನಾಗಿರುತ್ತಾನೆ. ಅಲ್ಲದೇ ನಾನು ಈ ಮೊದಲೇ ಹೇಳಿದ ವಿಷಯವು ಅನ್ಯಥಾ ಆಗುವುದಿಲ್ಲ. ಋಷಿಗಳು ಕೊಟ್ಟ ಹಣವನ್ನು ರುದ್ರದೇವರು ನಿನಗೆ ಕೊಡುವವನು ಎಂದು ಹೇಳಿದನು.

**ನಾಭಾಗಸ್ತಂ ಪ್ರಣಮ್ಯಾಹ ತವೇಶ ಕಿಲ ವಾಸ್ತುಗಮ್ ।**
**ಇತ್ಯಾಹ ಮೇ ಪಿತಾ ಬ್ರಹ್ಮನ್ ಶಿರಸಾ ತ್ವಾಂ ಪ್ರಸಾದಯೇ ॥೯॥**

**ನಾಭಾಗಃ** ನಾಭಾಗನು, **ತಂ** ರುದ್ರದೇವರನ್ನು, **ಪ್ರಣಮ್ಯ** ನಮಸ್ಕಾರ ಮಾಡಿ **ಹೇ ಈಶ!** ಎಲೋ ರುದ್ರದೇವನೇ! **ವಾಸ್ತುಗಂ** ಯಜ್ಞಭೂಮಿಯಲ್ಲಿ ಉಳಿದ ದ್ರವ್ಯವು, **ತವ ಕಿಲ** ನಿಮ್ಮದೇ, **ಇತಿ** ಎಂದು **ಮಮ** ನನ್ನ **ಪಿತಾ** ತಂದೆಯು **ಆಹ** ಹೇಳಿದನು. **ತಸ್ಮಾತ್** ಆ ಕಾರಣದಿಂದ, **ಹೇ ಬ್ರಹ್ಮನ್** ಎಲೋ ಯಥಾ ಯೋಗ್ಯಪೂರ್ಣನಾದ ರುದ್ರದೇವರೇ! **ತ್ವಾಂ** ನಿಮ್ಮನ್ನು **ಶಿರಸಾ (ಪ್ರಣಮ್ಯ)** ನಮಸ್ಕರಿಸಿ **ಪ್ರಸಾದಯೇ** ಪ್ರಸನ್ನೀಕರಿಸುತ್ತೇನೆ.

**ತಾತ್ಪರ್ಯ-** ನಾಭಾಗನು ರುದ್ರದೇವರನ್ನು ನಮಸ್ಕರಿಸಿ, ಹೇ ರುದ್ರದೇವರೇ! ಈ ಯಜ್ಞಭೂಮಿಯಲ್ಲಿ ಉಳಿದ ದ್ರವ್ಯವು ನಿಮ್ಮದೇ ಆಗಿರುತ್ತದೆ ಎಂದು ನನ್ನ ತಂದೆಯು ಹೇಳಿರುತ್ತಾನೆ. ಆದ್ದರಿಂದ ಹೇ ಪೂರ್ಣನೇ! ನಿನ್ನನ್ನು ಶಿರಸಾ ನಮಸ್ಕರಿಸಿ ಪ್ರಸನ್ನೀಕರಿಸುತ್ತೇನೆ. ಎಂದು ತನ್ನ ಅತಿಕ್ರಮವನ್ನು ಕ್ಷಮಿಸಬೇಕಾಗಿ ಕೇಳಿಕೊಂಡನು. ॥೯॥

ರುದ್ರದೇವರು ನಾಭಾಗನನ್ನು ಕುರಿತು ಹೇಳುತ್ತಾರೆ-

**ಯತ್ತೇ ಪಿತಾಽವದದ್ಧರ್ಮಂ ತ್ವಂ ಚ ಸತ್ಯಂ ಪ್ರಭಾಷಸೇ ।**
**ದದಾಮಿ ತೇ ಮಂತ್ರದೃಶೋ ಜ್ಞಾನಂ ಬ್ರಹ್ಮ ಸನಾತನಮ್ ॥೧೦॥**

ಹೇ ನಾಭಾಗನೇ! **ಯತ್** ಯಾವ ಕಾರಣದಿಂದ, **ತೇ** ನಿನ್ನ **ಪಿತಾ** ತಂದೆಯು, **ಸತ್ಯಂ** ಸತ್ಯರೂಪವಾದ, **ಧರ್ಮಂ** ಧರ್ಮವನ್ನು, **ಅವದತ್** ಹೇಳಿದನು. **ತ್ವಂ ಚ** ನೀನೂ ಸಹ, **ಸತ್ಯಂ** ಸತ್ಯವನ್ನು, **ಪ್ರಭಾಷಸೇ** ಹೇಳುರುತ್ತೀಯೇ, **ತತಃ**

ಆದ್ದರಿಂದ **ತುಷ್ಟಃ** ತುಷ್ಟನಾದ, **ಅಹಂ** ನಾನು **ಮಂತ್ರದೃಶಃ** ಮಂತ್ರದ್ರಷ್ಟೃವಾದ (ವೈಶ್ವದೇವಸೂಕ್ತ) ಎರಡು ಮಂತ್ರವನ್ನು ಸಾಕ್ಷಾತ್ಕಾರ ಹೊಂದಿದ, **ತೇ** ನಿನಗೆ **ಸನಾತನಂ** ಅಪೌರುಷೇಯವಾದ **ಬ್ರಹ್ಮ** ವೇದವನ್ನು, **ಜ್ಞಾನಂ** ವೇದಾರ್ಥ-ರೂಪವಾದ ಪರಮಾತ್ಮನ ಜ್ಞಾನವನ್ನು **ದದಾಮಿ** ಅಧ್ಯಯನವಿಲ್ಲದೇ ಜ್ಞಾನಸಿದ್ಧಿಯನ್ನು ಕರುಣಿಸಿರುತ್ತೇನೆ.

**ತಾತ್ಪರ್ಯ-** ಯಾವ ಕಾರಣದಿಂದ ನಿನ್ನ ತಂದೆಯು ಸತ್ಯರೂಪವಾದ ಧರ್ಮವನ್ನು ಹೇಳಿರುತ್ತಾನೆ. ನೀನೂ ಸಹ ಸತ್ಯವನ್ನು ಹೇಳಿರುತ್ತೀಯ, ಆದ್ದರಿಂದ ನಾನು ತುಷ್ಟನಾಗಿರುತ್ತೇನೆ. ಮಂತ್ರದ್ರಷ್ಟಾರನಾದ ನಿನಗೆ (ವೈಶ್ವ ದೇವತಾಕವಾದ ಎರಡು ಮಂತ್ರವನ್ನು ಸಾಕ್ಷಾತ್ಕಾರ ಹೊಂದಿದ) ಅಪೌರುಷೇಯವಾದ ವೇದವನ್ನು, ವೇದಾರ್ಥವಾದ ಪರಮಾತ್ಮನ ಜ್ಞಾನವನ್ನು ಕೊಟ್ಟಿದ್ದೇನೆ. ॥೧೦॥

**ಗೃಹಾಣ ದ್ರವಿಣಂ ದತ್ತಂ ಯತ್ಸತ್ರಪರಿವೇಷಿತಮ್ ।**
**ಇತ್ಯುಕ್ತ್ವಾಂತರ್ಹಿತೋ ರುದ್ರೋ ಭಗವಾನ್ ಸತ್ಯವತ್ಸಲಃ ॥೧೧॥**

ಹೇ ನಾಭಾಗನೇ! **ಯತ್** ಯಾವ, **ಸತ್ರಪರಿವೇಷಿತಂ** ಯಾಗದಲ್ಲಿ ಉಳಿದ, **ದತ್ತಂ** ಋಷಿಗಳಿಂದ ಕೊಟ್ಟ, **ದ್ರವಿಣಂ** ಧನವು **ದತ್ತಂ** ನನ್ನಿಂದ ನಿನಗೆ ಕೊಡಲ್ಪಟ್ಟಿತು. ಅದನ್ನು, **ಗೃಹಾಣ** ತೆಗೆದುಕೋ, **ಇತಿ** ಹೀಗೆಂದು, **ಉಕ್ತ್ವಾ** ಹೇಳಿ, **ಸತ್ಯವತ್ಸಲಃ** ಸತ್ಯಪ್ರಿಯನಾದ, **ಭಗವಾನ್** ಪೂರ್ಣನಾದ, **ರುದ್ರಃ** ರುದ್ರದೇವನು, **ಅಂತರ್ಹಿತಃ** ಅದೃಶ್ಯನಾದನು.

**ತಾತ್ಪರ್ಯ-** ಸತ್ರದಲ್ಲಿ ಅವಶಿಷ್ಟವಾದ ಧನವನ್ನು ನಿನಗೆ ಈ ಮೊದಲೇ ಋಷಿಗಳು ಕೊಟ್ಟಿರುವರು. ಅದನ್ನೇ ನಾನು ನಿನಗೆ ಕೊಟ್ಟಿದ್ದೇನೆ, ತೆಗೆದುಕೋ ಹೀಗೆಂದು ಹೇಳಿ, ಸತ್ಯ ಮಾತಿನಲ್ಲಿ ಪ್ರೀತಿವುಳ್ಳ, ಪೂಜ್ಯರಾದ ರುದ್ರದೇವರು ಅಂತರ್ಧಾನ ಹೊಂದಿದರು. ಇದರಿಂದ ರುದ್ರದೇವರಿಗೆ ಸತ್ಯವತ್ಸಲರೆಂಬ ಪ್ರಸಿದ್ಧಿಯು ಅನ್ವರ್ಥವಾಯಿತು. ನಾಭಾಗನ ತಂದೆಯು, ನಾಭಾಗನು ಸತ್ಯಹೇಳಿದ್ದರಿಂದ ಸಂತುಷ್ಟನಾದನು. ತಂದೆಯ ಮಾತನ್ನು ಸತ್ಯವನ್ನಾಗಿ ಮಾಡಿದನು. ॥೧೧॥

**ಯ ಏತತ್ ಸಂಸ್ಮರೇತ್ ಪ್ರಾತಃ ಸಾಯಂ ಚ ಸುಸಮಾಹಿತಃ ।**
**ಕವಿರ್ಭವತಿ ಮಂತ್ರಜ್ಞೋ ಗತಿಂ ಚೈವ ತಥಾತ್ಮನಃ ॥೧೨॥**

**ಯಃ** ಯಾವಾತನು, **ಏತತ್** ಈ ಚರಿತ್ರೆಯನ್ನು, **ಸುಸಮಾಹಿತಃ** ಶಾಂತ ಮನಸ್ಕನಾಗಿ, **ಪ್ರಾತಃ** ಪ್ರಾತಃಕಾಲದಲ್ಲಿಯೂ, **ಸಾಯಂ** ಸಾಯಂಕಾಲದಲ್ಲಿಯೂ **ಸಂಸ್ಮರೇತ್** ಸ್ಮರಿಸುತ್ತಾರೋ, **ಸಃ** ಅವನು **ಕವಿಃ** ಜ್ಞಾನಿಯು, **ಮಂತ್ರಜ್ಞಃ**

ಋಗ್ವೇದತಾತ್ಪರ್ಯ ಜ್ಞಾನಿಯು, **ಭವತಿ** ಆಗುತ್ತಾನೆ. **ಆತ್ಮನಃ** ಭಗವಂತನ **ಗತಿಂ** ಜ್ಞಾನವನ್ನು (ಭಗವಂತನನ್ನು) **ಪ್ರಾಪ್ನೋತಿ** ಹೊಂದುತ್ತಾನೆ.

**ತಾತ್ಪರ್ಯ-** ಯಾರು ಸಾಯಂಕಾಲ, ಪ್ರಾತಃಕಾಲಗಳಲ್ಲಿ ಸಮಾಧಾನ ಮನಸ್ಸಿನಿಂದ ಈ ಆಖ್ಯಾನವನ್ನು ಭಕ್ತಿಪೂರ್ವಕ ಧ್ಯಾನ ಮಾಡುವರೋ, ಅವರು ತತ್ತ್ವಜ್ಞಾನಿಗಳು, ವಿಶೇಷವಾಗಿ ಋಗ್ವೇದ ತಾತ್ಪರ್ಯ ತಿಳಿದವರು, ಆಗುವರು. ಮತ್ತು ಪರಮಾತ್ಮನ ಜ್ಞಾನ ಹೊಂದುವರು. ಈ ಅಧ್ಯಾಯವು ಪಿತೃಭಕ್ತಿ ಗೌರವವನ್ನು ವರ್ಣಿಸುತ್ತದೆ. ತತ್ಕಾಲದಲ್ಲಿ ಹಿತವೆಂದು ತೋರದಿದ್ದರೂ ಮಗನು ತಂದೆಯ ಮಾತನ್ನು ಶ್ರದ್ಧೆಯಿಂದ ಪಾಲಿಸುವುದರಿಂದ ಅವನಿಗೆ ಇಹಪರಗಳಲ್ಲಿ ಸುಖವಾಗುವದು. ॥೧೨॥

**॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಪಂಚಮೋಽಧ್ಯಾಯಃ ॥**

★★★

## ಅಥ ಷಷ್ಠೋಽಧ್ಯಾಯಃ

**ಶ್ರೀಶುಕ ಉವಾಚ-**

**ನಾಭಾಗಾದಂಬರೀಷೋಽಭೂನ್ಮಹಾಭಾಗವತಃ ಕೃತೀ ।**
**ನಾಸ್ಪೃಶತ್ ಬ್ರಹ್ಮಶಾಪೋಽಪಿ ಚಕ್ರಪ್ರತಿಹತಃ ಕ್ವಚಿತ್ ॥೧॥**

**ನಾಭಾಗಾತ್** ನಾಭಾಗನ ದೆಸೆಯಿಂದ, **ಮಹಾಭಾಗವತಃ** ಮಹಾಭಗವದ್ಭಕ್ತ-ನಾದ **ಕೃತೀ** ಪುಣ್ಯಶಾಲಿಯಾದ, **ಅಂಬರೀಷಃ** ಅಂಬರೀಷನು, **ಅಭೂತ್** ಜನಿಸಿದನು. **ಕ್ವಚಿತ್** ಒಮ್ಮೆ **ಬ್ರಹ್ಮಶಾಪಃ ಅಪಿ** ದೂರ್ವಾಸರ ಶಾಪವೂ ಸಹ **ಚಕ್ರಪ್ರತಿಹತಃ** ಚಕ್ರದಿಂದ ನಿರಾಕರಿಸಲ್ಪಟ್ಟದ್ದಾಗಿ, **ನ ಅಸ್ಪೃಶತ್** ಈತನನ್ನು ಬಾಧಿಸಲಿಲ್ಲ.

**ತಾತ್ಪರ್ಯ-** ನಾಭಾಗನಿಗೆ ರುದ್ರದೇವರು ಧನವನ್ನು ಕೊಟ್ಟ ಮೇಲೆ ಈತನು ಗೃಹಸ್ಥಾಶ್ರಮವನ್ನು ಸ್ವೀಕರಿಸಿದನು. ನಾಭಾಗನ ದೆಸೆಯಿಂದ ಮಹಾಭಾಗವತ್ತೋತ್ತಮನಾದ, ಪುಣ್ಯಶಾಲಿಯಾದ ಅಂಬರೀಷನು ಜನಿಸಿದನು. ಒಮ್ಮೆ ದೂರ್ವಾಸರು ಇವನಿಗೆ ಶಾಪವನ್ನು ನೀಡಿದರು. ಪುಣ್ಯಶಾಲಿಯಾದ ಈ ಅಂಬರೀಷನ ಭಕ್ತಿಗೆ ಮೆಚ್ಚಿ ಶ್ರೀಭಗವಂತನಿಂದ ಕಳುಹಿಸಲ್ಪಟ್ಟ ಚಕ್ರವು ಶಾಪವನ್ನು ಭಂಗಗೊಳಿಸಿತು. ಈ ಶಾಪನಿರ್ಮಿತವಾದ ಅಗ್ನಿಯು ಆತನನ್ನು ಸ್ಪರ್ಶಮಾಡಲಿಲ್ಲ.

**ರಾಜೋವಾಚ-**

**ಭಗವನ್ ಶ್ರೋತುಮಿಚ್ಛಾಮಿ ರಾಜರ್ಷೇಸ್ತಸ್ಯ ಧೀಮತಃ ।**
**ನ ಪ್ರಾಭೂದ್ಯತ್ರ ನಿರ್ಮುಕ್ತೋ ಬ್ರಹ್ಮದಂಡೋ ದುರತ್ಯಯಃ ॥೨॥**

**ಭಗವನ್** ಪೂಜ್ಯರೇ! **ಧೀಮತಃ** ಬುದ್ಧಿಶಾಲಿಯಾದ **ರಾಜರ್ಷೇಃ** ರಾಜಋಷಿಯಾದ **ತಸ್ಯ** ಆ ಅಂಬರೀಷರಾಜನ **ಚರಿತಂ** ಚರಿತ್ರೆಯನ್ನು, **ಶ್ರೋತುಂ** ಕೇಳುವುದಕ್ಕೆ, **ಇಚ್ಛಾಮಿ** ಅಪೇಕ್ಷಿಸುತ್ತೇನೆ. **ಯತ್ರ** ಯಾವ ರಾಜನಲ್ಲಿ, **ದುರತ್ಯಯಃ** ಮೀರಲಿಕ್ಕೆ ಅಸಾಧ್ಯವಾದ, **ಬ್ರಹ್ಮದಂಡಃ** ಬ್ರಾಹ್ಮಣಶಾಪದಿಂದ ನಿರ್ಮಿತವಾದ **ನಿರ್ಮುಕ್ತಃ** ದುರ್ವಾಸರಿಂದ ಪ್ರಯೋಗಿಸಲ್ಪಟ್ಟ ಅಗ್ನಿಯು, **ನ ಪ್ರಾಭೂತ್** ಸಮರ್ಥವಾಗಲಿಲ್ಲ.

**ತಾತ್ಪರ್ಯ-** ಪೂಜ್ಯರೇ! ಬುದ್ಧಿಶಾಲಿಯಾದ ರಾಜರ್ಷಿಯಾದ ಆ ಅಂಬರೀಷನ ಚರಿತ್ರೆಯನ್ನು ಕೇಳಲು ಇಚ್ಛಿಸುತ್ತೇನೆ. ಏಕೆ ಅಂದರೆ ಮೀರಲಿಕ್ಕೆ ಅಸಾಧ್ಯವಾದ ಬ್ರಹ್ಮಶಾಪವೂ ಸಹ ಈತನನ್ನು ಸ್ಪರ್ಶಮಾಡಲು ಸಮರ್ಥವಾಗಲಿಲ್ಲ. ॥೨॥

**ಶ್ರೀ ಶುಕ ಉವಾಚ-**

**ಅಂಬರೀಷೋ ಮಹಾಭಾಗಃ ಸಪ್ತದ್ವೀಪವತೀಂ ಮಹೀಮ್ ।**
**ಅವ್ಯಯಾಂ ಚ ಶ್ರಿಯಂ ಲಬ್ಧ್ವಾ ವಿಭವಂ ಚಾತುಲಂ ಭುವಿ ॥೩॥**

**ಮಹಾಭಾಗಃ** ಮಹಾಪುಣ್ಯಶಾಲಿಯಾದ, **ಅಂಬರೀಷಃ** ಅಂಬರೀಷನು, **ಸಪ್ತದ್ವೀಪವತೀಂ** ಸಪ್ತದ್ವೀಪಗಳಿಂದ ಕೂಡಿದ, **ಮಹೀಂ** ಭೂಮಂಡಲವನ್ನು, **ಭುವಿ** ಈ ಭೂಮಿಯಲ್ಲಿ, **ಅವ್ಯಯಾಂ** ಬಹುಕಾಲವಿರುವ, **ಶ್ರಿಯಂ** ಸಂಪತ್ತನ್ನು ಮತ್ತು **ಅತುಲಂ** ಅಸಮಾನವಾದ **ವಿಭವಂ** ಭೃತ್ಯವರ್ಗವನ್ನು **ಲಬ್ಧ್ವಾ** ಹೊಂದಿ.

**ತಾತ್ಪರ್ಯ-** ಮಹಾಪುಣ್ಯಶಾಲಿಯಾದ ಈ ಅಂಬರೀಷನು ಸಪ್ತದ್ವೀಪದಿಂದ ಕೂಡಿದ ಈ ಭೂಮಂಡಲವನ್ನು ಹೊಂದಿದನು. ಈ ಭೂಮಂಡಲದಲ್ಲಿ ಬಹುಕಾಲವಿರುವ ಸಂಪತ್ತನ್ನು ಮತ್ತು ಅಸಮಾನವಾದ ರಾಜ್ಯವೈಭವವನ್ನು ಹೊಂದಿದನು. ॥೩॥

ಅಂಬರೀಷನೆಂಬ ಶಬ್ದವು ಕೇವಲ ಸಂಕೇತವಾಗಿರದೇ ಆ ರಾಜರ್ಷಿಯ ಭಕ್ತಿ ವೈರಾಗ್ಯಾದಿ ಗುಣಗಳನ್ನು ವರ್ಣಿಸುತ್ತದೆ. ೧) ಅಂಬಾದಿಕಂ ತಾಯಿ ಮೊದಲಾದ ಬಂಧುಬಾಂಧವರ ಸಂಬಂಧವು, ರೀಷಂ ನಶ್ವರ ಇತಿ ಎಂಬ ಜ್ಞಾನಂ ಅಸ್ಯ ಅಸ್ತಿ, (ಋಷ್ ಹಿಂಸಾಯಾಂ ಮತ್ವರ್ಥೇ ಅಚ್ ಪ್ರತ್ಯಯ) ೨) ಅಂಬರವತ್ ಆಕಾಶದಂತೆ ಬಹುಲವಾದ, ಈಷಾ ಜ್ಞಾನೇಚ್ಛಾ ಯಸ್ಯ ಸಃ ಆಕಾಶದಂತೆ ಬಹುಲ ಜ್ಞಾನವುಳ್ಳವನು. ವ್ಯತ್ಯಾಸವು ಛಾಂದಸ. (ಅಂಬರೇಷ ಆಗದೇ ಅಂಬರೀಷ ಎಂಬ ವ್ಯತ್ಯಾಸವು). ೩) ಅಂ ಬ್ರಹ್ಮ, ತಸ್ಯ ವರಿಃ ವರಣಂ ಪರಮಾತ್ಮನ ಅನುಗ್ರಹದಲ್ಲಿ ಈಷಾ ಇಚ್ಛಾ ಪರಮಾತ್ಮನ ಅನುಗ್ರಹವನ್ನು ನಿತ್ಯವೂ ಇಚ್ಛಿಸುವವನು.

**ಮೇನೇಽತಿದುರ್ಲಭಂ ಪುಂಸಾಂ ಸರ್ವಂ ತತ್ ಸ್ವಪ್ನಸಮ್ಮಿತಮ್ ।**
**ವಿದ್ವಾನ್ವಿಭವನಿರ್ವಾಣಂ ತಮೋ ವಿಶತಿ ಯತ್ಪುಮಾನ್ ॥೪॥**

**ವಿದ್ವಾನ್** ಜ್ಞಾನಿಯಾದ ಅಂಬರೀಷನು, **ಪುಂಸಾಂ** ಮಾನವರಿಗೆ, **ಅತಿದುರ್ಲಭಂ** ಹೊಂದಲು ಅಶಕ್ಯವಾದ, **ತತ್ಸರ್ವಂ** ಈ ಎಲ್ಲಾ ಸಂಪತ್ತನ್ನು, **ಸ್ವಪ್ನಸಮ್ಮಿತಂ** ಸ್ವಪ್ನದಂತೆ ಅನಿತ್ಯವೆಂದು, **ಜಾನನ್** ತಿಳಿಯುತ್ತಾ, **ವಿಭವನಿರ್ವಾಣಂ** ಸಂಪತ್ತಿನ ನಾಶವನ್ನು ತಿಳಿಯುತ್ತಿದ್ದನು. **ಪುಮಾನ್** ಮಾನವನು, **ಯತ್** ಯಾವ ವೈಭವವು ನಿತ್ಯವೆಂಬ ತಪ್ಪು ತಿಳುವಳಿಕೆಯಿಂದ, **ತಮಃ** ತಮಸ್ಸಿನಲ್ಲಿ **ವಿಶತಿ** ಬೀಳುತ್ತಾನೆ ಎಂದು ತಿಳಿದನು.

**ತಾತ್ಪರ್ಯ-** ಜ್ಞಾನಿಯಾದ ಅಂಬರೀಷನು ಮಾನವರಿಗೆ ಅತಿದುರ್ಲಭವಾದ ಆ

ಎಲ್ಲಾ ಸಂಪತ್ತನ್ನೂ ಸ್ವಪ್ನದಂತೆ ಅನಿತ್ಯವೆಂದು ತಿಳಿಯುತ್ತಾ ಸಂಪತ್ತಿನ ನಾಶವನ್ನು ತಿಳಿಯುತ್ತಿದ್ದನು. ಮಾನವನು ವೈಭವವನ್ನು ನಿತ್ಯವೆಂದು ತಿಳಿದು ತಮಸ್ಸಿಗೆ ಹೋಗುವನು, ಮೋಹದಲ್ಲಿ ಮುಳುಗುತ್ತಾನೆ ಎಂದು ತಿಳಿದನು. ।।೪।।

**ವಾಸುದೇವೇ ಭಗವತಿ ತದ್ಭಕ್ತೇಷು ಚ ಸಾಧುಷು ।**
**ಪ್ರಾಪ್ತೋ ಭಾವಂ ಪರಂ ವಿಶ್ವಂ ಯೇನೇದಂ ಲೋಷ್ಟವತ್ ಸ್ಮೃತಮ್।।೫।।**

**ಯೇನ** ಯಾವ ಭಕ್ತಿಯಿಂದ, **ಇದಂ** ಈ **ವಿಶ್ವಂ** ಜಗತ್ತು , **ಲೋಷ್ಟವತ್** ಮಣ್ಣಿನ ಮುದ್ದೆಯಂತೆ, **ಸ್ಮೃತಂ** ಸ್ಮರಿಸಲ್ಪಟ್ಟಿತೋ, ಅಂಥಾ **ಪರಂ** ಉತ್ತಮವಾದ **ಭಾವಂ** ಭಕ್ತಿಯನ್ನು, **ವಾಸುದೇವೇ** ಭಗವಂತನಲ್ಲೂ, **ಚ** ಮತ್ತು **ಸಾಧುಷು** ಸಾಧುಗಳಾದ, **ತದ್ಭಕ್ತೇಷು** ಭಗವದ್ಭಕ್ತರುಗಳಲ್ಲೂ **ಪರಂ** ಉತ್ತಮವಾದ, **ಭಾವಂ** ಭಕ್ತಿಯನ್ನು, **ಪ್ರಾಪ್ತಃ** ಹೊಂದಿದನು.

**ತಾತ್ಪರ್ಯ-** ಈ ಅಂಬರೀಷನು ವೈರಾಗ್ಯ ಮತ್ತು ಭಕ್ತಿಯಿಂದ ಈ ಜಗತ್ತನ್ನು ಐಹಿಕ ಸಂಪತ್ತನ್ನು ಲೋಷ್ಟದಂತೆ (ಮಣ್ಣಿನ ಮುದ್ದೆಯಂತೆ) ತಿಳಿದನು. ಇಂಥಾ ಉತ್ತಮವಾದ ಭಾವನೆಯಿಂದ ಭಗವಂತನಲ್ಲೂ ಭಗವಂತನ ಭಕ್ತರಲ್ಲೂ ಉತ್ತಮವಾದ ಭಕ್ತಿಯನ್ನು ಹೊಂದಿದ್ದನು. ।।೫।।

**ಸ ವೈ ಮನಃ ಕೃಷ್ಣಪದಾರವಿಂದಯೋ-**
**ರ್ವಚಾಂಸಿ ವೈಕುಂಠಗುಣಾನುವರ್ಣನೇ ।**
**ಕರೌ ಹರೇರ್ಮಂದಿರಮಾರ್ಜನಾದಿಷು**
**ಶ್ರುತಿಂ ಚಕಾರಾಚ್ಯುತಸತ್ಕಥೋದಯೇ ।।೬।।**

**ಸಃ** ಆ ಅಂಬರೀಷರಾಜನು, **ಮನಃ** ತನ್ನ ಮನಸ್ಸನ್ನು, **ಕೃಷ್ಣಪದಾರವಿಂದಯೋಃ** ಶ್ರೀಕೃಷ್ಣನ ಪಾದಾರವಿಂದದಲ್ಲಿ, **ವಚಾಂಸಿ** ತನ್ನ ಮಾತುಗಳನ್ನು, **ವೈಕುಂಠಗುಣಾನುವರ್ಣನೇ** ಶ್ರೀಹರಿಯ ಗುಣಾನುವರ್ಣನದಲ್ಲಿ, **ಕರೌ** ಎರಡು ಕೈಗಳನ್ನು, **ಹರೇಃ** ಶ್ರೀಹರಿಯ, **ಮಂದಿರಮಾರ್ಜನಾದಿಷು** ದೇವಾಲಯದ ಮಾರ್ಜನಾದಿಗಳಲ್ಲಿ **ಶ್ರುತಿಂ** ಶ್ರವಣವನ್ನು, **ಅಚ್ಯುತಸತ್ಕಥೋದಯೇ** ಭಗವಂತನ ಕಥಾಶ್ರವಣದಲ್ಲೂ, **ಚಕಾರ** ಆಸಕ್ತಿಗೊಳಿಸಿದನು.

**ತಾತ್ಪರ್ಯ-** ಆ ಅಂಬರೀಷ ರಾಜನು ತನ್ನ ಮನಸ್ಸನ್ನು ಶ್ರೀಕೃಷ್ಣನ ಪದಾರವಿಂದದಲ್ಲಿ ಆಸಕ್ತಿಗೊಳಿಸಿದನು. ಮಾತುಗಳನ್ನು ಶ್ರೀಹರಿಯ ಗುಣಾನುವರ್ಣನದಲ್ಲಿ ಆಸಕ್ತಿಗೊಳಿಸಿದನು. ಕರಗಳನ್ನು ಶ್ರೀಹರಿಯ ಮಂದಿರದ ಮಾರ್ಜನಾದಿಗಳಲ್ಲಿ ತೊಡಗಿಸಿದನು. ಶ್ರವಣವನ್ನು ಭಗವಂತನ ಕಥಾಶ್ರವಣದಲ್ಲಿ ಆಸಕ್ತಿಗೊಳಿಸಿದನು.

**ತಾತ್ಪರ್ಯ-** ಪರಮಾತ್ಮನ ಕಥೆಯು ಮಹಾ ಮಂತ್ರವಾದ್ದರಿಂದ ಬಲಗಿವಿಯಿಂದ ಕೇಳಬೇಕೆಂದು ಸೂಚಿಸಲು **ಶ್ರುತಿಂ** ಎಂದು ಏಕವಚನ ಪ್ರಯೋಗಿಸಿರುವರು. ।।೬।।

**ಮುಕುಂದಲಿಂಗಾಲಯದರ್ಶನೇ ದೃಶೌ**
**ತದ್ಭೃತ್ಯಗಾತ್ರಸ್ಪರ್ಶೇಽಂಗಸಂಗಮ್ ।**
**ಘ್ರಾಣಂ ಚ ತತ್ಪಾದಸರೋಜಸೌರಭ-**
**ಶ್ರೀಮತ್ತುಲಸ್ಯಾಂ ರಸನಾಂ ತದರ್ಪಿತೇ ।।೭।।**

**ಸಃ** ಆ ರಾಜನು, **ಮುಕುಂದಲಿಂಗಾಲಯದರ್ಶನೇ** ಶ್ರೀಮುಕುಂದನ, **ಲಿಂಗಾಲಯೇ** ಚಿಹ್ನೆಯಾದ, ಶಂಖ-ಚಕ್ರ -ಗದಾ-ಪದ್ಮ ಇವುಗಳಿಗೆ ಆಶ್ರಯರಾದ ಚಲಾಚಲಪ್ರತಿಮಾ ಇವುಗಳ ದರ್ಶನದಲ್ಲಿ **ದೃಶೌ** ಎರಡು ಕಣ್ಣುಗಳನ್ನು, **ಅಂಗಸಂಗಂ** ತ್ವಗಿಂದ್ರಿಯವನ್ನು, ಅಂಗಸಂಗಶಬ್ದಕ್ಕೆ ಅಂಗಾನಾಂ ಸಂಗಃ ಯಸ್ಯ ಸಃ ತ್ವಗಿಂದ್ರಿಯ ಎಂದು ಅರ್ಥ. **ತದ್ಭೃತ್ಯಗಾತ್ರಸ್ಪರ್ಶೇ** ಭಗವದ್ಭಕ್ತರ ಅಂಗಗಳನ್ನು ಮರ್ದನಾದಿಗಳನ್ನು ಮಾಡುವುದರಲ್ಲೂ, **ಘ್ರಾಣಂ** ನಾಸೇಂದ್ರಿಯವನ್ನು, **ತತ್ಪಾದಸರೋಜಸೌರಭಶ್ರೀಮತ್ತುಲಸ್ಯಾಂ** ಭಗವಂತನ ಪಾದಕಮಲದ ಸೌಗಂಧ್ಯವೆಂಬ ಸಂಪತ್ತುಳ್ಳ ತುಳಸಿಯ **ತದರ್ಪಿತೇ** ಭಗವಂತನಿಗೆ ಅರ್ಪಿತವಾದ ಭೋಜ್ಯ ವಸ್ತುವಿನಲ್ಲಿ, **ರಸನಾಂ** ನಾಲಿಗೆಯನ್ನು (ಅನ್ನಾದಿಗಳಲ್ಲಿ) ಆಸಕ್ತವಾಗಿ ಮಾಡಿದನು.

ಅಂಬರೀಷರಾಜನು ಶ್ರೀಮುಕುಂದನ ಚಿಹ್ನೆಯಾದ ಶಂಖ-ಚಕ್ರ-ಗದಾ, ಪದ್ಮಾದಿಗಳಿಗೆ ಆಶ್ರಯರಾದ ಚಲಾಚಲ ಪ್ರತಿಮಾ ಇವುಗಳ ದರ್ಶನದಲ್ಲಿ ಕಣ್ಣು-ಗಳನ್ನು ಉಪಯೋಗಿಸುತ್ತಿದ್ದನು. ಭಗವಂತನ ಸೇವಕರ ಪಾದಸಂವಹನದಲ್ಲಿ ತ್ವಗಿಂದ್ರಿಯವನ್ನು, ಶ್ರೀಭಗವಂತನ ಪಾದಕಮಲದಲ್ಲಿ ಅರ್ಪಿಸಿದ ತುಳಸಿ-ಪುಷ್ಪಗಳ ಸುಗಂಧವನ್ನು ಆಘ್ರಾಣಿಸುವುದರಲ್ಲಿ ನಾಸಾಪುಟವನ್ನು, ಭಗವಂತನಿಗೆ ಅರ್ಪಿತವಾದ ಅನ್ನಾದಿಗಳನ್ನು ಭೋಜನ ಮಾಡುವುದಕ್ಕೆ ನಾಲಿಗೆಯನ್ನು ಆಸಕ್ತವಾಗುವಂತೆ ಉಪಯೋಗಿಸುತ್ತಿದ್ದನು. ।।೭।।

**ಪಾದೌ ಹರೇಃ ಕ್ಷೇತ್ರಪದಾನುಸರ್ಪಣೇ**
**ಶಿರೋ ಹೃಷಿಕೇಶಪದಾಭಿವಂದನೇ ।**
**ಕಾಮಂ ತು ದಾಸ್ಯೇ ನ ತು ಕಾಮಕಾಮ್ಯಯಾ**
**ತಥೋತ್ತಮಶ್ಲೋಕಜನಾಶ್ರಯಾಂ ರತಿಮ್ ।।೮।।**

ರಾಜನು, **ಪಾದೌ** ತನ್ನ ಪಾದಗಳನ್ನು, **ಹರೇಃ** ಶ್ರೀಹರಿಯ **ಕ್ಷೇತ್ರಪದಾನು-ಸರ್ಪಣೇ** ಶ್ರೀಭಗವಂತನ ಕ್ಷೇತ್ರಗಳಿಗೆ ಪ್ರಯಾಣ ಮಾಡುವುದಕ್ಕೂ, **ಶಿರಃ** ಶಿರಸ್ಸನ್ನು **ಹೃಷೀಕೇಶಪದಾಭಿವಂದನೇ** ಶ್ರೀಪರಮಾತ್ಮನ ಪಾದಗಳಿಗೆ ನಮಸ್ಕಾರ

ಮಾಡುವುದಕ್ಕೂ **ಕಾಮಂ ತು** ಇಚ್ಛೆಯಾದರೂ, **ದಾಸ್ಯೇ** ಸೇವೆಯಲ್ಲೂ, **ಕಾಮ-ಕಾಮ್ಯಯಾ** ವಿಷಯತೃಷ್ಣಾದಿಂದ, **ನ ತು** ಆಗಿರುವುದಿಲ್ಲ. **ತಥಾ** ಹಾಗೂ **ಉತ್ತಮಶ್ಲೋಕಜನಾಶ್ರಯಾಂ** ಭಗವದ್ಭಕ್ತರಲ್ಲಿ ಆಶ್ರಯ ಹೊಂದಿದ **ರತಿಂ** ಆಸಕ್ತಿಯನ್ನು ಮಾಡುತ್ತಿದ್ದನು.

**ತಾತ್ಪರ್ಯ-** ಅಂಬರೀಷರಾಜನು ತನ್ನ ಪಾದಗಳನ್ನು ಶ್ರೀಹರಿಯ ಕ್ಷೇತ್ರಗಳಲ್ಲಿ ಸಂಚರಿಸುವುದಕ್ಕೆ ಉಪಯೋಗಿಸುತ್ತಿದ್ದನು. ತನ್ನ ಶಿರಸ್ಸನ್ನು ಶ್ರೀಪರಮಾತ್ಮನ ಪಾದಾರವಿಂದದಲ್ಲಿ ನಮಸ್ಕರಿಸುವುದಕ್ಕೆ, ಇಚ್ಛೆಯನ್ನು ಪರಮಾತ್ಮನ ದಾಸ್ಯದಲ್ಲೂ ಇಡುತ್ತಿದ್ದನು. ವಿಷಯಸುಖದಲ್ಲಿ ಆಶೆಯನ್ನು ಇಟ್ಟಿರಲಿಲ್ಲ. ಭಗವದ್ಭಕ್ತರಲ್ಲಿ ಪ್ರೀತಿ ಇಟ್ಟಿದ್ದನು. ।।೮।।

**ಏವಂ ಸದಾ ಕರ್ಮಕಲಾಪಮಾತ್ಮನಃ**
**ಪರೇಽಧಿಯಜ್ಞೇ ಭಗವತ್ಯಧೋಕ್ಷಜೇ ।**
**ಸರ್ವಾತ್ಮಭಾವಂ ವಿದಧನ್ಮಹೀಮಿಮಾಂ**
**ತನ್ನಿಷ್ಠವಿಪ್ರಾಭಿಹಿತಃ ಶಶಾಸ ಸಃ ।।೯।।**

**ಸಃ** ಆ ರಾಜನು **ಏವಂ** ಈ ರೀತಿಯಾಗಿ, **ಆತ್ಮನಃ** ತನ್ನ **ಕರ್ಮಕಲಾಪಂ** ಕರ್ಮಸಮೂಹವನ್ನು, **ಅಧಿಯಜ್ಞೇ** ಯಜ್ಞದಲ್ಲಿ ಅಧಿಷ್ಠಿತವಾದ, **ಪರೇ** ಸರ್ವೋತ್ತಮನಾದ, **ಅಧೋಕ್ಷಜೇ** ಭಗವಂತನಲ್ಲಿ, **ವಿದಧತ್** ಸಮರ್ಪಣೆ ಮಾಡಿದವನಾಗಿ, **ಭಗವತಿ** ಭಗವಂತನಲ್ಲಿ, **ಸರ್ವಾತ್ಮಭಾವಂ** ಸರ್ವಪ್ರಕಾರ-ದಿಂದಲೂ ಭಕ್ತಿಯನ್ನು, **ವಿದಧತ್** ಮಾಡುವವನಾಗಿ, **ತನ್ನಿಷ್ಠವಿಪ್ರಾಭಿಹಿತಃ** ಭಗವಂತನಲ್ಲಿ ಆಸಕ್ತರಾದ ಬ್ರಾಹ್ಮಣರಿಂದ ಆಜ್ಞಪ್ತನಾಗಿ, **ಇಮಾಂ** ಈ **ಮಹೀಂ** ಭೂಮಂಡಲವನ್ನು, **ಶಶಾಸ** ಆಳಿದನು.

**ತಾತ್ಪರ್ಯ-** ರಾಜನು ಈ ರೀತಿಯಾಗಿ ತನ್ನ ಎಲ್ಲಾ ಕರ್ಮಸಮೂಹಗಳನ್ನು ಯಜ್ಞದಲ್ಲಿ ಅಧಿಷ್ಠಿತನಾದ ಸರ್ವೋತ್ತಮನಾದ ಭಗವಂತನಲ್ಲಿ ಅರ್ಪಣೆ ಮಾಡಿ ಎಲ್ಲಾ ರೀತಿಯಿಂದಲೂ ಭಕ್ತಿಯನ್ನು ಮಾಡುತ್ತಾ ಬ್ರಾಹ್ಮಣರ ಆಜ್ಞಾಪ್ರಕಾರ ರಾಜ್ಯಭಾರ ಮಾಡುತ್ತಿದ್ದನು. ।।೯।।

**ಈಜೇಽಶ್ವಮೇಧೈರಧಿಯಜ್ಞಮೀಶ್ವರಂ**
**ಮಹಾವಿಭೂತ್ಯೋಪಚಿತಾಂಗದಕ್ಷಿಣೈಃ ।**
**ತತೈರ್ವಸಿಷ್ಠಾಸಿತಗೌತಮಾದಿಭಿ-**
**ರ್ವಿದ್ವಾನಭಿಸ್ರೋತಮಸೌ ಸರಸ್ವತೀಮ್ ।।೧೦।।**

**ಅಸೌ** ಈ **ವಿದ್ವಾನ್** ಜ್ಞಾನಿಯಾದ ಅಂಬರೀಷರಾಜನು, **ಮಹಾವಿಭೂತ್ಯೋಪಚಿತಾಂಗದಕ್ಷಿಣೈಃ** ಮಹತ್ತರವಾದ ಐಶ್ವರ್ಯದಿಂದ ಅಭಿವೃದ್ಧಿ ಹೊಂದಿದ ಯಜ್ಞಾಂಗಭೂತವಾದ ದಕ್ಷಿಣೆಗಳುಳ್ಳ, **ತತೈಃ** ಯಜ್ಞಶಾಲೆಯನ್ನು ವ್ಯಾಪಿಸಿಕೊಂಡು ಎಲ್ಲ ಕಡೆ ಆಸೀನರಾದ, **ವಸಿಷ್ಠಾಸಿತಗೌತಮಾದಿಭಿಃ** ವಸಿಷ್ಠರು, ಅಸಿತರು, ಗೌತಮರು ಇತ್ಯಾದಿ ಮಹಾಋಷಿಗಳಿಂದ, **ಸರಸ್ವತೀಂ** ಸರಸ್ವತೀನದಿಯ **ಅಭಿಸ್ರೋತಂ** ಪ್ರವಾಹಾಭಿಮುಖದಲ್ಲಿ, **ಅಧಿಯಜ್ಞಂ** ಯಜ್ಞಾದಿಷ್ಠಿತನಾದ, **ಈಶ್ವರಂ** ಭಗವಂತನನ್ನು **ಅಶ್ವಮೇಧೈಃ** ಅಶ್ವಮೇಧಯಾಗಗಳಿಂದ **ಈಜೇ** ಆರಾಧಿಸಿದನು.

**ತಾತ್ಪರ್ಯ-** ಆ ಜ್ಞಾನಿಯಾದ ಅಂಬರೀಷರಾಜನು ಮಹತ್ತರವಾದ ಐಶ್ವರ್ಯದಿಂದ ಅಭಿವೃದ್ಧಿ ಹೊಂದಿದ ದಕ್ಷಿಣಾಗಳುಳ್ಳ, ಜ್ಞಾನಿಗಳಾದ ವಸಿಷ್ಠ ಅಸಿತ ಗೌತಮಾದಿ ಮಹಾಋಷಿಗಳಿಂದ ಯುಕ್ತನಾಗಿ, ಸರಸ್ವತೀನದೀತೀರದಲ್ಲಿ ಯಜ್ಞೇಶ್ವರನಾದ ಭಗವಂತನನ್ನು ಅಶ್ವಮೇಧಯಾಗಗಳಿಂದ ಆರಾಧಿಸಿದನು. ॥

**ಯಸ್ಯ ಕ್ರತುಷು ಗೀರ್ವಾಣೈಃ ಸದಸ್ಯಾ ಋತ್ವಿಜೋ ಜನಾಃ ।**
**ತುಲ್ಯರೂಪಾಶ್ಚಾನಿಮಿಷಾ ವ್ಯದೃಶ್ಯಂತ ಸುವಾಸಸಃ ॥೧೧॥**

**ಯಸ್ಯ** ಯಾವ ಅಂಬರೀಷನ, **ಕ್ರತುಷು** ಯಾಗಗಳಲ್ಲಿ, **ಸದಸ್ಯಾಃ** ಸಭಾಸದರು, **ಋತ್ವಿಜಾಃ** ಋತ್ವಿಜರು, **ಜನಾಃ** ಭಕ್ತಜನರು, **ಗೀರ್ವಾಣೈಃ** ದೇವತೆಗಳಿಂದ **ಸಹ** ಸಹಿತರಾಗಿ, **ತುಲ್ಯರೂಪಾಃ** ಸಮಾನವಾದ ರೂಪ ಯೌವನ ವಸ್ತ್ರಾದಿಗಳಿಂದ ಸಮಾನರಾಗಿ, **ಸುವಾಸಸಃ** ಉತ್ತಮ ವಸ್ತ್ರಧಾರಿಗಳಾಗಿ, **ಅನಿಮಿಷಾಶ್ಚ** ರೆಪ್ಪೆಹಾಕದವರಾಗಿ, **ವ್ಯದೃಶ್ಯಂತ** ಕಾಣಲ್ಪಟ್ಟರು. ಅಥವಾ **ಯೇ ಅನಿಮಿಷಾಃ** ಅಲ್ಲಿ ಯಾವ ದೇವತೆಗಳಿದ್ದರೋ ಅವರ, **ಗೀರ್ವಾಣೈಃ** ವಾಗ್ಬಾಣಗಳಿಂದ **ತುಲ್ಯಂ** ಸಮಾನವಾದ, **ರೂಪಂ** ಗ್ರಂಥದ ಆವೃತ್ತಿಯು ಯಾವ ಋತ್ವಿಜರಿಗೆ ಇದ್ದಿತೋ ಅಂಥವರು, **ವ್ಯದೃಶ್ಯಂತ** ಕಾಣುತ್ತಿದ್ದರು.

**ತಾತ್ಪರ್ಯ-** ಈ ಅಂಬರೀಷನ ಯಾಗಗಳಲ್ಲಿ ಸದಸ್ಯರು, ಋತ್ವಿಜರು, ಭಗವದ್ಭಕ್ತರೂ ದೇವತೆಗಳಿಂದ ಸಹಿತರಾಗಿ ಸಮಾನ ರೂಪ, ಯೌವ್ವನ, ವಸ್ತ್ರಾದಿಗಳಿಂದ ಸಮಾನರಾಗಿ ಕಾಣುತ್ತಿದ್ದರು. ದೇವತೆಗಳಂತೆ ಅನಿಮಿಷರಾಗಿ (ರೆಪ್ಪೆಯನ್ನು ಹಾಕದೆ) ಪರಮಾಶ್ಚರ್ಯದಿಂದ ನೋಡತಕ್ಕವರಿದ್ದರು. ॥೧೧॥

**ಸ್ವರ್ಗೋ ನ ಪ್ರಾರ್ಥಿತೋ ಯಸ್ಯ ಮನುಜೈರಮರಪ್ರಿಯಃ ।**
**ಶೃಣ್ವದ್ಭಿರುಪಗಾಯದ್ಭಿರುತ್ತಮಶ್ಲೋಕಚೇಷ್ಟಿತಮ್ ॥೧೨॥**

**ಯಸ್ಯ** ಯಾವ ಅಂಬರೀಷನ, **ಮನುಜೈಃ** ಪ್ರಜೆಗಳಿಂದ, **ಅಮರಪ್ರಿಯಃ** ದೇವತೆಗಳಿಗೆ ಪ್ರಿಯವಾದ, **ಸ್ವರ್ಗಃ ಅಪಿ** ಸ್ವರ್ಗವೂ ಸಹ, **ನ ಪ್ರಾರ್ಥಿತಃ** ಅಪೇಕ್ಷಿಸಲ್ಪಡಲಿಲ್ಲ. ಕಾರಣವೇನೆಂದರೇ, **ಉತ್ತಮಶ್ಲೋಕಚೇಷ್ಟಿತಂ** ಉತ್ತಮ ಕೀರ್ತಿಪೂರ್ಣನಾದ ಭಗವಂತನ ಮಹಿಮೆಯನ್ನು, **ಶೃಣ್ವದ್ಭಿಃ** ಕೇಳುತ್ತಿರುವ, **ಉಪಗಾಯದ್ಭಿಃ** ಗಾನ ಮಾಡುತ್ತಿರುವ ಈ ಪ್ರಜೆಗಳಿಂದ, ಸ್ವರ್ಗದ ಅಪೇಕ್ಷೆ ಮಾಡಲ್ಪಡಲಿಲ್ಲ.

**ತಾತ್ಪರ್ಯ-** ಈ ಅಂಬರೀಷನ ಪ್ರಜೆಗಳು ರಾಜ್ಯದಲ್ಲಿ ಭಗವಂತನ ಗುಣಗಾನ ಮಾಡುತ್ತಾ, ಕೇಳುತ್ತಾ, ದೇವತೆಗಳಿಗೆ ಪ್ರಿಯವಾದ ಸ್ವರ್ಗವನ್ನು ಸಹ ಅಪೇಕ್ಷಿಸುತ್ತಿರಲಿಲ್ಲ. (ಭಗವಂತನ ಮಹಿಮಾ ಶ್ರವಣ-ಗಾನ ಮಾಡುವುದಕ್ಕಿಂತ ಸ್ವರ್ಗವು ಅಧಿಕವಾಗಲಿಲ್ಲ). ||೧೨||

**ಸಮೃದ್ಧಾ ಯಸ್ಯ ನೋ ಕಾಮಾಃ ಸ್ವಾರಾಜ್ಯಪರಿಭಾವಿತಾಃ |**
**ದುರ್ಲಭಾ ಅಪಿ ಸಿದ್ಧಾನಾಂ ಮುಕುಂದಂ ಹೃದಿ ಪಶ್ಯತಃ ||೧೩||**

**ಮುಕುಂದಂ** ಭಗವಂತನನ್ನು, **ಹೃದಿ** ಹೃದಯದಲ್ಲಿ, **ಪಶ್ಯತಃ** ನೋಡುತ್ತಿರುವ, **ಯಸ್ಯ** ಯಾವ ರಾಜನಿಂದ, **ಸಮೃದ್ಧಾಃ ಅಪಿ** ಸಮೃದ್ಧವಾಗಿದ್ದರೂ, **ದುರ್ಲಭಾಃ** ಸಾಮಾನ್ಯರಿಗೆ ಲಭಿಸಲು ಅಶಕ್ಯವಾಗಿದ್ದರೂ ಸಹ, ಇಂಥ ಸಂಪತ್ತುಗಳು, **ಸಿದ್ಧಾನಾಂ (ಇವ) ಲುಪ್ತೋಪಮಾ** ಏಕಾಂತಭಕ್ತರಿಗೆ ಹೇಗೋ ಹಾಗೆ ಅಂಬರೀಷರಾಜರಿಗೆ, **ನೋ ಸಮೃದ್ಧಾಃ** ಅಲಂಬುದ್ಧಿಯನ್ನು ಹುಟ್ಟಿಸಲಿಲ್ಲ. ಅಥವಾ **ಅಪಿ ಸಿದ್ಧಾನಾಂ (ಅಪಿಃ ಗರ್ಹಾಯಾಂ)** ಗರ್ಹಿತರಾದ ಸಿದ್ಧರಿಗೆ, **ದುರ್ಲಭಾಃ** ದೊರಕಲಸಾಧ್ಯವಾದ ಸಂಪತ್ತುಗಳು, **ಯಸ್ಯ ಕಾಮಾಃ** ನ ಅಪೇಕ್ಷಣೀಯವಾಗಲಿಲ್ಲ. ಈ ಸಂಪತ್ತಿನ ಸುಖವು ಹೇಗಿದೆ ಎಂದರೆ **ಸ್ವಾರಾಜ್ಯೇನ** ಸ್ವರೂಪಸುಖದಿಂದ, **ಪರಿಭಾವಿತಾಃ** ತಿರಸ್ಕೃತವಾಗಿದೆ.

**ವಿಜಯಧ್ವಜೀಯ-** ಅಂಬರೀಷರಾಜನಿಗೆ ವಿಷಯಭೋಗಗಳು **ಕಾಮಾಃ ನೋ** ಅಪೇಕ್ಷಣೀಯವಾಗಲಿಲ್ಲ. ಅಲ್ಪವಾದದ್ದರಿಂದ ಅಪೇಕ್ಷೆ ಹುಟ್ಟಲಿಲ್ಲ-ವೆಂದಲ್ಲ, **ಸಮೃದ್ಧಾಃ** ಭೋಗೇಚ್ಛುಗಳಿಗೆ ಸಾಕೆನ್ನುವಷ್ಟು ಇದ್ದವು. ಇಂಥ ಸಮೃದ್ಧಿಗೆ ಕಾರಣ **ಸ್ವಾರಾಜ್ಯಪರಿಭಾವಿತಾಃ** ಸ್ವರೂಪಭೂತವಾದ ಭಕ್ತಿ ಮೊದಲಾದವುಗಳಿಂದ ಅಭಿವೃದ್ಧಿ ಹೊಂದಿದವುಗಳು, ಆದ್ದರಿಂದಲೇ ಇತರರಿಂದ ದುರ್ಲಭಗಳು. ಇದೆಲ್ಲದಕ್ಕೂ ಕಾರಣವು **ಮುಕುಂದಂ ಹೃದಿ ಪಶ್ಯತಃ** ಅವನಿಗೆ ಆಗಿದ್ದ ಪರಮಾತ್ಮನ ಅಪರೋಕ್ಷಜ್ಞಾನ.

**ತಾತ್ಪರ್ಯ-** ಅಂಬರೀಷನು ಮುಕುಂದನನ್ನು ಹೃದಯದಲ್ಲಿ ಅಪರೋಕ್ಷೀಕರಿಸಿದ ರಾಜರ್ಷಿಯು. ಈ ಜ್ಞಾನದ ಪ್ರಭಾವದಿಂದ ಐಹಿಕ ವೈಭವಗಳು ಅವನಲ್ಲಿ ಸಾಕಷ್ಟು ವಿಪುಲವಾಗಿದ್ದವು. ಸ್ವರ್ಗಭೋಗವೂ ಸಹ ಇವನ ಸಮೃದ್ಧಿಗೆ ಸಮವಾಗಿರಲಿಲ್ಲ. ಇಂಥ ವಿಷಯಭೋಗಗಳು ಎಷ್ಟು ಸಮೃದ್ಧವಾಗಿದ್ದರೂ ಸ್ವರೂಪಸುಖದಿಂದ ತಿರಸ್ಕೃತವೇ ಸರಿ. ಅಂಬರೀಷರಾಜನಿಗಿದ್ದ ವೈಭವವು ಸಿದ್ಧಾಭಾಸರಿಗೆ ದುರ್ಲಭವು. ಏಕಾಂತಭಕ್ತರಂತೆ ಇವನೂ ಸಹ ವಿಷಯಗಳನ್ನು ಅಪೇಕ್ಷಿಸಲೇ ಇಲ್ಲ. ಜ್ಞಾನಿಗಳಿಗೆ ಜ್ಞಾನಸಾಮರ್ಥ್ಯದಿಂದ ಇತರ ಪುರುಷಾರ್ಥಗಳು ಆನುಷಂಗಿಕವಾಗಿ ಲಭಿಸುತ್ತಿದ್ದರೂ ಅವುಗಳಲ್ಲಿ ಅವರಿಗೆ ಆದರವಾಗಲೀ ಅಪೇಕ್ಷೆಯಾಗಲೀ ಇರುವುದಿಲ್ಲ. ॥೧೩॥

**ಸ ಇತ್ಥಂ ಭಕ್ತಿಯೋಗೇನ ತಪೋಯುಕ್ತೇನ ಪಾರ್ಥಿವಃ ।**
**ಸ್ವಧರ್ಮೇಣ ಹರಿಂ ಪ್ರೀಣನ್ ಸಂಗಾನ್ ಸರ್ವಾನ್ ಶನೈರ್ಜಹೌ ॥೧೪॥**

**ಸಃ ಆ ಪಾರ್ಥಿವಃ** ಅಂಬರೀಷರಾಜನು, **ಇತ್ಥಂ** ಈ ರೀತಿಯಾಗಿ, **ತಪೋಯುಕ್ತೇನ** ತಪಸ್ಸಿನಿಂದ ಕೂಡಿದ, **ಭಕ್ತಿಯೋಗೇನ** ಭಕ್ತಿಯೋಗದಿಂದಲೂ, **ಸ್ವಧರ್ಮೇಣ** ತನ್ನ ಧರ್ಮವಾದ ರಾಜ್ಯಪಾಲನದಿಂದಲೂ, **ಹರಿಂ** ಭಗವಂತನನ್ನು **ಪ್ರೀಣನ್** ಸಂತೋಷಪಡಿಸುತ್ತಾ, **ಸರ್ವಾನ್** ಎಲ್ಲಾ ವಿಷಯಗಳ, **ಸಂಗಾನ್** ಆಸೆಯನ್ನು, **ಶನೈಃ** ಮೆಲ್ಲಗೆ, **ಜಹೌ** ಬಿಟ್ಟನು.

**ತಾತ್ಪರ್ಯ-** ಆ ರಾಜನು ಈ ರೀತಿಯಾಗಿ ತಪಸ್ಸಿನಿಂದ ಕೂಡಿದ ಭಕ್ತಿ-ಯೋಗದಿಂದ ತನ್ನ ಧರ್ಮವಾದ ರಾಜ್ಯಪಾಲನೆಯನ್ನು ಮಾಡುತ್ತಾ ಶ್ರೀಹರಿಯನ್ನು ಸಂತೋಷಪಡಿಸುತ್ತಾ ಧನ ಮೊದಲಾದ ಆಸೆಯನ್ನು ಬಿಟ್ಟನು. ॥೧೪॥

ರಾಜನು ತ್ಯಾಗ ಮಾಡಿದ ಸಂಗಗಳು ಯಾವೆಂದರೆ :-

**ಗೃಹೇಷು ದಾರೇಷು ಸುತೇಷು ಬಂಧುಷು**
**ದ್ವಿಪೋತ್ತಮಸ್ಯಂದನವಾಜಿಪತ್ತಿಷು ।**
**ಅಕ್ಷಯ್ಯರತ್ನಾಭರಣಾಯುಧಾದಿಷ್ವ-**
**ನಂತಕೋಶೇಷ್ವಕರೋದಸನ್ಮತಿಮ್ ॥೧೫॥**

**ಸಃ** ಆ ರಾಜನು, **ಗೃಹೇಷು** ಮನೆಗಳಲ್ಲಿ, **ದಾರೇಷು** ಪತ್ನಿಯರಲ್ಲಿ, **ಬಂಧುಷು** ಬಂಧುಗಳಲ್ಲಿ, **ದ್ವಿಪೋತ್ತಮಸ್ಯಂದನವಾಜಿಪತ್ತಿಷು** ಆನೆ, ರಥ, ಕುದುರೆ, ಕಾಲಾಳು, ಇವುಗಳಲ್ಲೂ **ಅಕ್ಷಯ್ಯರತ್ನಾಭರಣಾಯುಧಾದಿಷು** ಅನಂತವಾದ ರತ್ನ, ಆಭರಣ, ಆಯುಧ ಇವುಗಳಲ್ಲಿ **ಅನಂತಕೋಶೇಷು** ಅನಂತವಾದ ಕೋಶಗಳಲ್ಲೂ ಸಹ **ಅಸನ್ಮತಿಂ** ಅನಿತ್ಯ ಎಂಬ ಬುದ್ಧಿಯನ್ನು, **ಅಕರೋತ್** ಮಾಡಿದನು.

**ತಾತ್ಪರ್ಯ-** ಆ ಅಂಬರೀಷರಾಜನು ಮನೆ, ಸತಿ, ಸುತರಲ್ಲಿ, ಬಂಧುಗಳಲ್ಲಿ ಆನೆ, ರಥ, ಕುದುರೆ, ಕಾಲಾಳು, ಇವುಗಳಲ್ಲೂ ಅನಂತವಾದ ರತ್ನಾಭರಣಗಳು, ಧನಕೋಶಾದಿಗಳು ಅನರ್ಥಕಗಳೆಂದು ಅನಿತ್ಯವೆಂಬ ಬುದ್ಧಿಯನ್ನು ಹೊಂದಿದನು. ಎಲ್ಲ ವಿಷಯಗಳಲ್ಲಿ ಅಭಿಮಾನವನ್ನು ತೊರೆದನು.

**ವಿಶೇಷಾರ್ಥ- ಅನಂತಕಃ ಅನಂತಃ** ಪರಮಾತ್ಮನು, **ಕಃ** ಸುಖರೂಪನು. ಅಥವಾ ಅನಂತನಿಂದ ಸುಖ ಉಳ್ಳವನು. **ಅನಂತಕಃ** ಮನೋವಚನಕರ್ಮ- ಗಳಿಂದ ಹಿಂಸಕನಾಗದಿರುವ ಅಂಬರೀಷನು, **ಅಶೇಷು** ಅಶನದಲ್ಲಿಯೂ, ಅಸನ್ಮತಿಂ, ಚಕಾರ. ನ ವಿದ್ಯತೇ ಶಂ ಸುಖಂ ಯೈಸ್ತೇ ಅಶಾಃ ತೇಷು ಅಶೇಷು ದುಃಖದೇಷು ಪ್ರಾಪ್ತೇಷು, ತತ್ರಾಪಿ ಅಸನ್ಮತಿಂ ಚಕಾರ ದುಃಖಕಾರಣಗಳು ಬಂದಾಗಲೂ ಅನಿತ್ಯವೆಂದು ತಿಳಿದನು. ॥೧೫॥

**ತಸ್ಮಾ ಅದಾದ್ಧರಿಶ್ಚಕ್ರಂ ಪ್ರತ್ಯನೀಕಭಯಾವಹಮ್ ।**
**ಏಕಾಂತಭಕ್ತಿಯೋಗೇನ ಪ್ರೀತೋ ಭೂತ್ವಾಭಿರಕ್ಷಣಮ್ ॥೧೬॥**

**ತಸ್ಮೈ** ಆ ಅಂಬರೀಷನಿಗೆ, **ಹರಿಃ** ಭಗವಂತನು, **ಏಕಾಂತಭಕ್ತಿಯೋಗೇನ** ಏಕಾಂತಭಕ್ತಿಯೋಗ ಉಪಾಯದಿಂದ, **ಪ್ರೀತಃ** ಪ್ರೀತನು, **ಭೂತ್ವಾ** ಆಗಿ, **ಪ್ರತ್ಯನೀಕಭಯಾವಹಂ** ಶತ್ರುಸೈನ್ಯಕ್ಕೆ ಭಯವನ್ನುಂಟುಮಾಡುವ, **ಅಭಿರಕ್ಷಣಂ** ತನ್ನನ್ನು ರಕ್ಷಣಮಾಡುವ, **ಚಕ್ರಂ** ಚಕ್ರವನ್ನು, **ಅದಾತ್** ಕೊಟ್ಟನು.

ಶ್ರೀಹರಿಯು ಅಂಬರೀಷನಿಗೋಸ್ಕರ ಅವನ ಏಕಾಂತಭಕ್ತಿಗಾಗಿ ಪ್ರೀತನಾಗಿ ಶತ್ರುಸೈನ್ಯಕ್ಕೆ ಭಯವನ್ನುಂಟುಮಾಡುವ ಈತನ ರಕ್ಷಣೆ ಮಾಡುವ ಚಕ್ರಾಯುಧ- ವನ್ನು ಕೊಟ್ಟನು. ॥೧೬॥

**ಆರಿರಾಧಯಿಷುಃ ಕೃಷ್ಣಂ ಮಹಿಷ್ಯಾ ತುಲ್ಯಶೀಲಯಾ ।**
**ಯುಕ್ತಃ ಸಾಂವತ್ಸರಂ ವೀರೋ ದಧಾರ ದ್ವಾದಶೀವ್ರತಮ್ ॥೧೭॥**

**ಕೃಷ್ಣಂ** ಕೃಷ್ಣನನ್ನು **ಆರಿರಾಧಯಿಷುಃ** ಪ್ರಕಾರಾಂತರದಿಂದ ಶ್ರೀಹರಿಯ ಆರಾಧನೆ ಮಾಡಲು ಅಪೇಕ್ಷೆಯುಳ್ಳ, **ತುಲ್ಯಶೀಲಯಾ** ಸಮಾನವಾದ ನಡತೆ ಉಳ್ಳ, **ಮಹಿಷ್ಯಾ** ಪತ್ನಿಯಿಂದ, **ಯುಕ್ತಃ** ಸಹಿತನಾದ, **ವೀರಃ** ವೀರನಾದ ಅಂಬರೀಷನು, **ಸಾಂವತ್ಸರಂ** ವಾರ್ಷಿಕವಾದ, **ದ್ವಾದಶೀವ್ರತಂ** ದ್ವಾದಶೀವ್ರತವನ್ನು (ವಿಶೇಷವಾಗಿ) **ದಧಾರ** ಸಂಕಲ್ಪ ಪೂರ್ವಕವಾಗಿ ಅಂಗೀಕರಿಸಿದನು.

**ತಾತ್ಪರ್ಯ-** ಶ್ರೀಕೃಷ್ಣನನ್ನು ಪ್ರಕಾರಾಂತರದಿಂದ ಆರಾಧನಾ ಮಾಡಲು ಅಪೇಕ್ಷೆಯುಳ್ಳ, ಸಮಾನ ಆಚಾರ ಸಂಪನ್ನಳಾದ ಪತ್ನಿಯಿಂದ ಸಹಿತನಾದ

ವೀರನಾದ ಅಂಬರೀಷನು ವಾರ್ಷಿಕವಾದ (ಏಕಾದಶೀವ್ರತದ ಉದ್ಯಾಪನಾದಿ ವಿಶೇಷ ನಿಯಮದೊಂದಿಗೆ ವಿಶೇಷವಾಗಿ ಕಾರ್ತೀಕ ಮಾಸದಲ್ಲಿ ಮಾಡತಕ್ಕದ್ದು) ವ್ರತವನ್ನು ಸ್ವೀಕರಿಸಿದನು. ।।೧೭।।

**ವ್ರತಾಂತೇ ಕಾರ್ತಿಕೇ ಮಾಸಿ ತ್ರಿರಾತ್ರಂ ಸಮುಪೋಷಿತಃ ।**
**ಸ್ನಾತಃ ಕದಾಚಿತ್ ಕಾಲಿಂದ್ಯಾಂ ಹರಿಂ ಮಧುವನೇऽರ್ಚಯತ್ ।।೧೮।।**

**ವ್ರತಾಂತೇ** ಸಂವತ್ಸರದ ವ್ರತಾಂತ್ಯದ **ಕಾರ್ತಿಕೇ** ಕಾರ್ತಿಕಮಾಸದಲ್ಲಿ, **ತ್ರಿರಾತ್ರಂ** ದಿನತ್ರಯದಲ್ಲಿ (ದಶಮೀ, ಏಕಾದಶೀ, ದ್ವಾದಶೀ ಈ ದಿನತ್ರಯದಲ್ಲಿ) **ಸಮುಪೋಷಿತಃ** ಉಪವಾಸವ್ರತಧಾರಿಯಾಗಿ (ಪ್ರತಿ ಪಕ್ಷದಲ್ಲೂ ಆಚರಿಸುತ್ತಾ ಈ ಸಾಂವತ್ಸರಿಕದಲ್ಲಿ ವಿಶೇಷ ಆಚರಣೆ) **ಕದಾಚಿತ್** ಒಮ್ಮೆ, **ಕಾಲಿಂದ್ಯಾಂ** ಯಮುನೆಯಲ್ಲಿ **ಸ್ನಾತಃ** ಸ್ನಾನ ಮಾಡಿದವನಾಗಿ, **ಮಧುವನೇ** ಮಧುವನದಲ್ಲಿ, **ಹರಿಂ** ಭಗವಂತನನ್ನು, **ಅರ್ಚಯತ್** ಪೂಜಿಸಿದನು.

**ತಾತ್ಪರ್ಯ-** ಸಂವತ್ಸರವ್ರತದ ಕೊನೆಯಲ್ಲಿ ಕಾರ್ತಿಕ ಶುಕ್ಲಪಕ್ಷದಲ್ಲಿ ತ್ರಿರಾತ್ರವ್ರತವನ್ನು ಏಕಾದಶೀ ಉಪವಾಸವ್ರತವನ್ನು ಪ್ರತಿವರ್ಷದಲ್ಲೂ ಆಚರಿಸುವುದಕ್ಕಿಂತಲೂ ಅಧಿಕವಾಗಿ ಆಚರಿಸಲು ಸಂಕಲ್ಪತೊಟ್ಟು ಕಾರ್ತಿಕ ಮಾಸದಲ್ಲಿ ವಿಶೇಷ ಆಚರಿಸುವುದಕ್ಕಾಗಿ ಯಮುನೆಯಲ್ಲಿ ಸ್ನಾನಮಾಡಿ ಮಧುವನದಲ್ಲಿ ಶ್ರೀಕೃಷ್ಣನನ್ನು ಪೂಜಿಸಿದನು.

''ಸಾಂವತ್ಸರಂ ದ್ವಾದಶೀವ್ರತಂ'' ಎಂದರೇ ಪ್ರತಿಯೊಂದು ವರ್ಷವು (ಎಲ್ಲ ವರ್ಷಗಳಲ್ಲಿಯೂ) ಆಚರಿಸತಕ್ಕ ದಿನತ್ರಯವೆಂದು ಅರ್ಥವು, ಹೊರತು ಒಂದುವರ್ಷ ಮಾಡಿ ಮುಂದೆ ಬಿಡುವುದು ಎಂದು ಅರ್ಥವಲ್ಲ. ಈ ವ್ರತವನ್ನು ಪ್ರತಿ ಕಾರ್ತಿಕ ಕೃಷ್ಣ ದಶಮಿಯಂದು ''ದಿನತ್ರಯವ್ರತಂ ಕರಿಷ್ಯೇ'' ಎಂದು ಸಂಕಲ್ಪಮಾಡಿ, ವರ್ಷದ ಕೊನೆಗೆ ಕಾರ್ತಿಕ ಶುದ್ಧ ದ್ವಾದಶಿಯಂದು ಉತ್ಸವ (ಉದ್ಯಾಪನಾ) ಮಾಡಬೇಕು. ಅಂಬರೀಷ ರಾಜನು ಈ ರೀತಿ ಮಾಡಿದನು. ''ತ್ರಿರಾತ್ರಂ ಸಮುಪೋಷಿತಃ'' ಎಂದರೆ ದಶಮಿ ರಾತ್ರಿ ಮಾತ್ರ, ಏಕಾದಶೀ ಹಗಲು-ರಾತ್ರಿ, ದ್ವಾದಶಿ ರಾತ್ರಿ ಮಾತ್ರ, ಹೀಗೆ ಉಪವಾಸ ಮಾಡಿ ಎಂದು ತಿಳಿಯಬೇಕು. ದಿನತ್ರಯವೆಂದರೆ ಮೇಲೆ ಹೇಳಿದಂತೆ ದಶಮಿ, ದ್ವಾದಶೀ ಒಂದು ಹೊತ್ತು ಭೋಜನ, ಏಕಾದಶಿ ಪೂರ್ತಿ ಉಪವಾಸ ದ್ವಾದಶಿ ಸಾಧನೀ ಸಾಧಿಸುವುದು, ತ್ರಯೋದಶಿ ಅನುಪಾರಣೆ ಮಾಡುವುದು. ದ್ವಾದಶಿ, ದಶಮೀ ಒಂದು ಭೋಜನ ಅವಶ್ಯ ಕರ್ತವ್ಯ. ಕಾರಣ ಹೇಗೆ ಉಪವಾಸ ಮಾಡಿದನು? ಎಂಬ ಶಂಕೆಗೆ ಅವಕಾಶವಿಲ್ಲ. ಏಕಾದಶೀ ನಿತ್ಯವ್ರತ ಕಾರಣ ಒಂದೇ ವರ್ಷ ಹೇಗೆ ಮಾಡಿದ? ಎಂಬ ಶಂಕೆಗೂ ಅವಕಾಶವಿಲ್ಲ. ।।೧೮।।

**ಮಹಾಭಿಷೇಕವಿಧಿನಾ ಸರ್ವೋಪಸ್ಕರಸಂಪದಾ ।**
**ಅಭಿಷಿಚ್ಯ ವರಾಕಲ್ಪೈರ್ಗಂಧಮಾಲ್ಯಾರ್ಹಣಾದಿಭಿಃ ॥೧೯॥**

**ಮಹಾಭಿಷೇಕವಿಧಿನಾ** ಶ್ರುತ್ಯುಕ್ತ ಸಾಮ್ರಾಜ್ಯಾಭಿಷೇಕ ವಿಧಿಯಿಂದ, **ಅಭಿಷಿಚ್ಯ** ಅಭಿಷೇಕ ಮಾಡಿ, **ಸರ್ವೋಪಸ್ಕರಸಂಪದಾ** ಸರ್ವಸಾಧನಸಂಪತ್ತಿನಿಂದಲೂ, **ವರಾಕಲ್ಪೈಃ** ಉತ್ತಮಾಭರಣಗಳಿಂದಲೂ, **ಗಂಧಮಾಲ್ಯಾರ್ಹಣಾದಿಭಿಃ** ಗಂಧ, ಪುಷ್ಪ, ಮಾಲೆ, ಇತ್ಯಾದಿ ಪೂಜಾದ್ರವ್ಯದಿಂದಲೂ, ಧೂಪ, ದೀಪ, ನೈವೇದ್ಯ, ಗೀತವಾದ್ಯಾದಿಗಳಿಂದಲೂ ಪೂಜಿಸಿದನು.

**ತಾತ್ಪರ್ಯ-** ವೇದೋಕ್ತವಾದ ಸಾಮ್ರಾಜ್ಯಾಭಿಷೇಕವಿಧಿಯಿಂದ ಅಭಿಷೇಕ ಮಾಡಿ, ಸರ್ವಸಾಧನಸಂಪತ್ತಿನಿಂದಲೂ ಉತ್ತಮಾಭರಣಗಳಿಂದಲೂ ಧೂಪ, ನೈವೇದ್ಯ ಗೀತ ಇತ್ಯಾದಿ ಪೂಜಾಸಾಧನಗಳಿಂದ ಪೂಜಿಸಿದನು. ॥೧೯॥

**ತದ್ಗತಾಂತರಭಾವೇನ ಪೂಜಯಾಮಾಸ ಕೇಶವಮ್ ।**
**ಬ್ರಾಹ್ಮಣಾಂಶ್ಚ ಮಹಾಭಾಗಾನ್ ಸಿದ್ಧಾರ್ಥಾನಪಿ ಭಕ್ತಿತಃ ॥೨೦॥**

**ಸಃ** ಅಂಬರೀಷನು, **ತದ್ಗತಾಂತರಭಾವೇನ** ಶ್ರೀಹರಿಯಲ್ಲಿ ನಿಷ್ಠವಾದ ಮನೋವೃತ್ತಿಯಿಂದ, **ಕೇಶವಂ** ಶ್ರೀಹರಿಯನ್ನು, **ಪೂಜಯಾಮಾಸ** ಪೂಜಿಸಿದನು. **ತದ್ಗತಾಂತರಭಾವೇನ** ಶ್ರೀಹರಿಯಲ್ಲಿ ನಿಷ್ಠವಾದ ಮನೋವೃತ್ತಿಯಿಂದ, **ಸಿದ್ಧಾರ್ಥಾನ್ ಅಪಿ** ಪೂಜಾ ಅಪೇಕ್ಷಾ ಇಲ್ಲದ, **ಮಹಾಭಾಗಾನ್** ಪುಣ್ಯಶಾಲಿಗಳಾದ, **ಬ್ರಾಹ್ಮಣಾನ್** ಬ್ರಾಹ್ಮಣರನ್ನೂ ಸಹ, **ಭಕ್ತಿತಃ** ಭಕ್ತಿಯಿಂದ, **ಪೂಜಯಾಮಾಸ** ಪೂಜೆ ಮಾಡಿದನು.

**ತಾತ್ಪರ್ಯ-** ಆ ಅಂಬರೀಷನು ಶ್ರೀಹರಿಯಲ್ಲಿ ನಿಷ್ಠವಾದ ಮನಸ್ಸಿನಿಂದ ಕೇಶವನನ್ನು ಪೂಜಿಸಿದನು. ಅನೇಕ ಪುಣ್ಯಶಾಲಿಗಳಾದ ಬ್ರಾಹ್ಮಣರನ್ನು ಪೂಜಾ ಅಪೇಕ್ಷಿಸದವರಿದ್ದರೂ ಭಕ್ತಿಯಿಂದ ಪೂಜಿಸಿದನು. ॥೨೦॥

**ಗವಾಂ ರುಕ್ಮವಿಷಾಣೀನಾಂ ರೂಪ್ಯಾಂಘ್ರೀಣಾಂ ಸುವಾಸಸಾಮ್ ।**
**ಪಯಃಶೀಲವಯೋರೂಪವತ್ಸೋಪಸ್ಕರಸಂಪದಾಮ್ ॥೨೧॥**

**ರುಕ್ಮವಿಷಾಣೀನಾಂ** ಸುವರ್ಣದ ಕೋಡಣಸುಗಳುಳ್ಳ, **ರೂಪ್ಯಾಂಘ್ರೀಣಾಂ** ಬೆಳ್ಳಿಯ ಗೊರಸು ಕವಚ ಉಳ್ಳ, **ಸುವಾಸಸಾಂ** ಒಳ್ಳೇ ವಸ್ತ್ರಗಳುಳ್ಳ, **ಪಯಃಶೀಲ-ವಯೋರೂಪವತ್ಸೋಪಸ್ಕರಸಂಪದಾಂ** ಹಾಲು ಕರೆಯುವ, ತಾರುಣ್ಯ ಉಳ್ಳ, ರೂಪ ಉಳ್ಳ ಕರುಗಳಿಂದ ಕೂಡಿರುವ ಅನೇಕ ಸಾಧನಗಳಿಂದ ಕೂಡಿದ, ಗೋಸಂಪತ್ತನ್ನು ದಾನ ಮಾಡಿದನು.

**ತಾತ್ಪರ್ಯ-** ಬಂಗಾರದ ಕೋಡಣಸಗಳುಳ್ಳ, ಬೆಳ್ಳಿಯ ಗೊರಸಕವಚಗಳುಳ್ಳ, ಒಳ್ಳೆ ಬಟ್ಟೆಗಳಿಂದ ಅಲಂಕೃತವಾದ ಹಾಲು ಕರೆಯುವುದು, ರೂಪ, ವಯಸ್ಸು, ಗುಣ, ಕರುಗಳು ಇತ್ಯಾದಿಗಳಿಂದ ಸಹಿತವಾದ ಗೋಸಂಪತ್ತನ್ನು ದಾನ ಮಾಡಿದನು. ॥೨೦॥

**ಪ್ರಾಹಿಣೋತ್ ಸಾಧು ವಿಪ್ರೇಭ್ಯೋ ಗೃಹೇಷು ನ್ಯರ್ಬುದಾನಿ ಷಟ್ ।**
**ಭೋಜಯಿತ್ವಾ ದ್ವಿಜಾನಗ್ರೇ ಸ್ವಾದ್ವನ್ನಂ ಗುಣವತ್ತರಮ್ ॥೨೧॥**

**ಸಃ** ಆ ರಾಜನು, **ಅಗ್ರೇ** ಮೊದಲು, **ದ್ವಿಜಾನ್** ಬ್ರಾಹ್ಮಣರನ್ನು, **ಗುಣವತ್ತರಂ** ಷಡ್ರಸೋಪೇತವಾದ, **ಸ್ವಾದು** ರುಚಿಕರವಾದ, **ಅನ್ನಂ** ಆಹಾರವನ್ನು, **ಭೋಜಯಿತ್ವಾ** ಭೋಜನ ಮಾಡಿಸಿ, **ಸಾಧುವಿಪ್ರೇಭ್ಯಃ** ಸಾತ್ವಿಕಬ್ರಾಹ್ಮಣರಿಗೆ **ಗೃಹೇಷು** ಅವರ ಅವರ ಮನೆಗಳಲ್ಲಿ ಇರತಕ್ಕವರುಗಳಿಗೆ, **ನ್ಯರ್ಬುದಾನಿ ಷಟ್** ಆರು ನೂರು ಕೋಟಿಗಳನ್ನು **ಪ್ರಾಹಿಣೋತ್** ಕಳುಹಿಸಿದನು.

**ತಾತ್ಪರ್ಯ-** ಆ ಅಂಬರೀಷ ರಾಜನು ಮೊದಲು ಬ್ರಾಹ್ಮಣರನ್ನು ಷಡ್ರಸೋಪೇತವಾದ ಆಹಾರವನ್ನು ಭಕ್ಷ್ಯಭೋಜ್ಯಾದಿಗಳನ್ನು ಭೋಜನ ಮಾಡಿಸಿದನು. ಸಾತ್ವಿಕರಾದ ಬ್ರಾಹ್ಮಣರಿಗೆ ಅವರವರ ಮನೆಗಳಲ್ಲಿ ಇರತಕ್ಕವರಿಗೆ ಆರುನೂರು ಕೋಟಿ ಗೋವುಗಳನ್ನು (ಹಿಂದಿನ ಪದ್ಯದಲ್ಲಿ ಹೇಳಿದಂತೆ ಇರುವುದನ್ನು) ಕಳುಹಿಸಿಕೊಟ್ಟನು. ॥೨೧॥

**ಲಬ್ಧಕಾಮೈರನುಜ್ಞಾತಃ ಪಾರಣಾಯೋಪಚಕ್ರಮೇ ।**
**ತಸ್ಯ ತರ್ಹ್ಯತಿಥಿಃ ಸಾಕ್ಷಾತ್ ದುರ್ವಾಸಾ ಭಗವಾನಭೂತ್ ॥೨೩॥**

**ಲಬ್ಧಕಾಮೈಃ** ಹೊಂದಲ್ಪಟ್ಟ ಅಭೀಷ್ಟ ಉಳ್ಳ ಬ್ರಾಹ್ಮಣರಿಂದ, **ಅನುಜ್ಞಾತಃ** ಆಜ್ಞಪ್ತನಾದ ಅಂಬರೀಷ ರಾಜನು, **ಪಾರಣಾಯ** ಪಾರಣೆಗೋಸ್ಕರ, **ಉಪಚಕ್ರಮೇ** ಉದ್ಯುಕ್ತನಾದನು. **ತರ್ಹಿ** ಅವಾಗ **ತಸ್ಯ** ಆತನಿಗೆ **ಭಗವಾನ್** ಪೂಜ್ಯರಾದ, **ದುರ್ವಾಸಾಃ** ದುರ್ವಾಸರು, **ಸಾಕ್ಷಾತ್** ಪ್ರತ್ಯಕ್ಷವಾಗಿ, **ಅತಿಥಿಃ** ಅತಿಥಿಯು, **ಅಭೂತ್** ಆದರು.

**ತಾತ್ಪರ್ಯ-** ಅಪೇಕ್ಷೆಯನ್ನು ಪೂರ್ಣವಾಗಿ ಹೊಂದಿದ ಬ್ರಾಹ್ಮಣರಿಂದ ಆಜ್ಞಪ್ತನಾದ ಅಂಬರೀಷರಾಜನು ಪಾರಣೆಗಾಗಿ ಉದ್ಯುಕ್ತನಾದನು. ಅವಾಗ ಆತನಿಗೆ ಪೂಜ್ಯರಾದ ದುರ್ವಾಸರು ಪ್ರತ್ಯಕ್ಷವಾಗಿ ಅತಿಥಿಗಳಾದರು. ॥೨೩॥

**ತಮಾನರ್ಚಾತಿಥಿಂ ಭೂಯಃ ಪ್ರತ್ಯುತ್ಥಾನಾಸನಾರ್ಹಣೈಃ ।**
**ಯಯಾಚೇಽಭ್ಯವಹಾರಾಯ ಪಾದಮೂಲಮುಪಾಗತಃ ॥೨೪॥**

**ಸಃ** ಅಂಬರೀಷನು, **ತಂ** ಆ **ಅತಿಥಿಂ** ಅತಿಥಿಗಳಾದ ದುರ್ವಾಸರನ್ನು, **ಭೂಯಃ** ಪುನಃ ಪುನಃ **ಪಾದಮೂಲಂ** ಪಾದತಳವನ್ನು, **ಉಪಾಗತಃ** ಆಶ್ರಯಿಸಿ **ಪ್ರತ್ಯುತ್ಥಾನಾಸನಾರ್ಹಣೈಃ** ಎದ್ದು ನಿಲ್ಲುವುದು, ಆಸನಕೊಡುವುದು, ಇತ್ಯಾದಿ **ಅರ್ಹಣೈಃ** ಪೂಜಾಗಳಿಂದ (ಅರ್ಘ್ಯಪಾದ್ಯಾದಿ ಸಾಧನಗಳಿಂದ) **ಭೂಯಃ** ಪುನಃ ಪುನಃ **ಆನರ್ಚ** ಪೂಜಿಸಿದನು. **ಪಾದಮೂಲಂ** ಪಾದತಳವನ್ನು, **ಉಪಾಗತಃ** ಆಶ್ರಯಿಸಿ ನಮಸ್ಕರಿಸಿ, **ಅಭ್ಯವಹಾರಾಯ** ಭೋಜನಕ್ಕಾಗಿ, **ಯಯಾಚೇ** ಪ್ರಾರ್ಥಿಸಿದನು.

**ತಾತ್ಪರ್ಯ-** ಆ ಅಂಬರೀಷ ರಾಜನು ಅತಿಥಿಗಳಾದ ದುರ್ವಾಸರನ್ನು ಪ್ರತ್ಯುತ್ಥಾನಾದಿಗಳಿಂದ, ಪೂಜಾಸಾಧನಗಳಿಂದ ಪುನಃ ಪುನಃ ಪೂಜಿಸಿ ಪಾದತಳವನ್ನು ಆಶ್ರಯಿಸಿ, ಭೋಜನಕ್ಕಾಗಿ ಪ್ರಾರ್ಥಿಸಿಕೊಂಡನು. ॥೨೪॥

**ಪ್ರತಿನಂದ್ಯ ಸ ತದ್ಯಾಂಚ್ಞಾಂ ಕರ್ತುಮಾವಶ್ಯಕಂ ಗತಃ ।**
**ನಿಮಮಜ್ಜ ಬೃಹದ್ಧ್ಯಾಯನ್ ಕಾಲಿಂದೀಸಲಿಲೇ ಶುಚೌ ॥೨೫॥**

**ಸಃ** ಆ ದೂರ್ವಾಸರು, **ತದ್ಯಾಂಚ್ಞಾಂ** ಆ ಅಂಬರೀಷನ ಪ್ರಾರ್ಥನೆಯನ್ನು, **ಪ್ರತಿನಂದ್ಯ** ಅನುಮೋದಿಸಿ, **ಆವಶ್ಯಕಂ** ಅವಶ್ಯವಾದ ನಿತ್ಯಕರ್ಮವನ್ನು (ಸಂಧ್ಯಾವಂದನಾದಿ) **ಕರ್ತುಂ** ಮಾಡಲು, **ಗತಃ** ಹೋದರು, **ಶುಚೌ** ಶುದ್ಧವಾದ, **ಕಾಲಿಂದೀಸಲಿಲೇ** ಕಾಲಿಂದೀಜಲದಲ್ಲಿ, **ಬೃಹತ್** ಬ್ರಹ್ಮನನ್ನು **ಧ್ಯಾಯನ್** ಧ್ಯಾನ ಮಾಡುತ್ತಾ **ನಿಮಮಜ್ಜ** ಸ್ನಾನ ಮಾಡಿದರು.

**ತಾತ್ಪರ್ಯ-** ಆ ದೂರ್ವಾಸರು ಅಂಬರೀಷನ ಪ್ರಾರ್ಥನೆಯನ್ನು ಅನುಮೋದಿಸಿ ನಿತ್ಯಕರ್ಮವಾದ ಸಂಧ್ಯಾವಂದನಾದಿಗಳನ್ನು ಮಾಡಲು ಹೋದರು. ಪರಬ್ರಹ್ಮನನ್ನು ಧ್ಯಾನ ಮಾಡುತ್ತಾ ಶುದ್ಧವಾದ ಕಾಲಿಂದೀಜಲದಲ್ಲಿ ಸ್ನಾನ ಮಾಡಿದರು. ॥೨೫॥

**ಮುಹೂರ್ತಾರ್ಧಾವಶಿಷ್ಟಾಯಾಂ ದ್ವಾದಶ್ಯಾಂ ಪಾರಣಂ ಪ್ರತಿ ।**
**ಚಿಂತಯಾಮಾಸ ಧರ್ಮಜ್ಞೋ ದ್ವಿಜೈಸ್ತದ್ಧರ್ಮಸಂಕಟೇ ॥೨೬॥**

**ಧರ್ಮಜ್ಞಃ** ಧರ್ಮಜ್ಞನಾದ ಅಂಬರೀಷನು, **ದ್ವಾದಶ್ಯಾಂ** ದ್ವಾದಶಿಯು **ಮುಹೂರ್ತಾರ್ಧಾವಶಿಷ್ಟಾಯಾಂ** ಅರ್ಧ ಮುಹೂರ್ತ ಮಾತ್ರ ಉಳಿದಿರಲು, **ಪಾರಣಂ ಪ್ರತಿ** ಪಾರಣೆಯನ್ನು ಕುರಿತು, **ತದ್ಧರ್ಮಸಂಕಟೇ** ಆ ಧರ್ಮಸಂಕಟ ವಿಷಯದಲ್ಲಿ, **ದ್ವಿಜೈಃ** ಬ್ರಾಹ್ಮಣರಿಂದ ಸಹಿತನಾಗಿ, **ಚಿಂತಯಾಮಾಸ** ವಿಚಾರಿಸಿದನು.

**ತಾತ್ಪರ್ಯ-** ಧರ್ಮಜ್ಞನಾದ ಅಂಬರೀಷನು, ದ್ವಾದಶಿಯು ಅರ್ಧಮುಹೂರ್ತ ಉಳಿದಿರಲು (ಈವರೆಗೂ, ಸಂಧ್ಯಾಗೋಸ್ಕರ ಕಾಲಿಂದಿಗೆ ಹೋದ ದೂರ್ವಾಸರು ಪಾರಣಾ ಸಮಯಕ್ಕೆ ಬರದಿರಲು) ಈ ಧರ್ಮಸಂಕಟ ವಿಷಯದಲ್ಲಿ ತಾನು ಪಾರಣೆ ಮಾಡುವ ವಿಷಯದಲ್ಲಿ ಬ್ರಾಹ್ಮಣರ ಸಹಿತನಾಗಿ ವಿಚಾರ ಮಾಡಿದರು.

**ಬ್ರಾಹ್ಮಣಾತಿಕ್ರಮೇ ದೋಷೋ ದ್ವಾದಶ್ಯಾಂ ಯದಪಾರಣೇ ।**
**ಯತ್ಕೃತ್ವಾ ಸಾಧು ಮೇ ಭೂಯಾದಧರ್ಮೋ ವಾ ನ ಮಾಂ ಸ್ಪೃಶೇತ್ ॥**

**ಬ್ರಾಹ್ಮಣಾತಿಕ್ರಮೇ** ಆಮಂತ್ರಿತರಾದ ಬ್ರಾಹ್ಮಣರನ್ನು ಬಿಟ್ಟು ಊಟ ಮಾಡುವುದು, ಮತ್ತು **ದ್ವಾದಶ್ಯಾಂ** ದ್ವಾದಶಿಯಲ್ಲಿ, **ಅಪಾರಣೇ** ಪಾರಣೆ ಮಾಡದಿದ್ದರೂ **ದೋಷಃ** ದೋಷವು ಈ ರೀತಿಯಾಗಿ ಎರಡು ಸಂಕಟವು ಸಂಭವಿಸಲು, **ಯತ್ಕೃತ್ವಾ** ಏನನ್ನು ಮಾಡುವುದರಿಂದ, **ಮೇ** ನನಗೆ **ಸಾಧು** ಶ್ರೇಯಸ್ಸು **ಭೂಯಾತ್** ಆಗುತ್ತದೆ. **ಮಾಂ** ನನ್ನನ್ನು **ಅಧರ್ಮಃ** ಒಂದನ್ನು ಬಿಡುವುದರಿಂದ ಬರುವ ದೋಷವು, **ನ ಸ್ಪೃಶೇತ್** ಸಂಬಂಧಿಸುವುದಿಲ್ಲ? ಎಂದು ಕೇಳಿದನು.

**ತಾತ್ಪರ್ಯ-** ಅಂಬರೀಷನು, ಬ್ರಾಹ್ಮಣರನ್ನು ಏನೆಂದು ವಿಚಾರಿಸಿದನು ಎಂದರೆ ನಾನು ದೂರ್ವಾಸರನ್ನು ಪಾರಣೆಗಾಗಿ ಆಹ್ವಾನಿಸಿದ್ದೇನೆ. ಬ್ರಾಹ್ಮಣರಾದ ಇವರು ಇದುವರೆಗೂ ಕಾಲಿಂದಿಯಿಂದ ನಿತ್ಯವಿಧಿಯಾದ ಸಂಧ್ಯಾದಿಗಳನ್ನು ಮುಗಿಸಿ ಬರಲಿಲ್ಲ. ಇವರನ್ನು ಬಿಟ್ಟು ಪಾರಣೆ ಮಾಡಲೇ? ಅಥವಾ ಪಾರಣಾಕಾಲವನ್ನು ಮೀರಲೇ? ಈ ರೀತಿಯಾದ ಧರ್ಮಸಂಕಟಕ್ಕೆ ಸಮಾಧಾನವನ್ನು ಹೇಳುವಂತೆ ಕೇಳಿದನು. ।।೨೭।।

**ಅಂಭಸಾ ಕೇವಲೇನಾದ್ಯ ಕರಿಷ್ಯೇ ವ್ರತಪಾರಣಮ್ ।**
**ಆಹುರಬ್ಭಕ್ಷಣಂ ವಿಪ್ರಾ ಹ್ಯಶಿತಂ ನಾಶಿತಂ ಚ ಯತ್ ॥ ೨೮॥**

**ವಿಪ್ರಾಃ!** ಬ್ರಾಹ್ಮಣರೇ! **ಕೇವಲೇನ** ಅನ್ನಾದಿರಹಿತವಾದ, (ಕೇವಲೇನ ಕೇವಲವಾದ) **ಅಂಭಸಾ** ನೀರಿನಿಂದ **ವ್ರತಪಾರಣಂ** ಪಾರಣೆಯನ್ನು, **ಕರಿಷ್ಯೇ** ಮಾಡುತ್ತೇನೆ, **ವಿಪ್ರಾಃ** ಬ್ರಾಹ್ಮಣರು **ಯತ್** ಯಾವ **ಅಬ್‌ಭಕ್ಷಣಂ** ನೀರು ಪಾರಣೆಯನ್ನು, **ಅಶಿತಂ** ಪಾರಣೆ ಮಾಡಿದಂತೆಯೂ, **ನಾಶಿತಂ** ಭೋಜನ ಮಾಡದೇ ಇದ್ದಂತೆಯೂ, **ಆಹುಃ** ಹೇಳುತ್ತಾರೆ. (''ಆಪೋಽಶ್ನಾತಿ ವೈ ತನ್ನೈವಾಶಿತಂ ತೇನೈವಾಶಿತಂ'' ಶ್ರುತಿ. ''ಅಶಿತಾನಶಿತಾ ಆಪಃ'' ಸ್ಮೃತಿ).

**ತಾತ್ಪರ್ಯ-** ಬ್ರಾಹ್ಮಣರೇ! ಅನ್ನಾದಿರಹಿತವಾದ ಕೇವಲ ಜಲಪಾನವನ್ನು ಮಾಡುತ್ತೇನೆ. ಸ್ಮೃತಿಗಳು ಮತ್ತು ವೇದಗಳು ನೀರಿನ ಪಾರಣೆಯು ಹಿಂದಿನ ವ್ರತಕ್ಕೆ

ಪಾರಣೆ ಮಾಡಿದಂತೆಯೂ, ಭೋಜನ ಮಾಡದಿದ್ದಂತೆಯೂ ಆಗುತ್ತದೆಂದು ಹೇಳುತ್ತವೆ. ||೨೮||

**ಇತ್ಯಪಃ ಪ್ರಾಶ್ಯ ರಾಜರ್ಷಿಶ್ಚಿಂತಯನ್ ಮನಸಾಽಚ್ಯುತಮ್ ।**
**ಪ್ರತ್ಯಾಚಷ್ಟ ಕುರುಶ್ರೇಷ್ಠ ದ್ವಿಜಾಗಮನಮೇವ ಸಃ ||೨೯||**

**ಕುರುಶ್ರೇಷ್ಠ** ಕುರುರಾಜನೇ, **ಇತಿ** ಈ ರೀತಿ ವಿಚಾರಮಾಡಿ, **ರಾಜರ್ಷಿಃ** ಅಂಬರೀಷ ರಾಜನು, **ಅಪಃ** ನೀರನ್ನು, **ಪ್ರಾಶ್ಯ** ಪ್ರಾಶನ ಮಾಡಿ, **ಸಃ** ಆ ರಾಜನು **ಅಚ್ಯುತಂ** ಪರಮಾತ್ಮನನ್ನು, **ಮನಸಾ** ಮನಸ್ಸಿನಿಂದ, **ಚಿಂತಯನ್** ಧ್ಯಾನಿಸುತ್ತಾ, **ದ್ವಿಜಾಗಮನಂ** ದೂರ್ವಾಸರ ಆಗಮನವನ್ನೇ **ಪ್ರತ್ಯಾಚಷ್ಟ** ನಿರೀಕ್ಷಿಸುತ್ತಿದ್ದನು.

**ತಾತ್ಪರ್ಯ-** ಪರೀಕ್ಷಿತ್ ರಾಜನೇ ! ಈ ರೀತಿ ವಿಚಾರ ಮಾಡಿದ ಆ ರಾಜನು ನೀರನ್ನು ಪಾನ ಮಾಡಿ ಈ ರೀತಿಯಾಗಿ ಅಶನಾನಶನರೂಪವಾದ ಜಲಪಾರಣೆ ಮಾಡಿದರೂ, ದೂರ್ವಾಸರು ಕೋಪಿಸಿದರೇ ನೀನೇ ಗತಿಯೆಂದು ಪರಮಾತ್ಮನನ್ನು ಧ್ಯಾನಮಾಡುತ್ತಾ, ದೂರ್ವಾಸರ ಆಗಮನವನ್ನೇ ನಿರೀಕ್ಷಿಸುತ್ತಿದ್ದನು. ||೨೯||

**ದುರ್ವಾಸಾ ಯಮುನಾಕೂಲಾತ್ಕೃತಾವಶ್ಯಕ ಆಗತಃ ।**
**ರಾಜ್ಞಾಽಭಿಚ್ಛಂದಿತಸ್ತಸ್ಯ ಬುಬುಧೇ ಚೇಷ್ಟಿತಂ ಧಿಯಾ ||೩೦||**

**ದುರ್ವಾಸಾಃ** ದುರ್ವಾಸರು, **ಕೃತಾವಶ್ಯಕಃ** ನಿತ್ಯವಿಧಿ ಮುಗಿಸಿದವರಾಗಿ, **ಯಮುನಾಕೂಲಾತ್** ಯಮುನಾತೀರದಿಂದ, **ಆಗತಃ** ಬಂದರು. **ರಾಜ್ಞಾ** ಅಂಬರೀಷನಿಂದ, **ಅಭಿಚ್ಛಂದಿತಃ** ಸತ್ಕಾರ ಹೊಂದಿದವರಾಗಿ, **ತಸ್ಯ** ಆ ರಾಜನ, **ಚೇಷ್ಟಿತಂ** ಜಲಪಾನ ಮಾಡಿದ ಕಾರ್ಯವನ್ನು, **ಧಿಯಾ** ಜ್ಞಾನದೃಷ್ಟಿಯಿಂದ, **ಬುಬುಧೇ** ತಿಳಿದರು.

**ತಾತ್ಪರ್ಯ-** ದುರ್ವಾಸರು ನಿತ್ಯವಿಧಿಯನ್ನು ಮುಗಿಸಿದವರಾಗಿ ಯಮುನಾ-ತೀರದಿಂದ, ರಾಜನ ಸಮೀಪಕ್ಕೆ ಬಂದರು. ರಾಜನು ಮಾಡಿದ ಜಲಪಾನರೂಪವಾದ ಪಾರಣಾ ವಿಷಯವನ್ನು ತಮ್ಮ ಜ್ಞಾನದೃಷ್ಟಿಯಿಂದ ತಿಳಿದರು. ||೩೦||

**ಮನ್ಯುನಾ ಪ್ರಚಲದ್ಗಾತ್ರೋ ಭೃಕುಟೀಕುಟಿಲಾನನಃ ।**
**ಬುಭುಕ್ಷಿತಶ್ಚ ಸುತರಾಂ ಕೃತಾಂಜಲಿಮಭಾಷತ ||೩೧||**

**ಮನ್ಯುನಾ** ಕೋಪದಿಂದ **ಪ್ರಚಲದ್ಗಾತ್ರಃ** ನಡಗುತ್ತಿರುವ ಶರೀರ ಉಳ್ಳ, **ಭೃಕುಟೀಕುಟಿಲಾನನಃ** ಹುಬ್ಬಿನ ಗಂಟಿಕ್ಕುವುದರಿಂದ ಕುಟಿಲವಾದ ಮುಖ ಉಳ್ಳ, **ಸುತರಾಂ** ವಿಶೇಷವಾಗಿ, **ಬುಭುಕ್ಷಿತಃ** ಹಸಿವಿನಿಂದ ಕೂಡಿದ ದುರ್ವಾಸರು,

**ಕೃತಾಂಜಲಿಂ** ಕೈ ಮುಗಿದುಕೊಂಡು ನಿಂತಿರುವ ರಾಜನನ್ನು ಕುರಿತು, **ಅಭಾಷತ** ಮಾತನಾಡಿದರು.

**ತಾತ್ಪರ್ಯ-** ದುರ್ವಾಸರು ಕುಪಿತರಾದರು. ಕೋಪದಿಂದ ಅವರ ದೇಹವು ನಡಗಲಾರಂಭಿಸಿತು. ಹಸಿದ ದೂರ್ವಾಸರು ನಮ್ರನಾಗಿ ಕೈ ಜೋಡಿಸಿ ನಿಂತಿರುವ ರಾಜನನ್ನು ಕುರಿತು ಮಾತನಾಡಿದರು. ।।೩೧।।

**ಅಹೋ ಅಸ್ಯ ನೃಶಂಸಸ್ಯ ಶ್ರಿಯೋನ್ಮತ್ತಸ್ಯ ಪಶ್ಯತ ।**
**ಧರ್ಮವ್ಯತಿಕ್ರಮಂ ವಿಷ್ಣೋರಭಕ್ತಸ್ಯೇಷ್ಟಮಾನಿನಃ ।।೩೨।।**

**ಅಹೋ!** ಆಶ್ಚರ್ಯವು, **ನೃಶಂಸಸ್ಯ** ಕ್ರೂರಿಯಾದ **ಶ್ರಿಯೋನ್ಮತ್ತಸ್ಯ** ಐಶ್ವರ್ಯಮತ್ತನಾದ, **ಅಭಕ್ತಸ್ಯ** ಭಗವದ್ಭಕ್ತರಲ್ಲಿ ಭಕ್ತಿ ಇಲ್ಲದ, **ವಿಷ್ಣೋಃ** ವಿಷ್ಣುವಿನ, **ಇಷ್ಟಮಾನಿನಃ** ಪ್ರೀತಿಪಾತ್ರನೂ ಎಂದು ದುರಭಿಮಾನ ಉಳ್ಳ, **ಅಸ್ಯ** ಈತನ **ಧರ್ಮವ್ಯತಿಕ್ರಮಂ** ಧರ್ಮಾತಿಕ್ರಮಣವನ್ನು **ಪಶ್ಯತ** ನೋಡಿರಿ ಎಂದು ಹೇಳಿದರು.

**ತಾತ್ಪರ್ಯ-** ಈ ರಾಜನು ಕ್ರೂರಿಯಾಗಿರುತ್ತಾನೆ. ಐಶ್ವರ್ಯದಿಂದ ಉನ್ಮತ್ತನಾಗಿರುತ್ತಾನೆ. ಭಗವದ್ಭಕ್ತರಲ್ಲಿ ಭಕ್ತನಾಗಿರುವುದಿಲ್ಲ. ತಾನೇ ವಿಷ್ಣುವಿನ ಭಕ್ತನೆಂದು ದುರಭಿಮಾನಿಯಾಗಿರುತ್ತಾನೆ. ಈತನ ಧರ್ಮಾತಿಕ್ರಮಣವನ್ನು ನೋಡಿರಿ. ।।೩೨।।

**ಯೋ ಮಾಮತಿಥಿಮಾಯಾಂತಮಾತಿಥ್ಯೇನ ನಿಮಂತ್ರ್ಯ ಚ ।**
**ಅದತ್ವಾ ಭುಕ್ತವಾಂಸ್ತಸ್ಯ ಸದ್ಯಸ್ತೇ ದರ್ಶಯೇ ಫಲಮ್ ।।೩೩।।**

**ಯಃ** ಯಾವ ಈ ಅಂಬರೀಷನು, **ಆಯಾಂತಂ** ಬರುತ್ತಿರುವ, **ಅತಿಥಿಂ** ಅತಿಥಿಯಾದ **ಮಾಂ** ನನ್ನನ್ನು, **ಆತಿಥ್ಯೇನ** ಆತಿಥ್ಯದಿಂದ **ಆಮಂತ್ರ್ಯ** ಕರೆದು, **ಅದತ್ವಾ** ಅನ್ನವನ್ನು ನನಗೆ ಕೊಡದೇ, **ಭುಕ್ತವಾನ್** ಭೋಜನ ಮಾಡಿರುತ್ತಾನೆ. ಹೇ! ರಾಜನೇ! **ಸದ್ಯಃ** ಈಗಲೇ **ತೇ** ನಿನಗೆ, **ಫಲಂ** ಈ ಅತಿಕ್ರಮಣದ ಫಲವನ್ನು **ದರ್ಶಯೇ** ತೋರಿಸುತ್ತೇನೆ.

**ತಾತ್ಪರ್ಯ-** ಈ ಅಂಬರೀಷ ರಾಜನು ನನ್ನನ್ನು ಅತಿಥಿಯನ್ನಾಗಿ ಆಮಂತ್ರಿಸಿ ನನಗೆ ಅನ್ನವನ್ನು ಕೊಡದೇ ತಾನು ಭೋಜನ ಮಾಡಿರುತ್ತಾನೆ. ಹೇ! ರಾಜನೇ! ಈಗಲೇ ನಿನಗೆ ಈ ರೀತಿ ನನ್ನನ್ನು ಅತಿಕ್ರಮಿಸಿದ್ದರ ಫಲವನ್ನು ತೋರಿಸುತ್ತೇನೆ.

**ಏವಂ ಬ್ರುವಾಣ ಉತ್ಕೃತ್ಯ ಜಟಾಂ ರೋಷವಿದೀಪಿತಃ ।**
**ತಯಾ ಸ ನಿರ್ಮಮೇ ತಸ್ಮೈ ಕೃತ್ಯಾಂ ಕಾಲಾನಲೋಪಮಾಮ್ ।।೩೪।।**

**ಏವಂ** ಈ ರೀತಿಯಾಗಿ, **ರೋಷವಿದೀಪಿತಃ** ಕೋಪದಿಂದ ತಪ್ತರಾದ, ದೂರ್ವಾಸರು, **ಏವಂ** ಈ ರೀತಿಯಾಗಿ, **ಬ್ರುವಾಣಃ** ಮಾತನಾಡುತ್ತಾ, **ಜಟಾಂ** ಜಟೆಯನ್ನು, **ಉತ್ಕೃತ್ಯ** ಕಿತ್ತಿ, **ತಯಾ** ಆ ಜಟೆಯಿಂದ **ಕಾಲಾನಲೋಪಮಾಂ** ಕಾಲಾಗ್ನಿಸಮಾನವಾದ, **ಕೃತ್ಯಾಂ** ಆಭಿಚಾರಿಕದೇವತೆಯನ್ನು **ತಸ್ಮೈ** ರಾಜನಿಗಾಗಿ, **ನಿರ್ಮಮೇ** ನಿರ್ಮಿಸಿದನು.

**ತಾತ್ಪರ್ಯ-** ಈ ರೀತಿಯಾಗಿ ಮಾತನಾಡಿದ ಕೋಪದಿಂದ ಸಂತಪ್ತರಾದ ದುರ್ವಾಸರು, ತಮ್ಮ ಜಟೆಯನ್ನು ಹರಡಿಸಿ ಅದರಿಂದ ಅಭಿಚಾರಿಕದೇವತೆಯನ್ನು ರಾಜನಿಗೋಸ್ಕರ ನಿರ್ಮಿಸಿದರು. ||೩೪||

**ತಾಮಾಪತಂತೀಂ ಜ್ವಲತೀಮಸಿಹಸ್ತಾಂ ಪದಾ ಭುವಮ್ ।**
**ವೇಪಯಂತೀಂ ಸಮುದ್ವೀಕ್ಷ್ಯ ನ ಚಚಾಲ ಪದಾನ್ನೃಪಃ ||೩೫||**

**ನೃಪಃ** ರಾಜನು, **ಜ್ವಲಂತೀಂ** ಉರಿಯುತ್ತಿರುವ, **ಅಸಿಹಸ್ತಾಂ** ಖಡ್ಗವನ್ನು ಹಸ್ತದಲ್ಲಿ ಧರಿಸಿದ, **ಪದಾ** ಪಾದದಿಂದ, **ಭುವಂ** ಭೂಮಿಯನ್ನು, **ವೇಪಯಂತೀಂ** ನಡುಗಿಸುವ, **ಆಪತಂತೀಂ** ಎದುರಿಗೆ ಬರುತ್ತಿರುವ **ತಾಂ** ಕೃತ್ಯದೇವತೆಯನ್ನು, **ಸಮುದ್ವೀಕ್ಷ್ಯ** ಸಂತೋಷದಿಂದ ನೋಡಿ, **ಪದಾತ್** ತನ್ನ ಸ್ಥಾನದಿಂದ **ನ ಚಚಾಲ** ಚಲಿಸಲಿಲ್ಲ.

**ತಾತ್ಪರ್ಯ-** ಅಂಬರೀಷ ರಾಜನು ಉರಿಯುತ್ತಿರುವ, ಖಡ್ಗವನ್ನು ಹಸ್ತದಲ್ಲಿ ಧರಿಸಿದ, ಕಾಲಿನಿಂದ ಭೂಮಿಯನ್ನು ನಡುಗಿಸುತ್ತಾ ಎದುರಿಗೆ ಬರುತ್ತಿರುವ ಆ ಕೃತ್ಯದೇವತೆಯನ್ನು ಸಂತೋಷದಿಂದ ನೋಡಿ ತನ್ನ ಸ್ಥಾನದಿಂದ ಚಲಿಸಲಿಲ್ಲ.

**ಶ್ರೀಶುಕ ಉವಾಚ-**

**ಆದಿಷ್ಟಂ ಭಕ್ತರಕ್ಷಾಯಾಂ ಪುರುಷೇಣ ಮಹಾತ್ಮನಾ ।**
**ದದಾಹ ಕೃತ್ಯಾಂ ತಾಂ ಚಕ್ರಂ ಕೃದ್ಧಾಹಿಮಿವ ಪಾವಕಃ ||೩೬||**

**ಮಹಾತ್ಮನಾ** ಮಹಾತ್ಮನಾದ, **ಪುರುಷೇಣ** ಭಗವಂತನಿಂದ, **ಭಕ್ತರಕ್ಷಾಯಾಂ** ಭಕ್ತರಕ್ಷಣೆಗಾಗಿ, **ಆದಿಷ್ಟಂ** ಆಜ್ಞಪ್ತವಾದ, **ಚಕ್ರಂ** ಚಕ್ರಾಯುಧವು, **ತಾಂ** ಆ **ಕೃತ್ಯಾಂ** ಅಭಿಚಾರಿಕ ದೇವತೆಯನ್ನು, **ಪಾವಕಃ** ದಾವಾಗ್ನಿಯು, **ಕೃದ್ಧಾಹಿಂ ಇವ** ಕ್ರೂರವಾದ ಸರ್ಪವನ್ನು ಸುಟ್ಟು ಹಾಕುವಂತೆ **ದದಾಹ** ದಹನ ಮಾಡಿತು.

**ತಾತ್ಪರ್ಯ-** ಮಹಾತ್ಮನಾದ ಭಗವಂತನಿಂದ ಭಕ್ತರ ರಕ್ಷಣೆಗಾಗಿ ಆಜ್ಞಪ್ತವಾದ ಚಕ್ರಾಯುಧವು ಆ ಅಭಿಚಾರಿಕದೇವತೆಯನ್ನು ದಾವಾಗ್ನಿಯು ಕ್ರೂರವಾದ ಸರ್ಪವನ್ನು ದಹಿಸುವಂತೆ ದಹನ ಮಾಡಿತು. ||೩೬||

**ತದಭಿದ್ರವದುದ್ವೀಕ್ಷ್ಯ ಸ್ವಪ್ರಯಾಸಂ ಚ ನಿಷ್ಫಲಮ್ ।**
**ದೂರ್ವಾಸಾ ದುದ್ರುವೇ ಭೀತೋ ದಿಕ್ಷು ಪ್ರಾಣಪರೀಪ್ಸಯಾ ॥೩೭॥**

**ತತ್** ಆ ಚಕ್ರವು, **ಅಭಿದ್ರವತ್** ತನ್ನನ್ನು ಹಿಂಬಾಲಿಸುತ್ತಿರುವುದನ್ನು, **ಉದ್ವೀಕ್ಷ್ಯ** ನೋಡಿ, **ಸ್ವಪ್ರಯಾಸಂ** ತನ್ನ ಶ್ರಮವು **ನಿಷ್ಫಲಂ ಚ** ನಿಷ್ಫಲವಾದದ್ದನ್ನು **ಉದ್ವೀಕ್ಷ್ಯ** ನೋಡಿ, **ದುರ್ವಾಸಾಃ** ದುರ್ವಾಸನು, **ಭೀತಃ** ಭೀತನಾಗಿ, **ಪ್ರಾಣಪರೀಪ್ಸಯಾ** ತನ್ನ ಪ್ರಾಣರಕ್ಷಣೆಗಾಗಿ, **ದಿಕ್ಷು** ದಿಕ್ಕುಗಳಲ್ಲಿ, **ದುದ್ರುವೇ** ಓಡಿದನು.

**ತಾತ್ಪರ್ಯ-** ಆ ಚಕ್ರವು ಮುನಿಯನ್ನು ಹಿಂಬಾಲಿಸುತ್ತಿರುವುದನ್ನು ನೋಡಿ ಮತ್ತು ತನ್ನ ಪ್ರಯಾಸವೂ ನಿಷ್ಫಲವಾದದ್ದನ್ನು ನೋಡಿದ ಮುನಿಗಳು ತನ್ನ ಪ್ರಾಣ ರಕ್ಷಣೆಗಾಗಿ ಓಡಿದರು. ॥೩೭॥

**ತಮನ್ವಧಾವದ್ಭಗವದ್ರಥಾಂಗಂ**
**ದಾವಾಗ್ನಿರುದ್ಧೂತಶಿಖೋ ಯಥಾಹಿಮ್ ।**
**ತಥಾನುಷಕ್ತಂ ಮುನಿರೀಕ್ಷಮಾಣೋ**
**ಗುಹಾಂ ವಿವಿಕ್ಷುಃ ಪ್ರಸಸಾರ ಮೇರೋಃ ॥೩೮॥**

**ಉದ್ಧೂತಶಿಖಃ** ಮೇಲೇರುತ್ತಿರುವ ಶಿಖಾ ಉಳ್ಳ, **ದಾವಾಗ್ನಿಃ** ಕಾಡ್ಗಿಚ್ಚು, **ಯಥಾ** ಹೇಗೋ ಹಾಗೇ, **ಅನುಷಕ್ತಂ** ತನ್ನನ್ನು ಹಿಂಬಾಲಿಸಿ ಮೇಲೆ ಬರುತ್ತಿರುವ **ಭಗವದ್ರಥಾಂಗಂ** ಶ್ರೀಶನ ಚಕ್ರವನ್ನು, **ಈಕ್ಷಮಾಣಃ** ನೋಡುತ್ತಿರುವ, **ಮುನಿಃ** ದುರ್ವಾಸರು, **ಮೇರೋಃ** ಮೇರುಪರ್ವತದ, **ಗುಹಾಂ** ಗುಹೆಯನ್ನು, **ವಿವಿಕ್ಷುಃ** ಪ್ರವೇಶಿಸಲು ಅಪೇಕ್ಷೆ ಉಳ್ಳವರಾಗಿ, **ಪ್ರಸಸಾರ** ಓಡಿಹೋದರು.

**ತಾತ್ಪರ್ಯ-** ಮೇಲೆ ಮೇಲೇಳುತ್ತಿರುವ ಜ್ವಾಲೆಯುಳ್ಳ ದಾವಾಗ್ನಿಯು ಸರ್ಪವನ್ನು ಹಿಂಬಾಲಿಸುವಂತೆ ತನ್ನನ್ನು ಹಿಂಬಾಲಿಸಿ ಮೇಲೆ ಬರುತ್ತಿರುವ ಚಕ್ರವನ್ನು ನೋಡಿ ದುರ್ವಾಸರು ಮೇರುಪರ್ವತದ ಗುಹೆಯನ್ನು ಪ್ರವೇಶಿಸಲು ಓಡಿದರು. ॥೩೮॥

**ದಿಶೋ ನಭಃ ಕ್ಷ್ಮಾಂ ವಿವರಾನ್ ಸಮುದ್ರಾನ್**
**ಲೋಕಾನ್ ಸಪಾಲಾನ್ ತ್ರಿದಿವಂ ಗತಃ ಸಃ ।**
**ಯತೋ ಯತೋ ಧಾವತಿ ತತ್ರ ತತ್ರ**
**ಸುದರ್ಶನಂ ದುಷ್ಪ್ರಸಹಂ ದದರ್ಶ ॥೩೯॥**

**ಸಃ** ಆ ದುರ್ವಾಸರು, **ದಿಶಃ** ದಿಕ್ಕುಗಳನ್ನು **ನಭಃ** ಆಕಾಶವನ್ನು, **ಕ್ಷ್ಮಾಂ** ಭೂಮಿಯನ್ನು, **ವಿವರಾನ್** ಪಾತಾಲವನ್ನು, **ಸಮುದ್ರಾನ್** ಸಮುದ್ರಗಳನ್ನು **ಸಪಾಲಾನ್** ದಿಕ್ಪಾಲಕಸಹಿತರಾದ, **ಲೋಕಾನ್** ಲೋಕಗಳನ್ನು **ತ್ರಿದಿವಂ** ಸ್ವರ್ಗವನ್ನು,

**ಗತಃ** ಹೋದರು. **ಯತಃ ಯತಃ** ಎಲ್ಲಿ ಎಲ್ಲಿ, **ಧಾವತಿ** ಓಡುತ್ತಿದ್ದರೋ **ತತ್ರ ತತ್ರ** ಅಲ್ಲಿ ಅಲ್ಲಿ, **ದುಷ್ಪ್ರಸಹಂ** ಸಹಿಸಲಶಕ್ಯವಾದ, **ಸುದರ್ಶನಂ** ತನ್ನನ್ನು ಹಿಂಬಾಲಿಸುತ್ತಿರುವ ಚಕ್ರಾಯುಧವನ್ನು, **ದದರ್ಶ** ನೋಡಿದರು.

**ತಾತ್ಪರ್ಯ-** ದುರ್ವಾಸರು ದಿಕ್ಕು, ಆಕಾಶ ಭೂಮಿ, ಪಾತಾಲ, ಸಮುದ್ರ, ದಿಕ್ಪಾಲಸಹಿತವಾದ ಲೋಕಗಳನ್ನು, ಸ್ವರ್ಗಲೋಕವನ್ನು ಕುರಿತು ಓಡುತ್ತಿರಲು ಅಲ್ಲಲ್ಲಿ ಅವರನ್ನು ಹಿಂಬಾಲಿಸಿ ಬರುತ್ತಿರುವ ದುಸ್ಸಹವಾದ ಚಕ್ರವನ್ನು ನೋಡಿದರು.

**ಅಲಬ್ಧನಾಥಃ ಸ ಯದಾ ಕುತಶ್ಚಿತ್**
**ಸಂತ್ರಸ್ತಚಿತ್ತೋಽರಣಮೇಷಮಾಣಃ ।**
**ದೇವಂ ವಿರಿಂಚಂ ಸಮಗಾದ್ವಿಧಾತಃ**
**ತ್ರಾಹ್ಯಾತ್ಮಯೋನೇಽಜಿತತೇಜಸೋ ಮಾಮ್ ॥೪೦॥**

**ಅಲಬ್ಧನಾಥಃ** ರಕ್ಷಕರನ್ನು ಹೊಂದದಿರುವ, **ಸಂತ್ರಸ್ತಚಿತ್ತಃ** ದುಃಖಗೊಂಡ ಮನಸ್ಸುಳ್ಳ, **ಸಃ** ಆ ದುರ್ವಾಸರು, **ಕುತಶ್ಚಿತ್** ಯಾರೋ ಒಬ್ಬರಿಂದ, **ಅರಣಂ** ರಕ್ಷಣವನ್ನು, **ಏಷಮಾಣಃ** ಇಚ್ಛಿಸುವವವರಾಗಿ **ದೇವಂ ವಿರಿಂಚಂ** ಬ್ರಹ್ಮದೇವನನ್ನು, **ಸಮಗಾತ್** ಮೊರೆಹೊಕ್ಕನು, **ಆತ್ಮಯೋನೇ** ಪರಮಾತ್ಮನೇ ಕಾರಣವಾಗಿ ಉಳ್ಳ **ವಿಧಾತಃ** ಹೇ ಬ್ರಹ್ಮನೇ, **ಅಜಿತತೇಜಸಃ** ಅಜಿತನಾಮಕ ಪರಮಾತ್ಮನ ತೇಜೋರೂಪವಾದ ಚಕ್ರದಿಂದ, ಯಾರಿಂದಲೂ ಗೆಲ್ಲಲಶಕ್ಯವಾದ ಚಕ್ರದ ದಾಹದಿಂದ, ಉಗ್ರತೇಜಸ್ಸುಳ್ಳ ಈ ಚಕ್ರದಿಂದ, **ಮಾಂ** ನನ್ನನ್ನು, **ತ್ರಾಹಿ** ರಕ್ಷಿಸು. ಎಂದು ಪ್ರಾರ್ಥಿಸಿದರು.

**ತಾತ್ಪರ್ಯ-** ರಕ್ಷಕರನ್ನು ಹೊಂದದಿರುವ ದುಃಖಗೊಂಡ ಮನಸ್ಸುಳ್ಳ ಆ ದುರ್ವಾಸರು ಯಾರೊ ಒಬ್ಬರಿಂದ ರಕ್ಷಣವನ್ನು ಇಚ್ಛಿಸಿ ದೇವನಾದ ಬ್ರಹ್ಮನನ್ನು ಮೊರೆಹೊಕ್ಕರು. ಬ್ರಹ್ಮನೇ! ಈ ಉಗ್ರತೇಜಸ್ಸುಳ್ಳ ಈ ಚಕ್ರದಿಂದ ನನ್ನನ್ನು ರಕ್ಷಿಸು ಎಂದು ಪ್ರಾರ್ಥಿಸಿದರು. ॥೪೦॥

**ಬ್ರಹ್ಮೋವಾಚ-**

**ಸ್ಥಾನಂ ಮದೀಯಂ ಸಹ ವಿಶ್ವಮೇತತ್**
**ಕ್ರೀಡಾವಸಾನೇ ದ್ವಿಪರಾರ್ಧಸಂಜ್ಞೇ ।**
**ಭ್ರೂಭಂಗಮಾತ್ರೇಣ ಹಿ ಸಂದಿಧಕ್ಷೋಃ**
**ಕಾಲಾತ್ಮನಃ ಪಶ್ಯತಿ ಕೋ ಭವಿಷ್ಯತ್ ॥೪೧॥**

**ದ್ವಿಪರಾರ್ಧಸಂಜ್ಞೆ** ದ್ವಿಪರಾರ್ಧಸಂಜ್ಞೆ ಉಳ್ಳ, **ಕ್ರೀಡಾವಸಾನೇ** ಪ್ರಳಯ-ಕಾಲದಲ್ಲಿ, **ಸಹ ವಿಶ್ವಂ** ಚರಾಚರಾತ್ಮಕವಾದ ಈ ಜಗತ್ತಿನಿಂದ ಸಹಿತವಾದ, **ಇದಂ** ಈ **ಮದೀಯಂ** ನನ್ನದಾದ **ಸ್ಥಾನಂ** ಲೋಕವನ್ನು, **ಭ್ರೂಭಂಗಮಾತ್ರೇಣ** ಹುಬ್ಬು ನಡುಗಿಸುವ ಮಾತ್ರದಿಂದ, **ಸಂದಿಧಕ್ಷೋಃ** ದಹಿಸಲು ಇಚ್ಛೆ ಉಳ್ಳ, **ಕಾಲಾತ್ಮನಃ** ಕಾಲರೂಪಿಯಾದ ಶ್ರೀಹರಿಯ **ಭವಿಷ್ಯತ್ ಕರ್ಮ** ಭಗವಂತನು ಮುಂದೆ ಮಾಡುವ ಕರ್ಮವನ್ನು, **ಕಃ** ಯಾವನು, **ಪಶ್ಯತಿ** ತಿಳಿಯುತ್ತಾನೆ? ಯಾರೂ ತಿಳಿಯಲು ಸಾಧ್ಯವಿಲ್ಲ ಎಂದು ತಾತ್ಪರ್ಯ.

**ತಾತ್ಪರ್ಯ-** ಮುನಿವರ್ಯರೇ ! ದ್ವಿಪರಾರ್ಧಸಂಜ್ಞೆ ಉಳ್ಳ ಪ್ರಳಯಕಾಲದಲ್ಲಿ ಚರಾಚರಾತ್ಮಕವಾದ ಈ ವಿಶ್ವವನ್ನು ದಹನ ಮಾಡುವ ಇಚ್ಛೆಯುಳ್ಳ ಶ್ರೀಭಗವಂತನು ಮುಂದೆ ಮಾಡುವ ಮಹಿಮೆಯನ್ನು ಯಾರು ತಾನೇ ತಿಳಿಯಲು ಸಾಧ್ಯ? ಪರಮಾತ್ಮನ ವ್ಯಾಪಾರವನ್ನು ಯಾರೂ ತಿಳಿಯಲಾರರು.

**ತಾತ್ಪರ್ಯ-** ಮನುಷ್ಯರ ಎಂಟುನೂರು ಅರವತ್ತು ನಾಲ್ಕು ಕೋಟಿ ವರ್ಷಗಳು ಬ್ರಹ್ಮದೇವರಿಗೆ ಒಂದು ವರ್ಷವು, ಐವತ್ತು ವರ್ಷಗಳು ಒಂದು ಪರಾರ್ಧ. ನೂರು ವರ್ಷಗಳಾದರೆ ದ್ವಿಪರಾರ್ಧ. ಪರ ಎಂದರೆ ಬ್ರಹ್ಮನ ಆಯುರ್ಮಾನ. ||೪೧||

**ಅಹಂ ಭವೋ ದಕ್ಷಭೃಗುಪ್ರಧಾನಾಃ**
**ಪ್ರಜೇಶಭೂತೇಶಸುರೇಶಮುಖ್ಯಾಃ |**
**ಸರ್ವೇ ವಯಂ ಯನ್ನಿಯಮಂ ಪ್ರಪನ್ನಾಃ**
**ಮೂರ್ಧ್ನಾರ್ಪಿತಂ ಲೋಕಹಿತಂ ವಹಾಮಃ ||೪೨||**

ಮುನೀಶ್ವರರೇ! **ಅಹಂ** ನಾನು, **ಭವಃ** ರುದ್ರದೇವರು, **ದಕ್ಷ** ದಕ್ಷ ಪ್ರಜೇಶ್ವರರು **ಭೃಗು** ಭೃಗುಮುನಿಗಳೇ, **ಪ್ರಧಾನಾಃ** ಮೊದಲಾದ ಮುಖ್ಯರು, **ಪ್ರಜೇಶ** ಕಶ್ಯಪರು, **ಭೂತೇಶ** ಕುಬೇರನು, **ಸುರೇಶ** ದೇವೇಂದ್ರನು, **ಮುಖ್ಯಾಃ** ಮೊದಲಾದ, **ಸರ್ವೇ** ಎಲ್ಲಾ, **ವಯಂ** ನಾವು, **ಪ್ರಪನ್ನಾಃ** ಅಂಗೀಕರಿಸಿದವರಾಗಿ, **ತೇನೈವ** ಅವನಿಂದಲೇ, **ಲೋಕಹಿತಂ** ಲೋಕಕಲ್ಯಾಣಕ್ಕಾಗಿ **ಅರ್ಪಿತಂ** ನಿರೂಪಿತವಾದದ್ದನ್ನು, **ಯನ್ನಿಯಮಂ** ಪರಮಾತ್ಮನ ಅಪ್ಪಣೆಯನ್ನು, **ಮೂರ್ಧ್ನಾ** ಶಿರಸಾ **ವಹಾಮಃ** ವಹಿಸಿರುತ್ತೇವೆ.

**ತಾತ್ಪರ್ಯ-** ಈ ಶ್ಲೋಕದಲ್ಲಿ ಯಾವ ರುದ್ರದೇವರ ಅವತಾರ ನೀನೋ ಅವನ ಅವಸ್ಥೆ ಹೀಗೇ ಎಂದು ತಿಳಿಸಲು ''ಭವಃ'' ಎಂದಿದ್ದಾರೆ. ಪರಮಾತ್ಮನು ರುದ್ರದೇವರ ಸಹಾಯ ಮಾಡಿದ್ದರಿಂದಲೇ ದಕ್ಷಾಧ್ವರಧ್ವಂಸ ಮಾಡಿದನು ಎಂದು ಸೂಚಿಸಲು ''ದಕ್ಷಃ'' ಎಂದಿದ್ದಾರೆ. ನೀನೇ ಗತಿಯೆಂದು ಮೊರೆಹೊಕ್ಕರೇ ಶಾಂತಮೂರ್ತಿಯಾದ ಭಗವಂತನು ರಕ್ಷಣ ಮಾಡುವನು, ಎಂದು ಸೂಚಿಸಲು

ಕಾಲಿನಿಂದ ಒದ್ದರೂ ಮಹಾ ಉನ್ನತಿಯೇ ಬಂದಿತು ಎಂದು ಭೃಗು ಋಷಿಯನ್ನು ಹೇಳಿದ್ದಾರೆ. ಇಂದ್ರಾದಿಗಳು ಮುಖ್ಯರಾಗಿದ್ದರೂ ಮೇಲೆ ಹೇಳಿದ ಕಾರಣದಿಂದ ಅನಂತರ ಹೇಳಿದ್ದಾರೆ.

ಮುನೀಶ್ವರರೇ! ನಾನು, ರುದ್ರನು, ದಕ್ಷ ಪ್ರಜೇಶ್ವರನು ಮೊದಲಾದವರು ಕಶ್ಯಪರು, ಕುಬೇರರು, ದೇವೇಂದ್ರರೇ ಮೊದಲಾದವರು ಯಾವ ಭಗವಂತನ ಅಪ್ಪಣೆಯನ್ನು ಲೋಕಹಿತಕ್ಕಾಗಿ ಅವುಗಳನ್ನು ಮಾಡಿದ್ದಾರೆಂದು ತಿಳಿದು ಶಿರಸಾ ಧಾರಣೆ ಮಾಡುತ್ತಿದ್ದೇವೆ. ನೀವಾದರೂ ಭಗವದ್ಭಕ್ತರ ದ್ರೋಹ ಮಾಡಿದ್ದೀರಿ. ಆದ್ದರಿಂದ ನಿಮ್ಮನ್ನು ರಕ್ಷಿಸಲು ನಾವು ಸಮರ್ಥರಲ್ಲ. ॥೪೨॥

**ಶ್ರೀ ಶುಕ ಉವಾಚ-**

**ಪ್ರತ್ಯಾಖ್ಯಾತೋ ವಿರಿಂಚೇನ ವಿಷ್ಣುಚಕ್ರೋಪತಾಪಿತಃ ।**
**ದುರ್ವಾಸಾಃ ಶರಣಂ ಯಾತಃ ಶರ್ವಂ ಕೈಲಾಸವಾಸಿನಮ್ ॥೪೩॥**

**ವಿರಿಂಚೇನ** ಬ್ರಹ್ಮದೇವನಿಂದ, **ಪ್ರತ್ಯಾಖ್ಯಾತಃ** ನಿರಾಕೃತನಾದ **ವಿಷ್ಣುಚಕ್ರೋಪ ತಾಪಿತಃ** ವಿಷ್ಣುಚಕ್ರದಿಂದ ಸಂತಪ್ತನಾದ, **ದುರ್ವಾಸಾಃ** ದುರ್ವಾಸ ಋಷಿಯು, **ಕೈಲಾಸವಾಸಿನಂ** ಕೈಲಾಸವಾಸಿಯಾದ, **ಶರ್ವಂ** ಶಂಕರನನ್ನು ಕುರಿತು **ಶರಣಂ** ಮೊರೆಯನ್ನು, **ಯಾತಃ** ಹೊಂದಿದನು.

**ತಾತ್ಪರ್ಯ-** ಈ ರೀತಿ ಬ್ರಹ್ಮದೇವನಿಂದ ನಿರಾಕೃತರಾದ ವಿಷ್ಣುಚಕ್ರದಿಂದ ತಪ್ತರಾದ ದುರ್ವಾಸರು ಕೈಲಾಸವಾಸಿಯಾದ ರುದ್ರದೇವರಲ್ಲಿ ಮೊರೆ ಹೊಂದಿದರು.

ರುದ್ರದೇವರು ನಿನ್ನನ್ನು ಕಾಪಾಡಲಾರರು ಎಂದು ''ಭವಃ'' ಎಂಬ ಪದದಿಂದ ಬ್ರಹ್ಮದೇವರು ಈಗಾಗಲೇ ತಿಳಿಸಿದ್ದಾರೆ. ಆದರೂ ಈ ಜೀವದ ಆಸೆಯು ಪ್ರಬಲ. ಆಗ ಮೈಮೇಲೆ ಎಚ್ಚರವಿರುವುದಿಲ್ಲ. ಕಾರಣ ದುರ್ವಾಸರು ರುದ್ರದೇವರನ್ನು ಶರಣು ಹೊಂದಿದರು. ''ಸರ್ವಃ ಶರ್ವಃ'' ಎಂದು ವಿಷ್ಣುಸಹಸ್ರನಾಮದ ಪ್ರಕಾರ ಶರ್ವಯೆಂದರೆ ವಿಷ್ಣುವು ಆಗುವನು. ಕಾರಣ 'ಕೈಲಾಸವಾಸಿನಂ' ಎಂದಿದ್ದಾರೆ ಎಂದು ತಿಳಿಯಬೇಕು. 'ವಿಷ್ಣುಚಕ್ರೋಪತಾಪಿತಃ' ಎಂದು ಅದಕ್ಕೆ ಅಭಿಮಾನಿಯಾದ ಕಾಮನು ತನ್ನ ವೈರವನ್ನು ಈ ರೀತಿ ಸಾಧಿಸುತ್ತಾನೆಂದು ಸೂಚಿಸಿರುವರು.

ಹಿಂದಿನ ಶ್ಲೋಕದಲ್ಲಿ ರುದ್ರದೇವರಿಗೂ ಸಾಮರ್ಥ್ಯವಿಲ್ಲವೆಂದು ಬ್ರಹ್ಮದೇವರು ಹೇಳಿದ್ದರೂ ಸಹ ಅಜ್ಞಜನರ ಸಂದೇಹ ನಿವಾರಣೆಗಾಗಿ ರುದ್ರದೇವರಿಗೆ ಮೊರೆ ಹೊಕ್ಕರು ಎಂದು ಹೇಳಿರುತ್ತಾರೆ. ॥೪೩ ॥

**ಶ್ರೀ ಶಂಕರ ಉವಾಚ –**

**ವಯಂ ನ ತಾತ ಪ್ರಭವಾಮ ಭೂಮ್ನೋ**
**ಭವಂತಿ ಕಾಲೇ ನ ಭವಂತಿ ಹೀದೃಶಾಃ ।**
**ಯಸ್ಮಿನ್ ಪರೇನ್ಯೇಽಪ್ಯಜಜೀವಕೋಶಾಃ**
**ಸಹಸ್ರಶೋ ಯತ್ರ ವಯಂ ಭ್ರಮಾಮಃ ॥೪೪॥**

**ಹೇ ತಾತ !** ಎಲೋ ತಾತನೇ ! ಮಗುವೇ, **ವಯಂ** ನಾವು, **ನ ಪ್ರಭವಾಮಃ** ನಿನ್ನನ್ನು ರಕ್ಷಿಸಲು ಸಮರ್ಥರಲ್ಲ, **ಭೂಮ್ನಃ** ಪರಮಾತ್ಮನ ದೆಸೆಯಿಂದ, **ಈದೃಶಾಃ** ನನ್ನಂಥವರು, **ಕಾಲೇ** ಸೃಷ್ಟಿಕಾಲದಲ್ಲಿ, **ಭವಂತಿ** ಹುಟ್ಟುತ್ತಾರೆ, **ಚ** ಮತ್ತು, ಪ್ರಳಯಕಾಲದಲ್ಲಿ, **ನ ಭವಂತಿ** ಇರುವುದಿಲ್ಲ, **ಹಿ** ಈ ಕಾರಣದಿಂದ ಸಮರ್ಥರಲ್ಲ, **ಯತ್ರ** ಯಾವ ಬ್ರಹ್ಮಾಂಡದಲ್ಲಿ, **ವಯಂ** ನಾವುಗಳು, **ಭ್ರಮಾಮಃ** ತಿರುಗುತ್ತೇವೆಯೋ, ಅಂಥಾ **ಅನ್ಯೇ** ಚೇತನಭಿನ್ನವಾದ, **ಅಜಜೀವಕೋಶಾಃ** ಬ್ರಹ್ಮಾಂಡಗಳು **ಸಹಸ್ರಶಃ** ಸಾವಿರಾರು **ಯಸ್ಮಿನ್ ಪರೇ** ಯಾವ ಪರಮಾತ್ಮನಲ್ಲಿ ಇರುತ್ತೇವೆಯೋ ಅಂಥಾ ಭಗವಂತನು ನಿನ್ನನ್ನು ರಕ್ಷಿಸುತ್ತಾನೆ.

ಬ್ರಹ್ಮದೇವರೇ ಹೇ! ಮಗುವೇ! ನಾವು ನಿನ್ನ ಆಪತ್ತನ್ನು ಪರಿಹರಿಸಲು ಸಮರ್ಥರಲ್ಲ. ಪರಮಾತ್ಮನ ದೆಶೆಯಿಂದ ನನ್ನಂಥವರು ಸೃಷ್ಟಿಕಾಲದಲ್ಲಿ ಅನೇಕರು ಹುಟ್ಟುತ್ತಾರೆ. ಪ್ರಳಯಕಾಲದಲ್ಲಿ ನಾಶ ಹೊಂದುತ್ತಾರೆ. ಈ ಕಾರಣದಿಂದ ಸಮರ್ಥರಲ್ಲದ ನಾವು ಯಾವ ಬ್ರಹ್ಮಾಂಡದಲ್ಲಿ ತಿರುಗುತ್ತಿದ್ದೇವೆ, ಅಂಥ ಸಹಸ್ರಾರು ಬ್ರಹ್ಮಾಂಡಗಳು ಯಾವನ ಆಜ್ಞೆಯಲ್ಲಿ ಇರುತ್ತವೆಯೋ, ಅಂಥಾ ಭಗವಂತನು ನಿನ್ನನ್ನು ರಕ್ಷಿಸಲು ಸಮರ್ಥನಾಗಿರುತ್ತಾನೆ. ॥೪೪॥

ಇನ್ನು ಮುಂದೆ ಬೇರೆ ಯಾರನ್ನೂ ರಕ್ಷಕರೆಂದು ಭ್ರಾಂತನಾಗಿ ಹೋಗಬೇಡ ಎಂದು ಹೇಳುತ್ತಾರೆ –

**ಅಹಂ ಸನತ್ಕುಮಾರಶ್ಚ ನಾರದೋ ಭಗವಾನಜಃ ।**
**ಕಪಿಲೋಽಪಾಂತರತಮೋ ದೇವಲೋ ಧರ್ಮ ಆಸುರಿಃ ॥೪೫॥**

**ಅಹಂ** ನಾನು, **ಸನತ್ಕುಮಾರಃ** ಸನತ್ಕುಮಾರನು, ಮತ್ತು **ನಾರದಃ** ನಾರದರು, **ಭಗವಾನ್** ಪೂಜ್ಯರಾದ, **ಅಜಃ** ಬ್ರಹ್ಮನೂ, **ಕಪಿಲಃ** ಕಪಿಲನು, **ಅಪಾಂತರತಮಃ** ಅಪಾಂತರತಮ ಎಂಬುವರು, **ದೇವಲಃ** ದೇವಲರು, **ಆಸುರಿಃ** ಆಸುರಿ ಎಂಬುವರು, ಯಾರೂ ರಕ್ಷಿಸುವುದಿಲ್ಲ.

**ತಾತ್ಪರ್ಯ-** ನಾನು, ಸನತ್ಕುಮಾರರು, ನಾರದರು, ಪೂಜ್ಯರಾದ ಬ್ರಹ್ಮನು, ಕಪಿಲರು, ಅಪಾಂತರಮರು, ದೇವಲರು, ಧರ್ಮ ಮತ್ತು ಆಸುರಿ ಮೊದಲಾದವರು ಯಾರೂ ರಕ್ಷಿಸಲಾರರು. ।।೪೫।।

**ಮರೀಚಿಪ್ರಮುಖಾಶ್ಚಾನ್ಯೇ ಸಿದ್ಧೇಶಾಃ ಪಾರದರ್ಶಿನಃ ।**
**ವಿದಾಮ ನ ವಯಂ ಸರ್ವೇ ಯನ್ಮಾಯಾಂ ಮಾಯಯಾಽಽವೃತಾಃ ॥**

**ಮರೀಚಿಪ್ರಮುಖಾಃ** ಮರೀಚಿ ಋಷಿಗಳೇ ಮೊದಲಾದ, **ಸಿದ್ಧೇಶಾಃ** ಸಿದ್ಧೇಶರು, **ಪಾರದರ್ಶಿನಃ** ಸರ್ವಜ್ಞರೆಂದು ಪ್ರಸಿದ್ಧರಾದ (ಸೀಮಿತವಾದ ಜ್ಞಾನಿಗಳಾದ) **ವಯಂ** ನಾವು, **ಸರ್ವೇ** ಎಲ್ಲರೂ, **ಮಾಯಯಾ** ಪ್ರಕೃತಿಯಿಂದ, **ಆವೃತಾಃ** ಬದ್ಧರಾಗಿ, **ಯನ್ಮಾಯಾಂ** ಯಾವ ಪರಮಾತ್ಮನ ಇಚ್ಛೆಯನ್ನು, **ನ ವಿದಾಮ** ನಾವು ತಿಳಿಯುವುದಿಲ್ಲ.

**ತಾತ್ಪರ್ಯ-** ಮರೀಚಿ ಋಷಿಗಳೇ ಮೊದಲಾದ ಸಿದ್ಧೇಶರು ಸರ್ವಜ್ಞರೆಂದು ಪ್ರಸಿದ್ಧರಾದ ನಾವೆಲ್ಲರೂ ಪ್ರಕೃತಿಯಿಂದ ಆವೃತರಾಗಿ ಭಗವಂತನ ಇಚ್ಛೆಯನ್ನು ತಿಳಿಯುವುದಿಲ್ಲ. ।।೪೬।।

**ತಸ್ಯ ವಿಶ್ವೇಶ್ವರಸ್ಯೇದಂ ಶಸ್ತ್ರಂ ದುರ್ವಿಷಹಂ ಹಿ ನಃ ।**
**ತಮೇವ ಶರಣಂ ಯಾಹಿ ಹರಿಸ್ತೇ ಶಂ ವಿಧಾಸ್ಯತಿ ॥೪೭॥**

**ತಸ್ಯ** ಆ **ವಿಶ್ವೇಶ್ವರಸ್ಯ** ಜಗದೊಡೆಯನ, **ಶಸ್ತ್ರಂ** ಶಸ್ತ್ರವು, **ನಃ** ನಮ್ಮಗಳಿಗೆ **ದುರ್ವಿಷಹಂ** ಸಹಿಸಲಶಕ್ಯವಾಗಿದೆ. **ಹರಿಃ** ಶ್ರೀಹರಿಯು, **ತೇ** ನಿನಗೆ, **ಶಂ** ಸುಖವನ್ನು, **ವಿಧಾಸ್ಯತಿ** ಉಂಟುಮಾಡುತ್ತಾನೆ. **ತಮೇವ** ಅವನನ್ನೇ, **ಶರಣಂ** ಮೊರೆಯನ್ನು, **ಯಾಹಿ** ಹೊಂದು, ಎಂದು ಆಶೀರ್ವದಿಸಿದನು.

**ತಾತ್ಪರ್ಯ-** ಜಗದೊಡೆಯನಾದ ಆ ಭಗವಂತನ ಶಸ್ತ್ರವು ನಮ್ಮಗಳಿಗೆ ಸಹಿಸಲಶಕ್ಯವಾಗಿರುತ್ತೆ. ಶ್ರೀಹರಿಯು ನಿನಗೆ ಮಂಗಳವನ್ನುಂಟುಮಾಡುತ್ತಾನೆ. ಅವನನ್ನೇ ಮೊರೆ ಹೋಗು ಎಂದು ಆಶೀರ್ವದಿಸಿದನು. ।।೪೭।।

**ತತೋ ನಿರಾಶೋ ದುರ್ವಾಸಾಃ ಪದಂ ಭಗವತೋ ಯಯೌ ।**
**ವೈಕುಂಠಾಖ್ಯಂ ಯದಧ್ಯಾಸ್ತೇ ಶ್ರೀನಿವಾಸಃ ಶ್ರಿಯಾ ಸಹ ॥೪೮॥**

**ತತಃ** ಅನಂತರದಲ್ಲಿ ಆ ರುದ್ರದೇವರ ಮಾತಿನಿಂದ, **ನಿರಾಶಾಃ** ನಿರಾಶರಾದ, **ದುರ್ವಾಸಾಃ** ದುರ್ವಾಸರು, **ಶ್ರಿಯಂ** ಲಕ್ಷ್ಮಿಯಿಂದ ಸಹಿತನಾದ, **ಶ್ರೀನಿವಾಸಃ** ಶ್ರೀನಿವಾಸನು, **ಯತ್** ಎಲ್ಲಿ, **ಅಧ್ಯಾಸ್ತೇ** ವಾಸಮಾಡಿರುತ್ತಾನೋ, ಆ **ವೈಕುಂಠಾಖ್ಯಂ**

ವೈಕುಂಠವೆಂಬ, **ಭಗವತಃ** ಭಗವಂತನ, **ಪದಂ** ಸ್ಥಾನವನ್ನು ಕುರಿತು **ಯಯೌ** ಹೋದರು.

**ತಾತ್ಪರ್ಯ-** ರುದ್ರದೇವರ ಮಾತಿನ ನಂತರದಲ್ಲಿ ನಿರಾಶರಾದ ದುರ್ವಾಸರು, ಲಕ್ಷ್ಮೀಸಹಿತನಾದ ಶ್ರೀನಿವಾಸನು ಎಲ್ಲಿದ್ದಾನೋ ಆ ವೈಕುಂಠವೆಂಬ ಭಗವಂತನ ಸ್ಥಾನವನ್ನು ಕುರಿತು ಹೋದರು. ।।೪೮।।

**ಸಂದಹ್ಯಮಾನೋಽಜಿತಶಸ್ತ್ರವಹ್ನಿನಾ**
**ತತ್ಪಾದಮೂಲೇ ಪತಿತಃ ಸವೇಪಥುಃ ।**
**ಆಹಾಚ್ಯುತಾನಂತ ಸದೀಪ್ಸಿತ ಪ್ರಭೋ**
**ಕೃತಾಗಸಂ ಮಾಮವ ವಿಶ್ವಭಾವನ ।। ೪೯ ।।**

**ಅಜಿತಶಸ್ತ್ರವಹ್ನಿನಾ** ಭಗವಂತನ ಚಕ್ರವಹ್ನಿಯಿಂದ, **ಸಂದಹ್ಯಮಾನಃ** ಸಂತಪ್ತನಾದ ದುರ್ವಾಸಮುನಿಯು, **ಸವೇಪಥುಃ** ನಡಗುತ್ತಾ **ತತ್ಪಾದಮೂಲೇ** ಭಗವಂತನ ಪದತಲದಲ್ಲಿ, **ಪತಿತಃ** ನಮಸ್ಕರಿಸಿದನು. **ಅಚ್ಯುತ** ನಾಶರಹಿತನೇ, **ಅನಂತ** ಅನಂತನೇ **ಸದೀಪ್ಸಿತ** ಸಜ್ಜನರಿಗೆ ಇಷ್ಟನಾದ **ಪ್ರಭೋ** ಸ್ವಾಮಿಯೇ! **ವಿಶ್ವಭಾವನ** ಜಗದ್ವ್ಯಾಪ್ತನೇ, **ಕೃತಾಗಸಂ** ಅಪರಾಧ ಮಾಡಿದ, **ಮಾಂ** ನನ್ನನ್ನು **ಅವ** ರಕ್ಷಿಸು. ಎಂದು, **ಆಹ** ಮಾತನಾಡಿದನು.

**ತಾತ್ಪರ್ಯ-** ಭಗವಂತನ ಚಕ್ರದ ವಹ್ನಿಯಿಂದ ಸಂತಪ್ತನಾದ ದುರ್ವಾಸ ಮುನಿಯು ನಡುಗುತ್ತಾ, ಅಚ್ಯುತನೇ, ಅನಂತನೇ, ಸಜ್ಜನರ ಇಷ್ಟದಾತನೇ, ಸ್ವಾಮಿಯೇ, ಜಗದ್ವ್ಯಾಪ್ತನೇ! ಅಪರಾಧ ಮಾಡಿದ ನನ್ನನ್ನು ರಕ್ಷಿಸು ಎಂದು ಹೇಳಿದನು. ।।೪೯।।

**ಅಜಾನತಾ ತೇ ಪರಮಾನುಭಾವಂ**
**ಕೃತಂ ಮಯಾಽಘಂ ಭವತಃ ಪ್ರಿಯಾಣಾಮ್ ।**
**ವಿಧೇಹಿ ತಸ್ಯಾಪಚಿತಿಂ ವಿಧಾತಃ**
**ಮುಚ್ಯೇತ ಯನ್ನಾಮ್ನ್ಯುದಿತೇ ನಾರಕೋಽಪಿ ।।೫೦।।**

**ಯನ್ನಾಮ್ನಿ** ಯಾವಾತನ ನಾಮವು, **ಉದಿತೇ** ಉಚ್ಚರಿಸಲು, **ನಾರಕೋಽಪಿ** ನರಕವಾಸಿಯೂ ಕೂಡ, **ಮುಚ್ಯೇತ** ಮುಕ್ತನಾಗುತ್ತಾನೋ, **ತೇ** ಅಂಥ ನಿನ್ನ, **ಪರಮಾನುಭಾವಂ** ಮನೋಗತವಾದ ಅಭಿಪ್ರಾಯವನ್ನು, **ಅಜಾನತಾ** ತಿಳಿಯದಿರುವ, **ಮಯಾ** ನನ್ನಿಂದ, **ಭವತಃ** ನಿನ್ನ **ಪ್ರಿಯಾಣಾಂ** ಭಕ್ತರ ವಿಷಯದಲ್ಲಿ, **ಅಘಂ** ಪಾಪವು, **ಕೃತಂ** ಮಾಡಲ್ಪಟ್ಟಿತ್ತು. **ವಿಧಾತಃ** ನಿಯಾಮಕನೇ! **ತಸ್ಯ** ಆ ಪಾಪದ, **ಅಪಚಿತಿಂ** ಪ್ರಾಯಶ್ಚಿತ್ತವನ್ನು, **ವಿಧೇಹಿ** ಮಾಡು.

**ತಾತ್ಪರ್ಯ-** ದೇವಾ! ಯಾವ ನಿನ್ನ ನಾಮವನ್ನು ಉಚ್ಚರಿಸಿದರೇ ನರಕವಾಸಿಯೂ ಸಹ ಮುಕ್ತನಾಗುತ್ತಾನೆ. ಅಂಥ ನಿನ್ನ ಮನೋಽಭಿಪ್ರಾಯವನ್ನು ತಿಳಿಯದ ನಾನು ನಿನ್ನ ಭಕ್ತರ ವಿಷಯದಲ್ಲಿ ಪಾಪವನ್ನು ಮಾಡಿದೆನು. ನಿಯಾಮಕನೇ! ಆ ಪಾಪದ ಪ್ರಾಯಶ್ಚಿತ್ತವನ್ನು ಮಾಡು.

**ವಿ.ವಿ.ಃ-** ಅಂಬರೀಷರಾಜನಿಗೆ ಒಬ್ಬನಿಗೆ ಅಪರಾಧ ಮಾಡಿರಲು ಬಹುವಚನ ಪ್ರಯೋಗಕ್ಕೆ ಕಾರಣವೇನೆಂದರೆಮರಣೋನ್ಮುಖರಿಗೆ ಹತ್ತಿರ ತಿರುಗಾಡುವರೆಲ್ಲರೂ ಯಮದೂತರಂತೆ ಕಾಣುತ್ತಾರೆ. ಹಾಗೆ ಆದ್ದರಿಂದ ಬಹುವಚನ ಪ್ರಯೋಗ ಮಾಡಿರುತ್ತಾರೆ. ಅಥವಾ ನೀರು ಕುಡಿಯಲು ಅನುಮೋದಿಸಿದ ಬ್ರಾಹ್ಮಣರಿಗೂ ಅಪರಾಧ ಮಾಡಿದಂತೆಯೇ ಎಂದು ಬಹುವಚನ ಪ್ರಯೋಗವು.

ನಿನ್ನ ಭಕ್ತರ ವಿಷಯದಲ್ಲಿ ಅಪರಾಧ ಮಾಡಿದರೇ ನೀನು ಅವರು ಕೂಡಿ ಪಾಪದಲ್ಲಿ ಬೀಳಿರಿ. ನನಗೇನು ಸಂಬಂಧ ಎಂದರೆ? ನಾನು ಮಾಡಿದ ಅಪರಾಧ ನಿನ್ನ ವಿಷಯದಲ್ಲಿಯೇ ಎಂದು ಹೇಳುವರು. ಅಜಾನತಾತೇ ಎಂದು. ಅಜಶ್ಚ ಅನಶ್ಚ ಅಜಾನೌ, ಅಜಾನಯೋಃ ತಾತಃ ತಸ್ಮಿನ್ ಅಜಾನತಾತೇ ಚತುರ್ಮುಖಬ್ರಹ್ಮ, ವಾಯು ಇವರ ತಂದೆಯಾದ ನಿನ್ನಲ್ಲಿ ಅಪರಾಧ ಮಾಡಿದ್ದೇನೆ. ಅಥವಾ ಹೇ ಅಜಾನತ ವಿರಿಂಚಿ ನಮಸ್ಕೃತನೇ ಅಕಾರಶಬ್ದವಾಚ್ಯನೇ ನಿನ್ನ ವಿಷಯದಲ್ಲಿ ಅಪರಾಧ ಮಾಡಿದ್ದೇನೆ. (ಅಜೇನ ಅನತಃ ಅಜಾನತಃ ತಸ್ಯ ಸಂಬುದ್ಧಿಃ ಅಜಾನತ).

**ಅಹಂ ಭಕ್ತಪರಾಧೀನೋ ಹ್ಯಸ್ವತಂತ್ರ ಇವ ದ್ವಿಜ ।**
**ಸಾಧುಭಿರ್ಗ್ರಸ್ತಹೃದಯೋ ಭಕ್ತೈರ್ಭಕ್ತಜನಪ್ರಿಯಃ ॥೫೦॥**

**ದ್ವಿಜ** ಬ್ರಾಹ್ಮಣನೇ! **ಅಹಂ** ನಾನು, **ಭಕ್ತಪರಾಧೀನಃ** ಭಕ್ತರ ಅಧೀನ-ನಾಗಿರುತ್ತೇನೆ. **ಅಸ್ವತಂತ್ರ ಇವ** ಅಸ್ವತಂತ್ರನಂತೆ ಇರುತ್ತೇನೆ. **ಭಕ್ತಜನಪ್ರಿಯಃ** ನಾನು ಭಕ್ತ ಜನರ ಪ್ರಿಯನಾಗಿರುತ್ತೇನೆ. **ಸಾಧುಭಿಃ** ಸಜ್ಜನರಿಂದ, **ಭಕ್ತೈಃ** ಭಕ್ತರಿಂದ, **ಗ್ರಸ್ತಹೃದಯಃ** ವಶೀಕೃತವಾದ ಮನಸ್ಸುಳ್ಳವನಾಗಿರುತ್ತೇನೆ.

**ತಾತ್ಪರ್ಯ-** ಎಲೋ ! ಬ್ರಾಹ್ಮಣನೇ ! ನಾನು ಭಕ್ತರ ಅಧೀನನಾಗಿರುತ್ತೇನೆ. ಅಸ್ವತಂತ್ರನಂತೆ ಇರುತ್ತೇನೆ. ಸಜ್ಜನರಾದ ಭಕ್ತರಿಂದ ನನ್ನ ಮನಸ್ಸು ವಶೀಕೃತವಾಗಿದೆ. ನಾನು ಭಕ್ತಜನರ ಪ್ರಿಯನಾಗಿರುತ್ತೇನೆ. ॥೫೦॥

ಭಕ್ತಪರಾಧೀನಃ ಎಂಬಲ್ಲಿ ಪರಾಧೀನ ಪದವು ಅಖಂಡವು, ಅಧೀನ ಎಂದರ್ಥ. ನೀನು ಭಕ್ತಾಧೀನನಾದರೇ ನಾನೂ ಭಕ್ತನಲ್ಲವೇ? ಎಂದು ಕಣ್ಣು ಕೆಂಪು ಮಾಡಬೇಡ. ಈಗ ಅಂಬರೀಷನ ಮೇಲೆ ವಿಶೇಷ ದಯೆ ಉಳ್ಳವನಾಗಿದ್ದೇನೆ

ಎಂದೂ ಸೂಚಿಸುವನು. ಭಕ್ತಾತ್ ಅನ್ನದಿಂದ, ಪರಃ ಯಸ್ಯ ಸಃ ವಿಲಕ್ಷಣವಾದ, ಅಶಿತಾನಶಿತರೂಪವಾದ ನೀರು ಉಳ್ಳವನು ಯಾವನೋ ಅವನು. ಭಕ್ತಪರಃ ಎಂದರೆ ಅಂಬರೀಷನು ಅವನ ಅಧೀನನು. ''ಭಕ್ತಮಂಧೋಽನ್ನಮ್'' ಎಂದು ಅಮರವು.

**ನಾಹಮಾತ್ಮಾನಮಾಶಾಸೇ ಮದ್ಭಕ್ತೈಸ್ಸಾಧುಭಿರ್ವಿನಾ ।**
**ಶ್ರಿಯಂ ಚಾತ್ಯಂತಿಕೀಂ ಬ್ರಹ್ಮನ್ಯೇಷಾಂ ಗತಿರಹಂ ಪರಾ ।।೬೨।।**

**ಬ್ರಹ್ಮನ್** ಜ್ಞಾನಿಗಳೇ, **ಅಹಂ** ನಾನು, **ಯೇಷಾಂ** ಯಾವ ಭಕ್ತರಿಗೆ, **ಪರಾ ಗತಿಃ** ಉತ್ತಮನಾದ, ಆಶ್ರಯನು ಅಂಥ **ಸಾಧುಭಿಃ** ಸಾತ್ವಿಕರಾದ, **ಮದ್ಭಕ್ತೈಃ** ನನ್ನ ಭಕ್ತರಿಂದ, **ವಿನಾ** ಹೊರತು, **ಆತ್ಮಾನಂ** ನನ್ನನ್ನೂ ಕೂಡ, **ನ ಆಶಾಸೇ** ಅಪೇಕ್ಷಿಸುವುದಿಲ್ಲ. **ಆತ್ಯಂತಿಕೀಂ** ಅತ್ಯಂತ ಪ್ರಿಯಳಾದ, **ಶ್ರಿಯಂ ಚ** ಲಕ್ಷ್ಮೀಯನ್ನು ಸಹ, **ನಾಶಾಸೇ ಇತಿ ಕಿಂ** ಅಪೇಕ್ಷಿಸುವುದಿಲ್ಲ ಎಂದು ಹೇಳುವುದೇನು.

**ತಾತ್ಪರ್ಯ-** ಜ್ಞಾನಿಗಳೇ! ನಾನು ಭಕ್ತರಿಗೆ ಉತ್ತಮ ಆಶ್ರಯನಾಗಿರುತ್ತೇನೆ. ಮತ್ತು ಸಾತ್ವಿಕರಾದ ನನ್ನ ಭಕ್ತರ ವಿನಾ ನನ್ನನ್ನೇ ನಾನು ಅಪೇಕ್ಷಿಸುವುದಿಲ್ಲ. ಅತ್ಯಂತ ಪ್ರಿಯಳಾದ ಲಕ್ಷ್ಮೀದೇವಿಯನ್ನೂ ಸಹ ಅಪೇಕ್ಷಿಸುವುದಿಲ್ಲ ಎಂದು ಹೇಳುವುದೇನು? (ಭಕ್ತರಿಗೆ, ಅಪ್ರಿಯವಾದರೆ ನನ್ನ ಇರುವಿಕೆಯಿಂದ ಏನು ಪ್ರಯೋಜನ?) ।।೬೨।।

**ಯೇ ದಾರಾಗಾರಪುತ್ರಾದೀನ್ ಪ್ರಾಣಾನ್ ವಿತ್ತಮಿದಂ ಪರಮ್ ।**
**ಹಿತ್ವಾ ಮಾಂ ಶರಣಂ ಯಾತಾಃ ಕಥಂ ತಾನ್ ತ್ಯಕ್ತುಮುತ್ಸಹೇ ।।೬೩।।**

**ಯೇ** ಯಾವ ಭಕ್ತರು, **ದಾರಾಗಾರಪುತ್ರಾದೀನ್** ಹೆಂಡಿರು-ಮನೆ-ಮಕ್ಕಳುಗಳನ್ನು **ಪ್ರಾಣಾನ್** ಪ್ರಾಣಗಳನ್ನು, **ಇದಂ** ಈ ಭೂಮ್ಯಾದಿಗಳನ್ನು, **ವಿತ್ತಂ** ಧನವನ್ನು, **ಹಿತ್ವಾ** ಬಿಟ್ಟು, **ಪರಂ** ಸ್ವರ್ಗವನ್ನು ಸಹ ತ್ಯಜಿಸಿ, **ಮಾಂ** ನನ್ನನ್ನು, **ಶರಣಂ** ಮೊರೆಯನ್ನು, **ಯಾತಾಃ** ಹೊಂದಿರುತ್ತಾರೆಯೋ **ತಾನ್** ಅಂಥ ಭಕ್ತರನ್ನು, **ತ್ಯಕ್ತುಂ** ಬಿಡುವುದಕ್ಕೆ **ಕಥಂ** ಹೇಗೆ **ಉತ್ಸಹೇ** ಉದ್ಯುಕ್ತನಾದೇನು?

**ತಾತ್ಪರ್ಯ-** ಯಾವ ಭಕ್ತರು ಹೆಂಡಿರು-ಮನೆ-ಮಕ್ಕಳನ್ನು-ಪ್ರಾಣಗಳನ್ನು ಈ ಸಂಪತ್ತನ್ನೂ ಈ ಭೂಮಿ-ಸ್ವರ್ಗಾದಿಗಳನ್ನು ಸಹ ತ್ಯಾಗಮಾಡಿ ನನ್ನನ್ನೇ ಮೊರೆಹೊಕ್ಕಿರುತ್ತಾರೋ ಅಂಥಾ ಭಕ್ತರನ್ನು ನಾನು ಹೇಗೆ ಬಿಡಲು ಉದ್ಯುಕ್ತನಾದೇನು? (ಹೇಗೆ ಸಹಿಸೇನು?) ।।೬೩।।

**ಮಯಿ ನಿರ್ಬದ್ಧಹೃದಯಾಃ ಸಾಧವಃ ಸಮದರ್ಶಿನಃ ।**
**ವಶೀಕುರ್ವಂತಿ ಮಾಂ ಭಕ್ತ್ಯಾ ಸತ್‌ಸ್ತ್ರಿಯಃ ಸತ್ಪತಿಂ ಯಥಾ ।।೬೪।।**

**ಸಮದರ್ಶಿನಃ** ಎಲ್ಲಾ ವಸ್ತುವಿನಲ್ಲೂ ಭಗವಂತನನ್ನು ನೋಡತಕ್ಕ **ಸಾಧವಃ** ಸಜ್ಜನರು, **ಮಾಂ** ನನ್ನನ್ನು, **ಭಕ್ತ್ಯಾ** ಭಕ್ತಿಯಿಂದ, **ಸತ್‌ಸ್ತ್ರಿಯಃ ಸತ್ಪತಿಂ** ಪತಿವ್ರತಾಸ್ತ್ರೀಯರು, ಶ್ರೇಷ್ಠಪತಿಯನ್ನು, **ಯಥಾ** ಹೇಗೋ, ಹಾಗೆ, **ಮಯಿ** ನನ್ನಲ್ಲಿ **ನಿರ್ಬದ್ಧಹೃದಯಾಃ** ಏಕಾಗ್ರಚಿತ್ತರಾಗಿ, **ವಶೀಕುರ್ವಂತಿ** ನನ್ನನ್ನು ವಶಮಾಡಿ-ಕೊಂಡಿರುತ್ತಾರೆ.

**ತಾತ್ಪರ್ಯ-** ಸಜ್ಜನರಾದ ಭಕ್ತರು ಎಲ್ಲಾ ವಸ್ತುವಿನಲ್ಲೂ ನನ್ನನ್ನು ನೋಡುತ್ತಿರುತ್ತಾರೆ. ಪತಿವ್ರತಾ ಸ್ತ್ರೀಯರು ಹೇಗೆ ಸಾತ್ವಿಕಪತಿಯನ್ನು ಏಕಾಗ್ರಚಿತ್ತರಾಗಿ ಸೇವಿಸುತ್ತಾರೋ ಹಾಗೆ ನನ್ನಲ್ಲಿ ಏಕಾಗ್ರಚಿತ್ತರಾಗಿ ಭಕ್ತಿ ಮಾಡುತ್ತಾ ನನ್ನನ್ನು ವಶಮಾಡಿಕೊಂಡಿರುತ್ತಾರೆ.

''ಸತ್‌ಸ್ತ್ರಿಯಃ ಸತ್ಪತಿಂ'' ಎಂದು ಹೇಳುವಲ್ಲಿ ಪತಿಂ ಎಂದು ಏಕವಚನ ಪ್ರಯೋಗದಿಂದ ಒಬ್ಬ ಪುರುಷನು ಅನೇಕ ಮದುವೆ ಮಾಡಿಕೊಳ್ಳಬಹುದು. ಸ್ತ್ರೀಯಳಿಗೆ ಮಾತ್ರ ಒಂದೇ ಮದುವೆ ಎಂದು ಸೂಚಿಸುವರು. ''ಏಕಸ್ಯ ಬಹ್ವ್ಯೋ ಜಾಯಾ ಭವಂತಿ ನೈಕಸ್ಯೈ ಬಹವಃ'' ಹೀಗೆ ಬ್ರಾಹ್ಮಣವಾಕ್ಯ .

**ಮತ್ಸೇವಯಾ ಪ್ರದಿಷ್ಟಂ ಚ ಸಾಲೋಕ್ಯಾದಿ ಚತುಷ್ಟಯಮ್ ।**
**ನೇಚ್ಛಂತಿ ಸೇವಯಾ ಪೂರ್ಣಾಃ ಕುತೋऽನ್ಯತ್ ಕಾಲವಿಪ್ಲುತಮ್ ॥೫೫॥**

**ಮತ್ಸೇವಯಾ** ನನ್ನ ಸೇವೆಯಿಂದ (ಸಂತುಷ್ಟನಾದ ನನ್ನಿಂದ) **ಪ್ರದಿಷ್ಟಂ** ಕೊಡಲ್ಪಟ್ಟ, **ಸಾಲೋಕ್ಯಾದಿಚತುಷ್ಟಯಂ** ಸಾಲೋಕ್ಯವೇ ಮೊದಲಾದ ನಾಲ್ಕು ವಿಧವಾದ ಮೋಕ್ಷವನ್ನು, **ನ ಇಚ್ಛಂತಿ** ಅಪೇಕ್ಷಿಸುವುದಿಲ್ಲ. **ಸೇವಯಾ** ನನ್ನ ಸೇವೆಯಿಂದ, **ಪೂರ್ಣಾಃ** ಪೂರ್ಣರಾದ (ತೃಪ್ತರಾದವರು), **ಕಾಲವಿಪ್ಲುತಂ** ಕಾಲದಿಂದ ನಾಶ ಹೊಂದುವ, **ಅನ್ಯತ್** ಸ್ವರ್ಗಾದಿಗಳನ್ನು, **ನೇಚ್ಛಂತಿ ಇತಿ ಕುತಃ** ಅಪೇಕ್ಷಿಸುವುದಿಲ್ಲ ಎಂದು ಹೇಳುವುದೇನು?

**ತಾತ್ಪರ್ಯ-** ನನ್ನ ಸೇವೆಯಿಂದ ತೃಪ್ತರಾದವರು ಸಾಲೋಕ್ಯವೇ ಮೊದಲಾದ ಮೋಕ್ಷಗಳನ್ನು ಅಪೇಕ್ಷಿಸುವುದಿಲ್ಲ. ನನ್ನ ಸೇವೆಯಿಂದ ತೃಪ್ತರಾದವರು ಸ್ವರ್ಗಾದಿಗಳನ್ನು ಅಪೇಕ್ಷಿಸುವುದಿಲ್ಲ. ಕಾರಣವೇನೆಂದರೇ ಇವುಗಳೆಲ್ಲಾ ಕಾಲದಿಂದ ನಾಶ ಹೊಂದುತ್ತವೆ. ॥೫೫॥

**ಸಾಧವೋ ಹೃದಯಂ ಮಹ್ಯಂ ಸಾಧೂನಾಂ ಹೃದಯಂ ತ್ವಹಮ್ ।**
**ಮದನ್ಯತ್ತೇ ನ ಜಾನಂತಿ ನಾಹಂ ತೇಭ್ಯೋ ಮನಾಗಪಿ ॥೫೬॥**

**ಮಹ್ಯಂ** ನನಗೆ **ಸಾಧವಃ** ಸಾತ್ವಿಕರು, **ಹೃದಯಂ** ಪ್ರಿಯರು, **ಅಹಂ** ನಾನು, **ಸಾಧೂನಾಂ** ಸಜ್ಜನರಿಗೆ, **ಹೃದಯಂ** ಪ್ರಿಯನು. **ತೇ** ಸಜ್ಜನರು, **ಮದನ್ಯತ್** ನನ್ನಿಂದ

ಬೇರೆಯದನ್ನು (ಪ್ರಿಯವನ್ನು) **ನ ಜಾನಂತಿ** ತಿಳಿಯುವುದಿಲ್ಲ. **ಅಹಂ** ನಾನು **ತೇಭ್ಯಃ** ಅವರಿಂದ ಭಿನ್ನವಾದ, **ಮನಾಗಪಿ** ಸ್ವಲ್ಪವೂ ಪ್ರಿಯವಾದದ್ದನ್ನು, **ನ ಜಾನಾಮಿ** ತಿಳಿಯುವುದಿಲ್ಲ.

**ವಿ.ವಿ.:-** ''ಮನಾಕ್'' ಈ ಪದಕ್ಕೆ ''ಯಾವಾಗಲೂ'' ಎಂದೂ ಅರ್ಥವಿದೆ. ಇದರಿಂದ ವ್ಯಕ್ತವಾಗುವ ಅಭಿಪ್ರಾಯವೇನೆಂದರೇ ಭಗವಂತನ ಮಾಯೆಯಿಂದ ಜ್ಞಾನಿಗಳಲ್ಲಿ ಪ್ರಿಯತ್ವವು ವ್ಯತ್ಯಾಸವಾದರೂ ಭಗವಂತನು ಮಾಯಾತೀತನಾದ್ದರಿಂದ ಯಾವಾಗಲೂ ಭಗವಂತನು ಜ್ಞಾನಿಗಳ ಮೇಲೆ ಅನುಗ್ರಹ ಮಾಡಿಯೇ ಮಾಡುತ್ತಾನೆ. ಜ್ಞಾನಿಗಳಿಗೆ ವ್ಯತ್ಯಾಸವಾಗುವುದಕ್ಕೆ ''ದುರ್ವಾಸರೇ'' ಉದಾಹರಣೆಯಾಗಿರುತ್ತಾರೆ. ಆದ್ದರಿಂದ ''ನಿನ್ನನ್ನೇ ನೋಡಿಕೋ'' ಎಂದು ದುರ್ವಾಸರಿಗೆ ಭಗವಂತನೇ ಹೇಳಿರುತ್ತಾನೆ. ನ ವಿದ್ಯತೇ ಹಂತಾ ಯೇಷಾಂ ತೇ ನಾಹಂತಾಃ ತೇಷಾಂ ಇಭ್ಯಃ ಸ್ವಾಮೀ ನಾಹಂತೇಭ್ಯಃ ನಾಶಕರಿಲ್ಲದವರಿಗೆ ಒಡೆಯನು. ಹೀಗೆ ಅರ್ಥ ಮಾಡುವುದರಿಂದ ಮಾಯಾಗ್ರಸ್ತನಲ್ಲವೆಂಬ ಅರ್ಥವು ಬರುವುದು. ||೫೬||

**ಉಪಾಯಂ ಕಥಯಿಷ್ಯಾಮಿ ತವ ವಿಪ್ರ ಶೃಣುಷ್ವ ತತ್ ।**
**ಅಯಂ ಹ್ಯಾತ್ಮಾಭಿಚಾರಸ್ತೇ ಯತಸ್ತಂ ಯಾತು ವೈ ಭವಾನ್ ||೫೭||**

**ವಿಪ್ರ** ದುರ್ವಾಸಮುನಿಯೇ, **ತವ** ನಿನಗೆ, **ಉಪಾಯಂ** ಉಪಾಯವನ್ನು **ಕಥಯಿಷ್ಯಾಮಿ** ಹೇಳುತ್ತೇನೆ. **ತತ್** ಅದನ್ನು, **ಶೃಣುಷ್ವ** ಕೇಳು, **ಅಯಂ** ಈ **ಅಭಿಚಾರಃ** ಹಿಂಸೆಯು, **ಆತ್ಮನಃ** ನಿನಗೆ, **ಯತಃ** ಯಾವಾತನಿಂದ, ಆಗಿದೆಯೋ, **ತಂ** ಆತನನ್ನು, **ಭವಾನ್** ನೀನು **ಯಾತು** ಹೋಗತಕ್ಕದ್ದು ಅಥವಾ **ಆತ್ಮಾಭಿಚಾರಃ** ನಿನ್ನಿಂದ ಮಾಡಲ್ಪಟ್ಟ ಕೃತ್ಯೆಯು, **ಯತಃ** ಯಾರನ್ನು, ಉದ್ದೇಶಿಸಿ ಮಾಡಿದೆಯೋ, **ತಂ** ಅವನನ್ನು ಕುರಿತು, **ಭವಾನ್** ನೀನು **ಯಾತು** ಹೋಗತಕ್ಕದ್ದು.

**ತಾತ್ಪರ್ಯ-** ದುರ್ವಾಸ ಮುನಿಯೇ! ನಿನಗೆ ಉಪಾಯವನ್ನು ಹೇಳುತ್ತೇನೆ ಕೇಳು! ಈ ಹಿಂಸೆಯನ್ನು ನೀನು ಯಾರಿಗಾಗಿ ಮಾಡಿದೆಯೋ ಆತನನ್ನು ಕುರಿತು ಶರಣಾಗತಿಯನ್ನು ಹೊಂದು ಎಂದು ಹೇಳಿದನು. ||೫೭||

**ಸಾಧುಷು ಪ್ರಹಿತಂ ತೇಜಃ ಪ್ರಹರ್ತುಃ ಕುರುತೇ ಭಯಮ್ ।**
**ತಪೋ ವಿದ್ಯಾ ಚ ವಿಪ್ರಾಣಾಂ ನಿಃಶ್ರೇಯಸಕರೇ ಉಭೇ ||೫೮||**

**ಸಾಧುಷು** ಸಜ್ಜನರಲ್ಲಿ, **ಪ್ರಹಿತಂ** ಪ್ರಯೋಗ ಮಾಡಿದ, **ತೇಜಃ** ಕ್ಷುದ್ರೋಪದ್ರವ ರೂಪವಾದ ಮಂತ್ರಸಹಿತವಾದ ಜ್ಯೋತಿಯು, **ಪ್ರಹರ್ತುಃ** ಉಂಟು

ಮಾಡತಕ್ಕವನಿಗೆ, **ಭಯಂ** ಭಯವನ್ನು, **ಕುರುತೇ** ಉಂಟುಮಾಡುತ್ತದೆ. **ವಿಪ್ರಾಣಾಂ** ಬ್ರಾಹ್ಮಣರಿಗೆ, **ತಪಃ** ತಪಸ್ಸು, **ವಿದ್ಯಾ ಚ** ವಿದ್ಯೆಯು, **ಉಭೇ** ಇವೆರಡೂ **ನಿಃಶ್ರೇಯಸಕರೇ** ಮೋಕ್ಷಪ್ರದವಾದುವುಗಳಾಗಿರುತ್ತವೆ.

**ತ ಏವ ದುರ್ವಿನೀತಸ್ಯ ಕಲ್ಪೇತೇ ಕರ್ತುರನ್ಯಥಾ ।**
**ಬ್ರಹ್ಮಂಸ್ತದ್ಗಚ್ಛ ಭದ್ರಂ ತೇ ನಾಭಾಗತನಯಂ ನೃಪಮ್ ॥೫೯॥**

**ಕ್ಷಮಾಪಯ ಮಹಾಭಾಗ ತತಃ ಶಾಂತಿರ್ಭವಿಷ್ಯತಿ ॥೬೦॥**

**ತೇ, ಏವ** ಆ ತಪಸ್ಸು-ವಿದ್ಯಾಗಳೇ **ದುರ್ವಿನೀತಸ್ಯ** ಅವಿನೀತನಾದ, **ಕರ್ತುಃ** ಅವಿನಯರ ಮಾರ್ಗವನ್ನು ಅವಲಂಬಿಸಿದವನಿಗೆ (ಪರರಿಗೆ ಉಪದ್ರವನ್ನುಂಟು ಮಾಡುವ) **ಅನ್ಯಥಾ** ವಿರುದ್ಧ ಸ್ಥಿತಿಯನ್ನು **ಕಲ್ಪೇತೆ** ಉಂಟು ಮಾಡುತ್ತವೆ, **ಬ್ರಹ್ಮನ್** ಎಲೋ, ದುರ್ವಾಸನೇ! **ನಾಭಾಗತನಯಂ** ನಾಭಾಗನ ಮಗನಾದ, **ನೃಪಂ** ಅಂಬರೀಷನನ್ನು ಕುರಿತು, **ಗಚ್ಛ** ಹೋಗು. **ತತ್** ಅವನ ಅನುಸರಣೆಯು, **ತೇ** ನಿನಗೆ, **ಭದ್ರಂ** ಕ್ಷೇಮವನ್ನುಂಟುಮಾಡುತ್ತದೆ. **ಮಹಾಭಾಗ** ಮಹಾತ್ಮನೇ **ಕ್ಷಮಾಪಯ** ಆತನಿಗೆ ಕ್ಷಮಾಯಾಚನೆ ಮಾಡು. **ತತಃ** ಅದರಿಂದ **ಶಾಂತಿಃ** ನಿನ್ನ ಪಾಪ ಶಾಂತಿಯು, **ಭವಿಷ್ಯತಿ** ಉಂಟಾಗುತ್ತದೆ.

**ತಾತ್ಪರ್ಯ-** ತಪಸ್ಸು ಮತ್ತು ವಿದ್ಯೆಗಳು ಯದ್ಯಪಿ ಮೋಕ್ಷ ಸಾಧನೆ-ಗಳಿಗಾಗಿರುತ್ತವೆ. ಆದರೂ ಈ ಸಾಧನಗಳೇ ಪರರ ಉಪದ್ರವಕ್ಕೆ ಕಾರಣವಾಗುವಂತೆ ವರ್ತಿಸುವವರಿಗೆ ಅನರ್ಥವನ್ನುಂಟುಮಾಡುತ್ತವೆ. ಆದ್ದರಿಂದ ದುರ್ವಾಸನೇ! ನೀನು ನಾಭಾಗತನಯನಾದ ಅಂಬರೀಷನನ್ನು ಶರಣಾಗತನಾಗಿ ಕ್ಷಮೆಯನ್ನು ಯಾಚಿಸು. ॥೫೯-೬೦॥

**ಶ್ರೀ ಶುಕ ಉವಾಚ-**

**ಏವಂ ಭಗವತಾದಿಷ್ಟೋ ದುರ್ವಾಸಾಶ್ಚಕ್ರತಾಪಿತಃ ।**
**ಅಂಬರೀಷಮುಪಾವೃತ್ಯ ತತ್ಪಾದೌ ದುಃಖಿತೋಽಗ್ರಹೀತ್ ॥೬೧॥**

**ಏವಂ** ಈ ರೀತಿಯಾಗಿ, **ಭಗವತಾ** ಭಗವಂತನಿಂದ, **ಆದಿಷ್ಟಃ** ಆಜ್ಞಪ್ತನಾದ, **ಚಕ್ರತಾಪಿತಃ** ಚಕ್ರದಿಂದ ಸಂತಪ್ತರಾದ **ದುರ್ವಾಸಾಃ** ದುರ್ವಾಸರು, **ಅಂಬರೀಷಂ** ಅಂಬರೀಷನನ್ನು, **ಉಪಾವೃತ್ಯ** ತಿರುಗಿಬಂದು, **ದುಃಖಿತಃ** ದುಃಖಿತನಾಗಿ, **ತತ್ಪದೌ** ಅಂಬರೀಷನ ಪಾದಗಳನ್ನು, **ಅಗ್ರಹೀತ್** ಅವಲಂಬಿಸಿದರು.

**ತಾತ್ಪರ್ಯ-** ಈ ರೀತಿಯಾಗಿ ಪರಮಾತ್ಮನಿಂದ ಆಜ್ಞಪ್ತರಾದ, ಚಕ್ರದಿಂದ ಸಂತಪ್ತರಾದ ದುರ್ವಾಸರು ಅಂಬರೀಷನನ್ನು ಕುರಿತು ತಿರುಗಿಬಂದು ದುಃಖಿತ-ನಾಗಿ ಆತನ ಪಾದಗಳನ್ನು ಹಿಡಿದುಕೊಂಡರು. ॥೬೧॥

**ತಸ್ಯ ತದ್ವ್ಯಸನಂ ವೀಕ್ಷ್ಯ ಪಾದಸ್ಪರ್ಶವಿಲಜ್ಜಿತಃ ।**
**ಅಸ್ತಾವೀತ್ ತದ್ಧರೇರಸ್ತ್ರಂ ಕೃಪಯಾ ಪೀಡಿತೋ ಭೃಶಮ್ ॥೬೨॥**

**ತಸ್ಯ** ಆ ದುರ್ವಾಸರ, **ತದ್ವ್ಯಸನಂ** ಈ ದುಃಖವನ್ನು, **ವೀಕ್ಷ್ಯ** ನೋಡಿ, **ಪಾದಸ್ಪರ್ಶವಿಲಜ್ಜಿತಃ** ಪಾದಸ್ಪರ್ಶದಿಂದ ಲಜ್ಜಿತನಾದ ರಾಜನು, **ಕೃಪಯಾ** ದಯೆಯಿಂದ, **ಭೃಶಂ** ಹೆಚ್ಚಾಗಿ, **ಪೀಡಿತಃ** ಪೀಡಿತನಾಗಿ, **ತತ್** ಆ **ಹರೇಃ** ಭಗವಂತನ, **ಅಸ್ತ್ರಂ** ಚಕ್ರಾಯುಧವನ್ನು, **ಅಸ್ತಾವೀತ್** ಸ್ತೋತ್ರ ಮಾಡಿದನು.

**ತಾತ್ಪರ್ಯ-** ಪಾದಸ್ಪರ್ಶದಿಂದ ಲಜ್ಜಿತನಾದ ಅಂಬರೀಷರಾಜನು, ದಯಾ-ಗುಣದಿಂದ ಪೀಡಿತನಾಗಿ ಆ ಭಗವಂತನ ಚಕ್ರಾಯುಧವನ್ನು ಸ್ತೋತ್ರಮಾಡಿದನು.

ಚಕ್ರವನ್ನು, ಅಂತರ್ಯಾಮಿ ಭಗವಂತನನ್ನು ಸ್ತುತಿಸಿದನು.

**ಅಂಬರೀಷ ಉವಾಚ :-**

**ತ್ವಮಗ್ನಿರ್ಭಗವಾನ್ ಸೂರ್ಯಸ್ತ್ವಂ ಸೋಮೋ ಜ್ಯೋತಿಷಾಂ ಪತಿಃ ।**
**ತ್ವಮಾಪಸ್ತ್ವಂ ಕ್ಷಿತಿರ್ವ್ಯೋಮ ವಾಯುರ್ಮಾತ್ರೇಂದ್ರಿಯಾಣಿ ಚ ॥ ೬೩॥**

ಸುದರ್ಶನನೇ! **ತ್ವಂ** ನೀನು, **ಅಗ್ನಿಃ** ಅಗ್ನಿಯು **ಭಗವಾನ್** ಪೂಜ್ಯನಾದ, **ಸೂರ್ಯಃ** ಸೂರ್ಯನು, **ತ್ವಂ** ನೀನು **ಜ್ಯೋತಿಷಾಂ** ನಕ್ಷತ್ರಗಳಿಗೆ **ಪತಿಃ** ಪತಿಯಾದ **ಸೋಮಃ** ಚಂದ್ರನು, **ತ್ವಂ** ನೀನು **ಆಪಃ** ಜಲಾಭಿಮಾನಿ ದೇವತೆಯು, **ತ್ವಂ** ನೀನು **ಕ್ಷಿತಿಃ** ಭೂಮಿಯು, **ತ್ವಂ** ನೀನು, **ವ್ಯೋಮ** ಆಕಾಶವು, **ತ್ವಂ** ನೀನು **ವಾಯುಃ** ವಾಯುವು **ತ್ವಂ** ನೀನು **ಮಾತ್ರಾ** ಶಬ್ದಾದಿ ವಿಷಯಗಳು, **ಇಂದ್ರಿಯಾಣಿ ಚ** ಇಂದ್ರಿಯಾಭಿಮಾನಿ ದೇವತೆಗಳು, **ತ್ವಂ** ನೀನು ಇವರೆಲ್ಲರ ಸ್ವಾಮಿಯಾಗಿರುವಿ.

**ತಾತ್ಪರ್ಯ-** ಸುದರ್ಶನನೇ! ನೀನು ಸೂರ್ಯ, ಚಂದ್ರ, ಜಲ, ಭೂಮಿ, ಆಕಾಶ, ವಾಯು, ರೂಪಾದಿ ವಿಷಯಗಳು, ಇಂದ್ರಿಯಗಳು ಇವೆಲ್ಲರಿಗೂ ನಿಯಾಮಕನಾಗಿರುವಿ. ಸತ್ತಾ, ಪ್ರಮಿತಿ, ಪ್ರವೃತ್ತಿಗಳಿಗೆ ನಿಯಾಮಕನಾಗಿರುವಿ.

**ಸುದರ್ಶನ ನಮಸ್ತುಭ್ಯಂ ಸಹಸ್ರಾರಾಚ್ಯುತಪ್ರಿಯ ।**
**ಸರ್ವಾಸ್ತ್ರಘಾತಿನ್ ವಿಪ್ರಾಯ ಸ್ವಸ್ತಿ ಭೂಯಾದಿಡಸ್ಪತೇ ॥೬೪॥**

**ಸುದರ್ಶನ** ಸುದರ್ಶನನೇ! **ಸಹಸ್ರಾರ** ಸಾವಿರ ಅರಗಳುಳ್ಳವನೇ! **ಅಚ್ಯುತಪ್ರಿಯಃ** ಅಚ್ಯುತಪ್ರಿಯನೇ! **ಇಡಸ್ಪತೇ** ಅನ್ನಸ್ವಾಮಿಯೇ! **ಸರ್ವಾಸ್ತ್ರಘಾತಿನ್** ಪ್ರತಿಭಟರ ಎಲ್ಲಾ ಅಸ್ತ್ರಗಳನ್ನು ಘಾತ ಮಾಡುವ ಸ್ವಭಾವ ಉಳ್ಳವನೇ! **ವಿಪ್ರಾಯ** ಈ ದುರ್ವಾಸರಿಗೆ, **ಸ್ವಸ್ತಿ** ಮಂಗಳವು, **ಭೂಯಾತ್** ಆಗಲಿ.

**ತಾತ್ಪರ್ಯ-** ಹೇ ಸುದರ್ಶನನೇ! ನೀನು ಸಾವಿರ ಅರಗಳನ್ನು ಹೊಂದಿರುವಿ. ಅಚ್ಯುತಪ್ರಿಯನಾಗಿರುವಿ. ಅನ್ನಪತಿಯಾಗಿರುವಿ. ಪ್ರತಿಭಟರ ಎಲ್ಲಾ ಅಸ್ತ್ರಗಳನ್ನು ನಾಶಪಡಿಸುವವನಾಗಿರುವಿ. ಈ ದುರ್ವಾಸರಿಗೆ ಮಂಗಳವಾಗಲಿ. ||೬೪||

**ತ್ವಂ ಧರ್ಮಸ್ತ್ವಂ ಧೃತಿಃ ಸತ್ಯಂ ತ್ವಂ ಯಜ್ಞೋಽಖಿಲಯಜ್ಞಭುಕ್ |**
**ತ್ವಂ ಲೋಕಪಾಲಃ ಸರ್ವಾತ್ಮಾ ತ್ವಂ ತೇಜಃ ಪೌರುಷಂ ಪರಮ್ ||೬೫||**

**ತ್ವಂ** ನೀನು, **ಧರ್ಮಃ** ಧರ್ಮಸ್ವರೂಪನಾಗಿದ್ದೀಯೇ, **ಧೃತಿಃ** ನೀನು ಧೈರ್ಯಶೀಲನಾಗಿರುತ್ತೀಯೇ, **ಸತ್ಯಂ** ಸತ್ಯಸ್ವರೂಪನಾಗಿರುತ್ತೀಯೇ, **ತ್ವಂ** ನೀನು **ಯಜ್ಞಃ** ಯಜ್ಞರೂಪಿಯಾಗಿರುತ್ತೀಯೇ, **ಅಖಿಲಯಜ್ಞಭುಕ್** ಎಲ್ಲಾ ಯಜ್ಞಸಾರವನ್ನು ಭೋಜನ ಮಾಡುತ್ತೀಯೇ, **ತ್ವಂ** ನೀನು **ಲೋಕಪಾಲಃ** ಲೋಕಪಾಲಕನಾಗಿದ್ದೀಯೇ. **ಸರ್ವಾತ್ಮಾ** ಸರ್ವಾಂತರ್ಯಾಮಿಯು, **ತ್ವಂ** ನೀನು **ಪೌರುಷಂ** ಪುರುಷಸಂಬಂಧಿಯಾದ **ಪರಂ** ಉತ್ತಮವಾದ, **ತೇಜಃ** ತೇಜಸ್ಸಿಗೆ ಅಭಿವ್ಯಂಜಕನಾಗಿರುತ್ತೀಯೇ.

**ತಾತ್ಪರ್ಯ-** ಭೋ! ಚಕ್ರಾಂತರ್ಯಾಮಿ ಸ್ವಾಮಿನ್! ನೀನು ಧರ್ಮ-ಮೂರ್ತಿಯು. ನೀನೇ ಧೈರ್ಯ ನಿಯಾಮಕನಾಗಿರುವಿ. ನೀನೇ ಸತ್ಯಸ್ವರೂಪ-ವಾಗಿರುವಿ. ನೀನು ಯಜ್ಞನಾಮಕನಾಗಿರುವಿ. ನೀನೇ ಅಖಿಲಯಜ್ಞಸಾರ ಭೋಕ್ತನಾಗಿರುವಿ. ನೀನೇ ಲೋಕಪಾಲಕನಾಗಿರುವಿ. ನೀನೇ ಸರ್ವಾಂತರ್ಯಾಮಿ-ಯಾಗಿರುವಿ. ನೀನೇ ಭಗವಂತನ ಸಾಮರ್ಥ್ಯಕ್ಕೆ ಅಭಿವ್ಯಂಜಕನಾಗಿರುವಿ. ||೬೫||

**ನಮಃ ಸುನಾಭಾಖಿಲಧರ್ಮಸೇತವೇ**
**ಅಧರ್ಮಶೀಲಾಸುರಧೂಮಕೇತವೇ |**
**ತ್ರೈಲೋಕ್ಯಗೋಪಾಯ ವಿಶುದ್ಧವರ್ಚಸೇ**
**ಮನೋಜವಾಯಾದ್ಭುತಕರ್ಮಣೇಽಸ್ತು ತೇ ||೬೬||**

ಹೇ ಸುದರ್ಶನನೇ! **ಸುನಾಭ** ಶೋಭನವಾದ ಪ್ರಾಂತಭಾಗವುಳ್ಳ, **ಅಖಿಲ-ಧರ್ಮಸೇತವೇ** ಎಲ್ಲ ಧರ್ಮಗಳ ರಕ್ಷಕನಾದ, **ಅಧರ್ಮಶೀಲಾಸುರಧೂಮಕೇತವೇ** ಅಧರ್ಮಸ್ವಭಾವ ಉಳ್ಳ ದೈತ್ಯರಿಗೆ ಅಗ್ನಿಯಂತಿರುವ, **ತ್ರೈಲೋಕ್ಯಗೋಪಾಯ** ಮೂರು ಲೋಕದ ರಕ್ಷಕನಾದ, **ವಿಶುದ್ಧವರ್ಚಸೇ** ಪರಿಶುದ್ಧವಾದ ತೇಜಸ್ಸು ಉಳ್ಳ, **ಮನೋಜವಾಯ** ಮನಸ್ಸಿಗಿಂತಲೂ ವೇಗಉಳ್ಳ, **ಅದ್ಭುತಕರ್ಮಣೇ** ಅದ್ಭುತ ಕರ್ಮ ಉಳ್ಳ, **ತೇ** ನಿನಗೆ, **ನಮಃ** ನಮಸ್ಕಾರವು. **ಅಸ್ತು** ಇರಲಿ.

**ತಾತ್ಪರ್ಯ-** ಹೇ ಸುದರ್ಶನನೇ! ಎಲ್ಲಾ ಧರ್ಮಗಳ ರಕ್ಷಕನಾದ, ಅಧರ್ಮ ಸ್ವಭಾವ ಉಳ್ಳ ದೈತ್ಯರಿಗೆ ಅಗ್ನಿಯಂತೆ ಇರುವಿ. ಮೂರು ಲೋಕದ ರಕ್ಷಕನಾದ ಪರಿಶುದ್ಧ ತೇಜಸ್ಸು ಉಳ್ಳ ಆಶ್ಚರ್ಯ ಕರ್ಮ ಉಳ್ಳ ಮನಸ್ಸಿನಂತೆ ವೇಗ ಉಳ್ಳವನು. ನಿನಗೆ ನಮಸ್ಕಾರವು. ।।೬೬।।

**ಯದಾ ವಿಸೃಷ್ಟಸ್ತ್ವಮನಂಜನೇನ ವೈ**
**ಬಲಂ ಪ್ರವಿಶ್ಯೋರ್ಜಿತದೈತ್ಯದಾನವಮ್ ।**
**ಬಾಹೂದರೋರ್ವಂಘ್ರಿಶಿರೋಧರಾಣಿ**
**ವೃಕ್ಣನ್ನಜಸ್ರಂ ಪ್ರಧನೇ ವಿರಾಜಸೇ ।।೬೭।।**

**ತ್ವಂ** ನೀನು **ಯದಾ** ಯಾವಾಗ, **ಅನಂಜನೇನ** ದೋಷರಹಿತನಾದ, ಭಗವಂತನಿಂದ, **ವಿಸೃಷ್ಟಃ** ಬಿಡಲ್ಪಟ್ಟವನಾದಿಯೋ, **ತದಾ** ಆಗ, **ಊರ್ಜಿತ-ದೈತ್ಯದಾನವಂ** ಬಲಿಷ್ಠರಾದ ದೈತ್ಯ-ದಾನವರಿಂದ ಕೂಡಿದ, **ಬಲಂ** ಸೈನ್ಯವನ್ನು, **ಪ್ರವಿಶ್ಯ** ಪ್ರವೇಶಮಾಡಿ, **ಪ್ರಧನೇ** ಯುದ್ಧದಲ್ಲಿ, **ಬಾಹೂದರೋರ್ವಂಘ್ರಿಶಿರೋಧರಾಣಿ** ತೋಳು, ಹೊಟ್ಟೆ, ತೊಡೆ, ಕಾಲು, ಕಂಠ ಇವುಗಳನ್ನು **ವೃಕ್ಣನ್** ಕತ್ತರಿಸುತ್ತಾ, **ಅಜಸ್ರಂ** ಯಾವಾಗಲೂ, **ವಿರಾಜಸೇ** ಶೋಭಿಸುತ್ತೀಯೇ.

**ತಾತ್ಪರ್ಯ-** ನೀನು ಯಾವಾಗ ದೋಷರಹಿತನಾದ ಭಗವಂತನಿಂದ ಬಿಡಲ್ಪಟ್ಟಿಯೋ ಆಗ ಬಲಿಷ್ಠರಾದ ದೈತ್ಯದಾನವರಿಂದ ಕೂಡಿದ ಸೈನ್ಯವನ್ನು ಪ್ರವೇಶಿಸಿ ಯುದ್ಧದಲ್ಲಿ ತೋಳು, ಹೊಟ್ಟೆ, ಕಾಲು, ಕಂಠ ಇವುಗಳನ್ನು ಕತ್ತರಿಸುತ್ತಾ ಯಾವಾಗಲೂ ಶೋಭಿಸುತ್ತೀಯೇ. ।।೬೭।।

**ತ್ವತ್ತೇಜಸಾ ಧರ್ಮಮಯೇನ ಸಂಹೃತಂ**
**ತಮಃ ಪ್ರಕಾಶಶ್ಚ ದೃಶೋರ್ಮಹಾತ್ಮನಾಮ್ ।**
**ದುರತ್ಯಯಸ್ತೇ ಮಹಿಮಾ ಗಿರಾಂಪತೇ**
**ತ್ವದ್ರೂಪಮೇತತ್ ಸದಸತ್ಪರಾವರಮ್ ।।೬೮।।**

**ಧರ್ಮಮಯೇನ** ಅತ್ಯಂತ ಪ್ರಕಾಶಮಾನವಾದ, 'ಧೃ ಕ್ಷರಣದೀಪ್ತ್ಯೋಃ' ಧಾತು. **ತ್ವತ್ತೇಜಸಾ** ನಿನ್ನ ತೇಜಸ್ಸಿನಿಂದ, **ತಮಃ** ಅಜ್ಞಾನ ಮತ್ತು ಅಂಧಕಾರಗಳು ಮತ್ತು **ಮಹಾತ್ಮನಾಂ** ಮಹಾತ್ಮರಾದ ಸೂರ್ಯ ಮೊದಲಾದವರ, **ದೃಶಃ** ಕಣ್ಣುಗಳ ಪ್ರಕಾಶವು, **ಸಂಹೃತಂ** ಸ್ತಂಭಿತವಾದವು. **ಗಿರಾಂಪತೇ** ಹೇ ವೇದಪ್ರತಿಪಾದ್ಯನೇ! **ತೇ** ನಿನ್ನ, **ಮಹಿಮಾ** ಮಹಿಮೆಯು, **ದುರತ್ಯಯಃ** ಮೀರಲು ಅಶಕ್ಯವಾಗಿರುತ್ತೆ. **ಏತತ್** ಈ **ಪರಾವರಂ** ಚೇತನಾಚೇತನಾತ್ಮಕವಾದ, **ಸದಸತ್** ಮೂರ್ತಾಮೂರ್ತವಾದ, **ಜಗತ್** ಜಗತ್ತು, **ತ್ವದ್ರೂಪಂ** ನಿನ್ನ ಪ್ರತಿಮಾರೂಪವಾಗಿರುತ್ತೆ.

**ತಾತ್ಪರ್ಯ-** ಚಕ್ರಾಂತರ್ಯಾಮಿ ಸುದರ್ಶನನೇ! ನಿನ್ನ ಪುಣ್ಯಮಯವಾದ ತೇಜಸ್ಸಿನಿಂದ ಅಜ್ಞಾನ ಮತ್ತು ಅಂಧಕಾರವು, ಮಹಾತ್ಮರಾದ ಸೂರ್ಯ ಮೊದಲಾದವರ ಕಣ್ಣುಗಳ ಪ್ರಕಾಶವು ಸ್ತಂಭಿತವಾದವು. ಹೇ ವೇದ ಪ್ರತಿಪಾದ್ಯನೇ! ನಿನ್ನ ಮಹಿಮೆಯು ಮೀರಲು ಅಶಕ್ಯವಾದದ್ದು. ಚೇತನಾಚೇತನಾತ್ಮಕವಾದ ಈ ಜಗತ್ತು ನಿನ್ನ ಪ್ರತಿಮಾರೂಪವಾಗಿದೆ. ಜ್ಞಾನವಿರುವುದರಿಂದ ಪರ ಎಂದರೇ ಶ್ರೇಷ್ಠರಾದ ಚೇತನರು. ಜ್ಞಾನವಿಲ್ಲದ್ದರಿಂದ ಅವರ ಎಂದರೇ ಕಡಿಮೆಯಾದ ಅಚೇತನ ಎಂದರ್ಥ. ।।೬೮।।

**ಸತ್ವಂ ಜಗತ್ಪ್ರಾಣಖಲಪ್ರಹಾಣಯೇ**
**ನಿರೂಪಿತಃ ಸರ್ವಸಹೋ ಗದಾಭೃತಾ ।**
**ವಿಪ್ರಾಯ ಚಾಸ್ಮತ್ಕುಲದೈವಹೇತವೇ**
**ವಿಧೇಹಿ ಭದ್ರಂ ತದನುಗ್ರಹೋ ಹಿ ನಃ ।।೬೯।।**

**ಹೇ ಜಗತ್ಪ್ರಾಣ!** ಹೇ ಜಗದ್ರಕ್ಷಕನೇ! **ಸಃ** ಅಂಥ, **ತ್ವಂ** ನೀನು, **ಖಲಪ್ರಹಾಣಯೇ** ದುಷ್ಟನಿಗ್ರಹಕ್ಕಾಗಿ, **ಗದಾಭೃತಾ** ಗದಾಧಾರಿಯಾದ ಭಗವಂತನಿಂದ **ನಿರೂಪಿತಃ** ಆಜ್ಞಪ್ತನಾದ ನೀನು, **ಸರ್ವಸಹಃ** ಭಕ್ತಾಪರಾಧಸಹನಶೀಲನಾಗಿದ್ದೀಯೇ, **ಅಸ್ಮತ್ಕುಲದೈವಹೇತವೇ** ನಮ್ಮ ವಂಶದ ಭಾಗ್ಯಲಾಭಕ್ಕಾಗಿ, **ವಿಪ್ರಾಯ** ಬ್ರಾಹ್ಮಣನಿಗೆ, **ಭದ್ರಂ** ಮಂಗಳವನ್ನು, **ವಿದೇಹಿ** ಮಾಡು, **ತತ್** ಆ ಮಂಗಳವನ್ನುಂಟುಮಾಡುವುದು, **ನಃ** ನಮಗೆ **ಅನುಗ್ರಹಃ** ಅನುಗ್ರಹ ಮಾಡಿದಂತಾಗುತ್ತದೆ.

**ತಾತ್ಪರ್ಯ-** ಹೇ ಜಗದ್ರಕ್ಷಕನೇ! ನೀನು ದುಷ್ಟನಿಗ್ರಹಕ್ಕಾಗಿ ಭಗವಂತನಿಂದ ಆಜ್ಞಪ್ತನಾಗಿರುವಿ. ನಮ್ಮ ವಂಶದ ಭಾಗ್ಯಲಾಭಕ್ಕಾಗಿ ಈ ಬ್ರಾಹ್ಮಣರಿಗೆ ಮಂಗಳವನ್ನುಂಟುಮಾಡು. ಈ ಮೂಲಕ ನಮ್ಮ ಮೇಲೆ ಅನುಗ್ರಹ ಮಾಡಿದಂತಾಗುತ್ತದೆ. ।।೬೯।।

**ಯದ್ಯಸ್ತಿ ದತ್ತಮಿಷ್ಟಂ ವಾ ಸ್ವಧರ್ಮೋ ವಾ ಸ್ವನುಷ್ಠಿತಃ ।**
**ಕುಲಂ ನೋ ವಿಪ್ರದೈವಂ ಚೇತ್ ದ್ವಿಜೋ ಭವತು ವಿಜ್ವರಃ ।।೭೦।।**

**ಯದಿ** ಒಂದು ವೇಳೆ, **ದತ್ತಂ** ನಾನು ದಾನ ಮಾಡಿದ್ದು, **ವಾ** ಮತ್ತು **ಇಷ್ಟಂ** ಯಾಗ ಮಾಡಿದ್ದು, **ವಾ** ಮತ್ತು, **ಸ್ವಧರ್ಮಃ** ಸ್ವಧರ್ಮವು **ಸ್ವನುಷ್ಠಿತಃ** ಉತ್ತಮರೀತಿಯಾಗಿ, ಅನುಷ್ಠಿತವಾಗಿದ್ದರೇ, **ನಃ** ನಮ್ಮ **ಕುಲಂ** ವಂಶವು **ವಿಪ್ರದೈವಂ ಚೇತ್** ಬ್ರಾಹ್ಮಣರೇ ದೈವವಾಗಿ ಉಳ್ಳದ್ದಾಗಿದ್ದರೇ, **ದ್ವಿಜಃ** ಈ ಬ್ರಾಹ್ಮಣರು, **ವಿಜ್ವರಃ** ತಾಪರಹಿತರು, **ಭವತು** ಆಗಲಿ.

**ತಾತ್ಪರ್ಯ-** ಸುದರ್ಶನನೇ! ನಾನು ದಾನ ಮಾಡಿದ್ದು, ಯಾಗ ಮಾಡಿದ್ದು, ಸ್ವಧರ್ಮಾನುಷ್ಠಾನ ಮಾಡಿದ್ದು ಮತ್ತು ನಮ್ಮ ಕುಲಕ್ಕೆ ಬ್ರಾಹ್ಮಣರು ದೈವವಾಗಿ ಇದ್ದಿದ್ದರೆ, ಈ ಬ್ರಾಹ್ಮಣರು ಸಂತಾಪರಹಿತರಾಗಲಿ. ।।೭೦।।

**ಯದಿ ಮೇ ಭಗವಾನ್ ಪ್ರೀತ ಏಕಸ್ಸರ್ವಗುಣಾಶ್ರಯಃ ।**
**ಸರ್ವಭೂತಾತ್ಮಭಾವೇನ ದ್ವಿಜೋ ಭವತು ವಿಜ್ವರಃ ।।೭೧।।**

**ಯದಿ** ಒಂದು ವೇಳೆ, **ಏಕಃ** ಮುಖ್ಯನಾದ, **ಸರ್ವಗುಣಾಶ್ರಯಃ** ಎಲ್ಲಾ ಗುಣಗಳಿಗೂ ಆಶ್ರಯನಾದ, **ಭಗವಾನ್** ಪರಮಾತ್ಮನು, **ಸರ್ವಭೂತಾತ್ಮಭಾವೇನ** ಎಲ್ಲಾ ಪ್ರಾಣಿಗಳಿಗೆ ಸ್ವಾಮಿ ಎಂಬ ಜ್ಞಾನ ಪೂರ್ವಕ ಭಕ್ತಿಯಿಂದ, **ಪ್ರೀತಃ ಚೇತ್** ಪ್ರೀತನಾಗಿದ್ದಾದರೆ, **ದ್ವಿಜಃ** ಆ ಬ್ರಾಹ್ಮಣನು, **ವಿಜ್ವರಃ** ತಾಪರಹಿತನು, **ಭವತು** ಆಗಲಿ.

**ತಾತ್ಪರ್ಯ-** ಒಂದು ವೇಳೆ ಮುಖ್ಯನಾದ ಗುಣಪೂರ್ಣನಾದ ಭಗವಂತನು ನನ್ನ ಭಕ್ತಿಯಿಂದ ನನ್ನಲ್ಲಿ ಪ್ರೀತನಾಗಿದ್ದರೆ ಈ ಬ್ರಾಹ್ಮಣರು ತಾಪರಹಿತರಾಗಲಿ.

**ಶ್ರೀ ಶುಕ ಉವಾಚ-**

**ಇತಿ ಸಂಸ್ತುವತೋ ರಾಜ್ಞೋ ವಿಷ್ಣುಚಕ್ರಂ ಸುದರ್ಶನಮ್ ।**
**ಅಶಾಮ್ಯತ್ ಸರ್ವತೋ ವಿಪ್ರಂ ಪ್ರದಹದ್ರಾಜಯಾಂಚ್ಯಯಾ ।।೭೨।।**

**ಇತಿ** ಈ ರೀತಿಯಾಗಿ, **ಸಂಸ್ತುವತಃ** ಸ್ತೋತ್ರ ಮಾಡಿದ, **ರಾಜ್ಞಃ** ರಾಜನ ಸ್ತುತಿಯಿಂದ, **ವಿಷ್ಣುಚಕ್ರಂ** ವಿಷ್ಣುಚಕ್ರವು, **ಸುದರ್ಶನಂ** ಶಾಂತ ಸ್ವರೂಪ ಉಳ್ಳದ್ದಾಗಿ, **ವಿಪ್ರಂ** ಬ್ರಾಹ್ಮಣನನ್ನು, **ಸರ್ವತಃ** ಸುತ್ತಲೂ **ಪ್ರದಹದಪಿ** ಸುಡುತ್ತಿರಲು ಸಹ, **ರಾಜಯಾಂಚ್ಯಯಾ** ಅಂಬರೀಷನ ಪ್ರಾರ್ಥನೆಯಿಂದ, **ಅಶಾಮ್ಯತ್** ಶಾಂತವಾಯಿತು.

**ತಾತ್ಪರ್ಯ-** ಈ ರೀತಿಯಾಗಿ ಸ್ತೋತ್ರ ಮಾಡಿದ ರಾಜರ ಸ್ತುತಿಯಿಂದ ಈ ವಿಷ್ಣುಚಕ್ರವು ಬ್ರಾಹ್ಮಣರ ಸುತ್ತಲೂ ದಹಿಸುತ್ತಿದ್ದರೂ ರಾಜರ ಪ್ರಾರ್ಥನೆಯಿಂದ ಶಾಂತಸ್ವರೂಪವುಳ್ಳದ್ದಾಗಿ ಶಾಂತವಾಯಿತು. ।।೭೨।।

**ಸ ಮುಕ್ತೋಽಸ್ತ್ರಾಗ್ನಿತಾಪೇನ ದುರ್ವಾಸಾಃ ಸ್ವಸ್ತಿಮಾಂಸ್ತತಃ ।**
**ಪ್ರಶಶಂಸ ತಮುರ್ವೀಶಂ ಯುಂಜಾನಃ ಪರಮಾಶಿಷಃ ।।೭೩।।**

**ಸಃ** ಆ **ದುರ್ವಾಸಾಃ** ದುರ್ವಾಸರು, **ಅಸ್ತ್ರಾಗ್ನಿತಾಪೇನ ಮುಕ್ತಃ** ಅಸ್ತ್ರಾಗ್ನಿ ತಾಪದಿಂದ ಮುಕ್ತರಾಗಿ, **ತತಃ** ಅನಂತರದಲ್ಲಿ, **ಸ್ವಸ್ತಿಮಾನ್** ಕ್ಷೇಮ ಉಳ್ಳವರಾಗಿ, **ತಂ ಉರ್ವೀಶಂ**

ಆ ಅಂಬರೀಷರಾಜರನ್ನು, **ಪರಮಾಶಿಷಃ** ಸಫಲವಾದ ಆಶೀರ್ವಾದಗಳನ್ನು **ಯುಂಜಾನಃ** ಮಾಡುವವರಾಗಿ, **ಪ್ರಶಶಂಸ** ಹೊಗಳಿದರು.

**ತಾತ್ಪರ್ಯ-** ಆ ದುರ್ವಾಸರು ಅಸ್ತ್ರಾಗ್ನಿತೇಜಸ್ಸಿನಿಂದ ಮುಕ್ತರಾಗಿ ಅನಂತರದಲ್ಲಿ ಕ್ಷೇಮ ಉಳ್ಳವರಾಗಿ ಆ ರಾಜನನ್ನು ಸಫಲವಾದ ಆಶೀರ್ವಾದಗಳನ್ನು ಮಾಡಿ ಹೊಗಳಿದರು. ||೭೩||

**ದುರ್ವಾಸಾ ಉವಾಚ-**

**ಅಹೋ ಅನಂತದಾಸಾನಾಂ ಮಹಿತ್ವಂ ದೃಷ್ಟಮದ್ಯ ಮೇ |**
**ಕೃತಾಗಸೋಽಪಿ ಯದ್ರಾಜನ್ ಮಂಗಳಾನಿ ಸಮೀಹಸೇ ||೭೪||**

**ರಾಜನ್** ರಾಜನೇ, **ಅದ್ಯ** ಈಗ **ಅನಂತದಾಸಾನಾಂ** ಭಗವದ್ಭಕ್ತರ, **ಮಹಿತ್ವಂ** ಮಹಿಮೆಯು, **ಮೇ** ನನ್ನಿಂದ, **ದೃಷ್ಟಂ** ನೋಡಲ್ಪಟ್ಟಿತು. **ಯತ್** ಯಾವ ಕಾರಣದಿಂದ, **ಕೃತಾಗಸಃ** ಅಪರಾಧ ಮಾಡಿದ, **ಮೇ ಅಪಿ** ನನಗೂ ಕೂಡ, **ಮಂಗಳಾನಿ** ಮಂಗಳಗಳನ್ನು, **ಸಮೀಹಸೇ** ಅಪೇಕ್ಷಿಸುತ್ತಿರುವಿ. ಆದ್ದರಿಂದ ನಿನ್ನ ಮಹಿಮೆಯು ತಿಳಿಯಿತು.

**ತಾತ್ಪರ್ಯ-** ರಾಜನೇ! ಈಗ ಭಗವದ್ಭಕ್ತರ ಮಹಿಮೆಯು ನನಗೆ ತಿಳಿಯಿತು. ಅಪರಾಧ ಮಾಡಿದ ನನ್ನ ವಿಷಯದಲ್ಲೂ ಸಹ ಶುಭಾಶಯವನ್ನೇ ಕೋರುತ್ತಿರುವಿ. ಆದ್ದರಿಂದ ನಿನ್ನ ಮಹಿಮೆಯು ಈಗ ತಿಳಿಯಿತು. ||೭೪||

**ದುಷ್ಕರಂ ಕಿನ್ನು ಸಾಧೂನಾಂ ದುಸ್ತ್ಯಜಂ ವಾ ಮಹಾತ್ಮನಾಮ್ |**
**ಯೈಸ್ಸಂಗೃಹೀತೋ ಭಗವಾನ್ ಸಾತ್ವತಾಮೃಷಭೋ ಹರಿಃ ||೭೫||**

**ಯೈಃ** ಯಾವ ಭಕ್ತರಿಂದ, **ಸಾತ್ವತಾಂ** ಯಾದವರಿಗೆ, **ಋಷಭಃ** ಶ್ರೇಷ್ಠನಾದ, **ಹರಿಃ** ಶ್ರೀಕೃಷ್ಣನು, **ಸಂಗೃಹೀತಃ** ಆಕರ್ಷಿತನಾಗಿದ್ದಾನೆಯೋ ಅಂಥ, **ಸಾಧೂನಾಂ** ಸಜ್ಜನರಾದ ಭಗವದ್ಭಕ್ತರಿಗೆ, **ದುಷ್ಕರಂ** ಮಾಡಲಿಕ್ಕೆ ಅಸಾಧ್ಯವಾದದ್ದು, **ಕಿಂ** ಯಾವುದು? (ಯಾವುದೂ ಇರುವುದಿಲ್ಲ) **ಮಹಾತ್ಮನಾಂ** ಇಂದ್ರಿಯನಿಗ್ರಹ ಉಳ್ಳ ಮಹಾತ್ಮರಿಗೆ **ದುಸ್ತ್ಯಜಂ** ಬಿಡಲಿಕ್ಕೆ ಅಸಾಧ್ಯವಾದದ್ದು, **ಕಿಂ** ಯಾವುದು? (ಯಾವುದೂ ಇರುವುದಿಲ್ಲ ಎಂದು ಅರ್ಥವು).

**ತಾತ್ಪರ್ಯ-** ಯಾವ ಭಕ್ತರಿಂದ ಯಾದವಶ್ರೇಷ್ಠನಾದ ಶ್ರೀಕೃಷ್ಣನು ಆಕರ್ಷಿತನಾಗಿರುತ್ತಾನೋ ಅಂಥ ಸಾಧುಗಳಿಗೆ ದುಷ್ಕರವಾದದ್ದು ಯಾವುದೂ ಇರುವುದಿಲ್ಲ. ಇಂದ್ರಿಯನಿಗ್ರಹ ಉಳ್ಳ ಮಹಾತ್ಮರಿಗೆ ಬಿಡಲಿಕ್ಕೆ ಅಸಾಧ್ಯವಾದದ್ದು ಯಾವುದೂ ಇರುವುದಿಲ್ಲ. ||೭೫||

**ಯನ್ನಾಮಶ್ರುತಿಮಾತ್ರೇಣ ಪುಮಾನ್ ಭವತಿ ನಿರ್ಮಲಃ ।**
**ತಸ್ಯ ತೀರ್ಥಪದಃ ಕಿಂ ವಾ ದಾಸಾನಾಮವಶಿಷ್ಯತೇ ॥೭೬॥**

**ಪುಮಾನ್** ಸಾಮಾನ್ಯಪುರುಷನೂ ಸಹ, **ಯನ್ನಾಮಶ್ರುತಿಮಾತ್ರೇಣ** ಯಾವನ ನಾಮಶ್ರವಣ ಮಾತ್ರದಿಂದ, **ನಿರ್ಮಲಃ** ಪರಿಶುದ್ಧನು, **ಭವತಿ** ಆಗುತ್ತಾನೋ, ಅಂಥ **ತೀರ್ಥಪದಃ** ತೀರ್ಥಪದನಾದ, **ತಸ್ಯ** ಭಗವಂತನ, **ದಾಸಾನಾಂ** ಭಕ್ತರಿಗೆ, **ಕಿಂ ವಾ ಅವಶಿಷ್ಯತೇ** ಮಂಗಳವಾಗುವುದರಲ್ಲಿ ಏನು ಉಳಿಯುತ್ತದೆ? (ಎಲ್ಲಾ ಮಂಗಳವೂ ಲಭಿಸುತ್ತದೆ ಎಂದು ಅರ್ಥವು.)

**ತಾತ್ಪರ್ಯ-** ಸಾಮಾನ್ಯ ಪುರುಷನೂ ಸಹ ಯಾವ ಭಗವಂತನ ನಾಮಶ್ರವಣ ಮಾತ್ರದಿಂದಲೇ ಪರಿಶುದ್ಧನಾಗುತ್ತಾನೋ, ಅಂಥಾ ಮಹಿಮಾನ್ವಿತನಾದ ಭಗವಂತನ ದಾಸರುಗಳಿಗೆ ಪಾಪವು ಏನು ಉಳಿಯುತ್ತದೆ? (ಪಾಪವೇನೂ ಉಳಿಯುವುದಿಲ್ಲ) ಮಂಗಳವಾಗುವುದರಲ್ಲಿ ಏನು ಉಳಿಯುತ್ತದೆ? (ಎಲ್ಲಾ ಮಂಗಳವಾಗುತ್ತವೆ ಎಂದು ಭಾವವು). ॥೭೬॥

**ರಾಜನ್ನನುಗೃಹೀತೋಽಹಂ ತ್ವಯಾತಿಕರುಣಾತ್ಮನಾ ।**
**ಮಮಾಘಂ ಪೃಷ್ಠತಃ ಕೃತ್ವಾ ಪ್ರಾಣಾ ಯನ್ಮೇಽಭಿರಕ್ಷಿತಾಃ ॥೭೭॥**

**ರಾಜನ್** ರಾಜನೇ! **ಯತ್** ಯಾವ ಕಾರಣದಿಂದ, **ಮಮ** ನನ್ನ **ಅಘಂ** ಕೃತ್ಯಪ್ರಯೋಗದಿಂದುಂಟಾದ ಪಾಪವನ್ನು, **ಪೃಷ್ಠತಃ ಕೃತ್ವಾ** ಲಕ್ಷಿಸದೇ, **ಮೇ** ನನ್ನ, **ಪ್ರಾಣಾಃ** ಪ್ರಾಣಗಳು, **ಅತಿಕರುಣಾತ್ಮನಾ** ಮಹಾ ಕರುಣಾಶಾಲಿಯಾದ, **ತ್ವಯಾ** ನಿನ್ನಿಂದ, **ಅಭಿರಕ್ಷಿತಾಃ** ರಕ್ಷಿಸಲ್ಪಟ್ಟವು. ಆದ್ದರಿಂದ **ಅಹಂ** ನಾನು, **ಅನುಗೃಹೀತಃ** ಅನುಗ್ರಹೀತನು ಆಗಿರುತ್ತೇನೆ.

**ತಾತ್ಪರ್ಯ-** ರಾಜನೇ! ಯಾವ ಕಾರಣದಿಂದ ನೀನು ನನ್ನ ಕೃತ್ಯಪ್ರಯೋಗದಿಂದುಂಟಾದ ಅಪರಾಧವನ್ನು ಲಕ್ಷಿಸದೇ ನನ್ನ ಪ್ರಾಣಗಳನ್ನು ದಯಾಶೀಲನಾದ ನೀನು ರಕ್ಷಿಸಿರುತ್ತೀಯೇ. ಈ ರಕ್ಷಣೆಯಿಂದ ನನ್ನಲ್ಲಿ ಅನುಗ್ರಹ ಮಾಡಿದಂತಾಗಿದೆ. ॥೭೭॥

**ರಾಜಾ ತಮಕೃತಾಹಾರಃ ಪ್ರತ್ಯಾಗಮನಕಾಂಕ್ಷಯಾ ।**
**ಚರಣಾವುಪಸಂಗೃಹ್ಯ ಪ್ರಸಾದ್ಯ ಸಮಭೋಜಯತ್ ॥೭೮॥**

**ರಾಜಾ** ರಾಜನು, **ಪ್ರತ್ಯಾಗಮನಕಾಂಕ್ಷಯಾ** ದುರ್ವಾಸರು ಹಿಂದಕ್ಕೆ ಬರುವ ಅಪೇಕ್ಷೆಯಿಂದ, **ಅಕೃತಾಹಾರಃ** ಆಹಾರವನ್ನು ಸೇವಿಸದವನಾಗಿ, **ತಂ** ಹಿಂತಿರುಗಿ ಬಂದ ದುರ್ವಾಸರ, **ಚರಣೌ** ಪಾದಗಳನ್ನು, **ಉಪಸಂಗೃಹ್ಯ** ಹಿಡಿದುಕೊಂಡು,

**ಪ್ರಸಾದ್ಯ** ಪ್ರಸನ್ನೀಕರಿಸಿಕೊಂಡು, **ಸಮಭೋಜಯತ್** ಉತ್ತಮ ರೀತಿ ಭೋಜನ ಮಾಡಿಸಿದನು.

**ತಾತ್ಪರ್ಯ-** ದುರ್ವಾಸರು ಹಿಂದಕ್ಕೆ ಬರುವ ಅಪೇಕ್ಷೆಯಿಂದ ಆಹಾರವನ್ನು ಸೇವಿಸದೇ, ಈಗ ಹಿಂತಿರುಗಿ ಬಂದ ಮುನಿಗಳ ಪಾದವನ್ನು ಹಿಡಿದುಕೊಂಡು ಅಭಿವಂದಿಸಿ, ಅವರನ್ನು ಸುಖವಾಗಿ ಭೋಜನ ಮಾಡಿಸಿದನು. ॥೭೮॥

**ಸೋऽಶಿತ್ವಾದ್ರುತಮಾನೀತಮಾತಿಥ್ಯಂ ಸಾರ್ವಕಾಮಿಕಮ್ ।**
**ತೃಪ್ತಾತ್ಮಾ ನೃಪತಿಂ ಪ್ರಾಹ ಭುಜ್ಯತಾಮಿತಿ ಸಾದರಮ್ ॥೭೯॥**

**ಸಃ** ದುರ್ವಾಸರು, **ಸಾರ್ವಕಾಮಿಕಂ** ಎಲ್ಲರಿಗೂ ಅಪೇಕ್ಷಿತವಾದ ಸರ್ವವನ್ನು, **ದ್ರುತಂ** ಶೀಘ್ರವಾಗಿ, **ಆನೀತಂ** ತರಲ್ಪಟ್ಟ (ಅರ್ಪಿತವಾದ) **ಆತಿಥ್ಯಂ** ಅತಿಥಿಗಳಿಗೆ ಪ್ರಿಯವಾದ ಭೋಜನವನ್ನು, **ಅಶಿತ್ವಾ** ಊಟ ಮಾಡಿ, **ತೃಪ್ತಾತ್ಮಾ ಸನ್** ತೃಪ್ತವಾದ ಮನಸ್ಸುಳ್ಳವರಾಗಿ ''**ಭುಜ್ಯತಾಂ** ಭೋಜನಮಾಡಿ'' ಎಂದು **ಸಾದರಂ** ಆದರದಿಂದ **ಪ್ರಾಹ** ಹೇಳಿದರು.

**ತಾತ್ಪರ್ಯ-** ಆ ದುರ್ವಾಸರು ಅಪೇಕ್ಷಿತವಾದ ಸರ್ವ ಭಕ್ಷ್ಯಾದಿಗಳನ್ನು ಭೋಜನ ಮಾಡಿ ತೀವ್ರವಾಗಿ ತರಲ್ಪಟ್ಟ ಆತಿಥ್ಯಕ್ಕೆ ತೃಪ್ತರಾಗಿ ರಾಜನಿಗೂ ಭೋಜನ ಮಾಡಲು ಅಪ್ಪಣೆಕೊಟ್ಟರು. ॥೭೯॥

**ಪ್ರೀತೋऽಸ್ಮ್ಯನುಗೃಹೀತೋऽಸ್ಮಿ ತವ ಭಾಗವತಸ್ಯ ವೈ ।**
**ದರ್ಶನಸ್ಪರ್ಶನಾಲಾಪೈರಾತಿಥ್ಯೇನಾತ್ಮಮೇಧಸಾ ॥೮೦॥**

**ಭಾಗವತಸ್ಯ** ಭಗವದ್‌ಭಕ್ತನಾದ, **ತವ** ನಿನ್ನ **ದರ್ಶನಸ್ಪರ್ಶನಾಲಾಪೈಃ** ಸಂದರ್ಶನ-ಸ್ಪರ್ಶನ-ಸಂಭಾಷಣಾದಿಗಳಿಂದ, **ಆತಿಥ್ಯೇನ** ಆತಿಥ್ಯದಿಂದಲೂ ಮತ್ತು **ಆತ್ಮಮೇಧಸಾ** ಪರಮಾತ್ಮಜ್ಞಾನದಿಂದಲೂ, **ಪ್ರೀತೋऽಸ್ಮಿ** ಪ್ರೀತನಾಗಿರುತ್ತೇನೆ, **ಅನುಗೃಹೀತಃ ಅಸ್ಮಿ** ಅನುಗೃಹೀತನಾದೆನು.

**ತಾತ್ಪರ್ಯ-** ರಾಜನೇ! ಭಾಗವತೋತ್ತಮನಾದ ನಿನ್ನ ದರ್ಶನ-ಸ್ಪರ್ಶ-ಸಂಭಾಷಣಾದಿಗಳಿಂದಲೂ, ಪರಮಾತ್ಮಜ್ಞಾನದಿಂದಲೂ, ಪ್ರೀತನಾಗಿರುತ್ತೇನೆ, ಅನುಗೃಹೀತನಾದೆನು. ॥೮೦॥

**ಕರ್ಮಾವದಾತಮೇತತ್ತೇ ಗಾಯಂತಿ ಸ್ವಃಸ್ತ್ರಿಯೋ ಮುಹುಃ ।**
**ಕೀರ್ತಿಂ ಪರಮಪುಣ್ಯಾಂ ಚ ಕೀರ್ತಯಿಷ್ಯತಿ ಭೂರಿಯಮ್ ॥೮೧॥**

**ತೇ** ನಿನ್ನ, **ಅವದಾತಂ** ನಿರ್ಮಲವಾದ, **ಏತತ್** ಈ ಕರ್ಮವನ್ನು, **ಸ್ವಃಸ್ತ್ರಿಯಃ** ಸ್ವರ್ಗದಲ್ಲಿಯ ಸ್ತ್ರೀಯರು, **ಮುಹುಃ** ವಿಶೇಷವಾಗಿ, **ಗಾಯಂತಿ** ಗಾನ ಮಾಡುತ್ತಾರೆ, **ಇಯಂ** ಈ **ಭೂಃ** ರಾಜ್ಯದ ಪ್ರಜೆಗಳ ವೃಂದವು, **ಪರಮಪುಣ್ಯಾಂ** ಅತಿ ಪುಣ್ಯಕರವಾದ **ಕೀರ್ತಿಂ** ನಿನ್ನ ಕೀರ್ತಿಯನ್ನು, **ಕೀರ್ತಯಿಷ್ಯತಿ** ಕೀರ್ತನ ಮಾಡುತ್ತದೆ.

**ತಾತ್ಪರ್ಯ-** ರಾಜನೇ! ನಿನ್ನ ನಿರ್ಮಲವಾದ ಈ ಕರ್ಮವನ್ನು ದೇವತಾಸ್ತ್ರೀಯರು ವಿಶೇಷವಾಗಿ ಗಾನ ಮಾಡುತ್ತಾರೆ. ಈ ಪ್ರಜಾಸಮೂಹವು ಪರಮ ಪುಣ್ಯಕರವಾದ ಈ ನಿನ್ನ ಕೀರ್ತಿಯನ್ನು ಹೊಗಳುತ್ತದೆ. ॥೮೧॥

**ಶ್ರೀ ಶುಕ ಉವಾಚ-**

**ಏವಂ ಸಂಕೀರ್ತ್ಯ ರಾಜಾನಂ ದುರ್ವಾಸಾಃ ಪರಿತೋಷಿತಃ ।**
**ಯಯೌ ವಿಹಾಯಸಾಽಽಮಂತ್ರ್ಯ ಬ್ರಹ್ಮಲೋಕಮಹೈತುಕಮ್ ॥೮೨॥**

**ಏವಂ** ಈ ರೀತಿಯಾಗಿ, **ಪರಿತೋಷಿತಃ** ಸಂತೋಷ ಹೊಂದಿದ, **ದುರ್ವಾಸಾಃ** ದುರ್ವಾಸ ಋಷಿಗಳು, **ರಾಜಾನಂ** ರಾಜನನ್ನು, **ಸಂಕೀರ್ತ್ಯ** ಸ್ತೋತ್ರಮಾಡಿ, **ಆಮಂತ್ರ್ಯ** ಹೋಗಿಬರುತ್ತೇನೆಂದು ಹೇಳಿ, **ವಿಹಾಯಸಾ** ಆಕಾಶಮಾರ್ಗದಿಂದ, **ಅಹೈತುಕಂ** ದುರ್ಜನರಿಂದ (ಹೇತುವಾದಿಗಳಿಂದ) ಹೊಂದಲಿಕ್ಕೆ ಅಶಕ್ಯವಾದ, **ಬ್ರಹ್ಮಲೋಕಂ** ಸತ್ಯಲೋಕವನ್ನು ಕುರಿತು, **ಯಯೌ** ಹೋದರು.

**ತಾತ್ಪರ್ಯ-** ಈ ರೀತಿಯಾಗಿ ಸಂತೋಷ ಹೊಂದಿದ ದುರ್ವಾಸರು ರಾಜನನ್ನು ಸ್ತೋತ್ರ ಮಾಡಿ ಹೋಗಿಬರುತ್ತೇನೆಂದು ಹೇಳಿ ಆಕಾಶಮಾರ್ಗದಿಂದ ಹೇತುವಾದಿಗಳಿಗೆ ಅಲಭ್ಯವಾದ ಸತ್ಯಲೋಕಕ್ಕೆ ಹೋದರು. ॥೮೨॥

**ಸಂವತ್ಸರೋಽತ್ಯಗಾತ್ತಾವತ್ ಯಾವತ್ತಂ ನಾಗತೋ ಗತಃ ।**
**ಮುನಿಸ್ತದ್ದರ್ಶನಾಕಾಂಕ್ಷೀ ರಾಜಾಽಬ್ಭಕ್ಷೋ ಬಭೂವ ಹ ॥೮೩॥**

**ಇತಃ** ಈ ರಾಜನ ದೆಸೆಯಿಂದ, **ಗತಃ** ಹೊರಟಿರುವ, **ಮುನಿಃ** ದುರ್ವಾಸರು, **ಯಾವತ್** ಎಲ್ಲಿಯವರೆಗೂ, **ತಂ** ರಾಜನನ್ನು ಕುರಿತು, **ನ ಆಗತಃ** ಬರಲಿಲ್ಲವೋ, **ತಾವತ್** ಅಲ್ಲಿಯವರೆಗೂ, **ಸಂವತ್ಸರಃ** ಒಂದು ವರ್ಷವು, **ಅತ್ಯಗಾತ್** ದಾಟಿ ಹೋಯಿತು. **ತದ್ದರ್ಶನಾಕಾಂಕ್ಷೀ** ಮುನಿಯ ದರ್ಶನಾಕಾಂಕ್ಷಿಯಾದ, **ರಾಜಾ** ರಾಜನು, **ಅಬ್ಭಕ್ಷಃ** ನೀರನ್ನು ಕುಡಿದಿರತಕ್ಕವನು, **ಬಭೂವ ಹ** ಆಗಿದ್ದನು.

**ತಾತ್ಪರ್ಯ-** ಈ ರಾಜರ ದೆಸೆಯಿಂದ ಹೊರಟಿರುವ ದುರ್ವಾಸರು ರಾಜರನ್ನು ಕುರಿತು ಪುನಃ ಬರುವವರೆಗೂ ಒಂದು ವರ್ಷ ಕಳೆದು ಹೋಯಿತು. ಅಲ್ಲಿಯವರೆಗೂ ರಾಜನು ನೀರನ್ನು ಪಾನ ಮಾಡುತ್ತಾ ಜೀವಿಸಿದ್ದನು. ॥೮೩॥

**ಗತೇಽಥ ದೂರ್ವಾಸಸಿ ಸೋಽಂಬರೀಷೋ**
**ದ್ವಿಜೋಪಭೋಗಾತಿಪವಿತ್ರಮಾಹರನ್ ।**
**ಋಷೇರ್ವಿಮೋಕ್ಷಂ ವ್ಯಸನಾಚ್ಚ ಬುದ್ಧ್ಯಾ**
**ಮೇನೇಽಸ್ವವೀರ್ಯಂ ಚ ಪರಾನುಭಾವಮ್ ॥೮೪॥**

**ಅಥ** ಅನಂತರದಲ್ಲಿ, **ದೂರ್ವಾಸಸಿ** ದೂರ್ವಾಸರು, **ಗತೇ** ಪ್ರಯಾಣ ಮಾಡುತ್ತಿರಲು **ಸಃ** ಆ **ಅಂಬರೀಷಃ** ಅಂಬರೀಷನು, **ದ್ವಿಜೋಪಭೋಗಾತಿ- ಪವಿತ್ರಂ** ಬ್ರಾಹ್ಮಣರ ಭುಕ್ತಶೇಷವಾದ್ದರಿಂದ ಅತಿ ಪವಿತ್ರವಾದ ಆಹಾರವನ್ನು, **ಆಹರನ್** ಸ್ವೀಕರಿಸುತ್ತಾ, (ಭೋಜನ ಮಾಡುತ್ತಾ) **ಬುದ್ಧ್ಯಾ** ತನ್ನ ಬುದ್ಧಿಯಿಂದ, **ಋಷೇಃ** ಋಷಿಗಳ, **ವ್ಯಸನಾತ್** ಆಪತ್ತಿನಿಂದ **ಮೋಕ್ಷಣಂ** ಮುಕ್ತಿಯನ್ನು (ಬಿಡುಗಡೆಯನ್ನು) **ಅಸ್ವವೀರ್ಯಂ** ತನ್ನ ಸಾಮರ್ಥ್ಯವಲ್ಲವೆಂದು, **ಚ** ಮತ್ತು **ಪರಾನುಭಾವಂ** ಭಗವಂತನ ದಯೆ ಎಂದು **ಮೇನೇ** ತಿಳಿದನು.

**ತಾತ್ಪರ್ಯ-** ದುರ್ವಾಸರು ಪ್ರಯಾಣ ಮಾಡಿದ ನಂತರ ಆ ಅಂಬರೀಷನು ಬ್ರಾಹ್ಮಣರ ಭುಕ್ತಶೇಷವಾದ್ದರಿಂದ ಪವಿತ್ರವೆಂದು ತಿಳಿದು ಭೋಜನ ಮಾಡುತ್ತಾ ಋಷಿಗಳ ಈ ರೀತಿಯಾದ ಆಪತ್ತಿನ ಬಿಡುಗಡೆಯನ್ನು ತನ್ನ ಸಾಮರ್ಥ್ಯವೆಂದು ತಿಳಿಯದೇ ಎಲ್ಲವೂ ಭಗವಂತನ ಅಧೀನವೆಂದು ತಿಳಿದನು. ॥೮೪॥

**ಏವಂವಿಧಾನೇಕಗುಣಃ ಸ ರಾಜಾ**
**ಪರಾತ್ಮನಿ ಬ್ರಹ್ಮಣಿ ವಾಸುದೇವೇ ।**
**ಕ್ರಿಯಾಕಲಾಪೈಃ ಸಮುವಾಹ ಭಕ್ತಿಂ**
**ಯಯಾ ವಿರಿಂಚಾದಿಮಧಶ್ಚಕಾರ ॥೮೫॥**

**ಏವಂವಿಧಾನೇಕಗುಣಃ** ಈ ರೀತಿಯಾದ ಅನೇಕಗುಣಗಳುಳ್ಳ, **ಸಃ** ಆ **ರಾಜಾ** ಅಂಬರೀಷ ರಾಜನು, **ಕ್ರಿಯಾಕಲಾಪೈಃ** ಸಮರ್ಪಿತವಾದ, ಕ್ರಿಯಾಕಲಾಪಗಳಿಂದ, **ಪರಾತ್ಮನಿ** ಸರ್ವೋತ್ತಮನಾದ, **ವಾಸುದೇವೇ** ಭಗವಂತನಲ್ಲಿ, **ಯಯಾ** ಯಾವ ಭಕ್ತಿಯಿಂದ, **ವಿರಿಂಚಾದಿಂ** ಬ್ರಹ್ಮಾದಿಗಳನ್ನು, **ಅಧಶ್ಚಕಾರ** ಕಡಿಮೆಯನ್ನಾಗಿ ಮಾಡಿದನೋ, ಅಂಥಾ **ಭಕ್ತಿಂ** ಭಕ್ತಿಯನ್ನು, **ಸಮುವಾಹ** ಮಾಡಿದನು.

**ತಾತ್ಪರ್ಯ-** ಈ ರೀತಿಯಾಗಿ ಅನೇಕ ಸದ್ಗುಣಸಂಪನ್ನನಾದ ಅಂಬರೀಷ ರಾಜನು ತನ್ನ ಕ್ರಿಯಾಕಲಾಪಗಳಿಂದ ಸರ್ವೋತ್ತಮನಾದ ಭಗವಂತನಲ್ಲಿ ತಾನು ಮಾಡುವ ಭಕ್ತಿಯಿಂದ ಬ್ರಹ್ಮಾದಿಗಳನ್ನು ಸಹ ಮೀರಿಸಿದನು. (ಇಲ್ಲಿ ಬ್ರಹ್ಮಾದಿಗಳಿಗಿಂತ ರಾಜರ ಭಕ್ತಿಯು ಅಧಿಕವೆಂದು ತೋರುತ್ತದೆ. ಮತ್ತು

ಬ್ರಹ್ಮಾದಿಗಳಿಗಿಂತಲೂ ಅಂಬರೀಷನಲ್ಲಿ ಭಗವಂತನು ಅಧಿಕ ದಯಾ ಮಾಡಿದನು ಎಂಬುವಂತೆ ತೋರುತ್ತದೆ. ಇಲ್ಲಿ ವಿಚಾರವೇನೆಂದರೆ ಭಗವಂತನು ಅಸುರಜನ-ಮೋಹನಾರ್ಥವಾಗಿ ಈ ರೀತಿ ನಟಿಸಿರುತ್ತಾನೆ ಎಂದು ಭಾವವು)

'ಯಯಾ ವಿರಿಂಚಾದಿಮಧಶ್ಚಕಾರ' ಎಂದು ಹೇಳಿದ್ದರಿಂದ ಬ್ರಹ್ಮಾದಿಗಳಿಗಿಂತ ಅಂಬರೀಷನಿಗೆ ಭಕ್ತಿಯು ಹೆಚ್ಚೆಂದು ತೋರುವದು. ಇದು ಪ್ರಮಾಣವಿರುದ್ಧವು. ಅಧಿಕಾರಿಗಳಲ್ಲಿ ಬ್ರಹ್ಮದೇವರೇ ಸರ್ವಶ್ರೇಷ್ಠರು ಎಂದು ''ಇಯದಾಮನನಾತ್'' ಎಂಬ ಸೂತ್ರದಲ್ಲಿ ಹೇಳಿದೆ. ಕಾರಣ ಶ್ರೀಮದಾಚಾರ್ಯರು ಪ್ರಮಾಣ ವಾಕ್ಯದಿಂದಲೇ ಸಮಾಧಾನ ಹೇಳುವರು.

ಬ್ರಹ್ಮಾದಿಭಕ್ತಿಕೋಟ್ಯಂಶಾದಂಶೋ ನೈವಾಂಬರಿಷಕೇ ।
ನೈವಾನ್ಯಸ್ಯ ಚ ಕಸ್ಯಾಪಿ ತಥಾಪಿ ಹರಿರೀಶ್ವರಃ ॥

ತಾತ್ಕಾಲಿಕೋಪಚೇಯತ್ವಾತ್ತೇಷಾಂ ಯಶಸ ಆದಿರಾಟ್ ।
ಬ್ರಹ್ಮಾದಯಶ್ಚ ತತ್ಕೀರ್ತಿಂ ವ್ಯಂಜಯಾಮಾಸುರುತ್ತಮಾಮ್ ॥

ಬ್ರಹ್ಮಾದಿಭಕ್ತಿಕೋಟ್ಯಶಾದಂಶಃ ಬ್ರಹ್ಮಾದಿಗಳಿಗಿರುವ ಭಕ್ತಿಯ ಕೋಟ್ಯಂಶದ ಅಂಶವೂ ಸಹ ಅಂಬರೀಷಕೇ ಅಂಬರೀಷರಾಜನಲ್ಲಿ, ಅನ್ಯಸ್ಯ ಬೇರೆ ಕಸ್ಯಾಪಿ ಯಾವ ರಾಜರಲ್ಲಿಯೂ, ನೈವ ಇರುವುದಿಲ್ಲ. ತಥಾಪಿ ಹಾಗಿದ್ದರೂ, ಆದಿರಾಟ್ ಪ್ರಲಯಕಾಲದಲ್ಲಿಯೂ ರಾರಾಜಿಸುವ, ಈಶ್ವರಃ ಸರ್ವಸಮರ್ಥನಾದ, ಹರಿಃ ಪರಮಾತ್ಮನು, ಬ್ರಹ್ಮಾದಯಶ್ಚ ಬ್ರಹ್ಮಾದಿದೇವತೆಗಳು, ತೇಷಾಂ ಅಂಬರೀಷ, ಪ್ರಹ್ಲಾದ ಮೊದಲಾದವರ, ಯಶಸಃ ಕೀರ್ತಿಗಳಿಗೆ, ತಾತ್ಕಾಲಿಕೋಪಚೇಯತ್ವಾತ್ ಆ ಕಾಲದಲ್ಲಿ ಅಭಿವೃದ್ಧಿ ಹೊಂದುವ ಯೋಗ್ಯತೆ ಇದ್ದದ್ದರಿಂದ, ತತ್ಕೀರ್ತಿಂ ಅಂಬರೀಷನ ಕೀರ್ತಿಯನ್ನು ಉತ್ತಮಾಂ ಬ್ರಹ್ಮಾದಿಗಳಿಗಿಂತ ಶ್ರೇಷ್ಠವೆಂದು, ವ್ಯಂಜಯಾಮಾಸುಃ ತೋರಿಸಿದರು. ಅಂದರೆ ಕಾಲವಿಶೇಷದಲ್ಲಿ ಭಕ್ತರಿಗೆ ಕೀರ್ತಿಯನ್ನು ಕೊಡುವುದಕ್ಕಾಗಿ ಹರಿ-ಹರ-ಬ್ರಹ್ಮರು ಈ ರೀತಿ ನಟಿಸುವರು. ಹೀಗೆ ಒಂದು ಸಮಾಧಾನವು. ಆ ಕಾಲದಲ್ಲಿ ಅಭಿವೃದ್ಧವಾಗಿ ಬ್ರಹ್ಮಾದಿ ಭಕ್ತಿಗಿಂತ ಹೆಚ್ಚಾದ್ದರಿಂದ ''ಅಧಶ್ಚಕಾರ'' ಎಂದಿರುವರು. ''ಕೃಪಾನಿಮಿತ್ತಾ ಯಾ ಭಕ್ತಿಃ ನೀಚಭಕ್ತೇಷು ಸಾऽಧಿಕಾ ॥೧॥''

ಹೀಗೆ ಪ್ರಮಾಣ. ಭಕ್ತರಲ್ಲಿ ಇರುವ ಕೀರ್ತಿಯನ್ನೇ ಪ್ರಕಟಿಸಬೇಕು! ಇಲ್ಲದಿರುವ ಕೀರ್ತಿಯನ್ನು, ಪ್ರಕಟಿಸಲು ಕಾರಣವೇನೆಂದರೆ? ದೈತ್ಯಾನಾಂ ಮೋಹನಾಯ ಚ ಬ್ರಹ್ಮಾದಿಗಳಿಗಿಂತ ವಿಷ್ಣುಭಕ್ತಿಯಲ್ಲಿ ಅಂಬರೀಷನು ಹೆಚ್ಚೆಂದು ದೈತ್ಯರಿಗೆ ಮೋಹ ಪಡಿಸಿ ಅವರನ್ನು ಅಧೋಗತಿ ಕಾಣಿಸಲು ಎಂದು ಎರಡನೆಯ ಅಭಿಪ್ರಾಯವು.

ಮೋಹಗೊಂಡ ದೈತ್ಯರು ಬ್ರಹ್ಮಾದಿಗಳು ಅಸಮರ್ಥರು. ಇವರಿಗೆ ದೂರ್ವಾಸನನ್ನು ಬಿಡಿಸಲಾಗಲಿಲ್ಲ. ಅಂಬರೀಷನು ತನ್ನಲ್ಲಿರುವ ಸರ್ವಾಧಿಕ ಭಕ್ತಿಯಿಂದ ಬಿಡಿಸಿದನು. ಹೀಗೆ ಬ್ರಹ್ಮಾದಿಗಳನ್ನು ನಿಂದಿಸಲಿ ಎಂದು ಅಭಿಪ್ರಾಯವು ಇದನ್ನೇ ''ಬ್ರಹ್ಮಾದೇರ್ನಿಂದನಾಯ ಚ'' ಎಂದು ಹೇಳಿದ್ದಾರೆ. ।।೩।।

ವಿಷ್ಣು-ಬ್ರಹ್ಮಾದಿಗಳು ಸ್ವತಃ ಸಮರ್ಥರು, ತಮ್ಮ ಕೀರ್ತಿಯನ್ನು ಏಕೆ ಪ್ರಕಟಿಸಲಿಲ್ಲವೆಂದರೆ ''ಅನ್ಯಾರ್ಥಂ ಚ ಸ್ವಯಂ ವಿಷ್ಣುಃ'' ವಿಷ್ಣುವು ಸ್ವಯಂ ನಿತ್ಯಾಭಿವ್ಯಕ್ತಿ ಕೀರ್ತಿವುಳ್ಳವನಾದ್ದರಿಂದ ತನ್ನ ಕೀರ್ತಿಯನ್ನು ಪ್ರಕಟಿಸುವುದಕ್ಕೆ ಹೊರಡದೆ ಭಕ್ತನ ಕೀರ್ತಿಯನ್ನು ಪ್ರಕಟಿಸಿದನು. ಇನ್ನು ಬ್ರಹ್ಮಾದಿಗಳು ''ವಿಪ್ರೋ ಭವತು ವಿಜ್ವರಃ'' ಹೀಗೆ ದೂರ್ವಾಸರನ್ನು ಮೋಚನ ಮಾಡೆಂದು ವಿಷ್ಣುವಿನನ್ನು ಪ್ರಾರ್ಥಿಸಿ ದುರ್ವಾಸರನ್ನು ಬಿಡಿಸಬೇಕು, ಆದರೆ ಇವರು ನಿಷ್ಕಾಮ ಭಕ್ತರಾದ್ದರಿಂದ ಹಾಗೆ ಮಾಡಲಿಲ್ಲವೆಂದು ಹೇಳುವರು. ಬ್ರಹ್ಮಾದ್ಯಾಶ್ಚ ನಿರಾಶಿಷಾಃ ।।೪।।

ಅನೇಕ ಭಕ್ತರಿರಲು ಇವನ ಪ್ರಕಟಣೆಗೆ ಕಾರಣ ಮನುಷ್ಯೋತ್ತಮ. ಅಥವಾ ವಿರಿಂಚಃ ಆದಿಃ ಕಾರಣಂ ಅಸ್ಯಾಃ ಮನುಷ್ಯಜಾತೇಃ ಇತಿ ವಿರಿಂಚಾದಿಂ ಎಂಬುವುದು ತದ್ಗುಣಸಂವಿಜ್ಞಾನಬಹುವ್ರೀಹಿಯೆಂದು ಇಟ್ಟುಕೊಂಡು ಹಿಂದಿನ ಸಮಾಧಾನಗಳು. ಈಗ ಅತದ್ಗುಣಸಂವಿಜ್ಞಾನಬಹುವ್ರೀಹಿ. ಹೀಗೆ ''ವಿರಿಂಚಾದಿಂ'' ಎಂದರೆ ಬ್ರಹ್ಮನೇ ಕಾರಣವಾಗಿವುಳ್ಳ ಇತರ ಮನುಷ್ಯರನ್ನು ಕೆಳಗೆ ಹಾಕಿದನು ಎಂದರ್ಥ. ಇದನ್ನೇ ಹೀಗೆ ಹೇಳುವರು. ''ಮಾನುಷೋತ್ತಮತ್ವಾಚ್ಚ ತೇಷಾಂ ಭಕ್ತ್ಯಾದಿಭಿಃ ಗುಣೈಃ'' ಅಂಬರೀಷಾದಿಗಳು ಭಕ್ತ್ಯಾದಿಗುಣಗಳಿಂದ ಮನುಷ್ಯರಲ್ಲಿ ಶ್ರೇಷ್ಠರಾದ್ದರಿಂದ ಹೀಗೆ ಹೇಳಿದ್ದು. ।।೫।।

**ಬ್ರಹ್ಮಾದೇರ್ವಿಷ್ಣ್ವಧೀನತ್ವಜ್ಞಾಪನಾಯ ಚ ಕೇವಲಂ ।**

ಸಜ್ಜನರಿಗೆ ಬ್ರಹ್ಮಾದಿಗಳು ವಿಷ್ಣುವಿನ ಅಧೀನರೆಂದು ತಿಳಿಸಲು, ವಿಷ್ಣುವಿನ ಅಭಿಪ್ರಾಯದಂತೆ ತಾವು ಮೋಚನ ಮಾಡದೇ ಅಂಬರೀಷನಿಂದಲೇ ಮೋಚನ ಮಾಡಿಸಿದರು. ಈ ಅಭಿಪ್ರಾಯದಿಂದ ''ಅಧಶ್ಚಕಾರ'' ಎಂದಿದ್ದಾರೆ. ।।೬।।

**ದೂರ್ವಾಸಾಶ್ಚ ಸ್ವಯಂ ರುದ್ರಃ ತಥಾಪ್ಯನ್ಯಾಯಮುಕ್ತವಾನ್ ।**
**ತಸ್ಯಾಪ್ಯನುಗ್ರಹಾರ್ಥಾಯ ದರ್ಪನಾಶಾರ್ಥಮೇವ ಚ ।। ಇತಿಗಾರುಡೇ**

ದೂರ್ವಾಸರು ಮನೋಽಭಿಮಾನಿ ರುದ್ರಾವತಾರರಾಗಿದ್ದರೂ ಅಶಿತಾನಶಿತವಾದ ಜಲಪಾನವು ಅಶಿತವೆಂದು ಹೇಳಿದರು. ಕೃತ್ಯೆಯನ್ನು ಸೃಷ್ಟಿಸಿದರು. ಕಾರಣ ಅವರ ದರ್ಪನಾಶ ಮಾಡಿ ಅನುಗ್ರಹ ಮಾಡಲು ಅಂಬರೀಷನಿಂದ ಅಧಃಕರಿಸಿದನು.

(ಪ್ರಭೋಧಿನೀ ಪ್ರಕಾರ ಕೆಲವು ತಾತ್ಪರ್ಯವಾಕ್ಯದ ಅರ್ಥ ಕೆಳಗಿದೆ.)

ಅಂಬರೀಷಾದಿಗಳು ಕೋಟ್ಯಂಶದ ಅಂಶವು ಇಲ್ಲದಿರುವುರೆಂದ ಮೇಲೆ ಭಾಗವತದಲ್ಲಿ ವ್ಯಾಸರು ಪುರಾಣಾಂತರದಲ್ಲಿ ಬ್ರಹ್ಮಾದಿಗಳು ಹೀಗೇಕೆ ಹೇಳುವರು ಎಂದರೆ ಹೀಗೆ ಅವತಾರಿಕಾ ಕೊಟ್ಟು ಹರಿಃ ವ್ಯಾಸರು ಮೇಲೆ ಹೇಳಿದ ಕಾರಣದಿಂದ ಹೀಗೆ ಹೇಳಿರುವರು ಎಂದಿದ್ದಾರೆ. ಅನ್ಯಾರ್ಥಂ ಚ ಸ್ವಯಂ ವಿಷ್ಣುಃ ಎಂಬಲ್ಲಿಯ ವಿಷ್ಣು ಎಂದರೆ ವ್ಯಾಸರು, ಅನ್ಯಾರ್ಥಂ ಚ ಅನ್ಯಾರ್ಥಮೇವ ಅಪೇಕ್ಷ್ಯ ಬ್ರಹ್ಮಾದಿಗಳಿಂದ ಭಿನ್ನನಾದ ಅಂಬರೀಷನಿಂದ ಅವರರಾದವರಕ್ಕಿಂತಲೂ ಉತ್ತಮ ಕೀರ್ತಿ ಉಳ್ಳವನೆಂದು ವಿರಿಂಚಾದಿಮಧಶ್ಚಕಾರ ಎಂದು ಹೇಳಿರುವರು, ಹೊರತು ಬ್ರಹ್ಮಾದಿಗಳಿಂದ ಅಲ್ಲ. ಏಕೆಂದರೆ ಬ್ರಹ್ಮಾದ್ಯಾಶ್ಚ ನಿರಾಶಿಷಾಃ ಬ್ರಹ್ಮಾದಿಗಳಾದರೋ ನಿರಾಶಿಷಾಃ ನಿತರಾಂ ಆಶಾಸ್ಯಂತೇ ಅಪೇಕ್ಷಂತೇ ಇತಿ ನಿರಾಶಿಷಾಃ ವಿಷ್ಣುನಾ ಎಂದು ಇಟ್ಟುಕೊಳ್ಳಬೇಕು. ಅಂದರೆ ವಿಷ್ಣುವಿಗೆ ಅತಿ ಪ್ರಿಯರು. ಕಾರಣ ಅವರಲ್ಲಿ ಅಧಿಕ ವಿಷ್ಣುಭಕ್ತಿ ಇದೆ. (ಭಕ್ತಾಸ್ತೇಽತೀವ ಮೇ ಪ್ರಿಯಾಃ ಎಂದು ಸ್ಪಷ್ಟವಾಗಿ ಅಧಿಕ ಭಕ್ತರಲ್ಲಿಯೇ ಅಧಿಕ ಪ್ರೀತಿ ಇರುವದು). ಆದ್ದರಿಂದ ಭಾಗವತ ವಾಕ್ಯವು ಬ್ರಹ್ಮಾದಿಗಳಿಗಿಂತವೆಂದು ಹೇಳಿದೆ. ಅಂಬರೀಷನು ಭಕ್ತಾದಿಗಳಿಂದ ಮನುಷ್ಯೋ-ತ್ತಮನಾದ್ದರಿಂದ ಮನುಷ್ಯಭಕ್ತರಕ್ಕಿಂತ ಆಧಿಕ್ಯ ಹೇಳುವುದು. ''ಪಾಂಡಿತ್ಯಂ ನಿರ್ವಿದ್ಯ'' ''ತದಾ ಗಂತಾಽಸಿ ನಿರ್ವೇದಂ'' ಮುಂತಾದ ಪ್ರಯೋಗಾನುಸಾರ ನಿರ್ ಉಪಸರ್ಗಕ್ಕೆ ಅತಿಶಯಾರ್ಥಕತ್ವವನ್ನು ತಿಳಿಯಬೇಕು.

ಗರುಡಪುರಾಣದಲ್ಲಿ ''ಬ್ರಹ್ಮಾದಿಭಕ್ತಿಕೋಟ್ಯಂಶಾತ್'' ಎಂಬುವಲ್ಲಿ ಆದಿ-ಪದವಿದ್ದದ್ದರಿಂದ ''ವಿರಿಂಚಾದಿಂ'' ಎಂಬ ಭಾಗವತಪದಕ್ಕೆ ಅತದ್ಗುಣ-ಸಂವಿಜ್ಞಾನ ಬಹುವ್ರೀಹಿ ಮಾಡಿದಾಗ ವಿರಿಂಚಪದವು ಅಂಬರೀಷನಿಗಿಂತ ಅಧಿಕ-ಭಕ್ತಿವುಳ್ಳವರೆಂದು ಪ್ರಸಿದ್ಧರಾದ ರುದ್ರಾದಿದೇವತೆಗಳಿಗೆ ಉಪಲಕ್ಷಕವೆಂದು ತಿಳಿಯಬೇಕು. ಇಲ್ಲವಾದರೆ ಪ್ರಮಾಣವಿರೋಧ ಬರುವುದು?

ಬ್ರಹ್ಮಾದಿಗಳು ವಿಷ್ಣುವಿಗೆ ಅತಿಪ್ರಿಯರಾದ್ದರಿಂದ, ಅಂಬರೀಷನಿಗಿಂತ ಉತ್ತಮ ಭಕ್ತರಾದ ಮೇಲೆ ಅವರನ್ನು ಬಿಟ್ಟು ಕಡಿಮೆಯಾದ ಅಂಬರೀಷನಿಂದ, ರುದ್ರಾವತಾರಿಯಾದ್ದರಿಂದ ಉತ್ತಮರಾದ ದೂರ್ವಾಸರಿಗೆ ತನ್ನ ಚಕ್ರದಿಂದ ಉಂಟಾದ ತಾಪವನ್ನು ಮೋಚನ ಮಾಡಿಸಿದನು ಏಕೆಂದರೆ?

**ಬ್ರಹ್ಮಾದೇರ್ವಿಷ್ಣ್ವಧೀನತ್ವಜ್ಞಾಪನಾಯ ಚ ಕೇವಲಮ್ ।**

ಒಂದುವೇಳೆ ಬ್ರಹ್ಮಾದಿಗಳಿಂದ ದೂರ್ವಾಸರ ಆಪನ್ಮೋಚನ ಮಾಡಿಸಿದ್ದರೇ ''ಹಿರಣ್ಯಗರ್ಭಃ ಸಮವರ್ತತಾಗ್ರೇ'' ''ಏಕೋ ರುದ್ರೋ ನ ದ್ವಿತೀಯೋಽವ-

ತಸ್ಥೇ'', ಮುಂತಾದವುಗಳಿಂದ ಮೇಲ್ನೋಟಕ್ಕೆ ಸರ್ವೋತ್ತಮರೆಂದು ಪ್ರತಿಪಾದಿತ-ರಾಗಿದ್ದಾರೆ ಎಂದು ವಾದಿಗಳೂ ಹೇಳುವುದರಿಂದ ಮಂದಾಧಿಕಾರಿಗಳಿಗೆ ವಿಷ್ಣುವಿನಂತೆ ಸ್ವತಂತ್ರರೆಂದು ಅಭಿಪ್ರಾಯ ಬರುವುದು. ಅಧೀನತೆ ತಿಳಿಯಲಾರದು. ಕಾರಣ ಅವರಿಂದ ಮೋಚನ ಮಾಡಿಸಲಿಲ್ಲ. ।।೮೫।।

**ಶ್ರೀ ಶುಕ ಉವಾಚ-**

**ಅಥಾಂಬರೀಷಸ್ತನಯೇಷು ರಾಜ್ಯಂ**
**ಸಮಾನಶೀಲೇಷು ವಿಸೃಜ್ಯ ಧೀರಃ ।**
**ವನಂ ವಿವೇಶಾತ್ಮನಿ ವಾಸುದೇವೇ**
**ಮನೋದಧದ್ಧ್ವಸ್ತಗುಣಪ್ರವಾಹಃ ।।೮೬।।**

**ಅಥ** ಅನಂತರದಲ್ಲಿ **ಧೀರಃ** ಧೀರನಾದ **ಅಂಬರೀಷಃ** ಅಂಬರೀಷನು, **ಸಮಾನಶೀಲೇಷು** ಸಮಾನವಾದ ಸ್ವಭಾವವುಳ್ಳ, **ತನಯೇಷು** ಮಕ್ಕಳಲ್ಲಿ, **ರಾಜ್ಯಂ** ರಾಜ್ಯವನ್ನು, **ವಿಸೃಜ್ಯ** ಬಿಟ್ಟು **ಆತ್ಮನಿ** ಪರಮಾತ್ಮನಲ್ಲಿ, **ಮನಃ** ಮನಸ್ಸನ್ನು, **ದಧತ್** ಇಟ್ಟವನಾಗಿ, **ಧ್ವಸ್ತಗುಣಪ್ರವಾಹಃ** ನಾಶಮಾಡಲ್ಪಟ್ಟ ಗುಣಜನ್ಯವಾದ ರಾಗಾದಿಪ್ರವಾಹ ಉಳ್ಳವನಾಗಿ, **ವನಂ** ವನವನ್ನು **ವಿವೇಶ** ಪ್ರವೇಶ ಮಾಡಿದನು.

**ತಾತ್ಪರ್ಯ-** ಅನಂತರದಲ್ಲಿ ಧೀರನಾದ ಅಂಬರೀಷನು ಸಮಾನವಾದ ಸ್ವಭಾವವುಳ್ಳ ಮಕ್ಕಳಲ್ಲಿ ರಾಜ್ಯವನ್ನು ಕೊಟ್ಟು ಪರಮಾತ್ಮನಲ್ಲಿ ಮನಸ್ಸಿಟ್ಟವನಾಗಿ ರಾಗಾದಿ ಪ್ರವಾಹವನ್ನು ನಾಶ ಮಾಡಿಕೊಂಡು ವನವನ್ನು ಪ್ರವೇಶಿಸಿದನು. ।।೮೬।।

**ಇತ್ಯೇತತ್ಪುಣ್ಯಮಾಖ್ಯಾನಮಂಬರೀಷಸ್ಯ ಭೂಪತೇಃ ।**
**ಸಂಕೀರ್ತಯನ್ನನುಧ್ಯಾಯನ್ ಭಕ್ತೋ ಭಗವತೋ ಭವೇತ್ ।।೮೭।।**

**ಇತ್ಯೇತತ್** ಈ ರೀತಿಯಾದ, **ಭೂಪತೇಃ** ರಾಜನಾದ, **ಅಂಬರೀಷಸ್ಯ**, ಅಂಬರೀಷನ, **ಪುಣ್ಯಂ** ಪುಣ್ಯಕರವಾದ, **ಆಖ್ಯಾನಂ** ಮಹಾತ್ಮೆಯನ್ನು, **ಸಂಕೀರ್ತಯನ್** ಕೀರ್ತನೆ ಮಾಡುವವನು **ಅನುಧ್ಯಾಯನ್** ಧ್ಯಾನಮಾಡುವವನು **ಭಗವತಃ** ಭಗವಂತನ **ಭಕ್ತಃ** ಭಕ್ತನು **ಭವತಿ** ಆಗುತ್ತಾನೆ.

**ತಾತ್ಪರ್ಯ-** ಈ ರೀತಿಯಾಗಿ ಅಂಬರೀಷ ರಾಜನ ಪುಣ್ಯಕರವಾದ ಚರಿತ್ರೆಯನ್ನು ಕೀರ್ತನ ಮಾಡುತ್ತಾ, ಧ್ಯಾನ ಮಾಡುತ್ತಾ ಇರುವ ಭಕ್ತನು ಭಗವಂತನಲ್ಲಿ ಅಧಿಕ ಭಕ್ತಿಯನ್ನು ಹೊಂದುತ್ತಾನೆ. ।।೮೭।।

**★ ।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಷಷ್ಠೋಽಧ್ಯಾಯಃ ।। ★**

## ಅಥ ಸಪ್ತಮೋಽಧ್ಯಾಯಃ

**ಶ್ರೀ ಶುಕ ಉವಾಚ-**

**ವಿರೂಪಃ ಕೇತುಮಾನ್‌ಶಂಭುರಂಬರೀಷಸುತಾತಸ್ತ್ರಯಃ ।**
**ವಿರೂಪಾತ್ ಪೃಷದಶ್ವೋಽಭೂತ್ ತತ್ಪುತ್ರಸ್ತು ರಥೀತರಃ ॥೧॥**

**ರಥೀತರಸ್ಯಾಪ್ರಜಸ್ಯ ಭಾರ್ಯಾಯಾಂ ತಂತವೇಽರ್ಥಿತಃ ।**
**ಅಂಗಿರಾ ಜನಯಾಮಾಸ ಬ್ರಹ್ಮವರ್ಚಸ್ವಿನಸ್ಸುತಾನ್ ॥೨॥**

ಅಂಬರೀಷರಲ್ಲಿ ವಿರೂಪನು, ಕೇತುಮಾನ್, ಶಂಭು, ಈ ರೀತಿಯಾಗಿ ಮೂರು ಮಕ್ಕಳಾದರು. **ವಿರೂಪಾತ್** ವಿರೂಪನ ದೆಸೆಯಿಂದ **ಪೃಷದಶ್ವಃ** ಪೃಷದಶ್ವನು, **ಅಭೂತ್** ಆದನು. **ತತ್ಪುತ್ರಃ** ಪೃಷದಶ್ವನ ಮಗನು, **ರಥೀತರಃ** ರಥೀತರ ಎಂಬುವವನು, **ಅಪ್ರಜಸ್ಯ** ಸಂತಾನವಿಲ್ಲದ, **ರಥೀತರಸ್ಯ** ರಥೀತರನ, **ಭಾರ್ಯಾಯಾಂ** ಹೆಂಡತಿಯಲ್ಲಿ **ತಂತವೇ** ಸಂತತಿಗಾಗಿ, **ಅರ್ಥಿತಃ** ಪ್ರಾರ್ಥಿತನಾದ, **ಅಂಗಿರಾಃ** ಅಂಗಿರಸರು, **ಬ್ರಹ್ಮವರ್ಚಸ್ವಿನಃ** ಬ್ರಹ್ಮತೇಜೋವಂತರಾದ, **ಸುತಾನ್** ಮಕ್ಕಳನ್ನು, **ಜನಯಾಮಾಸ** ಹುಟ್ಟಿಸಿದರು.

**ತಾತ್ಪರ್ಯ-** ಈ ಅಂಬರೀಷರಲ್ಲಿ ವಿರೂಪ, ಕೇತುಮಾನ್, ಶಂಭು ಈ ರೀತಿಯಾಗಿ ಮೂರು ಜನ ಮಕ್ಕಳಾದರು. ಈ ವಿರೂಪನಲ್ಲಿ ಪೃಷದಶ್ವ ಎಂಬ ಮಗನು ಜನಿಸಿದನು. ಈತನಲ್ಲಿ ರಥೀತರನೆಂಬುವವನು ಜನಿಸಿದನು. ಈತನಿಗೆ ಮಕ್ಕಳಾಗಲಿಲ್ಲ. ಆಗ ಇವನ ಹೆಂಡತಿಯಲ್ಲಿ ಸಂತತಿಯಾಗಲು ಅನುಗ್ರಹಿಸಬೇಕೆಂದು ಅಂಗಿರಸರನ್ನು ಪ್ರಾರ್ಥಿಸಿದನು. ಈ ಅಂಗಿರಸರ ದಯೆಯಿಂದ ಇವನಲ್ಲಿ ತೇಜೋವಂತರಾದ ಮಕ್ಕಳು ಜನಿಸಿದರು. ॥೧-೨॥

**ಏತೇ ಕ್ಷತ್ರಪ್ರಸೂತಾ ವೈ ಪುನಶ್ಚಾಂಗಿರಸಃ ಸ್ಮೃತಾಃ ।**
**ರಥೀತರಾಣಾಂ ಪ್ರವರಾಃ ಕ್ಷತ್ರೋಪೇತಾ ದ್ವಿಜಾತಯಃ ॥೩॥**

**ರಥೀತರಾಣಾಂ** ರಥೀತರವಂಶದಲ್ಲಿ, **ಪ್ರವರಾಃ** ಶ್ರೇಷ್ಠರಾದವರು, **ಕ್ಷತ್ರೋಪೇತಾಃ** ಕ್ಷತ್ರಿಯಧರ್ಮದಿಂದ ಕೂಡಿದ, **ದ್ವಿಜಾತಯಃ** ಬ್ರಾಹ್ಮಣರಾದ, **ಏತೇ** ಇವರು, **ಕ್ಷತ್ರಪ್ರಸೂತಾಃ** ಕ್ಷತ್ರಜಾತರೆಂದು **ಪುನಶ್ಚ** ಮತ್ತು **ಅಂಗಿರಸಃ** ಅಂಗಿರಸರೆಂದು, **ಸ್ಮೃತಾಃ ವೈ** ಹೇಳಿಸಿಕೊಂಡರು.

ಈ ರಥೀತರನ ವಂಶದಲ್ಲಿ ಶ್ರೇಷ್ಠರಾದವರು ಕ್ಷತ್ರಿಯಧರ್ಮದಿಂದ ಕೂಡಿದ ಬ್ರಾಹ್ಮಣರಾದ ಇವರು ಕ್ಷತ್ರಜಾತರೆಂದು ಅಂಗಿರಸರೆಂದು ಕರೆಸಿಕೊಂಡರು. ॥೩॥

**ಕ್ಷುವತಸ್ತು ಮನೋರ್ಜಜ್ಞೇ ಇಕ್ಷ್ವಾಕುರ್ಘ್ರಾಣತಃ ಸುತಃ ।**
**ತಸ್ಯ ಪುತ್ರಶತಂ ಜ್ಯೇಷ್ಠಾಃ ವಿಕುಕ್ಷಿನಿಮಿದಂಡಕಾಃ ॥೪॥**

**ಕ್ಷುವತಃ** ಸೀನುತ್ತಿರುವ, **ಮನೋಃ** ಮನುವಿನ, **ಘ್ರಾಣತಃ** ಮೂಗಿನ ದೆಸೆಯಿಂದ, **ಇಕ್ಷ್ವಾಕುಃ** ಇಕ್ಷ್ವಾಕುವು, **ಸುತಃ** ಮಗನಾಗಿ, **ಜಜ್ಞೇ** ಜನಿಸಿದನು. **ತಸ್ಯ** ಈ ಇಕ್ಷ್ವಾಕುವಿಗೆ, **ಶತಂ** ನೂರು, **ಪುತ್ರಾಃ** ಮಕ್ಕಳು ಆದರು. ಇವರಲ್ಲಿ **ಜ್ಯೇಷ್ಠಾಃ** ಹಿರಿಯರು, **ವಿಕುಕ್ಷಿನಿಮಿದಂಡಕಾಃ** ಈ ಹೆಸರಿನ ಮಕ್ಕಳು ಅವತರಿಸಿದರು.

**ತಾತ್ಪರ್ಯ-** ಸೀನುತ್ತಿರುವ ಮನುವಿನ ಮೂಗಿನ ದೆಸೆಯಿಂದ ಇಕ್ಷ್ವಾಕುವು ಜನಿಸಿದನು. ಈ ಇಕ್ಷ್ವಾಕುವಿನಲ್ಲಿ ನೂರು ಮಕ್ಕಳು ಜನಿಸಿದರು. ಇವರಲ್ಲಿ ಹಿರಿಯರು (೧) ವಿಕುಕ್ಷಿ (೨) ನಿಮಿ (೩) ದಂಡಕ, ಈ ರೀತಿಯಾದವರು. ॥೪॥

**ತೇಷಾಂ ಪುರಸ್ತಾದಭವನ್ನಾರ್ಯಾವರ್ತೇ ನೃಪಾ ನೃಪ ।**
**ಪಂಚವಿಂಶತಿ ಪಶ್ಚಾಚ್ಚ ತ್ರಯೋ ಮಧ್ಯೇ ಪರೇಽನ್ಯತಃ ॥೫॥**

**ನೃಪ** ಹೇ ರಾಜನೇ! **ತೇಷಾಂ** ಈ ನೂರು ಮಕ್ಕಳಲ್ಲಿ, **ಪಂಚವಿಂಶತಿ** ಇಪ್ಪತ್ತೈದು ಜನರು, **ಆರ್ಯಾವರ್ತೇ** ಆರ್ಯಾವರ್ತದಲ್ಲಿ, (ವಿಂಧ್ಯ ಹಿಮಾಲಯ ಮಧ್ಯ ಪ್ರದೇಶದಲ್ಲಿ) **ಪುರಸ್ತಾತ್** ಪೂರ್ವದಿಕ್ಕಿನಲ್ಲಿ ಸಮುದ್ರದವರೆಗೂ, **ಪಶ್ಚಾತ್** ಪಶ್ಚಿಮದಲ್ಲಿ ಸಮುದ್ರವರೆಗೂ, **ಪಂಚವಿಂಶತಿ** ಇಪ್ಪತ್ತೈದು ಜನರು, **ನೃಪಾಃ** ರಾಜರು, **ಅಭವನ್** ಆದರು. **ಮಧ್ಯೇ** ಮಧ್ಯಭಾಗದಲ್ಲಿ, **ತ್ರಯಃ** ಮೂರು ಜನರು ರಾಜರಾದರು. **ಪರೇ** ಉಳಿದ ನಲವತ್ತೇಳು ಜನರು, **ಅನ್ಯತಃ** ದಕ್ಷಿಣಭಾಗದಲ್ಲಿ ರಾಜರಾದರು.

**ತಾತ್ಪರ್ಯ-** ಹೇ ರಾಜನೇ! ಇಕ್ಷ್ವಾಕುವಿನಿಂದ ಜನಿಸಿದ ಈ ನೂರು ಜನ ಮಕ್ಕಳಲ್ಲಿ ಆರ್ಯಾವರ್ತಪ್ರದೇಶದ ಪೂರ್ವಭಾಗದಲ್ಲಿ ಇಪ್ಪತ್ತೈದು ಜನರು ರಾಜರಾದರು. ಪಶ್ಚಿಮದಲ್ಲಿ ಇಪ್ಪತ್ತೈದು ಜನರು ರಾಜರಾದರು. ಮಧ್ಯಪ್ರದೇಶದಲ್ಲಿ ಮೂರು ಜನ ರಾಜರಾದರು. ಉಳಿದ ನಲವತ್ತೇಳು ಜನ ದಕ್ಷಿಣಭಾಗದಲ್ಲಿ ರಾಜರಾದರು.

**ಸ ಏಕದಾಽಷ್ಟಕಶ್ರಾದ್ಧ ಇಕ್ಷ್ವಾಕುಃ ಸುತಮಾದಿಶತ್ ।**
**ಮಾಂಸಮಾನೀಯತಾಂ ಮಧ್ಯಂ ವಿಕುಕ್ಷೇ ಗಚ್ಛ ಮಾಚಿರಮ್ ॥೬॥**

**ಸಃ** ಆ **ಇಕ್ಷ್ವಾಕುಃ** ಇಕ್ಷ್ವಾಕುರಾಜನು, **ಏಕದಾ** ಒಮ್ಮೆ, **ಅಷ್ಟಕಶ್ರಾದ್ಧೇ** ಅಷ್ಟಕಶ್ರಾದ್ಧಕ್ಕಾಗಿ, **ವಿಕುಕ್ಷೇ** ವಿಕುಕ್ಷಿಯೇ, **ಮಾಚಿರಂ** ಜಾಗ್ರತೆಯಾಗಿ, **ಮೇಧ್ಯಂ** ಪವಿತ್ರವಾದ, **ಮಾಂಸಂ** ಮಾಂಸವು, **ಆನೀಯತಾಂ** ತರಲ್ಪಡಲಿ **ಇತಿ** ಹೀಗೆಂದು **ಸುತಂ** ಮಗನನ್ನು ಕುರಿತು, **ಆದಿಶತ್** ಅಪ್ಪಣೆ ಮಾಡಿದನು.

**ತಾತ್ಪರ್ಯ-** ಆ ಇಕ್ಷ್ವಾಕು ರಾಜನು ಒಮ್ಮೆ ಷಣ್ಣವತಿ ಅಷ್ಟಕಶ್ರಾದ್ಧಕ್ಕಾಗಿ ಪವಿತ್ರವಾದ ಮಾಂಸವನ್ನು ತರಲು ಮಗನಾದ ವಿಕುಕ್ಷಿಗೆ ಅಪ್ಪಣೆ ಮಾಡಿದನು. ||೬||

**ತಥೇತಿ ಸ ವನಂ ಗತ್ವಾ ಮೃಗಾನ್ ಹತ್ವಾ ಕ್ರಿಯಾರ್ಹಕಾನ್ ।**
**ಶ್ರಾಂತೋ ಬುಭುಕ್ಷಿತೋ ವೀರಃ ಶಶಮಾದದಪಸ್ಮೃತಿಃ ||೭||**

**ಸಃ** ಆ **ವೀರಃ** ವೀರನಾದ ವಿಕುಕ್ಷಿಯು, **ವನಂ** ವನವನ್ನು ಕುರಿತು **ಗತ್ವಾ** ಹೋಗಿ, **ಕ್ರಿಯಾರ್ಹಕಾನ್** ಕ್ರಿಯಾರ್ಹವಾದುವುಗಳಾದ **ಮೃಗಾನ್** ಪ್ರಾಣಿಗಳನ್ನು, **ಹತ್ವಾ** ಸಂಹಾರಮಾಡಿ, **ಶ್ರಾಂತಃ** ಆಯಾಸಗೊಂಡು **ಬುಭುಕ್ಷಿತಃ** ಹಸಿದಿರುವವನಾಗಿ, **ಅಪಸ್ಮೃತಿಃ** ವಿವೇಕರಹಿತನಾಗಿ, **ಶಶಂ** ಮೊಲವನ್ನು, **ಆದತ್** ಭಕ್ಷಣ ಮಾಡಿದನು.

**ತಾತ್ಪರ್ಯ-** ಆ ವೀರನಾದ ವಿಕುಕ್ಷಿಯು ವನವನ್ನು ಕುರಿತು ಹೋಗಿ ಕ್ರಿಯಾರ್ಹವಾದ ಪ್ರಾಣಿಗಳನ್ನು ಸಂಹರಿಸಿ ಆಯಾಸಗೊಂಡವನಾಗಿ, ಹಸಿದವನಾಗಿ ವಿವೇಕವಿಲ್ಲದೇ ಮೊಲದ ಮಾಂಸವನ್ನು ತಿಂದನು. ||೭||

**ಶೇಷಂ ನಿವೇದಯಾಮಾಸ ಪಿತ್ರೇ ತೇನ ಚ ತದ್ಗುರುಃ ।**
**ಚೋದಿತಃ ಪ್ರೋಕ್ಷಣಾಯಾಹ ದುಷ್ಟಮೇತದಕರ್ಮಕಮ್ ||೮||**

**ಶೇಷಂ** ತಾನು ತಿಂದು ಉಳಿದಿದ್ದನ್ನು, **ಪಿತ್ರೇ** ತಂದೆಗೋಸ್ಕರ, **ನಿವೇದಯಾಮಾಸ** ಅರ್ಪಿಸಿದನು. **ತೇನ** ಆ ತಂದೆಯಿಂದ, **ಪ್ರೋಕ್ಷಣಾಯ** ಶ್ರಾದ್ಧೋಪಯೋಗಿ ಪ್ರೋಕ್ಷಣೆಗಾಗಿ, **ಚೋದಿತಃ** ಪ್ರೇರಿತನಾದ, **ತದ್ಗುರುಃ** ಅವರ ಗುರುಗಳಾದ ವಸಿಷ್ಠರು, **ಏತತ್** ಈ ಮಾಂಸವು **ದುಷ್ಟಂ** ದುಷ್ಟವಾದದ್ದು, ಆದ್ದರಿಂದ **ಅಕರ್ಮಕಂ** ಕರ್ಮಕ್ಕೆ ಯೋಗ್ಯವಾದದ್ದಲ್ಲ ಎಂದು **ಆಹ** ಹೇಳಿದರು.

**ತಾತ್ಪರ್ಯ-** ಈ ಮಗನು (ವಿಕುಕ್ಷಿಯು) ತಾನು ತಿಂದು ಉಳಿದಿದ್ದನ್ನು ತಂದೆಗೆ ಅರ್ಪಿಸಿದನು. ಆ ತಂದೆಯು ಈ ಮಾಂಸವನ್ನು ಸಂಸ್ಕಾರಕ್ಕಾಗಿ ಪ್ರೋಕ್ಷಣ ಮಾಡಲು ವಸಿಷ್ಠರಿಗೆ ಹೇಳಿದನು. ವಸಿಷ್ಠರು ತಮ್ಮ ಜ್ಞಾನದೃಷ್ಟಿಯಿಂದ ವಿಚಾರಮಾಡಿ ಈ ಮಾಂಸವು ಕರ್ಮಕ್ಕೆ ಯೋಗ್ಯವಲ್ಲ ಎಂದು ಹೇಳಿದರು. ||೮||

**ಜ್ಞಾತ್ವಾ ಪುತ್ರಸ್ಯ ತತ್ಕರ್ಮ ಗುರುಣಾಽಭಿಹಿತಂ ನೃಪಃ ।**
**ದೇಶಾನ್ನಿಃಸಾರಯಾಮಾಸ ಸುತಂ ತ್ಯಕ್ತವಿಧಿಂ ರುಷಾ ||೯||**

**ನೃಪಃ** ರಾಜನು, **ಪುತ್ರಸ್ಯ** ಮಗನ, **ತತ್ಕರ್ಮ** ಈ ಕರ್ಮವನ್ನು, **ಗುರುಣಾ** ವಸಿಷ್ಠರಿಂದ, **ಅಭಿಹಿತಂ** ಹೇಳಲ್ಪಟ್ಟಿದ್ದನ್ನು, **ಜ್ಞಾತ್ವಾ** ತಿಳಿದು, **ತ್ಯಕ್ತವಿಧಿಂ** ಆಚಾರ

ಶೂನ್ಯನಾದ, **ಸುತಂ** ಮಗನನ್ನು, **ರುಷಾ** ಸಿಟ್ಟಿನಿಂದ, **ದೇಶಾತ್** ದೇಶದಿಂದ, **ನಿಸ್ಸಾರಯಾಮಾಸ** ಹೊರಗೆ ಹಾಕಿಸಿದನು.

**ತಾತ್ಪರ್ಯ-** ರಾಜನು ಮಗನ ಈ ಕರ್ಮವನ್ನು ವಸಿಷ್ಠರಿಂದ ಹೇಳಲ್ಪಟ್ಟಿದ್ದನ್ನು ತಿಳಿದು ಆಚಾರಶೂನ್ಯನಾದ ಈ ಮಗನನ್ನು ಸಿಟ್ಟಿನಿಂದ ದೇಶದಿಂದ ಹೊರಗೆ ಹಾಕಿಸಿದನು. ||೯||

**ಸ ತು ವಿಪ್ರೇಣ ಸಂವಾದಂ ಜಾಪಕೇನ ಸಮಾಚರನ್ ।**
**ತ್ಯಕ್ತ್ವಾ ಕಲೇವರಂ ಯೋಗೀ ಸ ತೇನಾವಾಪ ಯತ್ಪರಮ್ ||೧೦||**

**ಸಃ ತು** ಆ ವಿಕುಕ್ಷಿಯಾದರೋ, **ಜಾಪಕೇನ** ಜಾಪಕನೆಂಬ, **ವಿಪ್ರೇಣ** ಋಷಿಯಿಂದ, **ಸಂವಾದಂ** ತತ್ತ್ವವಿಷಯಕವಾದ ವಿಚಾರವನ್ನು , **ಸಮಾಚರನ್** ನಡೆಸಿದನು. **ಯೋಗೀ** ಯೋಗಿಯಾದ ಈ ರಾಜನು, **ತೇನ** ಈ ತತ್ತ್ವೋಪದೇಶದಿಂದ ಉಂಟಾದ ಜ್ಞಾನ ಹೊಂದಿದ್ದರಿಂದ, **ಕಾಲಾಂತರೇ** ತಂದೆಯ ಮರಣಾನಂತರ ಬಂದು ಕೆಲಕಾಲ ರಾಜ್ಯವನ್ನು ರಕ್ಷಿಸಿ ಅನಂತರದಲ್ಲಿ, **ಕಲೇವರಂ** ಈ ದೇಹವನ್ನು **ತ್ಯಕ್ತ್ವಾ** ಬಿಟ್ಟು, **ಯತ್** ಯಾವುದು, **ಪರಂ** ಉತ್ತಮವೋ ಅಂಥ ಗತಿಯನ್ನು **ಅವಾಪ** ಹೊಂದಿದನು.

**ತಾತ್ಪರ್ಯ-** ಆ ವಿಕುಕ್ಷಿ ರಾಜನಾದರೂ ಜಾಪಕನೆಂಬ ಋಷಿಯಿಂದ ತತ್ತ್ವಜ್ಞಾನವನ್ನು ಹೊಂದಿದನು. ಯೋಗಿಯಾದ ಈ ರಾಜನು ಈ ತತ್ತ್ವೋಪದೇಶ ದಿಂದುಂಟಾದ ಜ್ಞಾನದಿಂದ ಭಕ್ತಿಯನ್ನು ಹೊಂದಿದನು. ತಂದೆಯ ಮರಣಾನಂತರ ಮರಳಿಬಂದು ರಾಜ್ಯಭಾರವನ್ನು ಮಾಡಿ ಕಾಲಾಂತರದಲ್ಲಿ ಈ ದೇಹವನ್ನು ತ್ಯಜಿಸಿ ಉತ್ತಮವಾದ ಗತಿಯನ್ನು ಹೊಂದಿದನು. ||೧೦||

**ಪಿತರ್ಯುಪರತೇಽಭ್ಯೇತ್ಯ ವಿಕುಕ್ಷಿಃ ಪೃಥಿವೀಮಿಮಾಮ್ ।**
**ಶಾಸನ್ನೀಜೇ ಹರಿಂ ಯಜ್ಞೈಃ ಶಶಾದ ಇತಿ ವಿಶ್ರುತಃ ||೧೧||**

**ವಿಕುಕ್ಷಿಃ** ವಿಕುಕ್ಷಿಯು, **ಪಿತರಿ** ತಂದೆಯಾದ ಇಕ್ಷ್ವಾಕುವು, **ಉಪರತೇ** ಮರಣ ಹೊಂದಲು, **ಇಮಾಂ** ಈ **ಪೃಥಿವೀಂ** ಭೂಮಿಯನ್ನು , **ಅಭ್ಯೇತ್ಯ** ದೇಶಾಂತರದಿಂದ ಬಂದು **ಶಾಸನ್** ರಾಜ್ಯಭಾರ ಮಾಡುತ್ತಾ , **ಯಜ್ಞೈಃ** ಯಜ್ಞಗಳಿಂದ, **ಹರಿಂ** ಪರಮಾತ್ಮನನ್ನು **ಈಜೇ** ಪೂಜಿಸಿದನು. **ಶಶಾದಃ** ಶಶಾದನೆಂದು **ವಿಶ್ರುತಃ** ಪ್ರಸಿದ್ಧನಾದನು.

**ತಾತ್ಪರ್ಯ-** ತಂದೆಯು ಮೃತನಾಗಲು ವಿಕುಕ್ಷಿಯು ದೇಶಾಂತರ ಹೋದವನು ತಿರುಗಿಬಂದು ರಾಜ್ಯವನ್ನು ಪಡೆದು ಶಾಸನ ಮಾಡಿದನು. ಶ್ರೀಹರಿಯನ್ನು ಯಜ್ಞದಿಂದ ಪೂಜಿಸಿದನು. **ಶಶಂ** ಮೊಲವನ್ನು **ಅತ್ತಿ** ತಿಂದವನಾದ್ದರಿಂದ ಶಶಾದ ಎಂದು ಪ್ರಸಿದ್ಧಿ ಹೊಂದಿದನು. ||೧೧||

**ಪುರಂಜಯಸ್ತಸ್ಯ ಸುತಃ ಇಂದ್ರವಾಹ ಇತೀರಿತಃ ।**
**ಕಕುತ್ಸ್ಥ ಇತಿ ವಾಪ್ಯುಕ್ತಃ ಶೃಣು ನಾಮಾನಿ ಕರ್ಮಭಿಃ ॥೧೨॥**

**ತಸ್ಯ** ಈ ವಿಕುಕ್ಷಿಯ **ಸುತಃ** ಮಗನು, **ಪುರಂಜಯಃ** ಪುರಂಜಯ ಎಂದು ಹೆಸರಿನಿಂದಲೂ ಮತ್ತು **ಇಂದ್ರವಾಹಃ** ಇಂದ್ರವಾಹ ಎಂತಲೂ, **ಕಕುತ್ಸ್ಥಃ** ಕಕುತ್ಸ್ಥನೆಂತಲೂ, **ಉಕ್ತಃ** ಹೇಳಿಸಿಕೊಂಡನು, **ನಾಮಾನಿ** ನಾಮಗಳನ್ನು **ಯೈಃ** ಯಾವ, **ಕರ್ಮಭಿಃ** ಕರ್ಮಗಳಿಂದ ಪ್ರಾಪ್ತವಾದವೋ ಆ ಕರ್ಮಗಳನ್ನು **ಶೃಣು** ಕೇಳು.

**ತಾತ್ಪರ್ಯ-** ಈ ವಿಕುಕ್ಷಿಗೆ, ಪುರಂಜಯನೆಂಬ ಮಗನಾದನು. ಈತನಿಗೆ ಇಂದ್ರವಾಹ, ಕಕುತ್ಸ್ಥ ಎಂಬ ಹೆಸರು ಬಂದಿರುತ್ತವೆ. ಈ ಹೆಸರು ಬರಲು ಕಾರಣವಾದ ಅವನ ಕರ್ಮಗಳನ್ನು ಕೇಳು. ॥೧೨॥

**ಕೃತಾಂತ ಆಸೀತ್ ಸಮರೇ ದೇವಾನಾಂ ಸಹ ದಾನವೈಃ ।**
**ಪಾರ್ಷ್ಣಿಗ್ರಾಹೋ ವೃತೋ ಧೀರೋ ದೇವೈರ್ದೈತ್ಯಪರಾಜಿತೈಃ ॥೧೩॥**

**ಕೃತಾಂತೇ** ಕೃತಯುಗದ ಕೊನೆಯಲ್ಲಿ, **ದೇವಾನಾಂ** ದೇವತೆಗಳಿಗೆ, **ದಾನವೈಃ ಸಹ** ದಾನವರಿಂದ ಸಹಿತವಾಗಿ, **ಸಮರೇ** ಯುದ್ಧವು, **ಜಾತೇ ಸತಿ** ಉಂಟಾಗುತ್ತಿರಲು, **ದೈತ್ಯಪರಾಜಿತೈಃ** ದೈತ್ಯರಿಂದ ಸೋಲುಹೊಂದಿದ, **ದೇವೈಃ** ದೇವತೆಗಳಿಂದ, **ಧೀರಃ** ಧೀರನಾದ ಈತನು, **ಪಾರ್ಷ್ಣಿಗ್ರಾಹಃ** ಸಹಾಯಕನಾಗಿ, **ವೃತಃ** ಸ್ವೀಕೃತನು, **ಆಸೀತ್** ಆದನು.

**ತಾತ್ಪರ್ಯ-** ಕೃತಯುಗದ ಕೊನೆಯಲ್ಲಿ ದೇವದಾನವರಿಗೆ ಯುದ್ಧವು ಸಂಭವಿಸಿತು. ಪರಾಜಿತರಾದ ದೇವತೆಗಳು ಧೀರನಾದ ಈತನನ್ನು ಸಹಾಯಕನನ್ನಾಗಿ ಅಂಗೀಕರಿಸಿದರು. ॥೧೩॥

**ವಚನಾದ್ದೇವದೇವಸ್ಯ ವಿಷ್ಣೋರ್ವಿಶ್ವಾತ್ಮನಃ ಪ್ರಭೋಃ ।**
**ವಾಹನತ್ವೇ ವೃತಸ್ತಸ್ಯ ಬಭೂವೇಂದ್ರೋ ಮಹಾವೃಷಃ ॥೧೪॥**

**ವಿಶ್ವಾತ್ಮನಃ** ವಿಶ್ವಾಂತರ್ಯಾಮಿಯಾದ, ಮತ್ಸ್ಯ, ಕೂರ್ಮ, ವರಾಹ ಮೊದಲಾದ ಸಮಸ್ತ ರೂಪವನ್ನು ತಾಳಿದ **ಪ್ರಭೋಃ** ಸಮರ್ಥನಾದ **ದೇವದೇವಸ್ಯ** ದೇವೋತ್ತಮನಾದ, **ವಿಷ್ಣೋಃ** ಶ್ರೀವಿಷ್ಣುವಿನ, **ವಚನಾತ್** ಅಪ್ಪಣೆಯಿಂದ, **ಇಂದ್ರಃ** ಇಂದ್ರನು, **ತಸ್ಯ** ಅವನ, **ವಾಹನತ್ವೇ** ವಾಹನನಾಗೆಂದು **ವೃತಃ** ಕೇಳಲ್ಪಟ್ಟನು. **ಮಹಾವೃಷಃ** ದೊಡ್ಡ ಎತ್ತಾಗಿ **ಬಭೂವ** ಆದನು.

**ತಾತ್ಪರ್ಯ-** ಇಂದ್ರನು ತಮಗೆ ಸಹಾಯ ಮಾಡಬೇಕಾಗಿ ಪುರಂಜಯನನ್ನು ಕೇಳಿಕೊಂಡನು. ಆಗ ಪುರಂಜಯನು ''ಇಂದ್ರನೇ ನೀನೇ ನನಗೆ ವಾಹನವಾದರೆ ನಾನು ಸಹಾಯ ಮಾಡುತ್ತೇನೆಂದು'' ಹೇಳಿದನು. ಈ ಮಾತಿಗೆ ಇಂದ್ರನು ಸಂಕೋಚ ಪಟ್ಟುಕೊಂಡನು. ಆಗ ಭಗವಂತನು ಇಂದ್ರನೇ! ನಾನೇ ಸಮಯೋಚಿತವಾಗಿ ಮತ್ಸ್ಯ ಮೊದಲಾದ ರೂಪಗಳನ್ನು ತಾಳುತ್ತಿರುವುದರಿಂದ ನೀನು ಸಂಕೋಚಪಡಕೂಡದು ಎಂದು ಹೇಳಿದ ಮೇಲೆ ದೇವೇಂದ್ರನು ಎತ್ತಿನ ರೂಪವನ್ನು ತಾಳಿ ಪುರಂಜಯನ ವಾಹನವಾದನು. ||೧೪||

**ಸ ಸನ್ನದ್ಧೋ ಧನುರ್ದಿವ್ಯಮಾದಾಯ ವಿಶಿಖಾನ್ ಶಿತಾನ್ |**
**ಸ್ತೂಯಮಾನಸ್ತಮಾರುಹ್ಯ ಯುಯುತ್ಸುಃ ಕಕುದಿ ಸ್ಥಿತಃ ||೧೫||**

**ಸಃ** ಆ ಪುರಂಜಯನು, **ಸನ್ನದ್ಧಃ** ಯುದ್ಧಕ್ಕೆ ಸಿದ್ಧನಾಗಿ **ದಿವ್ಯಂ** ದಿವ್ಯವಾದ, **ಧನುಃ** ಧನುಸ್ಸನ್ನು, **ಶಿತಾನ್** ತೀಕ್ಷ್ಣವಾದ, **ವಿಶಿಖಾನ್** ಬಾಣಗಳನ್ನು, **ಆದಾಯ** ತೆಗೆದುಕೊಂಡು, **ಸ್ತೂಯಮಾನಃ** ಸ್ತೋತ್ರ ಮಾಡಿಸಿಕೊಳಲ್ಪಟ್ಟವನಾಗಿ, **ತಂ** ಆ ಎತ್ತನ್ನು **ಆರುಹ್ಯ** ಹತ್ತಿಕೊಂಡು, **ಯುಯುತ್ಸುಃ** ಯುದ್ಧ ಮಾಡಲು ಇಚ್ಛೆ ಉಳ್ಳವನಾಗಿ, **ಕಕುದಿ** ಎತ್ತಿನ ಹೆಗಲಿನ ಮೇಲೆ, **ಸ್ಥಿತಃ** ಕುಳಿತನು.

**ತಾತ್ಪರ್ಯ-** ಈ ಪುರಂಜಯನು ಯುದ್ಧಕ್ಕೆ ಸಿದ್ಧನಾಗಿ ದಿವ್ಯವಾದ ಧನುಸ್ಸನ್ನು ತೀಕ್ಷ್ಣವಾದ ಬಾಣಗಳನ್ನು ತೆಗೆದುಕೊಂಡು ಸ್ತೋತ್ರಮಾಡಿಸಿಕೊಳ್ಳುತ್ತಾ ಆ ಎತ್ತನ್ನು ಹತ್ತಿಕೊಂಡು ಯುದ್ಧಮಾಡಲು ಹೊರಟನು. ||೧೫||

**ತೇಜಸಾ ವ್ಯಾಪಿತೋ ವಿಷ್ಣೋಃ ಪುರುಷಸ್ಯ ಪರಾತ್ಮನಃ |**
**ಪ್ರತೀಚ್ಯಾಂ ದಿಶಿ ದೈತ್ಯಾನಾಂ ನ್ಯರುಣತ್ ತ್ರಿದಶೈಃ ಪುರಮ್ ||೧೬||**

**ಪರಾತ್ಮನಃ** ಸರ್ವೋತ್ತಮನಾದ ಭಗವಂತನಾದ, **ಪುರುಷಸ್ಯ** ಸರ್ವರ ದೇಹದಲ್ಲಿರುವ, **ವಿಷ್ಣೋಃ** ವಿಷ್ಣುವಿನ, **ತೇಜಸಾ** ಸನ್ನಿಧಾನ ವಿಶೇಷದಿಂದ, **ವ್ಯಾಪಿತಃ** ತುಂಬಲ್ಪಟ್ಟವನಾಗಿ, **ಪ್ರತೀಚ್ಯಾಂ** ಪಶ್ಚಿಮದಿಕ್ಕಿನಲ್ಲಿ, **ತ್ರಿದಶೈಃ** ದೇವತೆಗಳಿಂದ ಸಹಿತನಾಗಿ, **ದೈತ್ಯಾನಾಂ** ದೈತ್ಯರ, **ಪುರಂ** ಪಟ್ಟಣವನ್ನು, **ನ್ಯರುಣತ್** ತಡೆಗಟ್ಟಿದನು.

**ತಾತ್ಪರ್ಯ-** ಸರ್ವೋತ್ತಮನಾದ ಸರ್ವದೇಹದಲ್ಲಿರುವ ವಿಷ್ಣುವಿನ ಸನ್ನಿಧಾನ ವಿಶೇಷದಿಂದ ತುಂಬಲ್ಪಟ್ಟವನಾಗಿ ದೈತ್ಯರ ಪಟ್ಟಣವನ್ನು ತಡೆಗಟ್ಟಿದನು. ||೧೬||

**ತೈಸ್ತಸ್ಯ ಹ್ಯಭವದ್ರಾಜನ್ ಸಂಗ್ರಾಮೋ ರೋಮಹರ್ಷಣಃ |**
**ಯಮಾಯ ಭಲ್ಲೈರನಯದ್ದೈತ್ಯಾನ್ ಯೇ ಯುಯುಧುಃ ಮೃಧೇ ||**

**ರಾಜನ್** ರಾಜನೇ! **ತಸ್ಯ** ಆ ಪುರಂಜಯ ರಾಜನಿಗೆ, **ತೈಃ** ದೈತ್ಯರಿಂದ, **ರೋಮಹರ್ಷಣಃ** ರೋಮಾಂಚಕಾರಿಯಾದ ಸಂಗ್ರಾಮವು, **ಅಭವತ್** ಆಯಿತು. **ಯೇ** ಯಾರು, **ಮೃಧೇ** ಯುದ್ಧದಲ್ಲಿ, **ಯುಯುಧುಃ** ಯುದ್ಧ ಮಾಡಿದರೋ, **(ತಾನ್) ದೈತ್ಯಾನ್** ಆ ದೈತ್ಯರನ್ನು, **ಭಲ್ಲೈಃ** ಭಲ್ಲಾಯುಧದಿಂದ (ಭರ್ಜಿಯಿಂದ) **ಯಮಾಯ** ಯಮಲೋಕವನ್ನು ಕುರಿತು, **ಅನಯತ್** ಕಳುಹಿಸಿದನು.

**ತಾತ್ಪರ್ಯ-** ರಾಜನೇ! ಆ ಪುರಂಜಯನಿಗೆ ರೋಮಾಂಚಕಾರಿಯಾದ ಸಂಗ್ರಾಮವು ಉಂಟಾಯಿತು. ಯಾರು ಯುದ್ಧದಲ್ಲಿ ಮುಂದೆ ಯುದ್ಧ ಮಾಡಿದರೋ ಅಂಥಾ ದೈತ್ಯರನ್ನು ಭಲ್ಲಾಯುಧದಿಂದ (ಭರ್ಜಿಯಿಂದ) ಇರಿದು ಯಮಲೋಕವನ್ನು ಕುರಿತು ಕಳುಹಿಸಿದನು. ||೧೭||

**ತಸ್ಯೇಷುಪಾತಾಭಿಮುಖಂ ಯುಗಾಂತಾಗ್ನಿಮಿವೋಲ್ಬಣಮ್ ।**
**ವಿಸೃಜ್ಯ ದುದ್ರುವುರ್ದೈತ್ಯಾ ಹನ್ಯಮಾನಾಃ ಸ್ವಮಾಲಯಮ್ ||೧೮||**

**ಯುಗಾಂತಾಗ್ನಿಂ ಇವ** ಯುಗಾಂತಾಗ್ನಿಯಂತೆ, **ಉಲ್ಬಣಂ** ಕ್ರೂರವಾದ, **ತಸ್ಯ** ಆ ರಾಜನ, **ಇಷುಪಾತಾಭಿಮುಖಂ** ಬಾಣಗಳನ್ನು ಎದುರಿಸುವುದನ್ನು **ವಿಸೃಜ್ಯ** ಬಿಟ್ಟು, **ಹನ್ಯಮಾನಾಃ** ಹೊಡೆಯಲ್ಪಟ್ಟ, **ದೈತ್ಯಾಃ** ದೈತ್ಯರು, **ಸ್ವಂ** ತಮ್ಮ **ಆಲಯಂ** ಮನೆಯನ್ನು, **ವಿಸೃಜ್ಯ** ಬಿಟ್ಟು, **ದುದ್ರುವುಃ** ಓಡಿಹೋದರು.

**ತಾತ್ಪರ್ಯ-** ಯುಗಾಂತಾಗ್ನಿಯಂತೆ ಉಲ್ಬಣವಾದ ಆ ರಾಜನ ಬಾಣಗಳನ್ನು ಎದುರಿಸುವುದನ್ನು ಬಿಟ್ಟು ಹೊಡೆಯಲ್ಪಟ್ಟವರಾದ ದೈತ್ಯರು ತಮ್ಮ ಮನೆಯನ್ನು ಬಿಟ್ಟು ಹೋದರು. ||೧೮||

**ಜಿತ್ವಾ ಪುರಂ ಧನಂ ಸರ್ವಮಯಚ್ಛತ್ ವಜ್ರಪಾಣಯೇ ।**
**ಪ್ರತ್ಯಯಚ್ಛತ್ ಸ ರಾಜರ್ಷಿರಿತಿ ನಾಮಭಿರಾಹುತಃ ||೧೯||**

**ಸಃ** ಆ **ರಾಜರ್ಷಿಃ** ರಾಜರ್ಷಿಯು, (ಪುರಂಜಯನು) **ಪುರಂ** ಪಟ್ಟಣವನ್ನು **ಸರ್ವಂ** ಎಲ್ಲಾ, **ಧನಂ** ಸಂಪತ್ತನ್ನು, **ಜಿತ್ವಾ** ಗೆದ್ದು **ಸಶ್ರೀಕಂ** ಸಂಪತ್ತು ಸಹಿತವಾದ, **ಪುರಂ** ಪಟ್ಟಣವನ್ನು, **ವಜ್ರಪಾಣಯೇ** ದೇವೇಂದ್ರನಿಗೆ, **ಪ್ರತ್ಯಯಚ್ಛತ್** ಕೊಟ್ಟನು, **ಇತಿ** ಆದ್ದರಿಂದ **ನಾಮಭಿಃ** ಪುರಂಜಯ, ಇಂದ್ರವಾಹ, ಕಕುತ್ಸ್ಥ ಈ ನಾಮಗಳಿಂದ **ಆಹುತಃ** ಕರೆಯಲ್ಪಟ್ಟನು.

**ತಾತ್ಪರ್ಯ-** ಆ ಪುರಂಜಯನು ಪಟ್ಟಣವನ್ನು ಎಲ್ಲಾ ಸಂಪತ್ತನ್ನು, ಗೆದ್ದು ಸಂಪತ್ತು ಸಹಿತವಾದ ಪಟ್ಟಣವನ್ನು ಇಂದ್ರನಿಗೋಸ್ಕರ ಕೊಟ್ಟನು. ಆದ್ದರಿಂದ ಪುರವನ್ನು ಗೆದ್ದದ್ದರಿಂದ ಪುರಂಜಯ, ಇಂದ್ರನೇ ವಾಹನನಾದ್ದರಿಂದ ಇಂದ್ರವಾಹ, ಎತ್ತಿನ ಬೆನ್ನಿನ ಮೇಲೆ ಕುಳಿತಿದ್ದರಿಂದ ಕಕುತ್ಸ್ಥ ಎಂದು ನಾಮಾಂಕಿತನಾದನು. ||೧೯||

**ಪುರಂಜಯಸ್ಯ ಪುತ್ರೋऽಭೂದನೇನಾಸ್ತತ್ಸುತಃ ಪೃಥುಃ ।**
**ವಿಶ್ವಗಂಧಿಸ್ತತಶ್ಚಂದ್ರೋ ಯುವನಾಶ್ವಸ್ತು ತತ್ಸುತಃ ॥೨೦॥**

**ಪುರಂಜಯಸ್ಯ** ಪುರಂಜಯನಿಗೆ, **ಅನೇನಾಃ** ಅನೇನಾ ಎಂಬುವ ಮಗನು, **ಅಭೂತ್** ಆದನು. **ತತ್ಸುತಃ** ಅವನ ಮಗನು, **ಪೃಥುಃ** ಪೃಥು ಎಂಬುವವನು, **ತತಃ** ಈ ಪೃಥುವಿನ ದೆಸೆಯಿಂದ **ವಿಶ್ವಗಂಧಿಃ** ವಿಶ್ವಗಂಧಿ ಎಂಬುವವನು, **ತತಃ** ಈ ವಿಶ್ವಗಂಧಿಯ ದೆಸೆಯಿಂದ, **ಚಂದ್ರಃ** ಚಂದ್ರ (ಚಂಡ) ಎಂಬ ಪುತ್ರನು ಆದನು. **ತತ್ಸುತಃ** ಈತನ ಮಗನು **ಯುವನಾಶ್ವಃ** ಯೌವನಾಶ್ವ ಎಂಬುವವನು ಆದನು.

**ತಾತ್ಪರ್ಯ–** ಪುರಂಜಯನಿಗೆ ಅನೇನಾ ಎಂಬುವ ಮಗನು, ಈ ಅನೇನನಿಗೆ ಪೃಥು ಎಂಬ ಮಗನೂ, ಈ ಪೃಥುವಿಗೆ ವಿಶ್ವಗಂಧಿ ಎಂಬ ಮಗನೂ, ಈ ವಿಶ್ವಗಂಧಿಗೆ ಚಂದ್ರ ಎಂಬುವನು, ಈತನಿಗೆ ಯೌವನಾಶ್ವ ಎಂಬ ಮಗನೂ, ಆದರು.

**ಶಾವಸ್ತಿಸ್ತತ್ಸುತೋ ಯೇನ ಶಾವಸ್ತೀ ನಿರ್ಮಿತಾ ಪುರೀ ।**
**ಬೃಹದಶ್ವಸ್ತು ಶಾವಸ್ತೇಸ್ತತಃ ಕುವಲಯಾಶ್ವಕಃ ॥೨೧॥**

**ಯೇನ** ಯಾವಾತನಿಂದ, **ಶಾವಸ್ತೀ** ಶಾವಸ್ತೀ ಎಂಬುವ, **ಪುರೀ** ಪಟ್ಟಣವು, **ನಿರ್ಮಿತಾ** ನಿರ್ಮಿಸಲ್ಪಟ್ಟಿತೋ ಅಂಥಾ **ಶಾವಸ್ತಿಃ** ಶಾವಸ್ತಿ ಎಂಬುವವನು **ತತ್ಸುತಃ** ಅವನ ಮಗನು ಆದನು, **ಬೃಹದಶ್ವಃ** ಬೃಹದಶ್ವ ಎಂಬುವವನು, **ತತ್ಸುತಃ** ಈತನ ಮಗನು ಆದನು. ಈತನಿಗೆ, **ಕುವಲಯಾಶ್ವಕಃ** ಕುವಲಯಾಶ್ವ ಎಂಬುವವನು ಆದನು.

**ತಾತ್ಪರ್ಯ–** ಶಾವಸ್ತೀ ಎಂಬ ಪಟ್ಟಣವನ್ನು ನಿರ್ಮಿಸಿದ ಶಾವಸ್ತಿ ಎಂಬುವವನು ಯೌವನಾಶ್ವನ ಮಗನಾದನು. ಈತನಿಗೆ ಬೃಹದಶ್ವ ಎಂಬುವವನು, ಈತನಿಗೆ ಕುವಲಯಾಶ್ವ ಎಂಬ ಮಗನೂ ಆದನು. ॥೨೧॥

**ಯಃ ಪ್ರಿಯಾರ್ಥಂ ಮುಕುಂದಸ್ಯ ಧುಂಧುನಾಮಾऽಸುರಂ ಬಲೀ ।**
**ಸುತಾನಾಮೇಕವಿಂಶತ್ಯಾ ಸಹಸ್ರೈರಹನದ್ವೃತಃ ॥೨೨॥**

**ಯಃ** ಯಾವ ಕುವಲಯಾಶ್ವ ಎಂಬುವವನು, **ಸುತಾನಾಂ** ಮಕ್ಕಳ, **ಏಕವಿಂಶತ್ಯಾ** ಇಪ್ಪತ್ತೊಂದರ, **ಸಹಸ್ರೈಃ** ಸಹಸ್ರದಿಂದ, **ವೃತಃ** ಕೂಡಿದವನಾಗಿ, **ಮುಕುಂದಸ್ಯ** ಭಗವಂತನ (ಉದಂಕ ಎಂಬ ಮುನಿಯ) **ಪ್ರಿಯಾರ್ಥಂ** ಪ್ರೀತಿಗೋಸ್ಕರ, **ಧುಂಧುನಾಮಾ** ಧುಂಧು ಎಂಬ ಹೆಸರಿನ, **ಅಸುರಂ** ದೈತ್ಯನನ್ನು, **ಅಹನತ್** ನಿಗ್ರಹಿಸಿದನು.

**ತಾತ್ಪರ್ಯ-** ಈ ಕುವಲಯಾಶ್ವ ಎಂಬುವವನು ಇಪ್ಪತ್ತೊಂದು ಸಾವಿರ ಮಕ್ಕಳಿಂದ ಸಹಿತನಾಗಿ ಧುಂಧುಮಾರ ಎಂಬ ಹೆಸರಿನ ದೈತ್ಯನನ್ನು ಭಗವಂತನ (ಉದಂಕ ಮುನಿಯ) ಪ್ರೀತಿಗಾಗಿ ನಿಗ್ರಹಿಸಿದನು. ।।೨೨।।

**ಧುಂಧುಮಾರ ಇತಿ ಖ್ಯಾತಸ್ತತ್ಸುತಾಸ್ತೇ ಪ್ರಜಜ್ವಲುಃ ।**
**ಧುಂಧೋರ್ಮುಖಾಗ್ನಿನಾ ಸರ್ವೇ ತ್ರಯ ಏವಾವಶೇಷಿತಾಃ ।।೨೩।।**

**ಧುಂಧುಮಾರಃ ಇತಿ** ಧುಂಧುಮಾರನೆಂದು, **ಖ್ಯಾತಃ** ಪ್ರಸಿದ್ಧನಾದ, **ಧುಂಧೋಃ** ಈ ಧುಂಧುವಿನ, **ಮುಖಾಗ್ನಿನಾ** ಮುಖಾಗ್ನಿಯಿಂದ, **ತೇ** ಆ ಪ್ರಸಿದ್ಧರಾದ, **ಸರ್ವೇ** ಎಲ್ಲಾ, **ತತ್ಸುತಾಃ** ಈತನ ಮಕ್ಕಳು **ಪ್ರಜಜ್ವಲುಃ** ದಗ್ಧರಾದರು. **ತ್ರಯಃ** ಮೂರು ಮಕ್ಕಳು, **ಏವ** ಮಾತ್ರ **ಅವಶೇಷಿತಾಃ** ಉಳಿದರು.

ತಾತ್ಪರ್ಯ ಧುಂಧುಮಾರನೆಂದು ಪ್ರಸಿದ್ಧನಾದ ಇವನ ಮುಖಾಗ್ನಿಯಿಂದ ಆ ಪ್ರಸಿದ್ಧರಾದ ರಾಜನ ಮಕ್ಕಳೆಲ್ಲಾ ದಗ್ಧರಾದರು. ಮೂರು ಜನ ಮಕ್ಕಳು ಮಾತ್ರ ಉಳಿದರು. ।।೨೩।।

**ದೃಢಾಶ್ವಃ ಕಪಿಲಾಶ್ವಶ್ಚ ಭದ್ರಾಶ್ವ ಇತಿ ಭಾರತ ।**
**ದೃಢಾಶ್ವಪುತ್ರೋ ಹರ್ಯಶ್ವೋ ನಿಕುಂಭಸ್ತತ್ಸುತಃ ಸ್ಮೃತಃ ।।೨೪।।**

**ಭಾರತ!** ಪರೀಕ್ಷಿತನೇ **ದೃಢಾಶ್ವಃ, ಕಪಿಲಾಶ್ವಃ ಭದ್ರಾಶ್ವಃ, ಇತಿ** ದೃಢಾಶ್ವ, ಕಪಿಲಾಶ್ವ, ಭದ್ರಾಶ್ವ, ಈ ರೀತಿಯಾಗಿ ಮಕ್ಕಳಾದರು, **ದೃಢಾಶ್ವಪುತ್ರಃ** ದೃಢಾಶ್ವನ ಮಗನು, **ಹರ್ಯಶ್ವಃ** ಹರ್ಯಶ್ವ ಎಂಬುವನು, **ತತ್ಸುತಃ** ಈತನ ಮಗನು, **ನಿಕುಂಭಃ** ನಿಕುಂಭನೆಂದು, **ಸ್ಮೃತಃ** ಪ್ರಸಿದ್ಧನಾದನು.

**ತಾತ್ಪರ್ಯ-** ಪರೀಕ್ಷಿತನೇ! ಉಳಿದಿರುವ ಮೂರು ಮಕ್ಕಳೆಂದರೇ ೧) ದೃಢಾಶ್ವ, ೨) ಕಪಿಲಾಶ್ವ, ೩) ಭದ್ರಾಶ್ವರೆಂದು ಮೂರು ಜನರು. ಈ ದೃಢಾಶ್ವನಿಗೆ ಹರ್ಯಶ್ವ ಎಂಬುವನು, ಈತನಿಗೆ ನಿಕುಂಭ ಎಂಬುವ ಮಗನು ಪ್ರಸಿದ್ಧನಾದನು. ।।೨೪।।

**ಬರ್ಹಣಾಶ್ವೋ ನಿಕುಂಭಸ್ಯ ಕೃಶಾಶ್ವೋಽಥಾಸ್ಯ ಸೇನಜಿತ್ ।**
**ಯುವನಾಶ್ವೋಽಭವತ್ತಸ್ಯ ಸೋಽನಪತ್ಯೋ ವನಂ ಗತಃ ।।೨೫।।**

**ನಿಕುಂಭಸ್ಯ** ಈ ನಿಕುಂಭನಿಗೆ, **ಬರ್ಹಣಾಶ್ವಃ** ಬರ್ಹಣಾಶ್ವ ಎಂಬುವನು, **ಅಥ** ಅನಂತರದಲ್ಲಿ, **ಅಸ್ಯ** ಈ ಬರ್ಹಣಾಶ್ವನಿಗೆ, **ಕೃಶಾಶ್ವಃ** ಕೃಶಾಶ್ವನು ಹುಟ್ಟಿದನು **ತಸ್ಯ** ಅವನಿಗೆ **ಸೇನಜಿತ್** ಸೇನಜಿತ್ ಎಂಬುವನು **ತಸ್ಯ** ಸೇನಜಿತನಿಗೆ, **ಯುವನಾಶ್ವಃ** ಯುವನಾಶ್ವನು, **ಅಭವತ್** ಹುಟ್ಟಿದನು. **ಸಃ** ಯುವನಾಶ್ವನು **ಅನಪತ್ಯಃ**

ಮಕ್ಕಳಿಲ್ಲದವನಾಗಿ, **ಭಾರ್ಯಾಶತೇನ** ನೂರು ಹೆಂಡಂದಿರಿಂದ, **ನಿರ್ವಿಣ್ಣಃ** ನಿರ್ವಿಣ್ಣನಾಗಿ **ವನಂ** ಅರಣ್ಯವನ್ನು ಕುರಿತು **ಗತಃ** ಹೋದನು.

**ತಾತ್ಪರ್ಯ-** ನಿಕುಂಭನಿಗೆ ಬರ್ಹಣಾಶ್ವನು. ಅವನಿಗೆ ಕೃಶಾಶ್ವನು. ಅವನಿಗೆ ಸೇನಜಿತನು. ಈತನಿಗೆ ಯೌವನಾಶ್ವನು ಮಗನಾದನು. (ಈ ಯೌವನಾಶ್ವನು ನೂರು ಮಂದಿ ಹೆಂಡಂದಿರಿಂದ ಬೇಸತ್ತು ವನವನ್ನು ಕುರಿತು ಹೋದನು). ಇದು ಮುಂದಿನ ೨೬ನೇ ಪದ್ಯದಲ್ಲಿರುತ್ತೆ . ।।೨೫।।

**ಭಾರ್ಯಾಶತೇನ ನಿರ್ವಿಣ್ಣಃ ಋಷಯೋಽಸ್ಯ ಕೃಪಾಲವಃ ।**
**ಇಷ್ಟಿಂ ಸ್ಮ ವರ್ತಯಾಂಚಕ್ರುರೈಂದ್ರೀಂ ತೇ ಸುಸಮಾಹಿತಾಃ ।।೨೬।।**

(ಹಿಂದಿನ ಪದ್ಯದಲ್ಲಿ ಅನ್ವಿತವಾಗಿರುತ್ತೆ) **ಅಸ್ಯ** ಈ ರಾಜನಿಗೆ, **ಕೃಪಾಲವಃ** ದಯಾಸಮುದ್ರರಾದ, **ಋಷಯಃ** ಋಷಿಗಳು, **ಸುಸಮಾಹಿತಾಃ** ಶಾಂತ ಚಿತ್ತರಾಗಿ, **ಐಂದ್ರೀಂ** ಇಂದ್ರಸಂಬಂಧಿಯಾದ, **ಇಷ್ಟಿಂ** ಯಾಗವನ್ನು, **ವರ್ತಯಾಂಚಕ್ರುಃ** ಮಾಡಿಸಿದರು.

**ತಾತ್ಪರ್ಯ-** ಈ ರಾಜನಿಗೆ ಕೃಪಾಪೂರ್ಣರಾದ ಋಷಿಗಳು ಶಾಂತ ಚಿತ್ತರಾಗಿ, ಇಂದ್ರಸಂಬಂಧವಾದ ಯಾಗವನ್ನು ಮಾಡಿಸಿದರು. ।।೨೬।।

**ರಾಜಾ ತದ್ಯಜ್ಞಸದನಂ ಪ್ರವಿಷ್ಟೋ ನಿಶಿ ತರ್ಷಿತಃ ।**
**ದೃಷ್ಟ್ವಾ ಶಯಾನಾನ್ವಿಪ್ರಾಂಸ್ತಾನ್ ಪಪೌ ಮಂತ್ರಜಲಂ ಸ್ವಯಮ್।।೨೭।।**

**ರಾಜಾ** ರಾಜನು, **ತರ್ಷಿತಃ** ಬಾಯಾರಿಸಿದವನಾಗಿ, **ಯಜ್ಞಸದನಂ** ಯಜ್ಞಶಾಲೆಯನ್ನು **ನಿಶಿ** ರಾತ್ರಿಯಲ್ಲಿ, **ಪ್ರವಿಷ್ಟಃ** ಪ್ರವೇಶ ಮಾಡಿದವನಾಗಿ, **ಶಯಾನಾನ್** ನಿದ್ರಾವಶರಾದ, **ವಿಪ್ರಾನ್** ಬ್ರಾಹ್ಮಣರನ್ನು, **ದೃಷ್ಟ್ವಾ** ನೋಡಿ, **ಮಂತ್ರಜಲಂ** ಮಂತ್ರದಿಂದ ಪವಿತ್ರವಾದ ಹೆಂಡತಿಗೆ ಕೊಡಬೇಕಾದ, ನೀರನ್ನು, **ಸ್ವಯಂ** ತಾನಾಗಿಯೇ **ಪಪೌ** ಪಾನಮಾಡಿದನು.

**ತಾತ್ಪರ್ಯ-** ಆ ಯೌವನಾಶ್ವರಾಜನು ರಾತ್ರಿಯಲ್ಲಿ ಬಾಯಾರಿಸಿದವನಾಗಿ ಯಜ್ಞಶಾಲೆಯನ್ನು ಪ್ರವೇಶ ಮಾಡಿದನು. ಅಲ್ಲಿ ಬ್ರಾಹ್ಮಣರು ನಿದ್ರಾವಶರಾದುದನ್ನು ನೋಡಿ ಹೆಂಡತಿಗೆ ಕೊಡಬೇಕಾದ ಮಂತ್ರಪೂತವಾದ ಜಲವನ್ನು ತಾನೇ ಕುಡಿದನು. ।।೨೭।।

**ಉತ್ಥಿತಾಸ್ತೇ ನಿಶಾಮ್ಯಾಥ ವ್ಯುದಕಂ ಕಲಶಂ ಪ್ರಭೋ ।**
**ಪಪ್ರಚ್ಛುಃ ಕಸ್ಯ ಕರ್ಮೇದಂ ಪೀತಂ ಪುಂಸವನಂ ಜಲಮ್ ।।೨೮।।**

**ಪ್ರಭೋ!** ರಾಜನೇ! **ಅಥ** ಅನಂತರದಲ್ಲಿ, **ಉತ್ಥಿತಾಃ** ನಿದ್ರೆಯಿಂದ ಎಚ್ಚರಗೊಂಡ, **ತೇ** ಆ ಬ್ರಾಹ್ಮಣರು, **ಪುಂಸವನಂ** ಪುತ್ರೋತ್ಪತ್ತಿಯಾಗಲೆಂದು ಅಭಿಮಂತ್ರಿತವಾದ, **ಕಲಶಂ** ಕಲಶವನ್ನು, **ವ್ಯುದಕಂ** ನೀರಿಲ್ಲದ್ದನ್ನು **ನಿಶಾಮ್ಯ** ನೋಡಿ, **ಇದಂ** ಈ ಪುತ್ರೋತ್ಪತ್ತಿಗಾಗಿ ಅಭಿಮಂತ್ರಿತವಾದ **ಜಲಂ** ನೀರು **ಪೀತಂ** ಯಾರಿಂದ, ಪಾನ ಮಾಡಲ್ಪಟ್ಟಿತು, **ಕಸ್ಯ** ಯಾರದ್ದೂ **ಇದಂ** ಈ **ಕರ್ಮ** ಕರ್ಮವು, (ಯಾರು ಮಾಡಿದ್ದಾರೆಂದು) **ಪಪ್ರಚ್ಛ** ಕೇಳಿದರು.

**ತಾತ್ಪರ್ಯ-** ರಾಜನೇ! ಅನಂತರದಲ್ಲಿ ನಿದ್ರೆಯಿಂದ ಎಚ್ಚರಗೊಂಡ ಆ ಬ್ರಾಹ್ಮಣರು ನೀರಿಲ್ಲದ ಕಲಶವನ್ನು ನೋಡಿ, ಈ ಪುತ್ರೋತ್ಪತ್ತಿಯಾಗಲೆಂದು ಅಭಿಮಂತ್ರಿತವಾದ ನೀರನ್ನು ಕುಡಿದವರು ಯಾರು ಎಂದು ಕೇಳಿದರು. ॥೨೮॥

**ರಾಜ್ಞಾ ಪೀತಂ ವಿದಿತ್ವಾಽಥ ಈಶ್ವರಪ್ರಹಿತೇನ ತೇ ।**
**ಈಶ್ವರಾಯ ನಮಶ್ಚಕ್ರುರಹೋ ದೈವಬಲಂ ಬಲಮ್ ॥೨೯॥**

**ಈಶ್ವರಪ್ರಹಿತೇನ** ಭಗವಂತನಿಂದ ಪ್ರೇರಿತನಾದ, **ರಾಜ್ಞಾ** ರಾಜನಿಂದ, **ಪೀತಂ** ಕುಡಿಯಲ್ಪಟ್ಟದ್ದನ್ನು **ವಿದಿತ್ವಾ** ತಿಳಿದು, **ತೇ** ಆ ಬ್ರಾಹ್ಮಣರು, **ದೈವಬಲಂ** ದೈವಬಲವೇ, **ಬಲಂ** ಬಲವೆಂದು **ಅಹೋ** ಆಶ್ಚರ್ಯ ಎನ್ನುತ್ತಾ, **ಈಶ್ವರಾಯ** ಭಗವಂತನಿಗೆ, **ನಮಃ** ನಮಸ್ಕಾರವನ್ನು **ಚಕ್ರುಃ** ಮಾಡಿದರು.

**ತಾತ್ಪರ್ಯ-** ಈ ರಾಜನು ಭಗವಂತನಿಂದ ಪ್ರೇರಿತನಾಗಿ, ಈ ಜಲವನ್ನು ಪಾನ ಮಾಡಿರುತ್ತಾನೆಂದು ಆ ಬ್ರಾಹ್ಮಣರು, ತಿಳಿದು ಅಹೋ! ಆಶ್ಚರ್ಯವು ದೈವಬಲವೇ ಬಲವು ಎಂದು ಹೇಳುತ್ತಾ ಈಶ್ವರನನ್ನು ನಮಸ್ಕರಿಸಿದರು.

**ತತಃ ಕಾಲ ಉಪಾವೃತ್ತೇ ಕುಕ್ಷಿಂ ನಿರ್ಭಿದ್ಯ ದಕ್ಷಿಣಮ್ ।**
**ಯುವನಾಶ್ವಸ್ಯ ತನಯಶ್ಚಕ್ರವರ್ತೀ ಜಜಾನ ಹ ॥೩೦॥**

**ತತಃ** ಅನಂತರದಲ್ಲಿ, **ಕಾಲೇ** ಹತ್ತು ತಿಂಗಳ ಕಾಲವು, **ಉಪಾವೃತ್ತೇ** ಕಳೆಯುತ್ತಿರಲು, **ಯೌವನಾಶ್ವಸ್ಯ** ಯೌವನಾಶ್ವನ, **ದಕ್ಷಿಣಂ** ಬಲಭಾಗದ, **ಕುಕ್ಷಿಂ** ಉದರಭಾಗವನ್ನು **ನಿರ್ಭಿದ್ಯ** ಸೀಳಿ, **ಚಕ್ರವರ್ತೀ** ಚಕ್ರವರ್ತಿಯಾದ, **ತನಯಃ** ಮಗನು, **ಜಜಾನ** ಜನ್ಮತಾಳಿದನು. **ಹ** ಆಶ್ಚರ್ಯವು.

**ತಾತ್ಪರ್ಯ-** ನಂತರ ಹತ್ತು ತಿಂಗಳ ಕಾಲ ಕಳೆಯುತ್ತಿರಲು, ಯೌವನಾಶ್ವನ ಬಲ ಭಾಗದ ಉದರವನ್ನು ಸೀಳಿ ಚಕ್ರವರ್ತಿಯು ಮಗನಾಗಿ ಜನಿಸಿದನು. ॥೩೦॥

**ಕಂ ಧಾಸ್ಯತಿ ಕುಮಾರೋಽಯಂ ಸ್ತನ್ಯೇ ರೋರೂಯತೇ ಭೃಶಮ್ ।**
**ಮಾಂ ಧಾತ ವತ್ಸ ಮಾರೋದೀರಿತೀಂದ್ರೋ ದೇಶಿನೀಮದಾತ್ ॥೩೧॥**

**ಸ್ತನ್ಯಃ** ಸ್ತನಪಾನವನ್ನು ಅಪೇಕ್ಷಿಸುವ, **ಅಯಂ** ಈ ಬಾಲಕನು, **ಭೃಶಂ** ಹೆಚ್ಚಾಗಿ, **ರೋರೂಯತೇ** ರೋದನ ಮಾಡುತ್ತದೆ. **ಕುಮಾರಃ** ಈ ಬಾಲಕನು, **ಕಂ** ಯಾವ ಸ್ತ್ರೀ ಜನರ ಸ್ತನವನ್ನು, **ಧಾಸ್ಯತಿ** ಪಾನ ಮಾಡುತ್ತಾನೆ, **ಇತಿ** ಈ ರೀತಿ ಋಷಿಗಳು ವಿಚಾರ ಮಾಡುವಾಗ ಯಜ್ಞದಲ್ಲಿ ಆರಾಧಿತನಾದ **ಇಂದ್ರಃ** ಇಂದ್ರನು, ಹೇ ವತ್ಸ! ಎಲೋ ಮಗುವೇ! **ಮಾ ರೋದೀಃ** ಅಳಬೇಡ, **ಮಾಂ ಧಾತಃ** ನನ್ನನ್ನು ಪಾನಮಾಡು, **ಇತಿ** ಹೀಗೆಂದು ಹೇಳಿ, **ದೇಶಿನೀಂ** ತರ್ಜನಿ, (ಅಂಗುಲೀಂ) ಬೆರಳನ್ನು, **ಅದಾತ್** (ಚೀಪಲು) ಕೊಟ್ಟನು. ಈತನಿಗೆ ಮಾಂಧಾತನೆಂದು ಹೆಸರಾಯಿತು.

**ತಾತ್ಪರ್ಯ-** ಸ್ತನ್ಯಪಾನವನ್ನು ಅಪೇಕ್ಷಿಸುವ ಆ ಬಾಲಕನು ಪುನಃ ಪುನಃ ರೋದನ ಮಾಡುತ್ತಿದ್ದಾನೆ. ಇವನು ಯಾರ ಸ್ತನ್ಯವನ್ನು ಪಾನ ಮಾಡುತ್ತಾನೆ, ಎಂದು ಯೋಚಿಸಿ ಇಂದ್ರನು ಮಗುವಿನ ಬಾಯಲ್ಲಿ ತನ್ನ ತರ್ಜನಿ ಬೆರಳನ್ನು ಇಟ್ಟನು. ಇದರಿಂದ ಇವನಿಗೆ ''ಮಾಂಧಾತ'' ಎಂದು ಹೆಸರಾಯಿತು. ||೩೦||

**ನ ಮಮಾರ ಪಿತಾ ತಸ್ಯ ವಿಪ್ರದೇವಪ್ರಸಾದತಃ |**
**ಯುವನಾಶ್ವೋಽಥ ತತ್ರೈವ ತಪಸಾ ಸಿದ್ಧಿಮನ್ವಗಾತ್ ||೩೧||**

**ತಸ್ಯ** ಈ ಮಾಂಧಾತೃವಿಗೆ, **ಪಿತಾ** ತಂದೆಯಾದ ಯುವನಾಶ್ವನು, **ವಿಪ್ರದೇವ-ಪ್ರಸಾದತಃ** ಬ್ರಾಹ್ಮಣರ ಮತ್ತು ದೇವರ ದಯದಿಂದ ಭಿನ್ನಕುಕ್ಷಿಯಾದರೂ, **ನ ಮಮಾರ** ಮರಣ ಹೊಂದಲಿಲ್ಲ. ಕಾಲಾಂತರದಲ್ಲಿ, **ತತ್ರ ಏವ** ಯಜ್ಞಸದನದಲ್ಲಿಯೇ **ತಪಸಾ** ತಪಸ್ಸಿನಿಂದ, **ಸಿದ್ಧಿಂ** ಸಿದ್ಧಿಯನ್ನು **ಅನ್ವಗಾತ್** ಹೊಂದಿದನು.

**ತಾತ್ಪರ್ಯ-** ಈ ಮಾಂಧಾತೃವಿನ ತಂದೆಯಾದ ಯುವನಾಶ್ವನು ದೇವ-ಬ್ರಾಹ್ಮಣರ ದಯೆಯಿಂದ ಮರಣ ಹೊಂದಲಿಲ್ಲ. ಕಾಲಾಂತರದಲ್ಲಿ ಯಜ್ಞ-ಮಂದಿರದಲ್ಲೇ ತಪಸ್ಸಿನಿಂದ ಸಿದ್ಧಿ ಹೊಂದಿ ನಂತರ ಮೃತನಾದನು. ||೩೧||

**ತ್ರಸದ್ದಸ್ಯುರಿತೀಂದ್ರೋಽಂಗ ವಿದಧೇ ನಾಮ ತಸ್ಯ ವೈ |**
**ಯಸ್ಮಾತ್ತ್ರಸಂತಿ ಹ್ಯುದ್ವಿಗ್ನಾ ದಸ್ಯವೋ ರಾವಣಾದಯಃ ||೩೨||**

**ಹೇ ಅಂಗ!** ಎಲೋ ರಾಜನೇ! **ಇಂದ್ರಃ** ಇಂದ್ರನು, **ತಸ್ಯ** ಆ ಮಾಂಧಾತೃವಿಗೆ **ತ್ರಸದ್ದಸ್ಯುಃ** ತ್ರಸದ್ದಸ್ಯು, **ಇತಿ** ಎಂದು, **ನಾಮ** ಹೆಸರನ್ನು, **ವಿದಧೇ** ಇಟ್ಟನು, ಯಾಕೆಂದರೆ **ಯಸ್ಮಾತ್** ಯಾವ ಕಾರಣದಿಂದ, **ಉದ್ವಿಗ್ನಾಃ** ಉದ್ವಿಗ್ನರಾದ, **ರಾವಣಾದಯಃ** ರಾವಣನೇ ಮೊದಲಾದ **ದಸ್ಯವಃ** ಕಳ್ಳರು, **ತ್ರಸಂತಿ** ಭೀತರಾಗುತ್ತಾರೆ.

**ತಾತ್ಪರ್ಯ-** ಹೇ ರಾಜನೇ! ಇಂದ್ರನು ಆ ಮಾಂಧಾತೃವಿಗೆ ತ್ರಸದ್ದಸ್ಯು ಎಂದು ನಾಮಕರಣ ಮಾಡಿದನು. ಕಾರಣವೇನೆಂದರೆ ರಾವಣಾದಿಗಳೂ ಸಹ ಈತನಿಂದ ಭೀತರಾಗಿ ಉದ್ವಿಗ್ನರಾಗಿರುತ್ತಾರೆ. ।।೩೩।।

**ಯೌವನಾಶ್ವೋऽಥ ಮಾಂಧಾತಾ ಚಕ್ರವರ್ತ್ಯವನೀಂ ಪ್ರಭುಃ ।**
**ಸಪ್ತದ್ವೀಪವತೀಮೇಕಃ ಶಶಾಸಾಚ್ಯುತತೇಜಸಾ ।।೩೪।।**

**ಅಥ** ಅನಂತರದಲ್ಲಿ, **ಯೌವನಾಶ್ವಃ** ಯುವನಾಶ್ವನ ಮಗನಾದ, **ಮಾಂಧಾತಾ** ಮಾಂಧಾತನು, **ಚಕ್ರವರ್ತೀ** ಚಕ್ರವರ್ತಿಯಾಗಿ, **ಪ್ರಭುಃ** ಸಮರ್ಥನಾಗಿ, **ಸಪ್ತದ್ವೀಪವತೀಂ** ಸಪ್ತದ್ವೀಪಾತ್ಮಕವಾದ, **ಅವನೀಂ** ಭೂಮಂಡಲವನ್ನು, **ಏಕಃ** ಒಬ್ಬನೇ, **ಅಚ್ಯುತತೇಜಸಾ** ತನ್ನಲ್ಲಿ ಪ್ರವಿಷ್ಟವಾದ ವಿಭೂತಿರೂಪದ ತೇಜಸ್ಸಿನಿಂದ **ಶಶಾಸ** ಶಾಸನ ಮಾಡಿದನು.

**ತಾತ್ಪರ್ಯ-** ಅನಂತರದಲ್ಲಿ ಯುವನಾಶ್ವನ ಮಗನಾದ ಮಾಂಧಾತ ಚಕ್ರವರ್ತಿಯು ತನ್ನಲ್ಲಿ ಪ್ರವಿಷ್ಟವಾದ ಭಗವಂತನ ತೇಜಸ್ಸಿನಿಂದ, ಸಪ್ತದ್ವೀಪವತಿಯಾದ ಭೂಮಂಡಲವನ್ನು ಏಕಚಕ್ರಾಧಿಪತಿಯಾಗಿ ಶಾಸನ ಮಾಡಿದನು.

**ಈಜೇ ಚ ಯಜ್ಞಂ ಕ್ರತುಭಿರಾತ್ಮವಿದ್ಭೂರಿದಕ್ಷಿಣೈಃ ।**
**ಸರ್ವದೇವಮಯಂ ದೇವಂ ಸರ್ವಾತ್ಮಕಮತೀಂದ್ರಿಯಮ್ ।।೩೫।।**

**ಆತ್ಮವಿತ್** ಪರಮಾತ್ಮಜ್ಞಾನಿಯಾದ ಆ ರಾಜನು, **ಸರ್ವದೇವಮಯಂ** ಸರ್ವದೇವಪ್ರಧಾನವಾದ, **ಸರ್ವಾತ್ಮಕಂ** ಮಂತ್ರ, ತಂತ್ರ ದ್ರವ್ಯಾದಿ ಎಲ್ಲಾ ವಸ್ತುಗಳಲ್ಲೂ ವ್ಯಾಪ್ತನಾದ **ಅತೀಂದ್ರಿಯಂ** ಇಂದ್ರಿಯಾಗೋಚರನಾದ, **ಯಜ್ಞಂ** ಯಜ್ಞನಾಮಕನಾದ ಭಗವಂತನನ್ನು, **ಕ್ರತುಭಿಃ** ಯಜ್ಞಗಳಿಂದ, **ಈಜೇ** ಪೂಜಿಸಿದನು. (ಯಜ್ಞ ಮಾಡಿದನು).

**ತಾತ್ಪರ್ಯ-** ಪರಮಾತ್ಮ ಜ್ಞಾನಿಯಾದ ಆ ರಾಜನು ಸರ್ವದೇವಪ್ರಧಾನನಾದ ಸರ್ವತ್ರ ವ್ಯಾಪ್ತನಾದ ಇಂದ್ರಿಯಗೋಚರನಲ್ಲದ ಯಜ್ಞನಾಮಕ ಭಗವಂತನನ್ನು ಪೂಜಿಸಿದನು (ಯಜ್ಞಮಾಡಿದನು).।।೩೫।।

**ದ್ರವ್ಯಂ ಮಂತ್ರೋ ವಿಧಿರ್ಯಜ್ಞೋ ಯಜಮಾನಸ್ತಥಾರ್ತ್ವಿಜಃ ।**
**ಧರ್ಮೋ ದೇಶಶ್ಚ ಕಾಲಶ್ಚ ಸರ್ವಮೇತದ್ಯದಾತ್ಮಕಮ್ ।।೩೬।।**

ಆ ರಾಜನು, **ದ್ರವ್ಯಂ** ಯಜ್ಞದ್ರವ್ಯವು, **ಮಂತ್ರಃ ವಿಧಿಃ** ಮಂತ್ರವು, ವಿಧಾನವು, **ಯಜ್ಞಃ** ಯಜ್ಞವು, **ಯಜಮಾನಃ** ಯಜಮಾನನು, **ತಥಾ** ಹಾಗೂ, **ಋತ್ವಿಜಃ**

ಋತ್ವಿಜರುಗಳು, **ಧರ್ಮಃ** ಧರ್ಮವು, **ದೇಶಃ** ದೇಶವು, **ಕಾಲಃ** ಕಾಲವು, **ಸರ್ವಂ ಏತತ್** ಈ ಎಲ್ಲವೂ, **ಯದಾತ್ಮಕಂ** ಭಗವಂತನ ಅಧೀನವೆಂದು ಅನುಸಂಧಾನ ಮಾಡಿದನು.

**ತಾತ್ಪರ್ಯ-** ಆ ರಾಜನು ಯಜ್ಞಸಂಬಂಧವಾದ ದ್ರವ್ಯ , ಮಂತ್ರ , ವಿಧಿ, ಯಜ್ಞ , ಯಜಮಾನ, ಋತ್ವಿಜರು, ಧರ್ಮ, ದೇಶ, ಕಾಲ ಈ ಎಲ್ಲವೂ ಭಗವಂತನ ಅಧೀನವೆಂದು ಅನುಸಂಧಾನ ಮಾಡಿದನು. ।।೩೬।।

**ಯಾವತ್ಸೂರ್ಯ ಉದೇತಿ ಸ್ಮ ಯಾವಚ್ಚಂದ್ರಃ ಪ್ರತಿಷ್ಠತಿ ।**
**ಸರ್ವಂ ತದ್ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ।।೩೭।।**

**ಯಾವತ್** ಎಷ್ಟು ಪ್ರದೇಶದಲ್ಲಿ **ಸೂರ್ಯಃ** ಸೂರ್ಯನು, **ಉದೇತಿ ಸ್ಮ** ಪ್ರಕಾಶನಾಗುತ್ತಾನೋ, **ಯಾವತ್** ಎಷ್ಟು ಪ್ರದೇಶದಲ್ಲಿ, **ಚಂದ್ರಃ** ಚಂದ್ರನು **ಪ್ರತಿಷ್ಠತಿ ಸ್ಮ** ಪ್ರಕಾಶದಿಂದ ಇರುತ್ತಾನೋ, **ತತ್** ಆ **ಸರ್ವಂ** ಎಲ್ಲಾ ಕ್ಷೇತ್ರವು, **ಯೌವನಾಶ್ವಸ್ಯ** ಯುವನಾಶ್ವನ ಮಗನಾದ, **ಮಾಂಧಾತುಃ** ಮಾಂಧಾತೃವಿನ **ಕ್ಷೇತ್ರಂ** ರಾಜ್ಯವೆಂದು, **ಉಚ್ಯತೇ** ಹೇಳಿಸಿಕೊಳ್ಳಲ್ಪಡುತ್ತದೆ.

**ತಾತ್ಪರ್ಯ-** ಯಾವ ಪ್ರದೇಶದಲ್ಲಿ ಸೂರ್ಯನು ಪ್ರಕಾಶಿಸುತ್ತಾನೋ, ಯಾವ ಸ್ಥಳದಲ್ಲಿ ಚಂದ್ರನು ಬೆಳಗುತ್ತಾನೋ, ಆ ಎಲ್ಲಾ ಸ್ಥಳಗಳು ಮಾಂಧಾತೃವಿನ ರಾಜ್ಯವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ।।೩೭।।

**ಶಶಬಿಂದೋರ್ದುಹಿತರಿ ಬಿಂದುಮತ್ಯಾಮಧಾನ್ನೃಪಃ ।**
**ಪುರುಕುತ್ಸಂ ಅಂಬರೀಷಂ ಮುಚುಕುಂದಂ ಚ ಯೋಗಿನಮ್ ।।೩೮।।**

**ನೃಪಃ** ಮಾಂಧಾತೃರಾಜನು, **ಶಶಬಿಂದೋಃ** ಶಶಬಿಂದುವಿನ, **ದುಹಿತರಿ** ಮಗಳಾದ, **ಬಿಂದುಮತ್ಯಾಂ** ಬಿಂದುಮತಿ ಎಂಬ ಹೆಂಡತಿಯಲ್ಲಿ, ೧) **ಪುರುಕುತ್ಸಂ** ಪುರುಕುತ್ಸ ಎಂಬುವನನ್ನು ೨) **ಅಂಬರೀಷಂ** ಅಂಬರೀಷ ಎಂಬುವನನ್ನು ೩) **ಮುಚುಕುಂದಂ** ಮುಚುಕುಂದ ಎಂಬ, **ಯೋಗಿನಂ** ಯೋಗಿಯನ್ನು, **ಅಧಾತ್** ಪಡೆದನು.

**ತಾತ್ಪರ್ಯ-** ಆ ಮಾಂಧಾತೃರಾಜನು ಶಶಬಿಂದುವಿನ ಮಗಳಾದ ಬಿಂದುಮತಿಯಲ್ಲಿ ೧) ಪುರುಕುತ್ಸ ೨) ಅಂಬರೀಷ ೩) ಮುಚುಕುಂದ ಈ ರೀತಿಯಾಗಿ ಮೂರು ಮಕ್ಕಳನ್ನು ಪಡೆದನು. ।।೩೮।।

**ತೇಷಾಂ ಸ್ವಸಾರಃ ಪಂಚಾಶತ್ಸೌಭರಿಂ ವವ್ರಿರೇ ಪತಿಮ್ ।।೩೯।।**

**ತೇಷಾಂ** ಅವರ, **ಸ್ವಸಾರಃ** ಸಹೋದರಿಯರಾದ, **ಪಂಚಾಶತ್** ಐವತ್ತು ಜನ ಕನ್ಯೆಯರು, **ಸೌಭರಿಂ** ಸೌಭರಿ ಋಷಿಗಳನ್ನು **ವವ್ರಿರೇ** ಪತಿಯನ್ನಾಗಿ ಪಡೆದರು.

**ತಾತ್ಪರ್ಯ-** ಅವರ ಸಹೋದರಿಯರಾದ ಐವತ್ತು ಜನ ರಾಜಕನ್ಯೆಯರು ಸೌಭರಿಋಷಿಗಳನ್ನು ವರಿಸಿದರು. ||೩೯||

**ಯಮುನಾಂತರ್ಜಲೇ ಮಜ್ಜಂಸ್ತಪ್ಯಮಾನಃ ಪರಂತಪಃ ।**
**ನಿರ್ವೃತಿಂ ಮೀನರಾಜಸ್ಯ ವೀಕ್ಷ್ಯ ಮೈಥುನಧರ್ಮಿಣಃ ||೪೦||**

**ಜಾತಸ್ಪೃಹೋ ನೃಪಂ ವಿಪ್ರಃ ಕನ್ಯಾಮೇಕಾಮಯಾಚತ ।**
**ಸೋಽಪ್ಯಾಹ ಗೃಹ್ಯತಾಂ ಬ್ರಹ್ಮನ್ ಕಾಮಂ ಕನ್ಯಾ ಸ್ವಯಂವರೇ ||೪೧||**

**ಪರಂತಪಃ** ತೇಜಸ್ವಿಗಳಾದ ಸೌಭರಿ ಋಷಿಗಳು, **ಯಮುನಾಂತರ್ಜಲೇ** ಯಮುನೆಯ ನೀರಿನ ಮಧ್ಯದಲ್ಲಿ, **ತಪ್ಯಮಾನಃ** ತಪಸ್ಸು ಮಾಡುತ್ತಾ , **ಮಜ್ಜನ್** ಸ್ನಾನಮಾಡುತ್ತಾ **ಮೈಥುನಧರ್ಮಿಣಃ** ಮೈಥುನದಲ್ಲಿರುವ **ಮೀನರಾಜಸ್ಯ** ಮೀನರಾಜನ, **ನಿರ್ವೃತಿಂ** ಸಂತೋಷವನ್ನು **ವೀಕ್ಷ್ಯ** ನೋಡಿ, ||೪೦||

ತೇಜಸ್ವಿಯಾದ ಸೌಭರಿ ಋಷಿಗಳು ಯಮುನೆಯ ನೀರಿನ ಮಧ್ಯದಲ್ಲಿ, ತಪಸ್ಸು ಮಾಡುತ್ತಾ , ಸ್ನಾನ ಮಾಡುತ್ತಾ , ಮೈಥುನದಲ್ಲಿರುವ (ರತಿವಿಲಾಸದಲ್ಲಿ ಆಸಕ್ತವಾದ) ಮೀನಿನ ರಾಜನ ಆ ಮದವನ್ನು ನೋಡಿ.

**ಜಾತಸ್ಪೃಹಃ** ಆಕಾಂಕ್ಷೆ ಉಳ್ಳವನಾದ, **ವಿಪ್ರಃ** ಬ್ರಾಹ್ಮಣರಾದ ಆ ಸೌಭರಿಗಳು, **ನೃಪಂ** ರಾಜನನ್ನು , **ಏಕಾಂ** ಒಬ್ಬ, **ಕನ್ಯಾಂ** ಕನ್ಯೆಯನ್ನು , **ಅಯಾಚತ** ಯಾಚಿಸಿದನು. **ಸಃ ಅಪಿ** ಆ ರಾಜನಾದರೂ, **ಬ್ರಹ್ಮನ್** ಜ್ಞಾನಿಗಳೇ, **ಸ್ವಯಂವರೇ** ಸ್ವಯಂವರದಲ್ಲಿ, **ಕಾಮಂ** ತಮ್ಮ ಅಪೇಕ್ಷೆಯಂತೆ, **ಕನ್ಯಾ** ಕನ್ಯೆಯು **ಗೃಹ್ಯತಾಂ** ಅಂಗೀಕರಿಸಲ್ಪಡಲಿ, ಹೀಗೆಂದು, **ಆಹ** ಹೇಳಿದನು.

**ತಾತ್ಪರ್ಯ-** ಮೈಥುನಧರ್ಮದಲ್ಲಿ ಆಸಕ್ತನಾದ ಆನಂದ ಹೊಂದಿದ ಆ ಮೀನಿನ ರಾಜನನ್ನು ನೋಡಿದ, ಆ ಋಷಿಯು ಈ ರತಿವಿಲಾಸದ ಆನಂದ ಪಡೆಯಬೇಕೆಂಬ ಅಪೇಕ್ಷೆ ಉಳ್ಳವನಾಗಿ ಒಬ್ಬ ಕನ್ಯೆಯನ್ನು ತಮಗೆ ಕೊಡುವಂತೆ ರಾಜನನ್ನು ಕೇಳಿಕೊಂಡನು. ರಾಜನು ''ಜ್ಞಾನಿಗಳೇ! ಸ್ವಯಂವರದಲ್ಲಿ ನೀವು ಅಪೇಕ್ಷಿಸಿದಂತೆ ಕನ್ಯೆಯನ್ನು ಅಂಗೀಕರಿಸಿರಿ'' ಎಂದು ಹೇಳಿದನು. ||೪೧||

**ಸ ವಿಚಿಂತ್ಯಾಪ್ರಿಯಃ ಸ್ತ್ರೀಣಾಂ ಜರಠೋಽಯಮಸಮ್ಮತಃ ।**
**ವಲೀ ಪಲಿತ ಏಜತ್ಕ ಇತ್ಯಹಂ ಪ್ರತ್ಯುದಾಹೃತಃ ||೪೨||**

**ಸಾಧಯಿಷ್ಯೇ ತಥಾತ್ಮಾನಂ ಸುರಸ್ತ್ರೀಣಾಮಭೀಪ್ಸಿತಮ್ ।**
**ಕಿಂ ಪುನರ್ಮನುಜಸ್ತ್ರೀಣಾಮಿತಿ ವ್ಯವಸಿತಃ ಪ್ರಭುಃ ॥೪೩॥**

**ಅಯಂ** ಇವನು, **ಜರಠಃ** ವೃದ್ಧನು, **ಸ್ತ್ರೀಣಾಂ** ಸ್ತ್ರೀಯರಿಗೆ, **ಅಸಮ್ಮತಃ** ಅಸಮ್ಮತನು, **ಅಪ್ರಿಯಃ** ಅಪ್ರಿಯನು, ಆಗಿದ್ದಾನೆಂದು **ವಲೀ** ಜೋತು ಬಿದ್ದಿರುವ ಚರ್ಮ ಉಳ್ಳವನು, **ಪಲಿತಃ** ಬಿಳಿಯಾದ ಕೇಶ ಉಳ್ಳವನು, **ಏಜತ್ಕಃ** ನಡುಗುವವನು, ಹೀಗೆಂದು **ವಿಚಿಂತ್ಯ** ಯೋಚಿಸಿ, **ಅಹಂ** ನಾನು (ರಾಜನಿಂದ) **ಇತಿ** ಹೀಗೆಂದು, **ಪ್ರತ್ಯುದಾಹೃತಃ** ಹೇಳಿಸಿಕೊಳ್ಳಲ್ಪಟ್ಟಿರುತ್ತೇನೆ.

**ಅಹಂ** ನಾನು, **ಸುರಸ್ತ್ರೀಣಾಂ** ದೇವತಾಸ್ತ್ರೀಯರಿಗೆ **ಈಪ್ಸಿತಂ** ಇಷ್ಟವಾದದ್ದನ್ನಾಗಿ, **ಆತ್ಮಾನಂ** ನನ್ನನ್ನು, **ಸಾಧಯಿಷ್ಯೇ** ಸಾಧಿಸುತ್ತೇನೆ, **ಮನುಜಸ್ತ್ರೀಣಾಂ** ಮನುಜ ಸ್ತ್ರೀಯರುಗಳಿಗೆ, **ಕಿಂ ಪುನಃ** ಹೇಳತಕ್ಕದ್ದೇನು, **ಇತಿ** ಈ ರೀತಿಯಾಗಿ, **ಪ್ರಭುಃ** ಸಮರ್ಥರಾದ ಮುನಿಗಳು, **ವ್ಯವಸಿತಃ** ನಿಶ್ಚಯ ಮಾಡಿದರು.

**ತಾತ್ಪರ್ಯ-** ಈ ಋಷಿಯು ವೃದ್ಧನು, ಸ್ತ್ರೀಯರಿಗೆ ಅಸಮ್ಮತನು, ಅಪ್ರಿಯನೂ, ಆಗಿದ್ದಾನೆ. ಈತನ ಚರ್ಮವು ಜೊತು ಬಿದ್ದಿರುತ್ತದೆ. ಕೇಶಗಳು ಬೆಳ್ಳಗಾಗಿರುತ್ತವೆ, ದೇಹವು ನಡುಗುತ್ತದೆ'' ಆದ್ದರಿಂದ ಈತನನ್ನು ನನ್ನ ಮಕ್ಕಳು ಸಮ್ಮತಿಸುವುದಿಲ್ಲ. ಹೀಗೆಂದು ಯೋಚಿಸಿ ರಾಜನು ನನಗೆ ಈ ಮಾತನ್ನು ಹೇಳಿರುತ್ತಾನೆ. ನಾನು ದೇವತಾಸ್ತ್ರೀಯರನ್ನು ಬೆರಗುಗೊಳಿಸುವ ಸೌಂದರ್ಯವನ್ನು ಸಾಧಿಸುತ್ತೇನೆ. ಈ ಮಾನವಸ್ತ್ರೀಯರ ಪಾಡೇನು? ಎಂದು ಸಮರ್ಥರಾದ ಮುನಿಗಳು ಈ ರೀತಿಯಾಗಿ ನಿಶ್ಚಯ ಮಾಡಿದರು. ॥೪೨-೪೩ ॥

**ಮುನಿಃ ಪ್ರವೇಶಿತಃ ಕ್ಷತ್ರಾ ಕನ್ಯಾಂತಃಪುರಮೃದ್ಧಿಮತ್ ।**
**ವೃತಶ್ಚ ರಾಜಕನ್ಯಾಭಿರೇಕಃ ಪಂಚಾಶತಾ ವರಃ ॥೪೪॥**

**ಮುನಿಃ** ಈ ಸೌಭರಿಯು, **ಕ್ಷತ್ರಾ** ದ್ವಾರಪಾಲಕನಿಂದ, **ಋದ್ಧಿಮತ್** ಸಮೃದ್ಧವಾದ, **ಕನ್ಯಾಂತಃಪುರಂ** ಕನ್ಯೆಯರ ಅಂತಃಪುರವನ್ನು, **ಪ್ರವೇಶಿತಃ** ಪ್ರವೇಶಿಸಲ್ಪಟ್ಟನು, **ಪಂಚಾಶತಾ ರಾಜಕನ್ಯಾಭಿಃ** ಐವತ್ತು ರಾಜಕನ್ಯೆಯರುಗಳಿಂದ **ಏಕಃ** ಒಬ್ಬನೇ, **ವರಃ** ಪತಿಯಾಗಿ, (**ವೃತಃ** ಅಂಗೀಕರಿಸಲ್ಪಟ್ಟನು.)

**ತಾತ್ಪರ್ಯ-** ಈ ಸೌಭರಿ ಋಷಿಯನ್ನು ದ್ವಾರಪಾಲಕನು ಅಂತಃಪುರದೊಳಗೆ ಪ್ರವೇಶ ಮಾಡಿಸಿದನು. ಐವತ್ತು ಜನ ರಾಜಕನ್ಯೆಯರು ಈತನೊಬ್ಬನನ್ನು ವರನನ್ನಾಗಿ ಅಂಗೀಕರಿಸಿದರು. ಈತನ ಸೌಂದರ್ಯಕ್ಕೆ ಮೆಚ್ಚಿದರು. ॥೪೪॥

**ತಾಸಾಂ ಕಲಿರಭೂದ್ಭೂಯಾಂಸ್ತದರ್ಥೇಽಪೋಹ್ಯ ಸೌಹೃದಮ್ ।**
**ಮಮಾನುರೂಪೋ ನಾಯಂ ವ ಇತಿ ತದ್ಗತಚೇತಸಾಮ್ ॥೪೫॥**

**ತದ್ಗತಚೇತಸಾಂ** ಆ ಮುನಿಯನ್ನು ವಿವಾಹಮಾಡಿಕೊಳ್ಳುವುದರಲ್ಲಿ ಆಸಕ್ತವಾದ ಮನಸ್ಸುಳ್ಳ, **ತಾಸಾಂ** ಆ ರಾಜಕನ್ಯೆಯರುಗಳಿಗೆ, **ಸೌಹೃದಂ** ಸೌಹಾರ್ದವನ್ನು, **ಅಪೋಹ್ಯ** ತ್ಯಜಿಸಿ, **ಅಯಂ** ಈ ಋಷಿಯು, **ಮಮ** ನನಗೆ, **ಅನುರೂಪಃ** ಅನುರೂಪನಾಗಿರುತ್ತಾನೆ, **ವಃ** ನಿಮಗೆ, **ನ ಅನುರೂಪಃ** ಅನುರೂಪನಲ್ಲ. **ಇತಿ** ಈ ರೀತಿಯಾಗಿ, **ಭೂಯಾನ್** ಬಹುತರವಾದ, **ಕಲಿಃ** ಕಲಹವು, **ಅಭೂತ್** ಆಯಿತು.

**ತಾತ್ಪರ್ಯ-** ಆ ಮುನಿಯನ್ನು ವಿವಾಹ ಮಾಡಿಕೊಳ್ಳುವುದರಲ್ಲಿ ಆಸಕ್ತರಾದ ಆ ರಾಜಕನ್ಯೆಯರಲ್ಲಿ ಈ ಋಷಿಯು ನನಗೆ ಅನುರೂಪನಾಗಿರುತ್ತಾನೆಂದು ನಿಮಗೆ ಅನುರೂಪನಲ್ಲವೆಂದು ಪರಸ್ಪರ ಪ್ರಬಲವಾದ ಕಲಹವು ಪ್ರಾರಂಭವಾಯಿತು.

**ಸ ಬಹ್ವೃಚಸ್ತಾಭಿರವಾರಣೀಯಶ್ರಿಯಾ ವಿರಾಜತ್ಸಪರಿಚ್ಛದೇಷು ।**
**ಗೃಹೇಷು ನಾನೋಪವನಾಮಲಾಂಭಃಪ್ರಸೂನಸೌಗಂಧಿಕಕಾನನೇಷು ॥**

**ಬಹ್ವೃಚಃ** ಮಂತ್ರಸಾಕ್ಷಾತ್ಕಾರ ಹೊಂದಿದ, **ಸಃ** ಆ ಸೌಭರಿಋಷಿಯು, **ಅವಾರಣೀಯಶ್ರಿಯಾ** ತಡೆಯಲಶಕ್ಯವಾದ **ತಪಃ** ಸಂಪತ್ತಿನಿಂದ, **ವಿರಾಜತ್ಸ-ಪರಿಚ್ಛದೇಷು** ವಿರಾಜಮಾನವಾದ ಗೃಹಸಾಮಗ್ರಿಗಳುಳ್ಳ, **ನಾನೋಪವನಾಮ-ಲಾಂಭಃಪ್ರಸೂನಸೌಗಂಧಿಕಾನನೇಷು** ಅನೇಕ ಉದ್ಯಾನ, ಅಮಲಜಲ, ಅರಳಿದ ಪುಷ್ಪಗಳ ಸೌಗಂಧ್ಯದಿಂದ ಕೂಡಿದ ಕಾನನಗಳುಳ್ಳ **ಗೃಹೇಷು** ಮಂದಿರಗಳಲ್ಲಿ, **ತಾಭಿಃ** ಆ ಸ್ತ್ರೀಯರೊಂದಿಗೆ, **ರೇಮೇ** ವಿಹರಿಸಿದರು.

**ತಾತ್ಪರ್ಯ-** ಮಂತ್ರಸಾಕ್ಷಾತ್ಕಾರ ಹೊಂದಿದ ಆ ಸೌಭರಿ ಋಷಿಗಳು ಅಸಾಧಾರಣವಾದ ತಪಃಸಂಪತ್ತಿನಿಂದ ವಿರಾಜಮಾನವಾದ ಅನೇಕ ಸಾಮಗ್ರಿಗಳುಳ್ಳ ಅನೇಕ ಉದ್ಯಾನವನ ಸರೋವರ ಪುಷ್ಪಗಳಿಂದ ಸುಗಂಧವಾದ ಮಂದಮಾರುತವುಳ್ಳ ಆ ಮಂದಿರಗಳಲ್ಲಿ ಆ ಸ್ತ್ರೀಯರೊಂದಿಗೆ ವಿಹರಿಸಿದರು.

**ಮಹಾರ್ಹಶಯ್ಯಾಸನವಸ್ತ್ರಭೂಷಣ-**
**ಸ್ನಾನಾನುಲೇಪಾಭ್ಯವಹಾರಮಾಲ್ಯಕೈಃ ।**
**ಸ್ವಲಂಕೃತಸ್ತ್ರೀಪುರುಷೇಷು ನಿತ್ಯದಾ-**
**ರೇಮೇಽನುಗಾಯದ್ದ್ವಿಜಭೃಂಗಬಂದಿಷು ॥೪೭॥**

ಆ ಋಷಿಯು, **ಮಹಾರ್ಹಶಯ್ಯಾಸನವಸ್ತ್ರಭೂಷಣಸ್ನಾನಾನುಲೇಪಾಭ್ಯ-ವಹಾರಮಾಲ್ಯಕೈಃ** ಅನರ್ಘ್ಯವಾದ ಹಾಸಿಗೆ, ಆಸನ, ಭೂಷಣ, ಸ್ನಾನ, ಗಂಧ,

ಆಹಾರ, ಮಾಲಾ, ಇವುಗಳಿಂದ **ಸ್ವಲಂಕೃತಸ್ತ್ರೀಪುರುಷೇಷು** ಸಮೀಚೀನ ಅಲಂಕೃತರಾದ ಸ್ತ್ರೀಪುರುಷರುಗಳಿಂದ ಕೂಡಿದ **ನಿತ್ಯದಾ** ಯಾವಾಗಲೂ **ಅನುಗಾಯದ್ದ್ವಿಜಭೃಂಗಬಂದಿಷು** ಮಂಜುಳ ಧ್ವನಿ ಮಾಡುವ ಪಕ್ಷಿ, ಭೃಂಗಗಳು, ಬಂದಿಗಳು ಇವುಗಳಿಂದ ಸಹಿತವಾದ ಮಂದಿರಗಳಲ್ಲಿ, **ರೇಮೇ** ವಿಹರಿಸಿದನು. ಗೃಹಸ್ಥಧರ್ಮ ಪರಿಪಾಲನ ಮಾಡಿದನು.

ಆ ಋಷಿಗಳು ಅಮೌಲ್ಯವಾದ ಹಾಸಿಗೆ, ಆಸನ, ವಸ್ತ್ರ, ಭೂಷಣ, ಸ್ನಾನ, ಸುಗಂಧಲೇಪನ, ಆಹಾರ ಇವುಗಳಿಂದಲೂ ಸ್ವಯಂ ಅಲಂಕೃತರಾದ ಸ್ತ್ರೀಪುರುಷರುಳ್ಳ ಮಂದಿರಗಳಲ್ಲಿ, ಇಂಪಾದ ಧ್ವನಿಮಾಡುವ ಪಕ್ಷಿಗಳು ಭ್ರಮರಗಳು ಸ್ತುತಿಪಾಠಕರು ಇವರಿಂದ ಕೂಡಿದ ಮಂದಿರಗಳಲ್ಲಿ ವಿಹರಿಸಿದರು. ||೪೭||

**ಯದ್ಗಾರ್ಹಸ್ಥ್ಯಂ ತು ಸಂವೀಕ್ಷ್ಯ ಸಪ್ತದ್ವೀಪವತೀಪತಿಃ |**
**ವಿಸ್ಮಿತಃ ಸ್ತಂಭಮಜಹಾತ್ಸಾರ್ವಭೌಮಶ್ರಿಯಾನ್ವಿತಮ್ ||೪೮||**

**ಸಪ್ತದ್ವೀಪವತೀಪತಿಃ** ಸಪ್ತದ್ವೀಪಗಳಿಗೆ ಸ್ವಾಮಿಯಾದ, ಮಾಂಧಾತನು, **ಸಾರ್ವಭೌಮಶ್ರಿಯಾನ್ವಿತಂ** ಸಾಮ್ರಾಜ್ಯಲಕ್ಷ್ಮಿಯಿಂದ ಸಹಿತವಾದ **ಯದ್ಗಾರ್ಹಸ್ಥ್ಯಂ** ಈ ಋಷಿಯ (ಅಳಿಯಂದಿರ) ಗೃಹಸ್ಥಾಶ್ರಮವನ್ನು **ಸಂವೀಕ್ಷ್ಯ** ನೋಡಿ, **ವಿಸ್ಮಿತಃ** ಆಶ್ಚರ್ಯಗೊಂಡವನಾಗಿ, **ಸ್ತಂಭಂ** ಅಹಂಕಾರವನ್ನು, **ಅಜಹಾತ್** ಬಿಟ್ಟನು.

**ತಾತ್ಪರ್ಯ-** ಸಪ್ತದ್ವೀಪಗಳಿಗೆ ಸ್ವಾಮಿಯಾದ ಮಾಂಧಾತನು ಸಾರ್ವಭೌಮ-ರಾಜ್ಯಲಕ್ಷ್ಮಿಯಿಂದ ಕೂಡಿದ ತಮ್ಮ ಅಳಿಯಂದಿರ ಗೃಹಸ್ಥಾಶ್ರಮಸಂಪತ್ತನ್ನು ನೋಡಿ ಆಶ್ಚರ್ಯಗೊಂಡು ತನ್ನ ಅಹಂಕಾರವನ್ನು ತ್ಯಜಿಸಿದನು. ||೪೮||

**ಏವಂ ಗೃಹೇಷ್ವಭಿರತೋ ವಿಷಯಾನ್ ವಿವಿಧೈಃ ಸುಖೈಃ |**
**ಸೇವಮಾನೋ ನ ಚಾತುಷ್ಯದಾಜ್ಯಸ್ತೋಕೈರಿವಾನಲಃ ||೪೯||**

**ಏವಂ** ಈ ರೀತಿಯಾಗಿ, **ಗೃಹೇಷು** ಗೃಹಸ್ಥಾಶ್ರಮದಲ್ಲಿ **ಅಭಿರತಃ** ಆಸಕ್ತನಾದ ಸೌಭರಿಯು, **ವಿವಿಧೈಃ** ಅನೇಕರೀತಿಯಾದ **ಸುಖೈಃ** ಸುಖಸಾಧನಗಳಿಂದ, **ವಿಷಯಾನ್** ವಿಷಯಸುಖಗಳನ್ನು **ಸೇವಮಾನಃ** ಅನುಭವಿಸತಕ್ಕವನಾಗಿ, **ಆಜ್ಯಸ್ತೋಕೈಃ** ತುಪ್ಪದ ಹನಿಗಳಿಂದ **ಅನಲಃ** ಅಗ್ನಿಯು, ಹೇಗೆ ತೃಪ್ತವಾಗುವುದಿಲ್ಲವೋ ಹಾಗೆ **ನ ಅತುಷ್ಯತ್** ತೃಪ್ತನಾಗಲಿಲ್ಲ.

**ತಾತ್ಪರ್ಯ-** ಈ ರೀತಿಯಾಗಿ ಗೃಹಸ್ಥಾಶ್ರಮದಲ್ಲಿ ಆಸಕ್ತನಾದ ಸೌಭರಿಯು ಅನೇಕ ಸಾಧನಗಳಿಂದ ವಿಷಯಸುಖಗಳನ್ನು ಸೇವಿಸುತ್ತಾ , ತುಪ್ಪದ ಹನಿಗಳಿಂದ ಅಗ್ನಿಯು ತೃಪ್ತಿ ಹೊಂದದಿರುವಂತೆ ತಾನೂ ತೃಪ್ತನಾಗಲಿಲ್ಲ. ||೪೯||

**ಸ ಕದಾಚಿದುಪಾಸೀನ ಆತ್ಮಾಪಹ್ನವಮಾತ್ಮನಾ ।**
**ದದರ್ಶ ಬಹ್ವೃಚಾಚಾರ್ಯೋ ಮೀನಸಂಗಸಮುತ್ಥಿತಮ್ ॥೫೦॥**

**ಬಹ್ವೃಚಾಚಾರ್ಯಃ** ಋಜ್‌ಮಂತ್ರವ್ಯಾಖ್ಯಾತೃಗಳಾದ **ಸಃ** ಆ ಸೌಭರಿಗಳು, **ಕದಾಚಿತ್** ಒಮ್ಮೆ, **ಉಪಾಸೀನಃ** ಕುಳಿತವರಾಗಿ, **ಆತ್ಮನಾ** ತನ್ನಿಂದಲೇ **ಮೀನಸಂಗ-ಸಮುತ್ಥಿತಂ** ಮೀನಿನ ಸಂಗದಿಂದ, ಉಂಟಾದ **ಆತ್ಮಾಪಹ್ನವಂ** ಆತ್ಮನಾಶವನ್ನು **ದದರ್ಶ** ನೋಡಿದರು.

**ತಾತ್ಪರ್ಯ-** ಋಜ್‌ಮಂತ್ರವ್ಯಾಖ್ಯಾತೃಗಳಾದ ಆ ಸೌಭರಿಗಳು ಒಮ್ಮೆ ಕುಳಿತವರಾಗಿ ತನ್ನಿಂದಲೇ ಮೀನಸಂಗದಿಂದುಂಟಾದ ಆತ್ಮನಾಶವನ್ನು ಕಂಡರು.

**ಅಹೋ ಇಮಂ ಪಶ್ಯತ ಮೇ ವಿನಾಶಂ**
**ತಪಸ್ವಿನಃ ಸಚ್ಚರಿತವ್ರತಸ್ಯ ।**
**ಅಂತರ್ಜಲೇ ವಾರಿಚರಪ್ರಸಂಗಾತ್**
**ಪ್ರಸ್ರಾವಿತಂ ಬ್ರಹ್ಮ ಚಿರಂ ಧೃತಂ ಯತ್ ॥೫೧॥**

**ಅಹೋ** ಆಶ್ಚರ್ಯವು! **ತಪಸ್ವಿನಃ** ತಪಸ್ವಿಯಾದ, **ಸಚ್ಚರಿತವ್ರತಸ್ಯ** ಸದಾಚಾರ ನಿಯಮಯುಕ್ತನಾದ, **ಮೇ** ನನ್ನ, **ಇಮಂ** ಈ **ವಿನಾಶಂ** ನಾಶವನ್ನು, **ಪಶ್ಯತ** ನೋಡಿರಿ, **ಯತ್** ಯಾವ ಕಾರಣದಿಂದ, **ಅಂತರ್ಜಲೇ** ನೀರಿನ ಮಧ್ಯದಲ್ಲಿ **ವಾರಿಚರಪ್ರಸಂಗಾತ್** ಮೀನಗಳೆಂಬ ಜಲಚರಪ್ರಾಣಿಗಳ ಸಂಪರ್ಕದಿಂದ, **ಚಿರಂ** ಬಹುಕಾಲದವರೆಗೂ, **ಧೃತಂ** ಧರಿಸಲ್ಪಟ್ಟ, **ಮೇ** ನನ್ನ, **ಬ್ರಹ್ಮ** ವೇದಾಧ್ಯಯನ ಸಂಪತ್ತು , **ಪ್ರಸ್ರಾವಿತಂ** ನಾಶಹೊಂದಿತು.

**ತಾತ್ಪರ್ಯ-** ತಪಸ್ವಿಯಾದ ಸದಾಚಾರಸಂಪನ್ನನಾದ ನನ್ನ ವೇದಾಧ್ಯಯನ ಸಂಪತ್ತು ವಿನಷ್ಟವಾಯಿತು. ಇದಕ್ಕೆ ಕಾರಣವೇನೆಂದರೆ :- ನೀರಿನ ಮಧ್ಯದಲ್ಲಿ ಮೀನುಗಳೆಂಬ ಜಲಚರಪ್ರಾಣಿಗಳ ಸಂಪರ್ಕದಿಂದ ನನ್ನ ಬಹುಕಾಲದಿಂದ ಸಂಪಾದಿಸಿದ ತಪಸ್ಸು ಎಲ್ಲವೂ ನಾಶ ಹೊಂದಿತು. ನೋಡಿರಿ. ॥೫೧॥

**ಸಂಗಂ ತ್ಯಜೇತ ಮಿಥುನವ್ರಜಿನಾಮ್ಮುಮುಕ್ಷುಃ**
**ಸರ್ವಾತ್ಮನಾ ನ ವಿಸೃಜೇದ್ಬಹಿರಿಂದ್ರಿಯಾಣಿ ।**
**ಏಕಶ್ಚರನ್ ರಹಸಿ ಚಿತ್ತಮನಂತ ಈಶೇ**
**ಯುಂಜೀತ ತದ್ವ್ರತಿಷು ಸಾಧುಷು ಚೇತ್ಪ್ರಸಂಗಃ ॥೫೨॥**

**ಮಿಥುನವ್ರಜಿನಾತ್** ಸಂಗದ ಪಾಪದಿಂದ **ಮುಮುಕ್ಷುಃ** ಮೋಕ್ಷವನ್ನು ಅಪೇಕ್ಷಿಸುವವನು, **ಸಂಗಂ** ಸ್ನೇಹರೂಪವಾದ ಸಂಗವನ್ನು, **ತ್ಯಜೇತ** ಬಿಡತಕ್ಕದ್ದು,

**ಇಂದ್ರಿಯಾಣಿ** ಇಂದ್ರಿಯಗಳನ್ನು, **ಸರ್ವಾತ್ಮನಾ** ಯಾವ ರೀತಿಯಿಂದಲೂ, **ಬಹಿಃ** ಶಬ್ದಾದಿ ವಿಷಯಗಳ ಕಡೆಗೆ, **ನ ವಿಸೃಜೇತ್** ಬಿಡಬಾರದು, **ಏಕಃ** ಏಕಾಂಗಿಯಾಗಿ **ಚರನ್** ಸಂಚರಿಸುತ್ತಾ , **ರಹಸಿ** ಏಕಾಂತದಲ್ಲಿ, **ಅನಂತೇ** ಈಶನಲ್ಲಿ, **ಚಿತ್ತಂ** ಮನಸ್ಸನ್ನು **ಯುಂಜೀತ** ಅರ್ಪಿಸಬೇಕು. **ಪ್ರಸಂಗಶ್ಚೇತ್** ಸಂಗ ಉಂಟಾಗುವುದಾದರೆ **ತದ್ರತಿಷು** ಭಗವಂತನಲ್ಲಿ ಭಕ್ತಿಯುಳ್ಳ, **ಸಾಧುಷು** ಸಜ್ಜನರಲ್ಲಿ ಆಗಲಿ.

**ತಾತ್ಪರ್ಯ-** ಸ್ತ್ರೀ ಸಂಗದಿಂದುಂಟಾದ ಪಾಪವನ್ನು ಕಳೆದುಕೊಳ್ಳಲು ಅಪೇಕ್ಷೆ ಉಳ್ಳವನು ಸ್ನೇಹಲಕ್ಷಣವಾದ ಸಂಗವನ್ನು ತ್ಯಾಗಮಾಡಬೇಕು. ಇಂದ್ರಿಯಗಳನ್ನು ಯಾವ ರೀತಿಯಿಂದಲೂ ಹೊರಗೆ ಬಿಡಬಾರದು. ಏಕಾಂಗಿಯಾಗಿ ಸಂಚರಿಸುತ್ತಾ ಏಕಾಂತದಲ್ಲಿ ಶ್ರೀಶನಲ್ಲಿ ಮನಸ್ಸನ್ನು ಇಡಬೇಕು. ಸಂಗ ಮಾಡುವುದಾದರೆ ಭಗವದ್ಭಕ್ತರ ಸಂಗವನ್ನು ಮಾಡಬೇಕು. ।।೫೨।।

**ಏಕಸ್ತಪಸ್ವ್ಯಹಮಥಾಂಭಸಿ ಮತ್ಸ್ಯಸಂಗಾತ್**
**ಪಂಚಾಶತಾಥ ಸುತಪಂಚಸಹಸ್ರಸಂಗಃ ।**
**ನಾಂತಂ ವ್ರಜಾಮ್ಯುಭಯಕೃತ್ಯಮನೋರಥಾನಾಂ**
**ಮಾಯಾಗುಣೈರ್ಹೃತಮತಿರ್ವಿಷಯೇಽರ್ಥಭಾವಃ ।।೫೩।।**

**ತಪಸ್ವೀ** ತಪಸ್ವಿಯಾದ, **ಅಹಂ** ನಾನು, **ಏಕಃ** ಒಬ್ಬನೇ, **ಅಂಭಸಿ** ನೀರಿನಲ್ಲಿ **ಮತ್ಸ್ಯಸಂಗಾತ್** ಮತ್ಸ್ಯಗಳಸಂಗವನ್ನುನೋಡಿ, **ಪಂಚಾಶತಾ** ಐವತ್ತು ಕನ್ಯೆಯರಿಂದ **ಸಂಗಃ ಆಸೀತ್** ಸಂಬಂಧವಾಯಿತು. ಇವರುಗಳಲ್ಲಿ, **ಸುತಪಂಚಸಹಸ್ರಸಂಗಃ** ಐದುಸಾವಿರ ಮಕ್ಕಳು ಹುಟ್ಟಿರುತ್ತಾರೆ, **ಮಾಯಾಗುಣೈಃ** ಪ್ರಕೃತಿಗುಣಗಳಿಂದ, ಅಭಿಮಾನಾದಿಗಳಿಂದ, **ವಿಷಯೇ ಅರ್ಥಭಾವಃ** ಶಬ್ದಾದಿಗಳಲ್ಲಿ ಪ್ರಯೋಜನ ಬುದ್ಧಿ ಉಳ್ಳವನಾಗಿ, **ಪಂಚಾಶತಾ ಸ್ತ್ರೀಭಿಃ** ಐವತ್ತು (೫೦) ಸ್ತ್ರೀಯರುಗಳಿಂದ, **ಹೃತಮತಿಃ** ಅಪಹರಿಸಲ್ಪಟ್ಟ ಬುದ್ಧಿಯುಳ್ಳವನಾಗಿ, **ಉಭಯಕೃತ್ಯಮನೋರಥಾನಾಂ** ಪುರುಷ ಮತ್ತು ಸ್ತ್ರೀ, ಮಕ್ಕಳ ಪ್ರಯೋಜನ ಪ್ರಯತ್ನಗಳ, **ಅಂತಂ** ಕೊನೆಯನ್ನು **ನ ವ್ರಜಾಮಿ** ಹೊಂದಲಿಲ್ಲ.

**ತಾತ್ಪರ್ಯ-** ತಪಸ್ವಿಯಾದ ನಾನು ಒಬ್ಬನೇ ಮೀನುಗಳ ಮಿಥುನ ಸಂಗವನ್ನು ನೋಡಿ ಐವತ್ತು ಕನ್ಯೆಯರನ್ನು ಪಡೆದೆನು. ಇವರುಗಳಲ್ಲಿ ಐದು ಸಾವಿರ ಮಕ್ಕಳು ಹುಟ್ಟಿರುತ್ತಾರೆ. ಅಭಿಮಾನದಿಂದ ಶಬ್ದಾದಿಗಳಲ್ಲಿ ಪ್ರಯೋಜನಬುದ್ಧಿ ಉಳ್ಳವನಾಗಿ ಐವತ್ತು ಸ್ತ್ರೀಯರಿಂದ ಅಪಹರಿಸಲ್ಪಟ್ಟ ಬುದ್ಧಿ ಉಳ್ಳವನಾಗಿ ಇವರಲ್ಲಿ ೫ ಸಾವಿರ ಮಕ್ಕಳು ಜನ್ಮ ತಾಳಿದರು. ಇವರುಗಳ ಎಂದರೆ ಗಂಡುಮಕ್ಕಳಿಗೆ ಕನ್ಯಾ ಅಂಗೀಕರಿಸುವುದು ಹೆಣ್ಣುಮಕ್ಕಳಿಗೆ ವರಾನ್ವೇಷಣ ಮಾಡುವುದು ಈ ಕಾರ್ಯದಲ್ಲಿ ಕೊನೆಗಾಣದವನಾಗಿರುತ್ತೇನೆ. ।।೫೩।।

**ಏವಂ ವಸನ್ ಗೃಹೇ ಕಾಲಂ ವಿರಕ್ತೋ ನ್ಯಾಸಮಾಶ್ರಿತಃ ।**
**ವನಂ ಜಗಾಮಾನುಯಯುಸ್ತತ್ಪತ್ನ್ಯಃ ಪತಿದೇವತಾಃ ॥೫೪॥**

**ಏವಂ** ಈ ರೀತಿಯಾಗಿ, **ಕಾಲಂ** ಬಹುಕಾಲ, **ಗೃಹೇ** ಮನೆಯಲ್ಲಿ, **ವಸನ್** ವಾಸಮಾಡುತ್ತಾ , **ವಿರಕ್ತಃ** ವಿರಕ್ತನಾಗಿ, **ನ್ಯಾಸಂ** ತ್ಯಾಗವನ್ನು , **ಆಶ್ರಿತಃ** ಆಶ್ರಯಿಸಿದ ಆ ಋಷಿಯು, **ವನಂ** ಕಾಡನ್ನು ಕುರಿತು, **ಜಗಾಮ** ಹೋದನು. **ಪತಿದೇವತಾಃ** ಪತಿಯಲ್ಲಿ ದೈವಭಕ್ತಿಉಳ್ಳ, **ತತ್ಪತ್ನ್ಯಃ** ಅವನ ಪತ್ನಿಯರು, **ಅನುಯಯುಃ** ಅವನನ್ನು ಅನುಸರಿಸಿ ಹೋದರು.

**ತಾತ್ಪರ್ಯ-** ಆ ಸೌಭರಿ ಋಷಿಗಳು ಈ ರೀತಿಯಾಗಿ ಮನೆಯಲ್ಲೇ ವಾಸಮಾಡಿ ವಿರಕ್ತನಾಗಿ ಕಾಲವನ್ನು ಕಳೆಯುತ್ತಾ ಎಲ್ಲಾ ತ್ಯಾಗವನ್ನು ಮಾಡಿದರು. ಕೆಲವು ಕಾಲಾಂತರ ಕಾಡನ್ನು ಕುರಿತು ಹೋದರು. ಪತಿಭಕ್ತಿಯುಳ್ಳ ಅವರ ಪತ್ನಿಯರು ಅವರನ್ನು ಅನುಸರಿಸಿದರು. ॥೫೪॥

**ತತ್ರ ತಪ್ತ್ವಾ ತಪಸ್ತೀಕ್ಷ್ಣಮಾತ್ಮಕರ್ಶನಮಾತ್ಮವಿತ್ ।**
**ಸಹೈವಾಗ್ನಿಭಿರಾತ್ಮಾನಂ ಯುಯೋಜ ಪರಮಾತ್ಮನಿ ॥೫೫॥**

**ಆತ್ಮವಿತ್** ಬ್ರಹ್ಮಜ್ಞಾನಿಯಾದ ಆ ಋಷಿಯು, **ತತ್ರ** ಆ ವನದಲ್ಲಿ, **ಆತ್ಮದರ್ಶನಂ** ದೇಹಕ್ಕೆ ಕೃಶತ್ವವನ್ನುಂಟು ಮಾಡುವ, **ತೀಕ್ಷ್ಣಂ** ತೀಕ್ಷ್ಣವಾದ, **ತಪಃ** ತಪಸ್ಸನ್ನು, **ತಪ್ತ್ವಾ** ಮಾಡಿ, **ಸಃ** ಈ ಋಷಿಯು, **ಆತ್ಮಾನಂ** ದೇಹವನ್ನು , **ಅಗ್ನಿಭಿಃ** ಶ್ರೌತಾಗ್ನಿಯಿಂದ, **ಯುಯೋಜ** ಸಂಬಂಧಗೊಳಿಸಿದನು. (ದಹನ ಮಾಡಿದರು). **ಆತ್ಮಾನಂ** ಅಂತಃ ಕರಣವನ್ನು, **ಪರಮಾತ್ಮನಿ** ಪರಮಾತ್ಮನಲ್ಲಿ **ಯುಯೋಜ** ಸಮರ್ಪಿಸಿದನು. **ಹ** ಇದು ಪ್ರಸಿದ್ಧವಾಗಿದೆ.

**ತಾತ್ಪರ್ಯ-** ಬ್ರಹ್ಮಜ್ಞಾನಿಯಾದ ಆ ಋಷಿಯು ಆ ವನದಲ್ಲಿ ದೇಹವನ್ನು ದಂಡಿಸಿ ತೀಕ್ಷ್ಣವಾದ ತಪಸ್ಸುಮಾಡಿ ಅಂತಃಕರಣವನ್ನು ಪರಮಾತ್ಮನಲ್ಲಿ ಸಮರ್ಪಿಸಿದರು. ಶ್ರೌತಾಗ್ನಿಯಿಂದ ದೇಹವನ್ನು ದಹನ ಮಾಡಿದರು. ಇದು ಪ್ರಸಿದ್ಧವಾಗಿರುತ್ತೆ. (ಸಾಯುಜ್ಯ ಮೋಕ್ಷವನ್ನು ಹೊಂದಿದರು). ॥೫೫॥

**ತಾಃ ಸ್ವಪತ್ಯುರ್ಮಹಾರಾಜ ನಿರೀಕ್ಷ್ಯಾಧ್ಯಾತ್ಮಿಕೀಂ ಗತಿಮ್ ।**
**ಅನ್ವೀಯುಸ್ತತ್ಪ್ರಭಾವೇನ ಶಾಂತಮಗ್ನಿರಿವಾರ್ಚಿಷಃ ॥೫೬॥**

**ಮಹಾರಾಜ!** ಪರೀಕ್ಷಿತ್ ರಾಜನೇ! **ತಾಃ** ಆ ಪತ್ನಿಯರು, **ಸ್ವಪತ್ಯುಃ** ತಮ್ಮ ಪತಿಯ, **ಆಧ್ಯಾತ್ಮಿಕೀಂ** ಪರಮಾತ್ಮ ಸಂಬಂಧವಾದ, **ಗತಿಂ** ಪ್ರಾಪ್ತಿಯನ್ನು , **ನಿರೀಕ್ಷ್ಯ** ನೋಡಿ, **ತತ್ಪ್ರಭಾವೇನ** ಆ ಋಷಿಗಳ ತಪಸ್ಸಿನ ಪ್ರಭಾವದಿಂದ **(ಸ್ವಪ್ರಭಾವೇನ)**, ತಮ್ಮ

ಪಾತಿವ್ರತ್ಯಪ್ರಭಾವದಿಂದ, **ಅರ್ಚಿಷಃ** ಅಗ್ನಿಯ ಜ್ವಾಲೆಗಳು, **ಶಾಂತಂ** ಶಾಂತವಾದ, **ಅಗ್ನಿಂ ಇವ** ಅಗ್ನಿಯನ್ನೋಪಾದಿಯಲ್ಲಿ, **ಅನ್ವೀಯುಃ** ಅನುಸರಿಸಿದರು.

**ತಾತ್ಪರ್ಯ-** ಪರೀಕ್ಷಿತ ರಾಜನೇ! ಆ ಋಷಿಪತ್ನಿಯರು ತಮ್ಮ ಪತಿಯ ಪರಮಾತ್ಮ ಪ್ರಾಪ್ತಿಯನ್ನು ನೋಡಿ ಆ ಋಷಿಗಳ ತಪಸ್ಸಿನ ಪ್ರಭಾವದಿಂದಲೂ ತಮ್ಮ ಪಾತಿವ್ರತ್ಯಪ್ರಭಾವದಿಂದಲೂ ಅಗ್ನಿಜ್ವಾಲೆಗಳು ಶಾಂತವಾದ ಅಗ್ನಿಯನ್ನು ಪ್ರವೇಶಿಸುವಂತೆ ಆ ಪತಿಯನ್ನು ಅನುಸರಿಸಿದರು. ।।೩೬।।

ಅತ್ಯಾಶ್ಚರ್ಯವಾದ ಮಾಂಧಾತೃಕನ್ಯೆಯರ ವಿಷಯವನ್ನು ಹೇಳಿ ಅವನ ಪುರುಕುತ್ಸ ಅಂಬರೀಷ ಮುಚುಕುಂದ, ಇವರಲ್ಲಿ ಮಧ್ಯಮನಾದರೂ ಅಂಬರೀಷನ ಚರಿತ್ರೆಯನ್ನು ಸೂಚಿಕಟಾಹನ್ಯಾಯದಿಂದ (ಸ್ವಲ್ಪವಾದ್ದರಿಂದ) ಮೊದಲು ಹೇಳುವರು-

**ಮಾಂಧಾತೃಪುತ್ರಪ್ರವರೋ ಯೋಽಂಬರೀಷಃ ಪ್ರಕೀರ್ತಿತಃ ।**
**ಮಾತಾಮಹೇನ ಪ್ರವೃತೋ ಯುವನಾಶ್ವಸ್ತು ತತ್ಸುತಃ ।।೩೭।।**

**ಯಃ** ಯಾರು, **ಮಾಂಧಾತೃಪುತ್ರಪ್ರವರಃ** ಮಾಂಧಾತೃವಿನ ಮಕ್ಕಳಲ್ಲಿ ಶ್ರೇಷ್ಠನೋ, **ಅಂಬರೀಷಃ (ಇತಿ)** ಅಂಬರೀಷನೆಂದು, **ಪ್ರಕೀರ್ತಿತಃ** ಕರೆಸಿಕೊಂಡನೋ, **ಸಃ** ಅವನು **ಮಾತಾಮಹೇನ** ತಾಯಿಯ ತಂದೆಯಾದ ಶಶಬಿಂದುವಿನಿಂದ, **ಪ್ರವೃತಃ** ಸ್ವೀಕರಿಸಲ್ಪಟ್ಟನು, **ತತ್ಸುತಃ** ಅಂಬರೀಷನ ಮಗನು, **ಯುವನಾಶ್ವಃ** ಯುವನಾಶ್ವನು.

**ತಾತ್ಪರ್ಯ-** ಮಾಂಧಾತೃವಿನ ಮಕ್ಕಳಲ್ಲಿ ಗುಣತಃ ಶ್ರೇಷ್ಠನಾದ ಅಂಬರೀಷನನ್ನು ಅವನ ತಾಯಿಯ ತಂದೆ ಅಥವಾ ತಂದೆಯ ತಂದೆಗಳಾದ ಮಾಂಧಾತಾ ಅಥವಾ ಶಶಬಿಂದು ಮಗನಾಗಿ ಸ್ವೀಕರಿಸಿದರು. ಅಂಬರೀಷನಿಗೆ ಯುವನಾಶ್ವನೆಂಬ ಮಗನು ಇದ್ದನು. ।।೩೭।।

ಇಲ್ಲಿ ಕೆಲವರು ಪಿತಾಮಹೇನ ಎಂದು ಪಾಠ ಇಟ್ಟುಕೊಂಡು ಮಾಂಧಾತೃವೇ ಮೊಮ್ಮಗನನ್ನು ಮಗನಾಗಿ ಸ್ವೀಕರಿಸಿದನು, ಎಂದು ಅರ್ಥ ಮಾಡುವರು. 'ಮಾಂಧಾತೃಪ್ರವರಾಃ' ಎಂದು ಮುಂದೆ ಮಾಂಧಾತೃವಂಶದ ಮೂಲಪುರುಷನೆಂದು ಹೇಳಿದ ಕಾರಣ ಹೀಗೆ ಅರ್ಥವೆಂದು ಹೇಳುವರು. ಹೀಗೆ ಎಂದು ತಿಳಿಯಲು ಅಶಕ್ಯವಾದ ಪ್ರಮೇಯವಾದ್ದರಿಂದ ನಿರ್ಣಯ ಮಾಡಲು ಆಗುವುದಿಲ್ಲ. ಹೀಗೆ ಸತ್ಯಧರ್ಮರು ಬರೆದಿದ್ದಾರೆ.

**ಹರಿತಸ್ತಸ್ಯ ಪುತ್ರೋಽಭೂನ್ಮಾಂಧಾತೃಪ್ರವರಾ ಇಮೇ ।**
**ನರ್ಮದಾ ಭ್ರಾತೃಭಿರ್ದತ್ತಾ ಪುರುಕುತ್ಸಾಯ ಚೋರಗೈಃ ।।೩೮।।**

**ತಸ್ಯ** ಆ ಯೌವನಾಶ್ವನಿಗೆ, **ಹರಿತಃ** ಹರಿತ ಎಂಬುವನು, **ಪುತ್ರಃ** ಮಗನು, **ಅಭೂತ್** ಆದನು. **ಇಮೇ ಯೌವನಾಶ್ವ**, ಅಂಬರೀಷ, ಹರಿತರು, **ಮಾಂಧಾತೃ ಪ್ರವರಾಃ** ಮಾಂಧಾತೃಗೋತ್ರದ ಅವಾಂತರ ವಿಶೇಷಪ್ರವರ್ತಕರು. ಅಶ್ವಲಾಯನ ಸೂತ್ರದಲ್ಲಿ ಅಂಗಿರಸಾಂಬರೀಷಯೌವನಶ್ವಾಃ ಎಂದು ಗೋತ್ರಪ್ರವರ ಹೇಳಿದ್ದಾರೆ. **ಭ್ರಾತೃಭಿಃ** ಸಹೋದರರಾದ, **ಉರಗೈಃ** ಸರ್ಪಗಳಿಂದ, **ನರ್ಮದಾ** ನರ್ಮದಾ ಎಂಬ ಕನ್ಯೆಯು, **ಪುರುಕುತ್ಸಾಯ** ಈ ಪುರುಕುತ್ಸನಿಗೆ **ದತ್ತಾ** ಕೊಡಲ್ಪಟ್ಟಳು.

**ತಾತ್ಪರ್ಯ-** ಪುರುಕುತ್ಸ ಎಂಬ ಮಾಂಧಾತೃವಿನ ಜ್ಯೇಷ್ಠಮಗನಿಗೆ ಸರ್ಪಗಳು ತಮ್ಮ ಸಹೋದರಿಯಾದ ''ನರ್ಮದಾ'' ಎಂಬ ಕನ್ಯೆಯನ್ನು ಪ್ರದಾನ ಮಾಡಿದರು.

**ತಯಾ ರಸಾತಲಂ ನೀತೋ ಭುಜಗೇಂದ್ರಪ್ರಯುಕ್ತಯಾ ।**
**ಗಂಧರ್ವಾನ್ ಸೋಽವಧೀತ್ತತ್ರ ವಧ್ಯ್ಯಾಶ್ವಾನ್ ವಿಷ್ಣುಶಕ್ತಿಧೃಕ್ ॥೯॥**

**ಭುಜಗೇಂದ್ರಪ್ರಯುಕ್ತಯಾ** ತಮ್ಮಂದಿರಾದ ನಾಗಶ್ರೇಷ್ಠರಿಂದ ಪ್ರೇರಿತಳಾದ **ತಯಾ** ಆ ನರ್ಮದೆಯಿಂದ, **ರಸಾತಲಂ** ರಸಾತಲವನ್ನು ಕುರಿತು, **ನೀತಃ** ಕರೆದೊಯ್ಯಲ್ಪಟ್ಟನು, **ತತ್ರ** ಅಲ್ಲಿ **ವಿಷ್ಣುಶಕ್ತಿಧೃಕ್** ಭಗವಂತನ ಶಕ್ತಿ ಸಹಾಯವನ್ನು ಹೊಂದಿದ ಈತನು **ವಧ್ಯ್ಯಾಶ್ವಾನ್** ವಧ್ಯ್ಯಾಶ್ವರೆಂಬ, **ಗಂಧರ್ವಾನ್** ಗಂಧರ್ವರನ್ನು, **ಅವಧೀತ್** ಸಂಹರಿಸಿದನು.

**ತಾತ್ಪರ್ಯ-** ನಾಗಶ್ರೇಷ್ಠರಿಂದ ಪ್ರೇರಿತಳಾದ ಈ ನರ್ಮದೆಯು ತನ್ನ ಮಾಯೆಯಿಂದ ಈತನನ್ನು ರಸಾತಲವನ್ನು ಕುರಿತು ಕರೆದುಕೊಂಡು ಹೋದಳು. ಅಲ್ಲಿ ಶ್ರೀವಿಷ್ಣುವಿನ ವಿಶೇಷ ಸನ್ನಿಧಾನಯುತನಾದ ಈತನು ವಧ್ಯ್ಯಾಶ್ವರೆಂಬ ಗಂಧರ್ವರನ್ನು ಸಂಹರಿಸಿದನು. ॥೯॥

**ನಾಗಾಲ್ಲಬ್ಧವರಸ್ಸರ್ಪಾದಭಯಂ ಸ್ಮರತಾಮಿಮಮ್ ।**
**ತ್ರಸದ್ದಸ್ಯುಃ ಪೌರುಕುತ್ಸೋ ಯೋಽನರಣ್ಯಸ್ಯ ದೇಹಕೃತ್ ॥೬೦॥**

**ಸಃ** ಈ ಪುರುಕುತ್ಸನು, **ನಾಗಾತ್** ನಾಗನಿಂದ, **ಇಮಾಂ** ಈ ಪುರುಕುತ್ಸನ ವಿಜಯವನ್ನು, **ಸ್ಮರತಾಂ** ಕೇಳಿದ ಜನರಿಗೆ, ''**ಸರ್ಪಾತ್** ಸರ್ಪದಿಂದ, **ಅಭಯಂ** ಭಯರಾಹಿತ್ಯವು'' ಈ ರೀತಿಯಾಗಿ **ಲಬ್ಧವರಃ** ವರವನ್ನು ಹೊಂದಿದವನು, **ಅಭೂತ್** ಆದನು. **ಯಃ** ಯಾವಾತನು, **ಅನರಣ್ಯಸ್ಯ** ಅನರಣ್ಯನ, **ದೇಹಕೃತ್** ತಂದೆಯಾದ, **ತ್ರಸದ್ದಸ್ಯುಃ** ತ್ರಸದ್ದಸ್ಯುವು, **ಪೌರುಕುತ್ಸಃ** ಪುರುಕುತ್ಸನ ಮಗನಾಗಿರುತ್ತಾನೆ.

**ತಾತ್ಪರ್ಯ-** ಈ ಪುರುಕುತ್ಸನು ತನ್ನ ವಿಜಯವನ್ನು ಸ್ಮರಿಸುವರಿಗೆ ನಾಗರ ಭಯವು ಇಲ್ಲ ಎಂಬ ವರವನ್ನು ಪಡೆದನು. ಈತನ ಮಗನು ತ್ರಸದ್ದಸ್ಯು ಎಂಬುವನು. ಈತನ ಮಗನೇ ಅನರಣ್ಯನು. ॥೬೦॥

**ಹರ್ಯಶ್ವಃ ತತ್ಸುತಃ ತಸ್ಮಾದರುಣೋಽಥ ತ್ರಿಬಂಧುರಃ ।**
**ತಸ್ಯ ಸತ್ಯವ್ರತಃ ಪುತ್ರಃ ತ್ರಿಶಂಕುರಿತಿ ವಿಶ್ರುತಃ ॥೬೧॥**

**ತತ್ಸುತಃ** ಈ ಅನರಣ್ಯನ ಮಗನು, **ಹರ್ಯಶ್ವಃ** ಹರ್ಯಶ್ವ ಎಂಬುವನು, **ತಸ್ಮಾತ್** ಈ ಹರ್ಯಶ್ವನ ದೆಸೆಯಿಂದ, **ಅರುಣಃ** ಅರುಣ ಎಂಬುವನು ಜನಿಸಿದನು. **ಅಥ** ಅರುಣನ ದೆಸೆಯಿಂದ, **ತ್ರಿಬಂಧುರಃ** ತ್ರಿಬಂಧುರ ಎಂಬುವನು, **ತಸ್ಯ** ಈ ತ್ರಿಬಂಧುರನಿಗೆ, **ಸತ್ಯವ್ರತಃ** ಸತ್ಯವ್ರತನೆಂಬ, **ಪುತ್ರಃ** ಮಗನು ಆದನು. ಈತನೇ **ತ್ರಿಶಂಕುಃ ಇತಿ** ತ್ರಿಶಂಕು ಎಂದು, **ವಿಶ್ರುತಃ** ಪ್ರಖ್ಯಾತನಾದನು.

**ತಾತ್ಪರ್ಯ-** ಈ ಅನರಣ್ಯನಿಗೆ ಹರ್ಯಶ್ವ ಎಂಬುವನು ಈ ಹರ್ಯಶ್ವನ ದೆಸೆಯಿಂದ ಅರುಣ ಎಂಬುವನು ಈ ಅರುಣನ ದೆಸೆಯಿಂದ ತ್ರಿಬಂಧುರ ಎಂಬ ಪುತ್ರನು ಈತನೇ ತ್ರಿಶಂಕು ಎಂದು ಪ್ರಖ್ಯಾತನಾದನು. ॥೬೧॥

**ಪ್ರಾಪ್ತಶ್ಚಂಡಾಲತಾಂ ಶಾಪಾತ್ ಗುರೋಃ ಕೌಶಿಕತೇಜಸಾ ।**
**ಸಶರೀರೋ ಗತಃ ಸ್ವರ್ಗಮದ್ಯಾಪಿ ದಿವಿ ದೃಶ್ಯತೇ ॥೬೨॥**

**ಗುರೋಃ** ವಸಿಷ್ಠರ, **ಶಾಪಾತ್** ಶಾಪದಿಂದ, **ಚಂಡಾಲತಾಂ** ಚಂಡಾಲತ್ವವನ್ನು, **ಪ್ರಾಪ್ತಃ** ಹೊಂದಿರುವ, **ಕೌಶಿಕತೇಜಸಾ** ವಿಶ್ವಾಮಿತ್ರರ ಪ್ರಭಾವದಿಂದ, **ಸಶರೀರಃ** ದೇಹಸಹಿತವಾಗಿ, **ಸ್ವರ್ಗಂ** ಸ್ವರ್ಗವನ್ನು, **ಗತಃ** ಹೊಂದಿದ ಈತನು, **ಅದ್ಯಾಪಿ** ಈಗಲೂ **ದಿವಿ** ಅಂತರಿಕ್ಷದಲ್ಲಿ, **ದೃಶ್ಯತೇ** ತೋರುತ್ತಾನೆ.

**ತಾತ್ಪರ್ಯ-** ಈತನು ವಸಿಷ್ಠರ ಶಾಪದಿಂದ ಚಂಡಾಲತ್ವವನ್ನು ಹೊಂದಿದನು. ವಿಶ್ವಾಮಿತ್ರರ ಪ್ರಭಾವದಿಂದ ದೇಹಸಮೇತ ಸ್ವರ್ಗಕ್ಕೆ ಹೋದನು. ಈಗಲೂ ತ್ರಿಶಂಕುವು ಅಂತರಿಕ್ಷದಲ್ಲಿ ಕಾಣುತ್ತಾನೆ. ॥೬೨॥

**ಪಾತಿತೋಽವಾಕ್‌ಶಿರಾ ದೇವೈಸ್ತೇನೈವ ಸ್ತಂಭಿತೋ ಬಲಾತ್ ।**
**ತ್ರೈಶಂಕವೋ ಹರಿಶ್ಚಂದ್ರೋ ವಿಶ್ವಾಮಿತ್ರವಸಿಷ್ಠಯೋಃ ॥೬೩॥**

**ಯನ್ನಿಮಿತ್ತಮಭೂದ್ಯುದ್ಧಂ ಪಕ್ಷಿಣೋರ್ಬಹುವಾರ್ಷಿಕಮ್ ।**
**ಸೋಽನಪತ್ಯೋ ವಿಷಣ್ಣಾತ್ಮಾ ನಾರದಸ್ಯೋಪದೇಶತಃ ॥೬೪॥**

**ವರುಣಂ ಶರಣಂ ಯಾತಃ ಪುತ್ರೋ ಮೇ ಜಾಯತಾಂ ಪ್ರಭೋ ।**
**ಯದಿ ವೀರೋ ಮಹಾರಾಜ ತೇನೈವ ತ್ವಾಂ ಯಜೇ ಇತಿ ॥೬೫॥**

**ದೇವೈಃ** ದೇವತೆಗಳಿಂದ, **ಅವಾಕ್‌ಶಿರಾಃ** ತಲೆಕೆಳಗಾಗಿ, **ಪಾತಿತಃ** ಕೆಳಗೆ ಕೆಡವಲ್ಪಟ್ಟ ಈ ತ್ರಿಶಂಕುವು, **ತೇನೈವ** ಈ ವಿಶ್ವಾಮಿತ್ರನಿಂದಲೇ, **ಬಲಾತ್** ಬಲಾತ್ಕಾರವಾಗಿ,

**ಸ್ತಂಭಿತಃ** ಅಂತರಿಕ್ಷದಲ್ಲಿ ಸ್ಥಾಪಿಸಲ್ಪಟ್ಟನು. **ತ್ರೈಶಂಕವಃ** ಈ ತ್ರಿಶಂಕುವಿನ ಪುತ್ರನಾದ **ಹರಿಶ್ಚಂದ್ರಃ** ಹರಿಶ್ಚಂದ್ರನು, **ವಿಶ್ವಾಮಿತ್ರವಸಿಷ್ಠಯೋಃ** ವಿಶ್ವಾಮಿತ್ರವಸಿಷ್ಠರಿಗೆ

**ಪಕ್ಷಿಣೋಃ** ಪಕ್ಷಪಾತವನ್ನು ವಹಿಸಿದ (ವಿಶ್ವಾಮಿತ್ರವಸಿಷ್ಠರಿಗೆ) **ಯನ್ನಿಮಿತ್ತಂ** ಯಾವ ಹರಿಶ್ಚಂದ್ರನ ನಿಮಿತ್ತವಾಗಿ, **ಬಹುವಾರ್ಷಿಕಂ** ಬಹುವರ್ಷ ಪರ್ಯಂತವಾದ, **ಯುದ್ಧಂ** ಯುದ್ಧವು, **ಅಭೂತ್** ಆಯಿತೋ, **ಸಃ** ಆ ಹರಿಶ್ಚಂದ್ರನು, **ಅನಪತ್ಯಃ** ಸಂತತಿ ಇಲ್ಲದವನಾಗಿ, **ವಿಷಣ್ಣಾತ್ಮಾ** ದುಃಖಗೊಂಡ ಮನಸ್ಸುಳ್ಳವನಾಗಿ, **ನಾರದಸ್ಯ** ನಾರದರ, **ಉಪದೇಶತಃ** ಉಪದೇಶದ ದೆಶೆಯಿಂದ

**ವರುಣಂ** ವರುಣನನ್ನು, **ಶರಣಂ** ಮೊರೆಯನ್ನು **ಯಾತಃ** ಹೊಂದಿದನು. **ಪ್ರಭೋ!** ಸ್ವಾಮಿನ್ ವರುಣನೇ ! **ಮೇ** ನನಗೆ, **ಪುತ್ರಃ** ಮಗನು **ಜಾಯತಾಂ** ಹುಟ್ಟಲಿ ಎಂದು ಪ್ರಾರ್ಥಿಸಿದನು. **ಮಹಾರಾಜ** ಹೇ ವರುಣ ರಾಜನೇ! **ವೀರಃ** ವೀರನಾದ ಮಗನನ್ನು, **ಯದಿ** ವರವನ್ನು ನನಗೆ ಕರುಣಿಸಿದರೆ **ತೇನೈವ** ಆ ಮಗನಿಂದಲೇ, **ತ್ವಾಂ** ನಿನ್ನನ್ನು, **ಯಜೇ** ಯಾಗಮಾಡುತ್ತೇನೆ. ಆ ಮಗನನ್ನು ನಿನಗೋಸ್ಕರ ಯಾಗದಲ್ಲಿ ಹವಿಸ್ಸು ರೂಪವಾಗಿ ಸಮರ್ಪಿಸುತ್ತೇನೆ. **ಇತಿ** ಎಂದು ಹೇಳಿದನು.

**ತಾತ್ಪರ್ಯ-** ಈ ತ್ರಿಶಂಕುವು ವಿಶ್ವಾಮಿತ್ರರ ಸಹಾಯದಿಂದ ಸ್ವರ್ಗದಲ್ಲಿ ದೇಹ ಸಹಿತನಾಗಿ ಪ್ರವೇಶಿಸುತ್ತಿರಲು, ದೇವತೆಗಳು ಈತನನ್ನು ತಲೆಕೆಳಗಾಗಿ ಭೂಮಿಗೆ ಕೆಡವಿದರು. ಆಗ ವಿಶ್ವಾಮಿತ್ರರೇ ಈತನನ್ನು ಬಲಾತ್ಕಾರವಾಗಿ ಅಂತರಿಕ್ಷದಲ್ಲಿ ಸ್ಥಾಪಿಸಿದರು. ಈ ತ್ರಿಶಂಕುವಿನ ಮಗನೇ ಹರಿಶ್ಚಂದ್ರನು ವಸಿಷ್ಠ, ವಿಶ್ವಾಮಿತ್ರರ ವಿವಾದದಲ್ಲಿ ಕಷ್ಟಕ್ಕೆ ಗುರಿಯಾದನು. ॥೬೩॥

ಈ ಹರಿಶ್ಚಂದ್ರನ ನಿಮಿತ್ತವಾಗಿ ವಿಶ್ವಾಮಿತ್ರ, ವಸಿಷ್ಠರಿಗೆ ಬಹುವರ್ಷ ಪರ್ಯಂತ ಕಲಹವು ಆಯಿತು. ಈ ಹರಿಶ್ಚಂದ್ರನು ತನಗೆ ಸಂತತಿ ಆಗಲಿಲ್ಲ-ವಾದ್ದರಿಂದ ನಾರದರ ಉಪದೇಶದಿಂದ, ವರುಣನನ್ನು ಸೇವಿಸಿದನು. ॥೬೪॥

ಪ್ರಭುವಾದ ವರುಣರಾಜನೇ! ನನಗೆ ಮಗನನ್ನು ನೀನು ಕರುಣಿಸಿದರೆ ಆ ಮಗನನ್ನು ನಿನಗೊಸ್ಕರ ಯಾಗದಲ್ಲಿ ಹವಿಸ್ಸನ್ನಾಗಿ ಕೊಡುತ್ತೇನೆ ಎಂದು ಹೇಳಿದನು. ॥೬೫॥

**ತಥೇತಿ ವರುಣೇನೋಕ್ತೋ ಪುತ್ರೋ ಜಾತಸ್ತು ರೋಹಿತಃ ।**
**ಜಾತಃ ಸುತೋ ಹ್ಯನೇನಾಂಗ ಮಾಂ ಯಜಸ್ವೇತಿ ಸೋಽಬ್ರವೀತ್ ॥೬೬॥**

**ವರುಣೇನ** ವರುಣನಿಂದ, **ತಥಾ ಇತಿ** ಹಾಗೆ ಆಗಲೆಂದು **ಉಕ್ತಃ** ಹೇಳಲ್ಪಟ್ಟನು. **ರೋಹಿತಃ** ರೋಹಿತನೆಂಬ, **ಪುತ್ರಃ** ಮಗನು, **ಜಾತಃ** ಅವತರಿಸಿದನು. **ಸಃ** ಆ

ವರುಣನು, **ಅಂಗ** ಪ್ರೀತಿಪಾತ್ರನೇ **ಸುತಃ** ಮಗನು **ಜಾತಃ** ಜನಿಸಿದ್ದಾನೆ **ಅನೇನ** ಈ ಮಗನಿಂದ, **ಮಾಂ** ನನ್ನನ್ನು, (ಕುರಿತು) **ಯಜಸ್ವ** ಯಾಗ ಮಾಡು ಇತಿ ಈ ರೀತಿಯಾಗಿ, **ಅಬ್ರವೀತ್** ಹೇಳಿದನು.

**ತಾತ್ಪರ್ಯ-** ವರುಣನು ಹಾಗೆ ಆಗಲೆಂದು ವರವನ್ನು ಕೊಟ್ಟನು. ಇವನಲ್ಲಿ ರೋಹಿತನೆಂಬ ಮಗನು ಜನಿಸಿದನು. ಆಗ ವರುಣನು ರಾಜನೇ ನಿನಗೆ ಮಗನು ಅವತರಿಸಿರುತ್ತಾನೆ. ಈ ಮಗನಿಂದ ನನಗಾಗಿ ಯಾಗ ಮಾಡು ಎಂದು ಹೇಳಿದನು. (ನಿನ್ನ ಮಗನನ್ನು ಯಾಗದಲ್ಲಿ ಹವಿಸ್ಸಾಗಿ ಅರ್ಪಿಸು). ॥೬೬॥

**ಯದಾ ಪಶುರ್ನಿರ್ದಶಃ ಸ್ಯಾದಥ ಮೇಧ್ಯೋ ಭವೇದಿತಿ ।**
**ನಿರ್ದಶೇ ಚ ಸಮಾಗತ್ಯ ಯಜಸ್ವೇತ್ಯಾಹ ಸೋಽಬ್ರವೀತ್ ॥೬೭॥**

ಹರಿಶ್ಚಂದ್ರನು ಹೇಳುತ್ತಾನೆ- ವರುಣನೇ! **ಪಶುಃ** ಯಜ್ಞಪಶುರೂಪವಾದ ನನ್ನ ಮಗುವು, **ಯದಾ** ಯಾವಾಗ, **ನಿರ್ದಶಃ** ಜನ್ಮತಾಳಿ ಹತ್ತು ದಿನಗಳು, **ಸ್ಯಾತ್** ಆಗುತ್ತವೋ, **ಅಥ** ಅನಂತರದಲ್ಲಿ, **ಮೇಧ್ಯಃ** ಯಾಗಕ್ಕೆ ಪರಿಶುದ್ಧವಾದದ್ದು, **ಭವೇತ್** ಆಗುತ್ತದೆ. **ಇತಿ** ಎಂದು ಹೇಳಿದನು. **ಸಃ** ವರುಣನು, **ನಿರ್ದಶೇ** ಹತ್ತು ದಿವಸಗಳು ಕಳೆಯಲು, **ಸಮಾಗತ್ಯ** ಬಂದು, **ಯಜಸ್ವ** ಯಾಗ ಮಾಡು. **ಇತಿ** ಹೀಗೆಂದು **ಅಬ್ರವೀತ್** ಹೇಳಿದನು.

**ತಾತ್ಪರ್ಯ-** ಹರಿಶ್ಚಂದ್ರನು ವರುಣನನ್ನು ಕುರಿತು ಹೇಳುತ್ತಾನೆ. ಈ ಯಜ್ಞಪಶು ರೂಪನಾದ ನನ್ನ ಮಗನು ಜನ್ಮತಾಳಿ ಹತ್ತುದಿನಗಳಾದ ಮೇಲೆ ಯಾಗಕ್ಕೆ ಪರಿಶುದ್ಧವಾಗುತ್ತಾನೆ. ಈ ಮಾತಿನಿಂದ ಹತ್ತು ದಿನ ಕಳೆದ ಮೇಲೆ ಆ ವರುಣನು ಬಂದು ಹರಿಶ್ಚಂದ್ರನ ಮಗನನ್ನು ಆಹುತಿ ಕೊಡುವಂತೆ ಕೇಳಿದನು. ॥೬೭॥

**ದಂತಾಃ ಪಶೋರ್ಯಜ್ಜಾಯೇರನ್ನಥ ಮೇಧ್ಯೋ ಭವೇದಿತಿ ।**
**ಜಾತಾ ದಂತಾ ಯಜಸ್ವೇತಿ ಸ ಪ್ರತ್ಯಾಹಾಥ ಸೋಽಬ್ರವೀತ್ ॥೬೮॥**

**ಯತ್** ಯಾವಾಗ **ಪಶೋಃ** ಆ ಆವಿರ್ಭೂತವಾದ ಮಗುವಿಗೆ **ದಂತಾಃ** ದಂತಗಳು **ಜಾಯೇರನ್** ಹುಟ್ಟುತ್ತವೆಯೋ, **ಅಥ** ಅನಂತರ, **ಮೇಧ್ಯಃ** ಪರಿಶುದ್ಧವಾದದ್ದು **ಭವೇತ್** ಆಗುತ್ತದೆ **ಇತಿ** ಹೀಗೆಂದು ಹೇಳಿದನು. **ಅಥ** ಅನಂತರದಲ್ಲಿ, **ದಂತಾಃ** ಹಲ್ಲುಗಳು, **ಜಾತಾಃ** ಹುಟ್ಟಿರುತ್ತವೆ. ಆದ್ದರಿಂದ, **ಯಜಸ್ವ** ಆಹುತಿ ಕೊಡು ಎಂದು **ಪ್ರತ್ಯಾಹ** ವರುಣನು ಕೇಳಿದನು. ಅದಕ್ಕೆ **ಸಃ** ಹರಿಶ್ಚಂದ್ರನು **ಅಬ್ರವೀತ್** ಹೇಳಿದನು.

**ತಾತ್ಪರ್ಯ-** ಹರಿಶ್ಚಂದ್ರನು ಈ ಪಶುರೂಪನಾದ ಮಗುವಿಗೆ ಹಲ್ಲು ಹುಟ್ಟಿದ ಅನಂತರ ಶುದ್ಧವಾದ ಹವಿಸ್ಸಾಗುತ್ತದೆ ಎಂದು ಹೇಳಿದನು. ಅನಂತರ ಮಗುವಿಗೆ

ಹಲ್ಲು ಹುಟ್ಟಿತು. ಯಾಗದಲ್ಲಿ ನನಗೋಸ್ಕರ ಆಹುತಿ ಕೊಡು ಎಂದು ವರುಣನು ಕೇಳಿದನು. ||೬೮||

**ಯದಾಪತಂತ್ಯಸ್ಯದಂತಾ ಅಥ ಮೇಧ್ಯೋ ಭವೇದಿತಿ |**
**ಪಶೋರ್ನಿಪತಿತಾ ದಂತಾ ಯಜಸ್ವೇತ್ಯಾಹ ಸೋಽಬ್ರವೀತ್ ||೬೯||**

**ಯದಾ** ಯಾವಾಗ **ಅಸ್ಯ** ಈ (ಪಶು) ಮಗುವಿಗೆ **ದಂತಾಃ** ಹಲ್ಲುಗಳು **ನಿಪತಂತಿ** ಬೀಳುತ್ತವೆಯೋ **ಅಥ** ಅನಂತರ, **ಮೇಧ್ಯಃ** ಶುದ್ಧವಾದದ್ದು **ಭವೇತ್** ಆಗುತ್ತದೆ. **ಇತಿ** ಈ ರೀತಿಯಾಗಿ ಹೇಳಿದನು. **ಸಃ** ಆ ವರುಣನು ''**ಪಶೋಃ** ಈ (ಪಶು) ಮಗುವಿನ **ದಂತಾಃ** ಹಲ್ಲುಗಳು, **ನಿಪತಿತಾಃ** ಬಿದ್ದವು. ಆದ್ದರಿಂದ **ಯಜಸ್ವ** ಹೋಮ ಮಾಡು'' ಇತಿ ಹೀಗೆಂದು **ಅಬ್ರವೀತ್** ಹೇಳಿದನು.

**ತಾತ್ಪರ್ಯ-** ಹರಿಶ್ಚಂದ್ರನು ಹೇಳುತ್ತಾನೆ. ವರುಣನೇ 'ಈ ಮಗುವಿನ ಹಲ್ಲು ಯಾವಾಗ ಬೀಳುತ್ತದೆಯೋ ಆಗ ಹವಿಸ್ಸಿಗೆ ಶುದ್ಧವಾದದ್ದು ಆಗುತ್ತದೆ'. ಆಗ ವರುಣನು ಈ ಪಶುವಿನ ಹಲ್ಲು ಬಿದ್ದಿರುತ್ತದೆ. ಆದ್ದರಿಂದ ಇದನ್ನು ಹವಿಸ್ಸು ಮಾಡಿಕೊಂಡು ಯಾಗ ಮಾಡು'' ಎಂದನು. ||೬೯||

**ಯದಾ ಪಶೋಃ ಪುನರ್ದಂತಾ ಜಾಯಂತೇಽಥ ಪಶುಃ ಶುಚಿಃ |**
**ಪುನರ್ಜಾತಾ ಯಜಸ್ವೇತಿ ಸ ಪ್ರತ್ಯಾಹಾಥ ಸೋಽಬ್ರವೀತ್ ||೭೦||**

**ಯದಾ** ಯಾವಾಗ **ಪಶೋಃ** ಈ ಯಾಗ ಪಶುವಿಗೆ (ಮಗು) **ಪುನಃ** ಮತ್ತೆ **ದಂತಾಃ** ಹಲ್ಲುಗಳು **ಜಾಯಂತೇ** ಹುಟ್ಟುತ್ತವೆಯೋ **ಅಥ** ಅನಂತರ **ಪಶುಃ** ಈ ಪಶುವು (ಹವಿಸ್ಸು) **ಶುಚಿಃ** ಶುಚಿಯಾಗುತ್ತದೆ ಎಂದು ಹೇಳಿದನು. **ಅಥ** ಅನಂತರದಲ್ಲಿ **ಸಃ** ಆ ವರುಣನು, **ಪುನಃ** ಮತ್ತೆ , **ಜಾತಾಃ** ಹಲ್ಲು ಹುಟ್ಟಿದವು. **ಯಜಸ್ವ** ''ಯಾಗ ಮಾಡಿ ಹವಿಸ್ಸನ್ನು ಕೊಡು'' ಎಂದು **ಅಬ್ರವೀತ್** ಹೇಳಿದನು. **ಸಃ** ಹರಿಶ್ಚಂದ್ರನು, **ಪ್ರತ್ಯಾಹ** ಪುನಃ ಹೇಳಿದನು.

**ತಾತ್ಪರ್ಯ-** ''ಯಾವಾಗ ಈ ಪಶುವಿಗೆ ಪುನಃ ದಂತವು ಹುಟ್ಟುತ್ತದೆಯೋ ಆಗ ಈ ಹವಿಸ್ಸು ಶುಚಿಯಾಗುತ್ತದೆ'' ಎಂದು ಹೇಳಿದನು. ಆಗ ವರುಣನು ''ಈ ಪಶುವಿಗೆ ಹಲ್ಲುಗಳು ಪುನಃ ಹುಟ್ಟಿದವು. ಯಾಗ ಮಾಡಿ ಹವಿಸ್ಸನ್ನು ಕೊಡು'' ಎಂದು ಹೇಳಿದನು. ಇದಕ್ಕೆ ಹರಿಶ್ಚಂದ್ರನು ಉತ್ತರ ಹೇಳುತ್ತಾನೆ. ||೭೦||

**ಸಾನ್ನಾಹುಕೋ ಯದಾ ರಾಜನ್ ರಾಜನ್ಯೋಽಥ ಪಶುಃ ಶುಚಿಃ |**
**ಇತಿ ಪುತ್ರಾನುರಾಗೇಣ ಸ್ನೇಹಯಂತ್ರಿತಚೇತಸಾ |**
**ಕಾಲಂ ವಂಚಯತಾ ತಂ ತಮುಕ್ತೋ ದೇವಸ್ತಮೈಕ್ಷತ ||೭೧||**

**ರಾಜನ್!** ವರುಣನೇ **ಯದಾ** ಯಾವಾಗ, **ರಾಜನ್ಯಃ** ಕ್ಷತ್ರಿಯನು, **ಸಾನ್ನಾಹುಕಃ** ಶಸ್ತ್ರಾಸ್ತ್ರ ಗ್ರಹಣ ಯೋಗ್ಯನು ಆಗುತ್ತಾನೋ, **ತದಾ** ಆಗ **ಪಶುಃ** ಈ ಯಾಗ ಪಶುವು, **ಶುಚಿಃ** ಶುಚಿಯಾಗುತ್ತದೆ. **ಇತಿ** ಈ ರೀತಿಯಾಗಿ, **ಪುತ್ರಾನುರಾಗೇಣ** ಪುತ್ರಪ್ರೀತಿಸಹಿತವಾದ, **ಸ್ನೇಹಯಂತ್ರಿತಚೇತಸಾ** ಪ್ರೇಮದಿಂದ ಪ್ರೇರಿತವಾದ ಮನಸ್ಸಿನಿಂದ, **ತಂ ತಂ ಕಾಲಂ** ಆ ಆ ಸಮಯವನ್ನು, **ವಂಚಯತಾ** ವಂಚಿಸುತ್ತಿರುವ, ಹರಿಶ್ಚಂದ್ರನಿಂದ **ಉಕ್ತಃ** ಹೇಳಿಸಿಕೊಳ್ಳಲ್ಪಟ್ಟ, **ದೇವಃ** ವರುಣದೇವನು, **ಸ್ನೇಹಯಂತ್ರಿತಚೇತಸಾ** ಈ ಮನುಷ್ಯಪಶುವು ನನಗೆ ದೊರೆಯುತ್ತದೆ ಎನ್ನುವ ಆಶೆಯಿಂದ, **ತಂ ತಂ** ಆ ಆ ಕಾಲವನ್ನು, **ಐಕ್ಷತ** ನೋಡಿದನು.

**ತಾತ್ಪರ್ಯ–** ವರುಣನೇ! ಯಾವಾಗ ಕ್ಷತ್ರಿಯನು ಶಸ್ತ್ರಾಸ್ತ್ರಗಳನ್ನು ಧರಿಸಲು ಯೋಗ್ಯನಾಗುತ್ತಾನೋ ಆಗ ಈ ಯಾಗಪಶು ಶುಚಿಯಾಗುತ್ತಾನೆ. ಈ ರೀತಿಯಾಗಿ ಪುತ್ರಸ್ನೇಹದಿಂದ ಪ್ರೇರಿತನಾಗಿ ಕಾಲವನ್ನು ಕಳೆಯುತ್ತಿರುವ ಹರಿಶ್ಚಂದ್ರನನ್ನು ವರುಣ ದೇವನು ಆ ಆ ಕಾಲವನ್ನು ಪ್ರತೀಕ್ಷಿಸಿದನು. ।।೭೧।।

**ರೋಹಿತಸ್ತದಭಿಜ್ಞಾಯ ಪಿತುಃ ಕರ್ಮ ಚಿಕೀರ್ಷಿತಮ್ ।**
**ಪ್ರಾಣಪ್ರೇಪ್ಸುರ್ಧನುಃಪಾಣಿರರಣ್ಯಂ ಪ್ರತ್ಯಪದ್ಯತ ।।೭೨।।**

**ರೋಹಿತಃ** ರೋಹಿತನು, **ಪಿತುಃ** ತಂದೆಯ ದೆಶೆಯಿಂದ, **ಚಿಕೀರ್ಷಿತಂ** ತನ್ನನ್ನು ಆಹುತಿಕೊಡಲು ಅಪೇಕ್ಷೆಯುಳ್ಳ, **ತತ್** ಆ **ಕರ್ಮ** ಕೆಲಸವನ್ನು, **ಅಭಿಜ್ಞಾಯ** ತಿಳಿದು, **ಪ್ರಾಣಪ್ರೇಪ್ಸುಃ** ತನ್ನ ಪ್ರಾಣರಕ್ಷಣೆಯ ಅಪೇಕ್ಷೆಯುಳ್ಳವನಾಗಿ, **ಧನುಃಪಾಣಿಃ** ಕೈಯಲ್ಲಿ ಧನಸ್ಸನ್ನು ಹಿಡಿದುಕೊಂಡು, **ಅರಣ್ಯಂ** ಅರಣ್ಯವನ್ನು, **ಪ್ರತ್ಯಪದ್ಯತ** ಹೊಂದಿದನು (ಪ್ರವೇಶಿಸಿದನು).

**ತಾತ್ಪರ್ಯ–** ರೋಹಿತನು ತಂದೆಯು ತನ್ನನ್ನು ಆಹುತಿ ಕೊಡಲು ಅಪೇಕ್ಷಿಸಿದ ಕರ್ಮವನ್ನು ತಿಳಿದು ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಲು ಧನುಃಪಾಣಿಯಾಗಿ ಅರಣ್ಯವನ್ನು ಪ್ರವೇಶಿಸಿದನು. ।।೭೨।।

**ಪಿತರಂ ವರುಣಗ್ರಸ್ತಂ ಶ್ರುತ್ವಾ ಜಾತಂ ಮಹೋದರಮ್ ।**
**ರೋಹಿತೋ ಗ್ರಾಮಮೇಯಾಯ ತಮಿಂದ್ರಃ ಪ್ರತ್ಯಷೇಧತ ।।೭೩।।**

**ರೋಹಿತಃ** ರೋಹಿತನು, **ವರುಣಗ್ರಸ್ತಂ** ವರುಣನಿಂದ ಪೀಡಿತನಾದ, **ಪಿತರಂ** ತಂದೆಯನ್ನು, **ಮಹೋದರಂ** ಮಹೋದರ ರೋಗವನ್ನು, **ಜಾತಂ** ಹೊಂದಿರುವುದನ್ನು, **ಶ್ರುತ್ವಾ** ಕೇಳಿ, **ಗ್ರಾಮಂ** ಗ್ರಾಮವನ್ನು ಕುರಿತು **ಏಯಾಯ** ಹೊರಟನು. **ಇಂದ್ರಃ** ಇಂದ್ರನು, **ತಂ** ಗ್ರಾಮಕ್ಕೆ ಹಿಂದುರಿಗಿ ಬರುತ್ತಿರುವ **ತಂ** ರೋಹಿತನನ್ನು, **ಪ್ರತ್ಯಷೇಧತ** ತಡೆದನು.

**ತಾತ್ಪರ್ಯ-** ರೋಹಿತನು ತನ್ನ ತಂದೆಯು ವರುಣನಿಂದ ಪೀಡಿತನಾಗಿ ಮಹೋದರ ರೋಗವನ್ನು ಹೊಂದಿರುವುದನ್ನು ಕೇಳಿ ತನ್ನ ಗ್ರಾಮಕ್ಕೆ ಬರಲು ಅಪೇಕ್ಷಿಸಿದನು. ದೇವೇಂದ್ರನು ಈತನನ್ನು ಗ್ರಾಮಕ್ಕೆ ಹಿಂತಿರುಗಿ ಬರದಂತೆ ನಿಷೇಧಿಸಿದನು. ||೭೩||

**ಭೂಮೇಃ ಪರ್ಯಟನಂ ಪುಣ್ಯಂ ತೀರ್ಥಕ್ಷೇತ್ರನಿಷೇವಣೈಃ |**
**ರೋಹಿತಾಯಾದಿಶಚ್ಛಕ್ರಃ ಸೋಽಪ್ಯರಣ್ಯೇಽಚರತ್ಸಮಾಃ ||೭೪||**

**ಶಕ್ರಃ** ಇಂದ್ರನು, **ರೋಹಿತಾಯ** ರೋಹಿತನಿಗೆ, **ತೀರ್ಥಕ್ಷೇತ್ರನಿಷೇವಣೈಃ** ತೀರ್ಥಕ್ಷೇತ್ರಗಳ ಸೇವನೆಗಳಿಂದ ಸಹಿತವಾಗಿ, **ಭೂಮೇಃ** ಭೂಮಿಯ, **ಪರ್ಯಟನಂ** ಸಂಚಾರವು, **ಪುಣ್ಯಂ** ಪುಣ್ಯಕರವಾದದ್ದು, ಎಂದು **ರೋಹಿತಾಯ** ರೋಹಿತನಿಗಾಗಿ, **ಆದಿಶತ್** ಅಪ್ಪಣೆ ಮಾಡಿದನು. **ಸಃ ಅಪಿ** ರೋಹಿತನಾದರು, **ಸಮಾಃ** ಅನೇಕ ವರ್ಷಪರ್ಯಂತ **ಅರಣ್ಯೇ** ಅರಣ್ಯದಲ್ಲಿ, **ಅಚರತ್** ಸಂಚಾರ ಮಾಡಿದನು.

**ತಾತ್ಪರ್ಯ-** ಇಂದ್ರನು ರೋಹಿತನಿಗೆ ತೀರ್ಥಕ್ಷೇತ್ರ ಸೇವನೆಯು (ಸಂಚಾರವು) ಪುಣ್ಯಕರವೆಂದು ಅಪ್ಪಣೆ ಮಾಡಿದನು. ರೋಹಿತನಾದರೂ ಅನೇಕ ವರ್ಷಪರ್ಯಂತ ಅರಣ್ಯದಲ್ಲಿ ಸಂಚರಿಸಿದನು. ||೭೪||

**ಏವಂ ದ್ವಿತೀಯೇ ತೃತೀಯೇ ಚತುರ್ಥೇ ಪಂಚಮೇ ತಥಾ |**
**ಅಭ್ಯೇತ್ಯಾಭ್ಯೇತ್ಯ ಸ್ಥವಿರೋ ವಿಪ್ರೋ ಭೂತ್ವಾಽಽಹ ವೃತ್ರಹಾ ||೭೫||**

**ಏವಂ** ಈ ರೀತಿಯಾಗಿ, **ದ್ವಿತೀಯೇ** ಎರಡನೆಯ, **ತೃತೀಯೇ** ಮೂರನೆಯ, **ಚತುರ್ಥೇ**, ನಾಲ್ಕನೆಯ, **ಪಂಚಮೇ** ಐದನೆಯ ವರುಷಗಳಲ್ಲಿ **ವೃತ್ರಹಾ** ಇಂದ್ರನು, **ಸ್ಥವಿರಃ** ವೃದ್ಧನಾದ, **ವಿಪ್ರಃ** ಬ್ರಾಹ್ಮಣನು, **ಭೂತ್ವಾ** ಆಗಿ, **ಅಭ್ಯೇತ್ಯ** ಎದುರಿಗೆ ಬಂದು **ಆಹ** ಹೇಳಿದನು.

**ತಾತ್ಪರ್ಯ-** ದೇವೇಂದ್ರನು ಈ ರೀತಿಯಾಗಿ ವೃದ್ಧ ಬ್ರಾಹ್ಮಣನಾಗಿ ಎರಡು, ಮೂರು, ನಾಲ್ಕು ಮತ್ತು ಐದು ವರ್ಷಗಳವರೆಗೂ ರೋಹಿತನ ಎದುರಿಗೆ ಬಂದು ಹೇಳಿದನು. ||೭೫||

**ಷಷ್ಠಂ ಸಂವತ್ಸರಂ ತತ್ರ ಚರಿತ್ವಾ ರೋಹಿತಃ ಪುರೀಮ್ |**
**ಉಪವ್ರಜನ್ನಜೀಗರ್ತಾದಕ್ರೀಣಾನ್ಮಧ್ಯಮಂ ಸುತಮ್ |**
**ಶುನಃಶೇಪಂ ಪಶುಂ ಪಿತ್ರೇ ಪ್ರದಾಯ ಸಮವಂದತ ||೭೬||**

**ರೋಹಿತಃ** ರೋಹಿತನು, **ತತ್ರ** ಅಲ್ಲಿ, **ಷಷ್ಠಂಸಂವತ್ಸರಂ** ಆರು ವರ್ಷ ಪರ್ಯಂತ, **ಚರಿತ್ವಾ** ಸಂಚರಿಸಿ, **ಪುರೀಂ** ತನ್ನ ಪಟ್ಟಣವನ್ನು ಕುರಿತು **ಉಪವ್ರಜನ್** ಹೋಗುತ್ತಾ ,

**ಅಜೀಗರ್ತಾತ್** ಅಜೀಗರ್ತರೆಂಬ ಋಷಿಗಳಿಂದ, **ಮಧ್ಯಮಂ** ಮಧ್ಯಮನಾದ, **ಶುನಃಶೇಪಂ** ಶುನಃಶೇಪನೆಂಬ, **ಸುತಂ** ಮಗನನ್ನು, **ಅಕ್ರೀಣಾತ್** ನೂರು ಆಕಳನ್ನು ಕೊಟ್ಟು ಸ್ವೀಕರಿಸಿದನು. **ಶುನಃಶೇಪಂ ಪಶುಂ** ಶುನಃಶೇಪನೆಂಬ ಪಶುವನ್ನು, **ಪಿತ್ರೇ** ತಂದೆಗೋಸ್ಕರ, **ಪ್ರದಾಯ** ಕೊಟ್ಟು, **ಸಮವಂದತ** ನಮಸ್ಕರಿಸಿದನು.

**ತಾತ್ಪರ್ಯ-** ರೋಹಿತನು ಅಲ್ಲಿ ಆರು ಸಂವತ್ಸರ ಪರ್ಯಂತ ಸಂಚರಿಸಿ ತನ್ನ ಪಟ್ಟಣವನ್ನು ಸೇರುತ್ತಿರುವಾಗ, ಅಜೀಗರ್ತ ಎಂಬ ಋಷಿಗಳಿಂದ, ಮಧ್ಯಮ ಪುತ್ರನಾದ ಶುನಃಶೇಪನೆಂಬ ಪಶುವನ್ನು ವಿಕ್ರಯಿಸಿ ತಂದು ತಂದೆಗೋಸ್ಕರ ಕೊಟ್ಟು ನಮಸ್ಕರಿಸಿದನು. ।।೭೬।।

**ತತಃ ಪುರುಷಮೇಧೇನ ಹರಿಶ್ಚಂದ್ರೋ ಮಹಾಯಶಾಃ ।**
**ಮುಕ್ತೋದರೋ ಯಜನ್ ದೇವಾನ್ ವರುಣಾದೀನ್ ಮಹಾಕ್ರತೌ।।೭೭।।**

**ತತಃ** ಅನಂತರದಲ್ಲಿ **ಮಹಾಯಶಾಃ** ಮಹಾಕೀರ್ತಿ ಶಾಲಿಯಾದ **ಹರಿಶ್ಚಂದ್ರಃ** ಹರಿಶ್ಚಂದ್ರನು, **ಪುರುಷಮೇಧೇನ,** ಪುರುಷಯಾಗದಿಂದ, **ವರುಣಾದೀನ್** ವರುಣನೇ ಮೊದಲಾದ, **ದೇವಾನ್** ದೇವತೆಗಳನ್ನು, **ಮಹಾಕ್ರತೌ** ಯಾಗದಲ್ಲಿ, **ಯಜನ್** ಯಾಗಮಾಡುತ್ತಾ , **ಮುಕ್ತೋದರಃ** ಉದರರೋಗದಿಂದ ಮುಕ್ತನು, **ಅಭವತ್** ಆದನು.

**ತಾತ್ಪರ್ಯ-** ಅನಂತರದಲ್ಲಿ ಮಹಾಕೀರ್ತಿಶಾಲಿಯಾದ, ಹರಿಶ್ಚಂದ್ರನು ಮಹಾಯಾಗವನ್ನು ಮಾಡಿ ಪುರುಷಯಾಗದಿಂದ ವರುಣಾದಿದೇವತೆಗಳನ್ನು ತೃಪ್ತಿ ಪಡಿಸಿದನು. ತಾನು ಮಹೋದರರದಿಂದ ಮುಕ್ತನಾದನು. ।।೭೭।।

**ವಿಶ್ವಾಮಿತ್ರೋऽಭವತ್ತಸ್ಮಿನ್ ಹೋತಾಥಾಧ್ವರ್ಯುರಾತ್ಮವಾನ್ ।**
**ಜಮದಗ್ನಿರಭೂದ್ ಬ್ರಹ್ಮಾ ವಸಿಷ್ಠೋऽಯಾಸ್ಯ ಸಾಮಗಃ ।।೭೮।।**

**ತಸ್ಮಿನ್** ಆ ಯಾಗದಲ್ಲಿ **ವಿಶ್ವಾಮಿತ್ರಃ** ವಿಶ್ವಾಮಿತ್ರನು, **ಹೋತಾ** ಹೋತೃವು, **ಆತ್ಮವಾನ್** ಬ್ರಹ್ಮಜ್ಞಾನಿಯಾದ, **ಜಮದಗ್ನಿಃ** ಜಮದಗ್ನಿಗಳು, **ಅಧ್ವರ್ಯುಃ** ಅಧ್ವರ್ಯುವು, **ವಸಿಷ್ಠಃ** ವಸಿಷ್ಠರು, **ಬ್ರಹ್ಮಾ** ಬ್ರಹ್ಮನು, **ಆಯಾಸ್ಯಃ** ಆಯಾಸ್ಯರು, **ಸಾಮಗಃ** ಸಾಮಗಾನ ಮಾಡತಕ್ಕವರು, **ಅಭವತ್** ಆದರು.

**ತಾತ್ಪರ್ಯ-** ಈ ಯಾಗದಲ್ಲಿ ವಿಶ್ವಾಮಿತ್ರರು ಹೋತೃಗಳು, ಜ್ಞಾನಿಗಳಾದ ಜಮದಗ್ನಿಗಳು ಅಧ್ವರ್ಯುಗಳು, ವಸಿಷ್ಠರು ಬ್ರಹ್ಮರು, ಆಯಾಸ್ಯರು ಸಾಮಗಾನ ಮಾಡಿ ದೇವತೆಗಳನ್ನು ಕರೆಯತಕ್ಕವರೂ, ಆದರು. ।।೭೮।।

**ತಸ್ಮೈ ತುಷ್ಟೋ ದದಾವಿಂದ್ರಃ ಶಾತಕುಂಭಮಯಂ ರಥಮ್ ।**
**ಶುನಃಶೇಪಸ್ಯ ಮಾಹಾತ್ಮ್ಯಮುಪರಿಷ್ಟಾತ್ ಪ್ರಚಕ್ಷತೇ ।।೭೯।।**

**ಇಂದ್ರಃ** ದೇವೇಂದ್ರನು, **ತಸ್ಮೈ** ಆ ಶುನಃಶೇಪನಿಗಾಗಿ **ತುಷ್ಟಃ** ತೃಪ್ತನಾಗಿ, **ಶಾತಕುಂಭಮಯಂ** ಸುವರ್ಣನಿರ್ಮಿತವಾದ **ರಥಂ** ರಥವನ್ನು, **ದದೌ** ಕೊಟ್ಟನು. **ಶುನಶೇಪಸ್ಯ** ಶುನಶ್ಯೇಪನ **ಮಾಹಾತ್ಮ್ಯಂ** ಮಹಿಮೆಯನ್ನು **ಉಪರಿಷ್ಟಾತ್** ಮುಂದೆ ೧೪ ನೇ ಅಧ್ಯಾಯದಲ್ಲಿ **ಪ್ರಚಕ್ಷತೇ** ಹೇಳಲ್ಪಡುತ್ತದೆ.

**ತಾತ್ಪರ್ಯ-** ಇಂದ್ರನು ಪ್ರೀತನಾಗಿ ಶುನಃಶೇಪನಿಗೆ ಬಂಗಾರದ ರಥವನ್ನು ಕೊಟ್ಟನು. ಈತನ ಮಹಿಮೆಯನ್ನು ಮುಂದೆ ೧೪ ನೇ ಅಧ್ಯಾಯದಲ್ಲಿ ಹೇಳುತ್ತಾರೆ.

**ಸತ್ಯಸಾರಂ ಧೃತಿಂ ದೃಷ್ಟ್ವಾ ಸಭಾರ್ಯಸ್ಯ ಚ ಭೂಪತೇಃ ।**
**ವಿಶ್ವಾಮಿತ್ರೋ ಭೃಶಂ ಪ್ರೀತೋ ದದಾವವಿಹತಾಂ ಗತಿಮ್ ॥೮೦॥**

**ವಿಶ್ವಾಮಿತ್ರಃ** ವಿಶ್ವಾಮಿತ್ರನು, **ಸಭಾರ್ಯಸ್ಯ** ಹೆಂಡತಿ ಸಹಿತನಾದ, **ಭೂಪತೇಃ** ಹರಿಶ್ಚಂದ್ರನ, **ಸತ್ಯಸಾರಂ** ಸತ್ಯಸಂಧತೆಯನ್ನು **ಧೃತಿಂ** ಧೈರ್ಯವನ್ನು, **ದೃಷ್ಟ್ವಾ** ನೋಡಿ, **ಭೃಶಂ** ಹೆಚ್ಚಾಗಿ, **ಪ್ರೀತಃ** ಪ್ರೀತನಾಗಿ, **ಅವಿಹತಾಂ** ಅಪ್ರತಿಹತವಾದ, **ಗತಿಂ** ಜ್ಞಾನವನ್ನು **ದದೌ** ಕೊಟ್ಟನು.

ಪ್ರೀತನಾಗಿ ವಿಶ್ವಾಮಿತ್ರನು ಭಾರ್ಯಾಸಮೇತನಾದ ಆ ಹರಿಶ್ಚಂದ್ರನ ಸತ್ಯಸಂಧತೆ ಮತ್ತು ಧೈರ್ಯವನ್ನು ನೋಡಿ ಪ್ರೀತರಾಗಿ ಅಪ್ರತಿಹತವಾದ ಜ್ಞಾನವನ್ನು ಕೊಟ್ಟರು.

**ಮನಃ ಪೃಥಿವ್ಯಾಂ ತಾಮದ್ಭಿಸ್ತೇಜಸಾಂಭೋನಿಲೇನ ತತ್ ।**
**ಖೇ ವಾಯುಂ ಧಾರಯಂಸ್ತಚ್ಚ ಶಬ್ದಾದೌ ತನ್ಮಹಾತ್ಮನಿ ॥೮೧॥**

**ಪೃಥಿವ್ಯಾಂ** ಪೃಥ್ವೀ ತತ್ತ್ವದಲ್ಲಿ **ಮನಃ** ಮನಸ್ಸನ್ನು, **ತಾಂ** ಪೃಥ್ವಿಯನ್ನು **ಅದ್ಭಿಃ** ಜಲದಲ್ಲಿ, **ಅಂಭಃ** ಜಲವನ್ನು, **ತೇಜಸಾ** ತೇಜಸ್ಸಿನಲ್ಲೂ, **ತತ್** ಆ ತೇಜಸ್ಸನ್ನು, **ಅನಿಲೇನ** ವಾಯುವಿನಲ್ಲೂ, **ತಂ** ಆ ವಾಯುವನ್ನು, **ಖೇ** ಆಕಾಶದಲ್ಲೂ, **ಧ್ಯಾಯನ್** ಲಯಚಿಂತನ ಮಾಡುತ್ತಾ, **ತತ್** ಆಕಾಶವನ್ನು, **ಶಬ್ದಾದೌ** ತನ್ಮಾತ್ರಾಗಳಾದ ಶಬ್ದಾದಿಗಳ ಸಹಿತವಾಗಿ ಅಹಂಕಾರ ತತ್ತ್ವದಲ್ಲೂ **ತತ್** ಆ ಅಹಂಕಾರ ತತ್ತ್ವವನ್ನು, **ಮಹಾತ್ಮನಿ** ಮಹತ್ವದಲ್ಲೂ ಲಯಚಿಂತನ ಮಾಡುತ್ತಾ ಉತ್ಕ್ರಾಂತ ಸ್ಥಿತಿಯನ್ನು ಪಡೆದನು.

**ತಾತ್ಪರ್ಯ-** ಹರಿಶ್ಚಂದ್ರನು ಮನಸ್ಸನ್ನು ಪೃಥ್ವೀತತ್ತ್ವದಲ್ಲೂ, ಪಥ್ವಿಯನ್ನು ಜಲದಲ್ಲೂ, ಜಲವನ್ನು ತೇಜಸ್ಸಿನಲ್ಲೂ, ತೇಜಸ್ಸನ್ನು ವಾಯುವಿನಲ್ಲೂ, ವಾಯುವನ್ನು ಆಕಾಶತತ್ತ್ವದಲ್ಲೂ, ಆಕಾಶವನ್ನು (ಆಯಾ ಅಭಿಮಾನಿ ದೇವತೆಗಳು ಮತ್ತು ಅವುಗಳ ಮಾತ್ರಾಗಳ ಸಹಿತವಾಗಿ ತಮ್ಮ ತಮ್ಮ ಕಾರಣವಾದ ತತ್ತ್ವಗಳಲ್ಲಿ ಲಯ

ಹೊಂದುತ್ತಾ), ಅಹಂಕಾರತತ್ತ್ವದಲ್ಲಿ ಲಯ ಹೊಂದುವುದನ್ನು ಈ ಅಹಂಕಾರ ತತ್ತ್ವವನ್ನು ಮಹತ್ತತ್ತ್ವದಲ್ಲೂ ಲಯಹೊಂದುವಂತೆ ಚಿಂತಿಸುತ್ತಾ ಉತ್ಕ್ರಾಂತ ಸ್ಥಿತಿಯನ್ನು ಹೊಂದಿದನು. ।।೮೧।।

**ತಸ್ಮಿನ್ ಜ್ಞಾನಕಲಾಂ ಧ್ಯಾತ್ವಾ ತಯಾಽಜ್ಞಾನಂ ವಿನಿರ್ದಹನ್ ।**
**ಹಿತ್ವಾ ತಾಂ ಸ್ವೇನ ಭಾವೇನ ನಿರ್ವಾಣಸುಖಸಂವಿದಾ ।**
**ಅನಿರ್ದೇಶ್ಯಾಪ್ರತರ್ಕ್ಯೇಣ ತಸ್ಥೌ ವಿಧ್ವಸ್ತಬಂಧನಃ ।।೮೨।।**

**ತಸ್ಮಿನ್** ಆ ಮಹತ್ತತ್ತ್ವದಲ್ಲಿ, **ಜ್ಞಾನಕಲಾಂ** ಬುದ್ಧಿತತ್ತ್ವವನ್ನು, **ಧ್ಯಾತ್ವಾ** ಲೀನ ಹೊಂದುತ್ತದೆ ಎಂದು ಧ್ಯಾನ ಮಾಡಿ, ಬುದ್ಧಿತತ್ತ್ವಾಭಿಮಾನಿಯಾಗಿರತಕ್ಕ ಸರಸ್ವತೀ ದೇವಿಯು ಮಹತ್ತತ್ತ್ವಾಭಿಮಾನಿಯಾದ ಬ್ರಹ್ಮನಲ್ಲಿ ಸಾಯುಜ್ಯವನ್ನು ಹೊಂದುತ್ತಾಳೆ ಎಂದು ಧ್ಯಾನ ಮಾಡಿ, **ತಯಾ** ಆ ಬುದ್ಧಿಕಲೆಗೆ ಅಭಿಮಾನಿಯಾದ ಸರಸ್ವತೀದೇವಿಯಿಂದ ಅಭಿಮನ್ಯಮಾನವಾದ ಜ್ಞಾನದಿಂದ, **ಅಜ್ಞಾನಂ** ಅಜ್ಞಾನ ಕಾರ್ಯವಾದ ಸಂಸಾರವನ್ನು **ಹಿತ್ವಾ** ತ್ಯಾಗಮಾಡಿ, **ತಾಂ** ಸಂಸಾರರೂಪವಾದ ಲಿಂಗಶರೀರವನ್ನು **ಹಿತ್ವಾ** ಬಿಟ್ಟು, **ಸ್ವೇನ** ತನ್ನ, **ಭಾವೇನ** ಸ್ವರೂಪದಿಂದ, **ನಿರ್ವಾಣಸುಖಸಂವಿದಾ** ಪ್ರಾಕೃತಶರೀರದಿಂದ ಅನುಭವಿಸಲಾರದ ಸುಖಜ್ಞಾನದಿಂದ ಕೂಡಿದ ಸ್ವರೂಪದೇಹದಿಂದ, **ಅನಿರ್ದೇಶ್ಯಾಪ್ರತರ್ಕ್ಯೇಣ** ತಿಳಿಯಲಿಕ್ಕೆ ಊಹಿಸಲಿಕ್ಕೆ ಅಶಕ್ಯವಾದ ಭಗವಂತನಿಂದ ಸಹಿತವಾಗಿ, **ವಿಧ್ವಸ್ತಬಂಧನಃ ಸನ್** ಬಂಧಮುಕ್ತನಾಗಿ ಜೀವನ್ಮುಕ್ತನಾಗಿ ಮುಕ್ತಸದೃಶನಾಗಿ ಹರಿಶ್ಚಂದ್ರನು **ತಸ್ಥೌ** ವಾಸಮಾಡಿದನು. ।।೮೨।।

**ತಾತ್ಪರ್ಯ-** ಆ ಮಹತ್ತತ್ತ್ವದಲ್ಲಿ, ಬುದ್ಧಿತತ್ತ್ವ, ಲೀನ ಹೊಂದುತ್ತದೆ ಎಂದು ಧ್ಯಾನ ಮಾಡಿ, ಬುದ್ಧಿತತ್ತ್ವಾಭಿಮಾನಿಯಾಗಿರತಕ್ಕ ಸರಸ್ವತೀದೇವಿಯು ಮಹತ್ತತ್ತ್ವಾಭಿಮಾನಿಯಾದ ಬ್ರಹ್ಮನಲ್ಲಿ ಸಾಯುಜ್ಯವನ್ನು ಹೊಂದುತ್ತಾಳೆ ಎಂದು ಧ್ಯಾನ ಮಾಡಿ, ಆ ಬುದ್ಧಿಕಲೆಗೆ ಅಭಿಮಾನಿಯಾದ ಸರಸ್ವತೀದೇವಿಯಿಂದ ಅಭಿಮನ್ಯಮಾನವಾದ ಜ್ಞಾನದಿಂದ, ಅಜ್ಞಾನ ಕಾರ್ಯವಾದ ಸಂಸಾರವನ್ನು ತ್ಯಾಗ ಮಾಡಿ, ಸಂಸಾರರೂಪವಾದ ಲಿಂಗಶರೀರವನ್ನು ಬಿಟ್ಟು, ತನ್ನ, ಸ್ವರೂಪದಿಂದ, ಪ್ರಾಕೃತಶರೀರದಿಂದ ಅನುಭವಿಸಲಾರದ ಸುಖಜ್ಞಾನದಿಂದ ಕೂಡಿದ ಸ್ವರೂಪದೇಹದಿಂದ, ತಿಳಿಯಲಿಕ್ಕೆ ಊಹಿಸಲಿಕ್ಕೆ ಅಶಕ್ಯವಾದ ಭಗವಂತನಿಂದ ಸಹಿತವಾಗಿ, ಬಂಧಮುಕ್ತನಾಗಿ ಜೀವನ್ಮುಕ್ತನಾಗಿ ಮುಕ್ತಸದೃಶನಾಗಿ ಹರಿಶ್ಚಂದ್ರನು ವಾಸ ಮಾಡಿದನು. ।।೮೨।।

**★ ।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಸಪ್ತಮೋಽಧ್ಯಾಯಃ ।। ★**

## ಅಥ ಅಷ್ಟಮೋಽಧ್ಯಾಯಃ

**ಹರಿತೋ ರೋಹಿತಾದಾಸೀಚ್ಚಂಪಸ್ತಸ್ಮಾದ್ವಿನಿರ್ಮಿತಾ ।**
**ಚಂಪಾಪುರೀ ಸುದೇವೋಽತೋ ವಿಜಯೋ ಯಸ್ಯ ಚಾತ್ಮಜಃ ॥೧॥**

**ರೋಹಿತಾತ್** ಹರಿಶ್ಚಂದ್ರನ ಮಗನಾದ ರೋಹಿತನಿಂದ, **ಹರಿತಃ** ಹರಿತನು, **ಆಸೀತ್** ಹುಟ್ಟಿದನು. **ತಸ್ಮಾತ್** ಹರಿತನಿಂದ **ಚಂಪಃ** ಚಂಪನು, **ಆಸೀತ್** ಹುಟ್ಟಿದನು. **ತಸ್ಮಾತ್** ಚಂಪನಿಂದ, **ಚಂಪಾಪುರೀ** ಚಂಪಾ ಎಂಬ ಪಟ್ಟಣವು, **ವಿನಿರ್ಮಿತಾ** ನಿರ್ಮಿಸಲ್ಪಟ್ಟಿತು. **ಅತಃ** ಚಂಪನಿಂದ, **ಸುದೇವಃ** ಸುದೇವನು ಜನಿಸಿದನು, **ಯಸ್ಯ** ಯಾವ ಸುದೇವನಿಗೆ, **ವಿಜಯಃ** ವಿಜಯನು, **ಆತ್ಮಜಃ** ಮಗನು, **ಆಸೀತ್** ಆದನು.

**ತರುಕಸ್ತತ್ಸುತಸ್ತಸ್ಮಾದ್ವೃಕಸ್ತಸ್ಯಾಪಿ ಬಾಹುಕಃ ।**
**ಸೋಽರಿಭಿರ್ಹೃತರಾಜ್ಯಸ್ತು ಸಭಾರ್ಯೋ ವನಮಾವಿಶತ್ ॥೨॥**

**ತತ್ಸುತಃ** ವಿಜಯನ ಮಗನು, **ತರುಕಃ** ತರುಕನು, **ತಸ್ಮಾತ್** ತರುಕನಿಂದ, **ವೃಕಃ** ವೃಕನು **ತಸ್ಯ** ವೃಕನಿಗೆ **ಬಾಹುಕಃ** ಬಾಹುಕನು ಮಗನು, **ಸಃ** ಆ ಬಾಹುಕನು, **ಅರಿಭಿಃ** ಶತ್ರುಗಳಿಂದ **ಹೃತರಾಜ್ಯಃ** ಅಪಹರಿಸಲ್ಪಟ್ಟ ರಾಜ್ಯ ಉಳ್ಳವನಾಗಿ **ಸಭಾರ್ಯಃ** ಹೆಂಡತಿಯಿಂದ ಕೂಡಿಕೊಂಡು, **ವನಂ** ವನವನ್ನು **ಆವಿಶತ್** ಪ್ರವೇಶಿಸಿದನು. ॥೨॥

**ವೃದ್ಧಂ ತಂ ಪಂಚತಾಂ ಪ್ರಾಪ್ತಂ ಮಹಿಷ್ಯನುಮರಿಷ್ಯತೀ ।**
**ಔರ್ವೇಣ ಜಾನತಾಽತ್ಮಾನಂ ಪ್ರಜಾವಂತಂ ನಿವಾರಿತಾ ॥೩॥**

**ವೃದ್ಧಂ** ಮುದುಕನಾದ, **ಪಂಚತಾಂ** ಮರಣವನ್ನು, **ಪ್ರಾಪ್ತಂ** ಹೊಂದಿದ, **ತಂ** ಬಾಹುಕನನ್ನು, **ಅನುಮರಿಷ್ಯತೀ** ಅನುಸರಿಸಿ ಸಾಯಲಿಚ್ಛಿಸುವ (ಸಹಗಮನ ಮಾಡಲು ಅಪೇಕ್ಷಿಸುವ) **ಮಹಿಷೀ** ಅಭಿಷಿಕ್ತಳಾದ ರಾಣಿಯು, **ಆತ್ಮಾನಂ** ದೇಹವನ್ನು **ಪ್ರಜಾವಂತಂ** ಮಗು ಉಳ್ಳದ್ದನ್ನಾಗಿ **ಜಾನತಾ** ತಿಳಿದಿರುವ **ಔರ್ವೇಣ** ಔರ್ವ ಋಷಿಯಿಂದ **ನಿವಾರಿತಾ** ತಡೆಯಲ್ಪಟ್ಟಳು.

**ತಾತ್ಪರ್ಯ-** ಬಾಹುಕನು ಮುದುಕನಾಗಿ ಮರಣ ಹೊಂದಲು ಅವನ ಪತ್ನಿಯು ಸಹಗಮನ ಹೋಗಲು ಅಪೇಕ್ಷಿಸಿದಳು. ಆಗ ಅವಳು ಗರ್ಭವತಿಯಾಗಿದ್ದಳು. ಇದನ್ನು ತಿಳಿದ ಔರ್ವಋಷಿಯು ಸಹಗಮನ ಹೋಗುವುದು ಬೇಡವೆಂದು ತಡೆದನು. ॥೩॥

**ಆಜ್ಞಾಯಾಸ್ಯೈ ಸಪತ್ನೀಭಿರ್ಗರೋ ದತ್ತೋಽತ್ರ ಸಾಹಸಃ ।**
**ಸಹ ತೇನೈವ ಸಂಜಾತಃ ಸಗರಾಖ್ಯೋ ಮಹಾಯಶಾಃ ॥೪॥**

**ಅತ್ರ** ಗರ್ಭದಲ್ಲಿ, **ಆಜ್ಞಾಯ** ಮಗು ಇದೆಯೆಂದು ತಿಳಿದು, **ಸಪತ್ನೀಭಿಃ** ಸವತಿಯರಿಂದ, **ಅಸ್ಯೈ** ಬಾಹುಕನ ಹೆಂಡತಿಗೆ, **ಸಾಹಸಃ** ತತ್ ಕ್ಷಣದಲ್ಲಿಯೇ ಕೊಲ್ಲುವ **ಗರಃ** ವಿಷವು, **ದತ್ತಃ** ಕೊಡಲ್ಪಟ್ಟಿತು. **ತೇನ** ಆ ವಿಷದಿಂದ **ಸಹ ಏವ** ಕೂಡಿಕೊಂಡೇ **ಮಹಾಯಶಾಃ** ಕೀರ್ತಿಶಾಲಿಯು **ಸಂಜಾತಃ** ಹುಟ್ಟಿದನು. ಈ ಕಾರಣ ಇವನಿಗೆ **ಸಗರಾಖ್ಯಃ** ಸಗರನೆಂಬ ಹೆಸರು.

**ತಾತ್ಪರ್ಯ-** ಬಾಹುಕನ ಪತ್ನಿ ಗರ್ಭಧರಿಸಿದ್ದು ತಿಳಿದ ಅವಳ ಸವತಿಯರು ವಿಷಪಾನ ಮಾಡಿಸಿದರು. ವಿಷ ಸಹಿತವಾಗಿಯೇ ಮಗು ಜನಿಸಿತು. ಕಾರಣ ಅವನು ಸಗರನೆಂದೇ ಪ್ರಸಿದ್ಧನಾದನು. ||೪||

ಸಾಹಸಃ ಸಯಾ ಹಿಂಸೆಯಿಂದ ಸಹ ವರ್ತತ ಇತಿ ಸಹಸಃ ಕೂಡಿಕೊಂಡಿರುವದು. ಸಹಸ ಏವ ಸಾಹಸಃ ಎಂದರೆ ಮಾರಕವೆಂದರ್ಥ. ಮಾರಕವೆನ್ನದೇ ಸಾಹಸಃ ಎಂದು ಪ್ರಯೋಗಿಸುವ ಬಾದರಾಯಣರಿಗೆ ಹೀಗೂ ಅಭಿಪ್ರಾಯವಿರುವದು. ಹಸಸ್ಯ ಅಭಾವಃ ಅಹಸಃ ಅಹಸೇನ ಸಹಿತಃ ಸಾಹಸಃ ಎಂದರೆ, ಹಸಯೆಂದರೆ ಹಾಸ್ಯ ಸುಖ ಎಂದರ್ಥ. ಅಹಸ ಎಂದರೆ ದುಃಖ ಅದರಿಂದ ಕೂಡಿದ್ದು ಅಂದರೆ ತಾತ್ಕಾಲಿಕ ದುಃಖದಿಂದ ಕೂಡಿದ್ದೇ ಹೊರತು ಮಾರಕವಾಗಲಾರದು ಇದು ಅಂತ ಅಭಿಪ್ರಾಯ.

**ಸಗರಶ್ಚಕ್ರವರ್ತ್ಯಾಸೀತ್ಸಾಗರೋ ಯತ್ಸುತೈಃ ಕೃತಃ |**
**ಯಸ್ತಾಲಜಂಘಾನ್ಯವನಾಞ್ಛಕಾನ್ ಹೈಹಯಬರ್ಬರಾನ್ ||೫||**

**ಸಗರಃ** ಸಗರನು **ಚಕ್ರವರ್ತೀ** (ಇಡೀ ಪೃಥ್ವಿಯೇ ಯಾವನ ಆಜ್ಞೆಗೆ ಒಳಪಡುವದೋ ಅವನಿಗೆ ಚಕ್ರವರ್ತಿಯೆನ್ನುವರು). ಭೂಮಂಡಲಕ್ಕೆ ಅಧಿಪತಿಯು, **ಆಸೀತ್** ಆದನು. **ಯತ್ಸುತೈಃ** ಯಾವನ ಮಕ್ಕಳಿಂದ **ಸಾಗರಃ** ಸಮುದ್ರವು, **ಕೃತಃ** ಮೊದಲು ಸೂಕ್ಷ್ಮ ಇದ್ದದ್ದು ಸ್ಥೂಲಮಾಡಲ್ಪಟ್ಟಿತು, **ಯಃ** ಯಾವ ಸಗರನು **ತಾಲಜಂಘಾನ್** ತಾಲಂಜಂಘ ದೇಶದ ಜನರನ್ನು **ಯವನಾನ್** ಯವನರನ್ನು, **ಶಕಾನ್** ಈ ಹೆಸರಿನ ಜಾತಿಯ ಜನರನ್ನು **ಹೈಹಯಬರ್ಬರಾನ್** ಹೈಹಯರು ಮತ್ತು ಬರ್ಬರ ಜಾತಿಯವರನ್ನು (ಬ್ರಾಹ್ಮಣರಿಗೆ ಬೆಸ್ತರ ಹೆಂಗಸಿನಲ್ಲಿ ಹುಟ್ಟಿದವನು ತೀವರಿ. ಯವನನಿಗೆ ತೀವರಿಯಲ್ಲಿ ಜನಿಸಿದವ ಬರ್ಬರ). ||೫||

**ನಾವಧೀದ್ಗುರುವಾಕ್ಯೇನ ಚಕ್ರೇ ವಿಕೃತವೇಷಿಣಃ |**
**ಮುಂಡಾನ್ ಶ್ಮಶ್ರುಧರಾನ್ಕಾಂಶ್ಚಿನ್ಮುಕ್ತಕೇಶಾರ್ಧಮುಂಡಕಾನ್ ||೬||**

**ಗುರುವಾಕ್ಯೇನ** ದುರ್ಬಲರಾದ ಇವರಿಂದ ಏನಾಗಬೇಕಾಗಿದೆ, ಕೊಲ್ಲಬೇಡ ಗುರುತು ಮಾಡಿಬಿಡುಯೆಂಬ, ಔರ್ವರ ಮಾತಿನಿಂದ **ನ ಅವಧೀತ್** ಕೊಲ್ಲಲಿಲ್ಲ.

**ವಿಕೃತವೇಷಿಣಃ** ವಿಕಾರವಾದ ವೇಷ ಉಳ್ಳವರನ್ನಾಗಿ **ಚಕ್ರೇ** ಮಾಡಿದನು. ಅದನ್ನೇ ವಿವರಿಸುವರು, **ಮುಂಡಾನ್** ತಲೆಬೋಳಿಸಿದವರನ್ನು **ಶ್ಮಶ್ರುಧರಾನ್** ಮೀಸೆ ಬಿಟ್ಟವರನ್ನು, **ಕಾಂಶ್ಚಿತ್** ಕೆಲವರನ್ನು **ಮುಕ್ತಕೇಶಾನ್** ಅರ್ಧ ಭಾಗ ಕೂದಲಿದ್ದು **ಅರ್ಧಮುಂಡಾನ್** ಅರ್ಧ ಬೋಳಿಸಿದವರನ್ನು ಮಾಡಿದನು.

**ಅನಂತರ್ವಾಸಸಃ ಕಾಂಶ್ಚಿದಬಹಿರ್ವಾಸಸೋಽಪರಾನ್ ।**
**ಸೋಽಶ್ವಮೇಧೈರಯಜತ ಸರ್ವವೇದಸುರಾತ್ಮಕಮ್** ॥೭॥

**ಔರ್ವೋಪದಿಷ್ಟಯೋಗೇನ ಹರಿಮಾತ್ಮಾನಮೀಶ್ವರಮ್ ।**
**ತಸ್ಯೋತ್ಸೃಷ್ಟಂ ಪಶುಂ ಯಜ್ಞೇ ಜಹಾರಾಶ್ವಂ ಪುರಂದರಃ** ॥೮॥

**ಕಾಂಶ್ಚಿತ್** ಕೆಲವರನ್ನು **ಅನಂತರ್ವಾಸಸಃ** ಒಳಗೆ ಉಡುವ ಬಟ್ಟೆ ಇಲ್ಲದವರನ್ನಾಗಿ, **ಅಪರಾನ್** ಮತ್ತೆ ಕೆಲವರನ್ನು **ಅಬಹಿರ್ವಾಸಸಃ** ಹೊದೆಯುವ ಬಟ್ಟೆ ಇಲ್ಲದವರನ್ನಾಗಿ ಮಾಡಿದನು. **ಸಃ** ಸಗರನು **ಸರ್ವವೇದಸುರಾತ್ಮಕಂ** ಎಲ್ಲ ವೇದಪ್ರತಿಪಾದ್ಯನು, ದೇವತೆಗಳ ಸ್ವಾಮಿಯಾದ

**ಆತ್ಮಾನಂ** ತನ್ನ ಪ್ರಾಣರಕ್ಷಕನಾದ, (ಆತ್ಮನಃ ಅನಾಃ ಪ್ರಾಣಾಃ ಯೇನ ತಂ) **ಈಶ್ವರಂ** ಸರ್ವಸಮರ್ಥನಾದ, **ಹರಿಂ** ಪರಮಾತ್ಮನನ್ನು **ಔರ್ವೋಪದಿಷ್ಟಯೋಗೇನ** ಔರ್ವಋಷಿಗಳು ಹೇಳಿದ ಉಪಾಯದಿಂದ, **ಅಶ್ವಮೇಧೈಃ** ಅಶ್ವಮೇಧವೆಂಬ ಯಜ್ಞಗಳಿಂದ **ಅಯಜತ** ಪೂಜಿಸಿದನು. **ತಸ್ಯ** ಸಗರನ **ಯಜ್ಞೇ** ಯಜ್ಞಕ್ಕಾಗಿ, **ಉತ್ಸೃಷ್ಟಂ** ಅಭಿಮಂತ್ರಿಸಿ ದೇಶಪ್ರದಕ್ಷಿಣೆಗಾಗಿ ಬಿಟ್ಟ **ಪಶುಂ ಅಶ್ವಂ** ಯಜ್ಞಪಶುವಾದ ಕುದುರೆಯನ್ನು **ಪುರಂದರಃ** ಇಂದ್ರನು **ಜಹಾರ** ಅಪಹರಿಸಿದನು. ॥೭-೮॥

**ತಾತ್ಪರ್ಯ-** ಸಗರನು ಸಮಸ್ತ ಭೂಮಂಡಲಕ್ಕೆ ಒಬ್ಬನೇ ಅಧಿಪತಿಯಾಗಿದ್ದನು. ಈತನ ಮಕ್ಕಳು ಸಮುದ್ರವನ್ನು ವಿಸ್ತಾರಗೊಳಿಸಿದರು. ಸಗರನು ನೀಚರಾದ ತಾಲಜಂಘ, ಯವನ, ಶಕ, ಹೈಹಯ, ಬರ್ಬರ ಇವರನ್ನು ಗುರುಗಳ ಅಪ್ಪಣೆ ಇಲ್ಲದ್ದರಿಂದ ಕೊಲ್ಲದೇ ಕೆಲವರನ್ನು ತಲೆ ಬೋಳಿಸಿ, ಮೀಸೆಯನ್ನು ಹಾಗೇ ಬಿಟ್ಟನು. ಇನ್ನು ಕೆಲವರನ್ನು ವಸ್ತ್ರರಹಿತರನ್ನಾಗಿ (ನಗ್ನ) ಇನ್ನೂ ಕೆಲವರಿಗೆ ಹೊದೆಯುವ ಬಟ್ಟೆ ಇಲ್ಲದಂತೆ ವಿಕಾರ ಗೊಳಿಸಿದನು. ಇವನು ಔರ್ವರ ಉಪದೇಶದ ಪ್ರಕಾರ ಸರ್ವವೇದಪ್ರತಿಪಾದ್ಯನಾದ ಸರ್ವದೇವಾಧಿಪನಾದ ತನ್ನ ಪ್ರಾಣವನ್ನು ರಕ್ಷಿಸಿದ ಸರ್ವೇಶ್ವರನಾದ ಹರಿಯನ್ನು ಅಶ್ವಮೇಧಯಾಗದಿಂದ ಪೂಜಿಸಿದನು. ಆಗ ಯಾಗಕ್ಕಾಗಿ ಅಭಿಮಂತ್ರಿಸಿ ದೇಶಪ್ರದಕ್ಷಿಣೆಗೆ ಬಿಟ್ಟ ಕುದುರೆಯನ್ನು ಇಂದ್ರನು ಅಪಹರಿಸಿದನು. ಸಗರನು ನೂರು ಅಶ್ವಮೇಧ ಮಾಡಲು ಸಂಕಲ್ಪಿಸಿದ್ದೇ ಇಂದ್ರನ ಕೋಪಕ್ಕೆ ಕಾರಣವೆಂದು ಧ್ವನಿತವಾಗುತ್ತದೆ. ॥೫-೮॥

**ಸುಮತ್ಯಾಸ್ತನಯಾ ದೃಪ್ತಾಃ ಪಿತುರಾದೇಶಕಾರಿಣಃ ।**
**ಹಯಮನ್ವೇಷಮಾಣಾಸ್ತೇ ಸಮಂತಾತ್ ನ್ಯಖನನ್ಮಹೀಮ್ ॥೯॥**

ಸಗರನಿಗೆ ಇಬ್ಬರು ಪತ್ನಿಯರು. ವಿನತಾನ ಮಗಳು ಗರುಡನ ತಂಗಿ ಸುಮತಿಯೆಂದು ಹಿರಿಯವಳು ಇನ್ನೊಬ್ಬಳು ಕೇಶಿನಿಯೆಂದು ಕಿರಿಯವಳು. ಇವಳು ಶಿಬಿರಾಜನ ಮಗಳು ಇವಳಿಗೆ ಶೈಬ್ಯಾ, ಭಾನುಮತಿಯೆಂದೂ ಹೆಸರು ಇವೆ.

**ಸುಮತ್ಯಾಃ** ಸುಮತಿಯ **ದೃಪ್ತಾಃ** ಅಹಂಕಾರಿಗಳಾದ (ಬಂಧನರಹಿತರು) **ಪಿತುಃ** ತಂದೆಯ, **ಆದೇಶಕಾರಿಣಃ** ಆಜ್ಞೆಯನ್ನು ಪಾಲಿಸುವ **ತನಯಾಃ** ಅರವತ್ತು ಸಾವಿರ ಮಕ್ಕಳು, **ತೇ** ಅವರು **ಹಯಂ** ಕುದುರೆಯನ್ನು **ಅನ್ವೇಷಮಾಣಾಃ** ಹುಡುಕುತ್ತಾ, **ಸಮಂತಾತ್** ಸುತ್ತಲೂ, **ಮಹೀಂ** ಭೂಮಿಯನ್ನು **ನ್ಯಖನನ್** ತೋಡಿದರು. (ಅಗೆದರು).

**ತಾತ್ಪರ್ಯ-** ಸಗರನ ಹಿರಿಯ ಹೆಂಡತಿಯಾದ ಸುಮತಿಯ ಅರವತ್ತು ಸಾವಿರ ಮಕ್ಕಳು ತಂದೆಯ ಆಜ್ಞೆಯಂತೆ ಕುದುರೆಯನ್ನು ಹುಡುಕುತ್ತಾ ಸುತ್ತಲೂ ಭೂಮಿಯನ್ನು ಅಗೆದರು. ॥೯॥

**ಪ್ರಾಗುದೀಚ್ಯಾಂ ದಿಶಿ ಹಯಂ ದದೃಶುಃ ಕಪಿಲಾಂತಿಕೇ ।**
**ಏಷ ವಾಜಿಹರಶ್ಚೋರ ಆಸ್ತೇ ಮೀಲಿತಲೋಚನಃ ॥೧೦॥**

**ಪ್ರಾಗುದೀಚ್ಯಾಂ ದಿಶಿ** ಈಶಾನ್ಯದಿಕ್ಕಿನಲ್ಲಿ, **ಕಪಿಲಾಂತಿಕೇ** ಕಪಿಲನಾಮಕ ಹರಿಯ ಸಮೀಪದಲ್ಲಿ, **ಹಯಂ** ಕುದುರೆಯನ್ನು **ದದೃಶುಃ** ನೋಡಿದರು. **ಏಷಃ** ಇವನು **ವಾಜಿಹರಃ** ಕುದುರೆಯನ್ನು ಕದ್ದ, **ಚೋರಃ** ಕಳ್ಳನು **ಮಿಲಿತಲೋಚನಃ** ಏನೂ ಅರಿಯದವನಂತೆ ಕಣ್ಣುಮುಚ್ಚಿ **ಆಸ್ತೇ** ಇದ್ದಾನೆ ತಪಸ್ಸು ಮಾಡುವವನಂತೆ ನಟಿಸುವನು.

**ತಾತ್ಪರ್ಯ-** ಕುದುರೆಯನ್ನು ಹುಡುಕುವ ಸಗರಪುತ್ರರು ಈಶಾನ್ಯದಿಕ್ಕಿನಲ್ಲಿ ಕಪಿಲನ ಸಮೀಪ ಕುದುರೆಯನ್ನು ಕಂಡು ಇವನೇ ಕಳ್ಳನು, ಏನೂ ಅರಿಯದಂತೆ ತಪಸ್ಸು ಮಾಡುವನಂತೆ ಕಣ್ಣುಮುಚ್ಚಿ ಕುಳಿತಿರುವನು ಎಂದುಕೊಂಡರು. ॥೧೦॥

**ಹನ್ಯತಾಂ ಹನ್ಯತಾಂ ಪಾಪ ಇತಿ ಷಷ್ಟಿಸಹಸ್ರಿಣಃ ।**
**ಉದಾಯುಧಾ ಅಭಿಯಯುರುನ್ಮಿಮೇಷ ತದಾ ಮುನಿಃ ॥೧೧॥**

**ಷಷ್ಟಿಸಹಸ್ರಿಣಃ** ಅರವತ್ತು ಸಹಸ್ರ ಸಂಖ್ಯಾಕರಾದ ಸಗರನ ಕುವರರು, **ಪಾಪಃ** ಪಾಪಿಯಾದ **ಏಷಃ** ಇವನು **ಹನ್ಯತಾಂ ಹನ್ಯತಾಂ** ಕೊಲ್ಲಲ್ಪಡಲಿ, ಇತಿ ಹೀಗೆಂದು

(ಯದಾ) ಯಾವಾಗ **ಉದಾಯುಧಾಃ** ಆಯುಧಗಳನ್ನೆತ್ತಿ , **ಅಭಿಯಯುಃ** ಎದುರಾಗಿ ಬಂದರೋ, **ತದಾ** ಆಗ **ಮುನಿಃ** ಕಪಿಲರು, **ಉನ್ಮಿಮೇಷ** ಕಣ್ತೆರೆದರು.

**ತಾತ್ಪರ್ಯ-** ಸಗರನ ಕುವರರು ಇವನೇ ಕುದುರೆ ಕಳ್ಳನೆಂದು ಭಾವಿಸಿ ಹೊಡೆಯಿರಿ, ಬಡಿಯಿರಿ, ಎಂದು ಕೂಗಾಡುತ್ತಾ ಆಯುಧಗಳನ್ನೆತ್ತಿಕೊಂಡು ಎದುರಾಗಿ ಬಂದರು. ಅಷ್ಟರಲ್ಲಿ ಕಪಿಲರು ಕಣ್ತೆರೆದರು. ||೧೧||

**ಸ್ವಶರೀರಾಗ್ನಿನಾ ತಾವನ್ಮಹೇಂದ್ರಹೃತಚೇತಸಃ |**
**ಮಹದ್ವ್ಯತಿಕ್ರಮಹತಾ ಭಸ್ಮಸಾದಭವನ್ ಕ್ಷಣಾತ್ ||೧೨||**

**ಮಹೇಂದ್ರಹೃತಚೇತಸಃ** ಇಂದ್ರನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳ ಎಂದರೆ ಮೋಹಗೊಂಡ ಸಗರಪುತ್ರರು, **ಸ್ವಶರೀರಾಗ್ನಿನಾ** ತಮ್ಮ ಶರೀರದಲ್ಲಿರುವ ಅಗ್ನಿಯಿಂದ, **ತಾವತ್ ಕ್ಷಣಾತ್** ಅದೇ ಕ್ಷಣದಲ್ಲಿ, **ಮಹದ್ವ್ಯತಿಕ್ರಮಹತಾಃ** ಪರಮಾತ್ಮನ ವಿಷಯದಲ್ಲಿ ಮಾಡಿದ, ಕಳ್ಳನನ್ನು ಕೊಲ್ಲಿರಿ, ಎಂಬ ದುಷ್ಟ ಮಾತುಗಳನ್ನಾಡುವದೆಂಬ ಅಪರಾಧದಿಂದ ನಷ್ಟರಾದ ಇವರು, **ಭಸ್ಮಸಾತ್ ಅಭವನ್** ಭಸ್ಮೀಭೂತರಾದರು.

**ತಾತ್ಪರ್ಯ-** ಇಂದ್ರನಿಂದ ಮೋಹಿತರಾಗಿ ಸಗರಪುತ್ರರು ಮಹಾತ್ಮನಾದ ಕಪಿಲನನ್ನು ನಿಂದಿಸಿದ ಅಪರಾಧದಿಂದ ತಮ್ಮ ಶರೀರದಲ್ಲಿರುವ ಅಗ್ನಿಯಿಂದಲೇ ಆ ಕ್ಷಣದಲ್ಲಿಯೇ ಸುಟ್ಟು ಬೂದಿಯಾದರು. (ಇಂದ್ರನು ಕುದುರೆಯನ್ನು ಕದ್ದು ತಂದು ಕಪಿಲಪರಮಾತ್ಮನು ತಪಸ್ಸಿಗೆ ಕುಳಿತಲ್ಲಿ ತಂದು ಕಟ್ಟಿದ್ದನು. ಇದನ್ನು ತಿಳಿಯದೇ ಕಪಿಲನೇ ಕುದುರೆ ಕದ್ದವನೆಂದು ಭ್ರಾಂತರಾಗಿ ನಿಂದಿಸಿ ನಷ್ಟರಾದರು). ||೧೨||

ಕೆಲವರು ಕಪಿಲರ ಕೋಪಾಗ್ನಿಯಿಂದ ಸುಡಲ್ಪಟ್ಟರು ಎಂದು ಹೇಳುವರು. ಯದ್ಯಪಿ ಹಿಂದಿನ ಶ್ಲೋಕದಲ್ಲಿ ದೊಡ್ಡವರಲ್ಲಿ ಮಾಡಿದ ಅಪರಾಧದಿಂದಲೂ ಹತರೆಂದು ವಿವರಿಸಿದೆ. ಆದರೂ ಅದನ್ನು ಲಕ್ಷಿಸದೇ ಕಪಿಲರ ಕೋಪದಿಂದ ಎಂದು ತಿಳಿದು ಮಂದಬುದ್ಧಿಗಳು ತಮ್ಮನ್ನು ಪಾಪಯುಕ್ತರನ್ನಾಗಿಸುತ್ತಾರೆ. ಹೀಗಾಗಬಾರದೆಂದು ಬಾದರಾಯಣರು ಶರತ್ಕಾಲದ ನೀರಿನಂತೆ ನಿತ್ಯಪ್ರಸನ್ನನಾದ ಹರಿಗೆ ಕೋಪವೆಲ್ಲಿಯದು ಎಂದು ಹೇಳುವರು.

**ನ ಸಾಧುವಾದೋ ಮುನಿಕೋಪಭರ್ಜಿತಾ**
**ನೃಪೇಂದ್ರಪುತ್ರಾ ಇತಿ ಸತ್ವಧಾಮನಿ |**
**ಕಥಂ ತಮೋ ರೋಷಮಯಂ ವಿಭಾವ್ಯತೇ**
**ಜಗತ್ಪವಿತ್ರಾತ್ಮನಿ ಖೇ ರಜೋ ಭುವಃ ||೧೩||**

**ನೃಪೇಂದ್ರಪುತ್ರಾಃ** ಸಗರಪುತ್ರರು, **ಮುನಿಕೋಪಭರ್ಜಿತಾಃ** ಕಪಿಲ ಋಷಿಯ ಕೋಪದಿಂದ ಸುಡಲ್ಪಟ್ಟರು. **ಇತಿ** ಎಂಬುವದು **ಸಾಧುವಾದಃ** ಸರಿಯಾದ ವಾದವು, **ನ** ಅಲ್ಲ, (ಕಪಿಲನ ಸ್ವರೂಪ ತಿಳಿದವರು ಹೇಳುವ ಮಾತಲ್ಲ) ಏಕೆಂದರೆ? **ಸತ್ವಧಾಮನಿ** ಬಲಜ್ಞಾನಸ್ವರೂಪನಾದ, ನಿರ್ದೋಷತ್ವಕ್ಕೆ ಆಶ್ರಯನಾದ ಸತ್ವಾದಿಗುಣಶೂನ್ಯನಾದ, **ಜಗತ್ಪವಿತ್ರಾತ್ಮನಿ** ಜಗತ್ತನ್ನೇ ಪವಿತ್ರಗೊಳಿಸುವ ಸ್ವಭಾವವುಳ್ಳ, ಭಗವಂತನಲ್ಲಿ, **ರೋಷಮಯಂ** ಕೋಪಕಾರಣವಾದ **ತಮಃ** ಅಜ್ಞಾನವು **ಕಥಂ ವಿಭಾವ್ಯತೇ** ಹೇಗೆ ಹುಟ್ಟೀತು ಹುಟ್ಟಲು ಸಾಧ್ಯವಿಲ್ಲ. ಇದಕ್ಕೆ ದೃಷ್ಟಾಂತ ಹೇಳುವರು **ಖೇ** ಆಕಾಶದಲ್ಲಿ **ಭುವಃ ರಜಃ** ಪೃಥ್ವಿಯ ಧೂಳಿನಂತೆ (ಲುಪ್ತೋಪಮಾ) ಎರಡೂ ಅಸಂಭಾವಿತ.

**ತಾತ್ಪರ್ಯ-** ಸಮಸ್ತ ಜಗತ್ತನ್ನೇ ಪವಿತ್ರಗೊಳಿಸುವ ನಿರ್ಮಲಜ್ಞಾನಸ್ವರೂಪನಾದ ಕಪಿಲರೂಪಿ ಪರಮಾತ್ಮನಲ್ಲಿ, ಆಕಾಶದಲ್ಲಿ ಭೂಮಿಯ ಧೂಳಿಯು ಇದೆಯೆಂದು ಹೇಳುವುದು ಹೇಗೆ ಅಸಂಭಾವಿತವೋ, ಅದರಂತೆ ರೋಷಕ್ಕೆ ಕಾರಣವಾದ ಅಜ್ಞಾನವು ಅಸಂಭಾವಿತವಾದ್ದರಿಂದ ಸಗರಪುತ್ರರು ಕಪಿಲರ ಕೋಪದಿಂದ ಸುಟ್ಟರೆಂದು ಹೇಳುವದು ಸರಿಯಾದ ಮಾತಲ್ಲ. ||೧೩||

**ಯಸ್ಯೇರಿತಾ ಸಾಂಖ್ಯಮಯೀ ದೃಢೇಹ ನೌ-**
**ರ್ಯಯಾ ಮುಮುಕ್ಷುಸ್ತರತೇ ದುರತ್ಯಯಮ್ ।**
**ಭವಾರ್ಣವಂ ಮೃತ್ಯುಪಥಂ ವಿಪಶ್ಚಿತಃ**
**ಪರಾತ್ಮಭೂತಸ್ಯ ಕಥಂ ಪೃಥಙ್ಮತಿಃ** ||೧೪||

**ಮುಮುಕ್ಷುಃ** ಮೋಕ್ಷಾಪೇಕ್ಷಿಯು, **ದುರತ್ಯಯಂ** ಜ್ಞಾನವಿಲ್ಲದೇ ದಾಟಲಶಕ್ಯ-ವಾದ, **ಭವಾರ್ಣವಂ** ಸಂಸಾರಸಾಗರವನ್ನು **ಮೃತ್ಯುಪಥಂ** ಮೃತ್ಯು ಮಾರ್ಗವನ್ನು **ಯಯಾ** ಯಾವುದರಿಂದ, **ತರತೇ** ದಾಟುತ್ತಾನೆಯೋ, ಅಂಥ **ದೃಢಾ** ಅಪೇಕ್ಷಿತ-ಫಲದಾನ ಸಮರ್ಥವಾದ, **ಸಾಂಖ್ಯಮಯೀ** ಜ್ಞಾನರೂಪವಾದ, **ನೌಃ** ದೋಣಿಯು, **ಯಸ್ಯ** ಯಾರಿಂದ **ಇಹ** ಈ ಜಗತ್ತಿನಲ್ಲಿ, **ಈರಿತಾ** ಗ್ರಂಥರೂಪವಾಗಿ ಹೇಳಲ್ಪಟ್ಟಿತ್ತೋ, ಅಂಥ **ವಿಪಶ್ಚಿತಃ** ಜ್ಞಾನಾತ್ಮಕನಾದ, **ಪರಾತ್ಮಭೂತಸ್ಯ** ಸಾಕ್ಷಾನ್ನಾರಾಯಣಾವತಾರನಾದ ಕಪಿಲನಿಗೆ, **ಪೃಥಙ್ಮತಿಃ** ಸುಮತಿಗೆ ಭಿನ್ನವಾದ ಮತಿಯೆಂದರೆ ಅಜ್ಞಾನವು **ಕಥಂ** ಹೇಗೆ ತಾನೇ ಇದ್ದೀತು? ಸಾಧ್ಯವೇ ಇಲ್ಲ.

ಇಲ್ಲಿ ತಮಃ ಮುಂತಾದ ಶಬ್ದ ಇಡದೇ ಪೃಥಙ್ಮತಿಃ ಎಂದದ್ದರಿಂದ ಯಾವ ಸ್ವಾಮಿಗೆ ಭಿನ್ನವಾದ ಜ್ಞಾನವೇ ಇಲ್ಲವೋ ಅವನಿಗೆ ದುರ್ಮತಿ ಅಜ್ಞಾನ ಇಲ್ಲವೆಂದು ಹೇಳುವದೇನೂ ಕಷ್ಟವಲ್ಲವೆಂದು ಸೂಚಿಸಿದಂತಾಯಿತು.

**ತಾತ್ಪರ್ಯ-** ಯಾವ ಕಪಿಲರಿಂದ ಗ್ರಂಥರೂಪವಾಗಿ ನಿರ್ಮಿತವಾದ ದೃಢವಾದ ಜ್ಞಾನವೆಂಬ ನೌಕೆಯಿಂದ ಬೇರೆ ಯಾವುದರಿಂದಲೂ ದಾಟಲಶಕ್ಯವಾದ ಸಂಸಾರ ಸಾಗರವು, ಮೃತ್ಯುಮಾರ್ಗವೂ, ಅಧಿಕಾರಿಗಳಿಂದ ದಾಟಲ್ಪಡುವದೋ ಅಂಥ ಜ್ಞಾನಸ್ವರೂಪನಾದ ನಾರಾಯಣಾವತಾರನಾದ ಕಪಿಲ ಪರಮಾತ್ಮನಲ್ಲಿ ಕೋಪ ಅಜ್ಞಾನಗಳಿರುವದು ಅಸಂಭಾವಿತವು. ।।೧೪।।

ಈ ರೀತಿಯಾಗಿ ಸುಮತಿಯ ಮಕ್ಕಳು ಮೃತರಾಗಲು ಸುಕೇಶಿನಿಯ ಮೊಮ್ಮಗನಾದ ಅಂಶುಮಂತನು ಕುದುರೆಯನ್ನು ತಂದು ಕಕ್ಕಂದಿರ ಉದ್ಧಾರಕ್ಕೆ ಪ್ರಯತ್ನಿಸಿದನು ಎಂದು ಹೇಳಲು ಉಪೋದ್ಘಾತ ಹೇಳುವರು.

**ಯೋಽಸಮಂಜಸ ಇತ್ಯುಕ್ತಃ ಸ ಕೇಶಿನ್ಯಾ ನೃಪಾತ್ಮಜಃ ।**
**ತಸ್ಯ ಪುತ್ರೋಽಂಶುಮಾನ್ನಾಮ ಪಿತಾಮಹಹಿತೇ ರತಃ ।।೧೫।।**

**ಹೇ ನೃಪ** ಎಲೋ ರಾಜನೇ ! **ಯಃ** ಯಾರು **ಅಸಮಂಜಸಃ** ಅಯೋಗ್ಯನು **ಇತಿ** ಹೀಗೆಂದು **ಉಕ್ತಃ** ಅಜ್ಞರಿಂದ ಕರೆಯಿಸಿಕೊಂಡನೋ, **ಸಃ** ಅವನು, **ಕೇಶಿನ್ಯಾಃ** ಕೇಶಿನಿಯ **ಆತ್ಮಜಃ** ಮಗನು, **ತಸ್ಯ** ಅಸಮಂಜಸನಿಗೆ, **ಅಂಶುಮಾನ್ ನಾಮ** ಅಂಶುಮಾನ್ ಎಂಬ, **ಪುತ್ರಃ** ಮಗನಿದ್ದನು. ಇವನು **ಪಿತಾಮಹಹಿತೇ ರತಃ** ಅಜ್ಜನಾದ ಸಗರನ ಹಿತಮಾಡುವಲ್ಲಿ ಆಸಕ್ತನು.

**ತಾತ್ಪರ್ಯ-** ಸಗರನಿಗೆ ಕೇಶಿನಿಯಲ್ಲಿ ಒಬ್ಬ ಮಗ ಹುಟ್ಟಿದನು. ಇವನು ವಸ್ತುತಃ ಸಾತ್ವಿಕನು. ಜನರು ಇವನನ್ನು ಅಸಮಂಜಸನೆಂದು ಕರೆಯುತ್ತಿದ್ದರು. ಇವನಿಗೆ ಅಂಶುಮಂತನೆಂಬ ಮಗನು. ಈತನು ತನ್ನ ತಾತನ ಹಿತಾಸಕ್ತನಾಗಿದ್ದನು. ।।೧೫।।

**ಅಸಮಂಜಸ ಆತ್ಮಾನಂ ದರ್ಶಯನ್ನಸಮಂಜಸಮ್ ।**
**ಜಾತಿಸ್ಮರಃ ಪುರಾ ಸಂಗಾದ್ಯೋಗಿ ಯೋಗಾದ್ವಿಚಾಲಿತಃ ।।೧೬।।**

**ಪುರಾ** ಪೂರ್ವಜನ್ಮದಲ್ಲಿ **ಯೋಗೀ** ಯೋಗಾಭ್ಯಾಸದಲ್ಲಿ ಚತುರನು **ಸಂಗಾತ್** ವಿಷಯಗಳ (ಸ್ತ್ರೀ ಮುಂತಾದ) ಸ್ನೇಹದಿಂದ, **ಯೋಗಾತ್** ಪರಮಾತ್ಮನ ಧ್ಯಾನದಿಂದ **ವಿಚಲಿತಃ** ಭ್ರಷ್ಟನಾದನು, ಆದರೆ **ಜಾತಿಸ್ಮರಃ** ಯೋಗ ಸಾಮರ್ಥ್ಯದಿಂದ ಪೂರ್ವಜನ್ಮಸ್ಮರಣ ಉಳ್ಳವನಾದ್ದರಿಂದ, **ಅಸಮಂಜಸಃ** ಅಸಮಂಜನು, **ಆತ್ಮಾನಂ** ತನ್ನನ್ನು, **ಅಸಮಂಜಸಂ** ದುರಾಚಾರಿಯನ್ನಾಗಿ, **ದರ್ಶಯನ್** ಜನರಿಗೆ ತೋರಿಸಿ, **ಸಂಗಂ** ವಿಷಯಾಸಕ್ತಿಯನ್ನು, **ಜಹೌ** ಬಿಟ್ಟನು.

**ತಾತ್ಪರ್ಯ-** ಪೂರ್ವಜನ್ಮದಲ್ಲಿ ದೊಡ್ಡ ಯೋಗಿಯಾದ ಇವನು ಸ್ತ್ರೀ ಸಂಗದಿಂದ ತನ್ನ ಪರಮಾತ್ಮಧ್ಯಾನರೂಪ ಯೋಗವನ್ನು ಕಳಕೊಂಡನು. ಈ ಸ್ಮರಣವು ಈಗಲೂ

ಇದ್ದದ್ದರಿಂದ ಜನರು ತನ್ನನ್ನು ಪ್ರೀತಿಸಿ ವಿಷಯಾಸಕ್ತನನ್ನಾಗಿ ಮಾಡದಿರಲೆಂದೇ ದುರಾಚಾರಿಯಂತೆ ಕಾಣಿಸಿಕೊಂಡು ರಾಜ್ಯಾದಿಗಳನ್ನು ಪರಿತ್ಯಾಗ ಮಾಡಿದನು.

**ಆಚರನ್ ಗರ್ಹಿತಂ ಲೋಕೇ ಜ್ಞಾತೀನಾಂ ಕರ್ಮ ವಿಪ್ರಿಯಮ್ ।**
**ಸರಯ್ವಾಂ ಕ್ರೀಡತೋ ಬಾಲಾನ್ ಪ್ರಾಸ್ಯದುದ್ವೇಜಯನ್ ಜನಾನ್॥೧೭॥**

**ಜ್ಞಾತೀನಾಂ** ಬಂಧುಗಳಿಗೆ, **ವಿಪ್ರಿಯಂ** ಅಪ್ರಿಯವಾದ, **ಲೋಕೇ** ಜಗತ್ತಿನಲ್ಲಿ, **ಗರ್ಹಿತಂ** ನಿಂದಿತವಾದ **ಕರ್ಮ ಆಚರನ್** ಕೆಲಸಗಳನ್ನು ಮಾಡುತ್ತಾ, **ಜನಂ** ಎಲ್ಲ ಜನರನ್ನು, **ಉದ್ವೇಜಯನ್** ಹೆದರಿಸುತ್ತಾ, **ಕ್ರೀಡತಃ** ಆಡತಕ್ಕ **ಬಾಲಾನ್** ಮಕ್ಕಳನ್ನು **ಸರಯ್ವಾಂ** ಸರಯೂ ನದಿಯಲ್ಲಿ **ಪ್ರಾಸ್ಯತ್** ಹಾಕಿದನು. ॥೧೭॥

**ಏವಂವೃತ್ತಃ ಪರಿತ್ಯಕ್ತಃ ಪಿತ್ರಾ ಸ್ನೇಹಮಪೋಹ್ಯ ವೈ ।**
**ಯೋಗೈಶ್ವರ್ಯೇಣ ಬಾಲಾಂಸ್ತಾನ್ದರ್ಶಯಿತ್ವಾ ತತೋ ಯಯೌ ॥೧೮॥**

**ಏವಂವೃತ್ತಃ** ಈ ರೀತಿಯಾದ ಆಚಾರ ಉಳ್ಳ, ಅಸಮಂಜಸನು, **ಸ್ನೇಹಂ** ಪ್ರೀತಿಯನ್ನು **ಅಪೋಹ್ಯ** ಬಿಟ್ಟು, **ಪಿತ್ರಾ** ತಂದೆಯಿಂದ, **ಪರಿತ್ಯಕ್ತಃ** ಬಿಡಲ್ಪಟ್ಟನು. **ಯೋಗೈಶ್ವರ್ಯೇಣ** ತನ್ನ ತಪಃಪ್ರಭಾವದಿಂದ **ತಾನ್** ತಾನು ನದಿಯಲ್ಲಿ ಹಾಕಿದ **ಬಾಲಾನ್** ಹುಡುಗರನ್ನು, **ದರ್ಶಯಿತ್ವಾ** ತೋರಿಸಿ, ಅಲ್ಲಿಂದ **ಯಯೌ** ಹೋದನು.

**ತಾತ್ಪರ್ಯ–** ಈ ರೀತಿ ದುರಾಚಾರವನ್ನು ಸಹಿಸದ ತಂದೆಯು ಸ್ನೇಹವನ್ನು ತ್ಯಜಿಸಿ ಇವನನ್ನು ರಾಜ್ಯ ಬಿಟ್ಟು ಹೊರಗೆ ಹೋಗೆಂದು ಬಿಟ್ಟನು. ಅದನ್ನೇ ಕಾಯುತ್ತಿದ್ದ ಈತನು ತಾನು ನದಿಯಲ್ಲಿ ಮುಳುಗಿಸಿದ ಎಲ್ಲ ಮಕ್ಕಳನ್ನು ತನ್ನ ತಪಃಪ್ರಭಾವದಿಂದ ತಂದೊಪ್ಪಿಸಿ, ವನಕ್ಕೆ ತೆರಳಿದನು. ॥೧೮॥

ಅತತಃ ಎಂದು ಪದವಿಭಾಗ ಮಾಡಿಕೊಳ್ಳಬೇಕು. ಅತತಃ ಎಂದರೇ ಸಂಚರಿಸುತ್ತಿರುವ ಬಾಲಾನ್ ಬಾಲಕರನ್ನು ಎಂದು ಅನ್ವಯ ಮಾಡಿ ಅರ್ಥ ಹೇಳಬೇಕು.

**ಅಯೋಧ್ಯಾವಾಸಿನಃ ಸರ್ವೇ ಬಾಲಕಾನ್ಪುನರಾಗತಾನ್ ।**
**ದೃಷ್ಟ್ವಾ ವಿಸಿಸ್ಮಿರೇ ರಾಜನ್ ರಾಜಾಽಥಾಪ್ಯನ್ವತಪ್ಯತ ॥೧೯॥**

**ರಾಜನ್** ರಾಜನೇ ! **ಸರ್ವೇ** ಎಲ್ಲ **ಅಯೋಧ್ಯಾವಾಸಿನಃ** ಅಯೋಧ್ಯೆಯ ಜನರು, **ಪುನರಾಗತಾನ್** ತಿರುಗಿ ಬಂದ, **ಬಾಲಕಾನ್** ಮಕ್ಕಳನ್ನು, **ದೃಷ್ಟ್ವಾ** ನೋಡಿ, **ವಿಸಿಸ್ಮಿರೇ** ಆಶ್ಚರ್ಯಗೊಂಡರು. **ಅಥ** ಅಸಮಂಜಸನು ಹೋದ ಮೇಲೆ, **ರಾಜಾ ಚ** ಸಗರನೂ ಕೂಡಾ, **ಅನ್ವತಪ್ಯತ** ಯೋಗಿಯ ತ್ಯಾಗದಿಂದ ಪಶ್ಚಾತ್ತಾಪ ಪಟ್ಟನು.

**ತಾತ್ಪರ್ಯ-** ಎಲೋ ರಾಜನೇ! ಬಾಲಕರನ್ನು ಮತ್ತೆ ಪಡೆದ ಅಯೋಧ್ಯಾವಾಸಿಗಳು ಆಶ್ಚರ್ಯಚಕಿತರಾದರು. ಅಸಮಂಜಸನು ಊರು ಬಿಟ್ಟು ಹೋಗಲು, ಯೋಗಿಯಾದ ಮಗನ ವಿಯೋಗದಿಂದ ಸಗರ ರಾಜನು ಪಶ್ಚಾತ್ತಾಪಗೊಂಡನು. ॥೧೯॥

**ಅಂಶುಮಾಂಶ್ಚೋದಿತೋ ರಾಜ್ಞಾ ತುರಂಗಾನ್ವೇಷಣೇ ಯಯೌ ।**
**ಪಿತೃವ್ಯಖಾತಾನುಪಥಂ ಭಸ್ಮಾಪಿ ದದೃಶೇ ಹಯಮ್ ॥೨೦॥**

**ರಾಜ್ಞಾ** ಸಗರನಿಂದ **ಚೋದಿತಃ** ಪ್ರೇರಿಸಲ್ಪಟ್ಟ, **ಅಂಶುಮಾನ್** ಅಂಶುಮಂತನು, **ಪಿತೃವ್ಯಖಾತಾನುಪಥಂ** ತನ್ನ (ಮಲಜ್ಜಿ ಮಕ್ಕಳಾದ) ಕಕ್ಕಂದಿರು ಮಾಡಿದ ಖಾತವನ್ನು (ತನ್ನ ತಂದೆಯ ಭಿನ್ನೋದರರಾದ) ಅನುಸರಿಸಿದ ಮಾರ್ಗದಿಂದ **ತುರಂಗಾನ್ವೇಷಣೇ** ಕುದುರೆಯನ್ನು ಹುಡುಕಲು, **ಯಯೌ** ಹೋದನು. **ಭಸ್ಮ** ಕಕ್ಕಂದಿರ ಭಸ್ಮವನ್ನು **ಹಯಂ ಅಪಿ** ಕುದುರೆಯನ್ನು ಸಹ **ದದೃಶೇ** ನೋಡಿದನು. ॥೨೦॥

**ತತ್ರಾಸೀನಂ ಮುನಿಂ ವೀಕ್ಷ್ಯ ಕಪಿಲಾಖ್ಯಮಧೋಕ್ಷಜಮ್ ।**
**ಅಸ್ತೌತ್ಸಮಾಹಿತಮನಾಃ ಪ್ರಾಂಜಲಿಃ ಪ್ರಣತೋ ಮಹಾನ್ ॥೨೧॥**

**ಮಹಾನ್** ಬುದ್ಧಿಶಾಲಿಯಾದ ಅಂಶುಮಂತನು, **ತತ್ರ** ಅಲ್ಲಿ, **ಆಸೀನಂ** ಕುಳಿತ **ಕಪಿಲಾಖ್ಯಂ** ಕಪಿಲನೆಂಬ, **ಮುನಿಂ** ಋಷಿಯಾದ **ಅಧೋಕ್ಷಜಂ** ಪರಮಾತ್ಮನನ್ನು **ವೀಕ್ಷ್ಯ** ನೋಡಿ, **ಸಮಾಹಿತಮನಾಃ** ಏಕಾಗ್ರಚಿತ್ತನಾಗಿ, **ಪ್ರಾಂಜಲಿಃ** ಕೈ ಜೋಡಿಸಿ **ಪ್ರಣತಃ ಸನ್** ನಮಸ್ಕರಿಸಿ, **ಅಸ್ತೌತ್** ಸ್ತೋತ್ರಮಾಡಿದನು.

**ತಾತ್ಪರ್ಯ-** ತಂದೆಯು ಹೋದ ಮೇಲೆ ಅಂಶುಮಂತನು ತಾತನಾದ ಸಗರನಿಂದ ಪ್ರೇರಿತನಾಗಿ ಕುದುರೆಯನ್ನು ಹುಡುಕುತ್ತಾ ಕಕ್ಕಂದಿರು ಮಾಡಿದ ಖಾತವನ್ನು ಅನುಸರಿಸಿ ಹೊರಟು ಭಸ್ಮವನ್ನು ಕುದುರೆಯನ್ನು ಕಂಡನು. ಅಲ್ಲಿಯೇ ಕುಳಿತಿರುವ ಅಧೋಕ್ಷಜನಾದ ಕಪಿಲ ಋಷಿಯನ್ನು ನೋಡಿ ಏಕಾಗ್ರ ಮನಸ್ಸಿನಿಂದ ಕೈ ಜೋಡಿಸಿ ಸ್ತೋತ್ರ ಮಾಡಿದನು. ॥೨೦-೨೧॥

ಸ್ತುತಿಯು ಎರಡು ವಿಧವಾಗಿದೆ. ವ್ಯಕ್ತಿಯಲ್ಲಿ ಇರುವ ಗುಣ (ವಿಷಯಕವಾದುದು) ವನ್ನೇ ಹೊಗಳುವುದು ಒಂದು. ಇಲ್ಲದಿರುವ ಗುಣವನ್ನು ಹೊಗಳುವದು ಎರಡನೇಯದು. ಈ ಎರಡನೇಯದರಲ್ಲಿಯೂ ಜ್ಞಾನಿಯನ್ನು ಸ್ತೋತ್ರ ಮಾಡುವದು. ಅಜ್ಞಾನಿಯನ್ನು ಸ್ತುತಿಸುವದು ಹೀಗೆ ಎರಡು ವಿಧ. ಈ ಎರಡು ವಿಧವಾದ (ಅವಿದ್ಯಮಾನಗುಣಕಥನ ಜ್ಞಾನಿಯದೇ ಆಗಲಿ ಅಜ್ಞಾನಿಯದೇ ಆಗಲಿ) ಸ್ತುತಿಯಿಂದಲೂ ಫಲವು ದೊರೆಯಲಾರದು. ಏಕೆಂದರೆ?

ತನ್ನಲ್ಲಿ ಇಲ್ಲದಿರುವ ಗುಣವನ್ನು ಹೊಗಳಿದರೆ ಜ್ಞಾನಿಗೆ ಲಜ್ಜೆ ಬರುವದರಿಂದ ಸ್ತುತಿಸುವವನ ಮೇಲೆ ಕೋಪ ಬರುವದು. ಅಜ್ಞಾನಿಗೆ ತನ್ನಲ್ಲಿ ಇಲ್ಲದಿರುವ ಗುಣವನ್ನು ಹೇಳುವದರಿಂದ ಸಂತೋಷವಾದರೂ ಸ್ತುತಿಸಿದವನಿಗೆ ಫಲಕೊಡುವ ಶಕ್ತಿ ಸಾಮಗ್ರಿಗಳು ಇಲ್ಲದ ಕಾರಣ ಫಲ ಬರಲಾರದು. ಆದ್ದರಿಂದ ಜ್ಞಾನಿಯನ್ನು ಅವನಲ್ಲಿರುವ ಗುಣಗಳಿಂದಲೇ ಸ್ತುತಿಸುವದು ಅವನ ಸಂತೋಷದಿಂದ ಫಲಪ್ರದವು. ಈ ಅಭಿಪ್ರಾಯದಿಂದ ಅಂಶುಮಂತನು ಕಪಿಲನಾಮಕ ಪರಮಾತ್ಮನನ್ನು ಅವನಲ್ಲಿರುವ ಗುಣಗಳಿಂದಲೇ ಸ್ತುತಿಸುವನು.

ತಿಳಿಯದಲೇ ನಿನ್ನನ್ನು ಅವಮಾನಗೊಳಿಸಿದರೂ ನಿನ್ನಿಂದ ರಕ್ಷ್ಯರು ನಾವು ಎಂದು ಅಂಶುಮಂತನು ಕಪಿಲರನ್ನು ಆರು ಶ್ಲೋಕಗಳಿಂದ ಸ್ತುತಿಸುತ್ತಾನೆ-

**ನ ಪಶ್ಯತಿ ತ್ವಾಂ ಪರಮಾತ್ಮನೋಽಜನೋ**
**ನ ಬುದ್ಧ್ಯತೇಽದ್ಯಾಪಿ ಸಮಾಧಿಯುಕ್ತಿಭಿಃ ।**
**ಕುತೋಽಪರೇ ತಸ್ಯ ಮನಃಶರೀರ-**
**ವಿಸರ್ಗಸೃಷ್ಟಾವಯ(ವ)ಮಪ್ರಕಾಶಾಃ ॥೨೨॥**

**ಅಜನಃ ಜನಃ** ಜನನವು **ಅತಃ** ವಿಷ್ಣುವಿನಿಂದಾ ಯಾರಿಗಿದೆಯೋ ಅವರು **ಅಜನಃ** ಚತುರ್ಮುಖಬ್ರಹ್ಮದೇವರು **(ಯಸ್ಯ) ಪರಮಾತ್ಮನಃ (ಅಂಶಂ)** ಯಾವ ಹರಿಯ ಅಂಶನಾದ ಅಥವಾ **ಪರಂ ಆತ್ಮನಃ** ಹೀಗೆ ಎರಡು ಪದಗಳು, **ಆತ್ಮನಃ** ತನಗಿಂತಲೂ, **ಪರಂ** ಉತ್ತಮನಾದ, **ತ್ವಾಂ** ನಿನ್ನನ್ನು, **ನ ಪಶ್ಯತಿ** ಪೂರ್ಣವಾಗಿ ಅಪರೋಕ್ಷೀಕರಿಸಲು ಸಮರ್ಥರಲ್ಲ. ಹಾಗಾದರೆ ಪರೋಕ್ಷವಾಗಿ ಪೂರ್ತಿ ತಿಳಿಯುವನೇ ಎಂದರೆ ಅದೂ ಸಹ ಇಲ್ಲವೆಂದು ಹೇಳುವರು. **ಸಮಾಧಿಯುಕ್ತಿಭಿಃ** ಧ್ಯಾನಯೋಗದಿಂದ (ಏಕಾಗ್ರವಾದ ಮನಸ್ಸೆಂಬ ಉಪಾಯದಿಂದ) **ಸಮಾಧಯಃ** ಪ್ರಾಣಾಯಾಮಾದಿಗಳು ಮತ್ತು **ಯುಕ್ತಿಭಿಃ** ತರ್ಕಗಳಿಂದಲೂ **ಅದ್ಯಾಪಿ** ಈಗಲೂ **ನ ಬುದ್ಧ್ಯತೇ** ಪರೋಕ್ಷವಾಗಿಯೂ **ಸಾಕಲ್ಯೇನ** ತಿಳಿಯುವುದಿಲ್ಲ. **ಅಪರೇ** ಅವನಿಂದ ಭಿನ್ನರಾದ, **ತಸ್ಯ** ಬ್ರಹ್ಮದೇವರ **ಮನಃಶರೀರವಿಸರ್ಗಸೃಷ್ಟಾಃ** ಮನಸ್ಸು ಶರೀರ ಇವುಗಳಿಂದ ವಿವಿಧ ಸೃಷ್ಟಿ ಉಳ್ಳ ಮರಿಚಿ ಮೊದಲಾದವರಿಂದ ಹುಟ್ಟಿದ **ವಯಂ** ನವೀನರಾದ ನಾವು **ಅಪ್ರಕಾಶಾಃ** ಜ್ಞಾನ ರಹಿತರು, **ಕುತಃ** ಯಾವ ಕಾರಣದಿಂದ (ಹೇಗೆ) **ಪಶ್ಯೇಮ** ನೋಡಬಲ್ಲೆವು. **ಅವಯವಪ್ರಕಾಶಾಃ** ಎಂಬ ಪಾಠದಲ್ಲಿ ಮನಸ್ಸು ಶರೀರದಿಂದ ವಿಶಿಷ್ಟವಾದ ಸೃಷ್ಟಿ ಉಳ್ಳ ಮರಿಚ್ಯಾದಿಗಳು ಮನಃಶರೀರವಿಸರ್ಗರು. ಇವರಿಂದ ಸೃಷ್ಟವಾದ ಶ್ರೋತ್ರಾದಿ ಅವಯವಗಳಲ್ಲಿ ಅಭಿಮಾನಿಗಳಾಗಿ ಇರುವದೆಂಬ ಪ್ರಕಾಶ ಉಳ್ಳ ಸೂರ್ಯ ಮೊದಲಾದವರು ಇಂದ್ರಾದಿಗಳು ಸಹ ತಿಳಿಯಲಾರರು. ಇಲ್ಲಿ ಜನಃ ಎಂದು ಪದವಿಭಾಗ ಮಾಡಿ ನ ಪಶ್ಯತಿ ಎಂದು

ಅನ್ವಯ ಮಾಡಿದರೆ, ಕುತೋಽಪರೇ ಎಂಬುವದು ವ್ಯರ್ಥವಾಗುವದು. ಕಾರಣ ಅಜನಃ ಎಂದು ವಿಭಾಗ ಮಾಡಿ ಬ್ರಹ್ಮ ಎಂದು ಅರ್ಥ ಹೇಳಬೇಕು.

**ನ ಯಸ್ಯ ತ್ವಂ ಪರಮಾತ್ಮನೋ ಜನಃ** ಎಂಬ ಪಾಠವಿದ್ದಾಗ **ಪರಮಾತ್ಮನಃ** ಪರಮಾತ್ಮನಾದ ನಿನ್ನ **ತತ್ವಂ** ಸ್ವರೂಪವನ್ನು ಬ್ರಹ್ಮನು, **ನ ಬುದ್ಧ್ಯತೇ ಇತಿ ನ** ತಿಳಿಯುವುದಿಲ್ಲವೆಂದಲ್ಲ ತಿಳಿಯುತ್ತಾನೆ, ಆದರೆ ಸಮಗ್ರವಾಗಿ ತಿಳಿಯುವುದಿಲ್ಲ. ಇನ್ನು ಜನಃ ಎಂದೇ ಪದವಿಭಾಗ ಮಾಡಿಯೂ ಅರ್ಥ ಹೇಳಬಹುದು ಹೇಗೆಂದರೆ **ಯಸ್ಯ** ಯಾವ, ಹೀಗೆ ಪದ ಮಾಡಿದ್ದರಿಂದ ಕುತೋಽಪರೇ ಎನ್ನುವದು ವ್ಯರ್ಥವಲ್ಲ. **ಅಪರೇತಸ್ಯ** ಮರಣಾದಿದೋಷರಹಿತನಾದ, **ಆತ್ಮನಃ** ಸರ್ವಸ್ವಾಮಿಯಾದ ನಿನ್ನ **ತತ್ವಂ** ಸ್ವರೂಪವನ್ನು, **ಜನಃ** ಪಾಮರರು, **ನ ಬುದ್ಧ್ಯತೇ** ತಿಳಿಯಲಾರರು. ಲಕ್ಷ್ಮೀದೇವಿಯಾದರೂ ನಿನ್ನನ್ನು ಪೂರ್ಣ ತಿಳಿದಿರುವಳೇ? ಇಲ್ಲವೆಂದು ಹೇಳುವರು.

**ನ ಬುದ್ಧ್ಯತೇಽದ್ಯಾಪಿ ಸಮಾಧಿಯುಕ್ತಿಭಿಃ** ಇಲ್ಲಿ ಪದವಿಭಾಗ ಹೀಗೆ ನ ಬುದ್ಧ್ಯತೇ ಅತ್ ಯಾ ಅಪಿ (ಆಪಿ) **ಸಮಾಧಿಯುಕ್ತಿಭಿಃ ಯಾ ಅಪಿ** ಯಾವ ಲಕ್ಷ್ಮೀದೇವಿಯಿಂದಲೂ ಸಹ, **ಸಮಾಧಿಯುಕ್ತಿಭಿಃ** ಧ್ಯಾನಾದಿಗಳಿಂದ, **ಪರಂ ತತ್ವಂ** ಸರ್ವೋತ್ತಮವಾದ ಸ್ವರೂಪವು, **ನ ಆಪಿ** ಹೊಂದಲ್ಪಡಲಿಲ್ಲ ಜ್ಞಾತವಾಗಲಿಲ್ಲ ವೆಂದರ್ಥ. **ಆತ್ಮನಃ ವಿಷಯೇ** ನಿನ್ನ ವಿಷಯದಲ್ಲಿ **(ಇದಂ)** ಲಕ್ಷ್ಮೀದೇವಿಯಿಂದಲೂ ತಿಳಿಯದಿರುವುದು, **ಅತ್** ಆಶ್ಚರ್ಯವು. **ಕುತಃ** ಎಲ್ಲಿಯದು ಆಶ್ಚರ್ಯವಲ್ಲ. ಅಥವಾ ಕುತೂಹಲಕಾರಕವು. (ಅದ್ಭುತ ಪದ ವ್ಯಾಖ್ಯಾನ ಮಾಡುವಾಗ ಅತ್ ಇದು ಆಶ್ಚರ್ಯಾರ್ಥಕ ಅವ್ಯಯವೆಂದು ಭಾನ್ವಾದಿಗಳು ಹೇಳಿದ್ದರಿಂದ ಇದೇನು ಆಶ್ಚರ್ಯಕರವಾದ ವ್ಯಾಖ್ಯಾನವೆಂದು ಭಾವಿಸಬಾರದು.) ಅಥವಾ **ಹೇ ಅಪರೇತಸ್ಯ** (ರೇತಸಿ ಭವಃ ರೇತಸ್ಯಃ ತಸ್ಮಾದಪಗತಃ ಅಪರೇತಸ್ಯಃ) ರೇತೋವಿಕಾರವಾಗದ ದೇಹ ಉಳ್ಳವನೇ, **ಮನಃಶರೀರವಿಸರ್ಗಸೃಷ್ಟಾವಯವ-ಪ್ರಕಾಶಾಃ ಮನಃಸೃಷ್ಟಾಃ** ರುದ್ರ, ಇಂದ್ರಾದಿಗಳು, **ಶರೀರಸೃಷ್ಟಃ** ವಿರಾಟ್ ಶರೀರದಿಂದ ಹುಟ್ಟಿದ ಬ್ರಹ್ಮದೇವರು, **ವಿಸರ್ಗಾಃ** ಗುಹ್ಯೇಂದ್ರಿಯ ಅದರಿಂದ ಉತ್ಪನ್ನರಾದ ದಕ್ಷಾದಿಗಳು ಮತ್ತು **ಅವಯವಪ್ರಕಾಶಾಃ** ಇತರತತ್ವಾಭಿಮಾನಿಗಳು, **ಅದ್ಯಾಪಿ** ಈಗಲೂ ಸಮಾಧಿಯೋಗದಿಂದ ನೋಡುವದಿಲ್ಲ. ಯಾವ ಪರಮಾತ್ಮನು, **ನ ಪಶ್ಯತಿ** ಜೀವವಿಲಕ್ಷಣನೋ (ಪಶ್ಯತೀತಿ ಪಶ್ಯಃ ಜೀವಃ ತದ್ವದಾಚರತಿ ಪಶ್ಯತಿ ಜೀವನಂತಿರುವವನು ನ ಅಲ್ಲ ವಿಲಕ್ಷಣ) ಅಂಥ ನಿನ್ನನ್ನು ಜನರು ತಿಳಿಯುವದಿಲ್ಲವೆಂದು, **ಕುತಃ ವಕ್ತವ್ಯಂ** ಏಕೆ ಹೇಳಬೇಕು. ಹೇಳದಿದ್ದರೂ

ತಿಳಿಯುವದು, ಹೀಗೂ ಅರ್ಥ ಮಾಡಬಹುದು. **ತ್ವಾ** ಸರ್ವೋತ್ತಮನಾದ ಯಾವ ನಿನ್ನನ್ನು **ಸಾಕ್ಷಾತ್** ಲಕ್ಷ್ಮೀ, ಬ್ರಹ್ಮ, ರುದ್ರ, ಇಂದ್ರಾದಿ ತತ್ವೇಶರು **ಅದ್ಯಾಪಿ** ಅಪರೋಕ್ಷವಾಗಿ, **ಸಾಕಲ್ಯೇನ** ತಿಳಿಯುವದಿಲ್ಲವೋ ಅಂಥ ನಿನ್ನನ್ನು ಪಾಮರರಾದ ನಾವು ತಿಳಿಯಬಲ್ಲವೇ? ಎಂದಿಗೂ ಸಾಧ್ಯವಿಲ್ಲ. ನಿನ್ನ ಸ್ವರೂಪವೇ ಅಂತಹುದು. ಕುತೂಹಲಕಾರಕವು. ಮುಂತಾಗಿ ಸ್ತುತಿಸಿದನು. ।।೨೨।।

ಹಾಗಾದರೆ ಯಾರೂ ನಿನ್ನನ್ನು ತಿಳಿಯುವದೇ ಇಲ್ಲವೇ ಎಂದರೆ ಕೆಲವರೇ ತಿಳಿಯುವರು, ಎಂದು ಹೇಳಲು ತಮ್ಮ ತಮ್ಮ ಗುಣ ಸ್ವಭಾವಾನುಸಾರ ನಡೆಯುವ ಅಧಿಕಾರಿಗಳನ್ನು ಹೇಳುವರು-

**ಯೇ ದೇಹಭಾಜಸ್ತ್ರಿಗುಣಪ್ರಧಾನಾಃ**
**ಗುಣಾನ್ವಿಪಶ್ಯಂತ್ಯುತ ವಾ ತಮಶ್ಚ ।**
**ಯನ್ಮಾಯಯಾ ಮೋಹಿತಚೇತಸಸ್ತೇ**
**ವಿದುಃ ಸ್ವಸಂಸ್ಥಂ ನ ಬಹಿಃಪ್ರಕಾಶಾಃ** **।।೨೩।।**

**ಯೇ ದೇಹಭಾಜಃ** ಯಾರು ಶರೀರಧಾರಣ ಮಾಡಿರುವರೋ, **ತೇ** ಅಂಥ ಜೀವರು, **ತ್ರಿಗುಣಪ್ರಧಾನಾಃ ತ್ರಿ** ಮೂರು **ಗುಣ** ಸತ್ವ, ರಜಸ್ಸು, ತಮವೆಂಬ ಗುಣಗಳೇ **ಪ್ರಧಾನಾಃ** ಕಾರಣವಾಗಿ ಉಳ್ಳವರು ಅಂದರೆ ೧) ಸತ್ವಪ್ರಧಾನರು ೨) ರಜಃಪ್ರಧಾನರು ೩) ತಮಃಪ್ರಧಾನರು ಹೀಗೆ ಮೂರು ವಿಧರು. ಇವರಲ್ಲಿ ರಜಃಪ್ರಧಾನರಾದ ಮಾನುಷರು, **ತ್ರಿಗುಣಪ್ರಧಾನಾಃ** ಮುಖ್ಯವಾದ ಪ್ರಯೋಜನ ಉಳ್ಳವರು. ಇವರು **ಗುಣಾನ್ ಉತ** ಅಪ್ರಧಾನವಾದ ಸ್ವರ್ಗಾದಿಗಳನ್ನೇ **ವಿಪಶ್ಯಂತಿ** ಅನುಭವಿಸುತ್ತಾರೆ ಏಕೆಂದರೆ? **ಯನ್ಮಾಯಯಾ ಮೋಹಿತಚೇತಸಃ ಯತ್** ಯಾವ ಕಾರಣ **ಮಾಯಯಾ** ಯೋಗ್ಯತಾನುಸಾರ ಬಂಧಕವಾದ ನಿನ್ನ ಬಂಧಕಶಕ್ತಿಯಿಂದ **ಆಮೋಹಿತ ಆ (ಈಷತ್)** ಸ್ವಲ್ಪಮೋಹಿತ (ಸಂಶಯಗ್ರಸ್ತವಾದ) **ಚೇತಾಃ** ಮನಸ್ಸುಳ್ಳವರು, **ತ್ವಾಂ** ನಿನ್ನನ್ನು **ನ ವಿದುಃ** ಸರಿಯಾಗಿ ತಿಳಿದಿಲ್ಲ. ಕಾರಣ ಮೋಕ್ಷವನ್ನು ಹೊಂದುವದಿಲ್ಲ. ಇನ್ನು ತಮಃಪ್ರಧಾನರಾದ ಅಸುರರು, **ಯನ್ಮಾಯಯಾ** ಯಾವ ಹರಿಯ ಬಂಧಕಶಕ್ತಿಯಿಂದ **ಆ (ಸಮ್ಯಕ್)** ಚೆನ್ನಾಗಿ (ಬಹಳವಾಗಿ) **ಮೋಹಿತಚೇತಸಃ** ಅನ್ಯಥಾಜ್ಞಾನಪೂರ್ಣವಾದ ಬುದ್ಧಿ ಉಳ್ಳವರು, **ಸ್ವಸಂಸ್ಥಂ** ತಮ್ಮ ಹೃದಯದಲ್ಲಿರುವ ನಿನ್ನನ್ನು, **ನ ವಿದುಃ** ತಿಳಿಯುವುದಿಲ್ಲ. ಹಾಗಾದರೆ ಅಚೇತನರೇ ಎಂದರೆ ಅಲ್ಲ. **ಬಹಿಃಪ್ರಕಾಶಾಃ ಬಹಿಃ** ದೇಹಾದಿಗಳ **ಪ್ರಕಾಶಾಃ** ಜ್ಞಾನವುಳ್ಳವರು ಕಾರಣ **ತಮಃ ವಾ** ಅಂಧತಮಸ್ಸನ್ನೇ **ವಿಪಶ್ಯಂತಿ** ಅನುಭವಿಸುತ್ತಾರೆ.

**ತಾತ್ಪರ್ಯ-** ಸಾತ್ವಿಕರು, ರಾಜಸರು, ತಾಮಸರು ಹೀಗೆ ಜೀವರು ಮೂರು ವಿಧರು. ಇವರಲ್ಲಿ ರಾಜಸರು ನಿನ್ನ ಬಂಧಕಶಕ್ತಿಯಿಂದ ಅವರ ಯೋಗ್ಯತೆಗೆ ತಕ್ಕಂತೆ ಕಿಂಚಿತ್ ಮೋಹಿತರಾಗಿ ಧರ್ಮಾರ್ಥಕಾಮಗಳನ್ನೇ ಮುಖ್ಯವೆಂದು ಭಾವಿಸಿ ಬಾಹ್ಯವಾದ ಸುಖವನ್ನೇ ಇಚ್ಛಿಸಿ ಅಲ್ಪವಾದ ಸ್ವರ್ಗಾದಿಗಳನ್ನೇ ಹೊಂದುವರು. ಇನ್ನು ತಾಮಸರು ಬಾಹ್ಯವಾದ ದೇಹಾದಿಗಳು ತನ್ನವೆಂಬ ಅನ್ಯಥಾಜ್ಞಾನ ಉಳ್ಳವರು. ನಿನ್ನ ಬಂಧಕಶಕ್ತಿಯಿಂದ ಅವರ ಯೋಗ್ಯತಾನುಗುಣವಾಗಿ ಸಂಪೂರ್ಣ ಮಿಥ್ಯಾಜ್ಞಾನ ಉಳ್ಳವರಾದ್ದರಿಂದ ತಮ್ಮ ದೇಹದಲ್ಲಿಯೇ ಇರುವ ನಿನ್ನನ್ನು ತಿಳಿಯದೇ ಅಂಧಂತಮಸ್ಸನ್ನೇ ಹೊಂದುವರು. ಜಡಪದಾರ್ಥಗಳ ಜ್ಞಾನವಿರುವುದರಿಂದ ಚೇತನರೇ ಆಗಿದ್ದಾರೆ. ಆದರೆ ಸರಿಯಾದ ಜ್ಞಾನರಹಿತರು, ಹೀಗೆ ಅಭಿಪ್ರಾಯವು. ।।೨೩।।

**ತಂ ತ್ವಾಮಹಂ ಜ್ಞಾನಘನಸ್ವಭಾವಂ**
**ಪ್ರಧ್ವಸ್ತಮಾಯಾಮಯಭೇದಮೋಹೈಃ ।**
**ಸನಂದನಾದ್ಯೈರ್ಮುನಿಭಿರ್ವಿಭಾವ್ಯಂ**
**ಕಥಂ ವಿಮೂಢಃ ಪರಿಭಾವಯಾಮಿ ।।೨೪।।**

**ಪ್ರಧ್ವಸ್ತಮಾಯಾಮಯಭೇದಮೋಹೈಃ** ನಷ್ಟವಾದ ಪ್ರಕೃತಿಕಾರಣಕವಾದ ಅನಾತ್ಮ ವಸ್ತುಗಳಲ್ಲಿ ಆತ್ಮತ್ವ ಬುದ್ಧಿಯುಳ್ಳ, ಅಥವಾ ಜಗತ್ತಿಗೂ ಜಗನ್ನಾಥನಿಗೂ ಇರುವ ಭೇದವು, **ಮಾಯಾಮಯಂ** ಮಿಥ್ಯಾ ಎಂಬ ಭ್ರಾಂತಿರಹಿತರಾದ, **ಸನಂದನಾದ್ಯೈಃ** ಸನಂದನ ಮೊದಲಾದ **ಮುನಿಭಿಃ** ಪರಮಹಂಸರಿಂದ **ವಿಭಾವ್ಯಂ** ಚಿಂತಿಸಲು ಯೋಗ್ಯವಾದ **ಜ್ಞಾನಘನಸ್ವಭಾವಂ** ಜ್ಞಾನಪೂರ್ಣಸ್ವರೂಪನಾದ, **ತಂ** ಅವರವರ ಯೋಗ್ಯಾತಾನುಸಾರ ಫಲಪ್ರದನಾದ, **ತ್ವಾಂ** ನಿನ್ನನ್ನು **ವಿಮೂಢಃ** ಅಜ್ಞಾನಿಯಾದ, **ಅಹಂ** ನಾನು, **ಕಥಂ ಪರಿಭಾವಯಾಮಿ** ಹೇಗೆ ಚಿಂತಿಸಲಿ.

**ತಾತ್ಪರ್ಯ-** ಬಹುಸಂಖ್ಯಾಕರಾದ ರಾಜಸ-ತಾಮಸರನ್ನು ನಿರೂಪಿಸಿ ಸಾತ್ವಿಕರ ರೀತಿಯನ್ನು ಈ ಶ್ಲೋಕದಲ್ಲಿ ಹೇಳಿರುವರು. ಸ್ವಭಾವಕ್ಕನುಸಾರವಾಗಿ ಪರಮಾತ್ಮನ ಅನುಗ್ರಹದಿಂದ ಪ್ರಕೃತಿನಿಮಿತ್ತಕವಾದ ಜಡವಾದ ದೇಹವು ತನ್ನದು ಎಂಬ ಮೋಹವನ್ನಾಗಲೀ ಜೀವಜಡರಿಂದ ಪರಮಾತ್ಮನಿಗಿರುವ ಭೇದವು ಮಿಥ್ಯೆ ಎಂಬ ಮಾಯಿಗಳ ಉಪದೇಶದಿಂದ ಬರುವ ಮೋಹವನ್ನಾಗಲೀ, ಕಳೆದುಕೊಂಡ ಪರಮಹಂಸರಿಂದ, ವಸಿಷ್ಠಾದಿ ಋಷಿಗಳಿಂದ, ಧ್ಯಾನ ಮಾಡಲ್ಪಡುವ ನಿನ್ನನ್ನು ಬಂಧುಭಾರ್ಯಾದಿಮೋಹದಿಂದ ಮೂಢನಾದ ನಾನು ಹೇಗೆ ಧ್ಯಾನ ಮಾಡಲಿ? ಧ್ಯಾನಕ್ಕೆ ಬೇಕಾಗಿರುವ ಜ್ಞಾನವು ನನ್ನಲ್ಲಿ ಇಲ್ಲ ಹೀಗೆ ಸ್ತುತಿಸಿದನು. ।।೨೪।।

**ಪ್ರಶಾಂತಮಾಯಾಗುಣಕರ್ಮಲಿಂಗ-**
**ಮನಾಮರೂಪಂ ಸದಸದ್ವಿಮುಕ್ತಮ್ ।**
**ಜ್ಞಾನೋಪದೇಶಾಯ ಗೃಹೀತಲಿಂಗಂ**
**ನಮಾಮಹೇ ತ್ವಾಂ ಪುರುಷಂ ಪುರಾಣಮ್ ॥೨೫॥**

**ಪ್ರಶಾಂತಮಾಯಾಗುಣಕರ್ಮಲಿಂಗಂ** ಉತ್ಪನ್ನವಾಗದಿರುವ ಪ್ರಕೃತಿಗುಣ-ಗಳಾದ ಸತ್ವಾದಿಗುಣಗಳ ನಿಮಿತ್ತವಾದ ಕ್ರಿಯೆಗಳು, ಲಿಂಗಶರೀರ ಉಳ್ಳ (ಪ್ರಾಕೃತ ಸತ್ವಾದಿಗುಣನಿಮಿತ್ತಕ ವ್ಯಾಪಾರ, ದೇಹ ಇಲ್ಲದಿರುವ) **ಅನಾಮರೂಪಂ** ಪ್ರಾಕೃತನಾಮರೂಪರಹಿತನಾದ, **ಸದಸದ್ವಿಮುಕ್ತಂ** ಪುಣ್ಯ, ಪಾಪರಹಿತನಾದ (ಕರ್ಮಬಂಧವಿಲ್ಲದಿದ್ದರೂ ಲೋಕಶಿಕ್ಷಾರ್ಥ ತಪಸ್ಸು ಮಾಡುವ, ಅಥವಾ **ಸತ್** ಬ್ರಹ್ಮ, **ಅಸತ್** ಪರಮಾಣ್ವಾದಿಗಳು ಇವುಗಳಿಂದ ಭಿನ್ನನಾದ, ಮೂರ್ತಾಮೂರ್ತ-ವಿಲಕ್ಷಣನಾದ **ಜ್ಞಾನೋಪದೇಶಾಯ ಗೃಹೀತಲಿಂಗಂ** ಜ್ಞಾನಸಾಧನವಾದ ಸಾಂಖ್ಯಶಾಸ್ತ್ರವನ್ನು ಉಪದೇಶಿಸುವದಕ್ಕೆ ಸ್ವೇಚ್ಛೆಯಿಂದಲೇ ಜ್ಞಾನಾತ್ಮಕ ದೇಹವನ್ನು ಸ್ವೀಕರಿಸಿರುವ **ಪುರಾಣಂ** ಸನಾತನನಾದ **ಪುರುಷಂ** ಪೂರ್ಣಷಡ್ಗುಣನಾದ **ತ್ವಾಂ** ನಿನ್ನನ್ನು **ನಮಾಮಹೇ** ನಮಸ್ಕರಿಸುತ್ತೇನೆ) ॥೨೫॥

ತ್ರಿವಿಧ ಜೀವರ ಸ್ವಭಾವ ಎಂದೂ ಬದಲಾಗದು ಎಂದು ಹೇಳುವನು-

**ಯನ್ಮಾಯಾರಚಿತೇऽಲೋಕೇ ವಸ್ತುಬುದ್ಧ್ಯಾ ಗೃಹಾದಿಷು ।**
**ಭ್ರಮಂತಿ ಕಾಮಲೋಭೇರ್ಷ್ಯಾಮೋಹವಿಭ್ರಾಂತಚೇತಸಃ ॥೨೬॥**

**ಅಲೋಕೇ** ಲೋಕವಿಲಕ್ಷಣನಾದ ಹರಿಯಲ್ಲಿ, **ವಸ್ತುಬುದ್ಧ್ಯಾ** ಸರ್ವಶಕ್ತನೆಂಬ ಭಾವದಿಂದ **ಯನ್ಮಾಯಾರಚಿತೇ** ಪರಮಾತ್ಮನ ಇಚ್ಛೆಯಿಂದ ನಿರ್ಮಿತವಾದ, **ಗೃಹಾದಿಷು** ಪತ್ನಿ ಮುಂತಾದವರಲ್ಲಿ **ಲೋಕೇ** ಲೋಕದಲ್ಲಿ, **ಉತ್ತಮಾಃ** ಉತ್ತಮರು **ಕಾಮಲೋಭೇರ್ಷ್ಯಾಮೋಹವಿಭ್ರಾಂತಚೇತಸಃ ಕಾಮ** ವಿಷಯಾಭಿಲಾಷೆ, **ಲೋಭ** ಧರ್ಮದಾನಗಳಿಗೆ ಧನ ಖರ್ಚು ಮಾಡಲು ಇಚ್ಛೆ ಇಲ್ಲದಿರುವದು, **ಈರ್ಷ್ಯಾ** ಇನ್ನೊಬ್ಬರ ಅಭಿವೃದ್ಧಿಯನ್ನು ಸಹಿಸದಿರುವದು, **ಮೋಹ** ಕಳವಳ ಇವುಗಳಿಂದ, **ವಿಭ್ರಾಂತ** ಭ್ರಾಂತಿವಿರುದ್ಧ ಎಂದರೆ ಅಭ್ರಾಂತವಾದ, **ಚೇತಸಃ** ಮನಸ್ಸುಳ್ಳವರಾಗಿ, **ಭ್ರಮಂತಿ** ಸಂಚರಿಸುವರು. (ಮಧ್ಯಮಾಃ ಮಧ್ಯಮರು) **ಯನ್ಮಾಯಾರಚಿತೇ** ಪರಮಾತ್ಮನ ಅಧೀನವಾದ ಪ್ರಕೃತಿಯಿಂದ ನಿರ್ಮಿತವಾದ, **ಲೋಕೇ** ಭೂಮಿ ಮುಂತಾದವುಗಳಲ್ಲಿ ಮತ್ತು **ಗೃಹಾದಿಷು** ಹೆಂಡತಿ, ಮನೆ ಮೊದಲಾದ ಪದಾರ್ಥಗಳಲ್ಲಿ **ವಸ್ತುಬುದ್ಧ್ಯಾ** ಶಾಶ್ವತಗಳೆಂಬ ಭಾವನೆಯಿಂದ, ಕಾಮ, ಲೋಭ, ಈರ್ಷ್ಯಾ ಮೋಹಗಳು, ಸ್ಪರ್ಧೆ ಮತ್ತು ಸ್ವಲ್ಪ ಭ್ರಮ, ಮತ್ತು ಅಭ್ರಮ ಉಳ್ಳ

ಮನಸ್ಸುಳ್ಳವರಾಗಿ ತಿರುಗುವರು. **ಮಧ್ಯಮಾ ಮಿಶ್ರಮತಯಃ** ಎಂದು ಉಕ್ತಿಯಿದೆ. (ಅಧಮಾಃ ಅಧಮ ಜೀವರು) **ಯನ್ಮಾಯಾರಚಿತೇ** ಪರಮಾತ್ಮನ ಇಚ್ಛೆಯಿಂದ ರಚಿತವಾದ ಕಾರಣ ಸತ್ಯವಾದ, **ಲೋಕೇ** ಪ್ರಪಂಚವಿಷಯದಲ್ಲಿ, **ಅವಸ್ತುಬುದ್ಧ್ಯಾ** ಎಲ್ಲ ವಸ್ತುವು ಸುಳ್ಳೆಂಬ ಬುದ್ಧಿಯಿಂದ ಕಾಮ ಲೋಭ ಈರ್ಷ್ಯಾಮೋಹಗಳಿಂದ ವಿಪರೀತ ಭ್ರಮ ಉಳ್ಳ ಮನಸ್ಸುಳ್ಳವರಾಗಿ ಮನೆ ಮುಂತಾದವುಗಳಲ್ಲಿ ತಿರುಗುವರು.

**ತಾತ್ಪರ್ಯ-** ಉತ್ತಮರು ಶ್ರೀಹರಿಯೇ ಸರ್ವಶಕ್ತನೆಂದು ತಿಳಿದು, ಪತ್ನೀ ಪುತ್ರಾದಿಗಳಲ್ಲಿ ಮೋಹಿಸದೇ ಇರುವರು. ಮಧ್ಯಮರು ಹಾಗೂ ಹೀಗೂ ಮಿಶ್ರ ಬುದ್ಧಿಯವರು. ಅಧಮರು ಹರಿಯು ನಿರ್ಮಿಸಿದ ಸತ್ಯವಾದ ಜಗತ್ತನ್ನು ಸುಳ್ಳೆಂದು ತಿಳಿಯುವರು. ವಿಷಯಾಭಿಲಾಷೆಯಿಂದ ದಾನ, ಧರ್ಮ,ಮಾಡದೇ ಪರರ ಉತ್ಕರ್ಷ ಸಹಿಸದೇ ಕಳವಳದಿಂದ ಭ್ರಮಿಷ್ಠ ಮನಸ್ಸುಳ್ಳವರಾಗಿ ತಿರುಗುವರು.

ಜಗತ್ತಿನ ಸ್ಥಿತಿಯನ್ನು ಹೇಳಿ, ಈಗ ತನ್ನ ಸ್ಥಿತಿಯನ್ನು ಹೇಳಿ ಮುಗಿಸುವನು-

**ಅದ್ಯ ನಃ ಸರ್ವಭೂತಾತ್ಮನ್ ಕಾಮಕರ್ಮೇಂದ್ರಿಯಾಶ್ರಯಃ ।**
**ಮೋಹಪಾಶೋ ದೃಢಶ್ಛಿನ್ನೋ ಭಗವಂಸ್ತವ ದರ್ಶನಾತ್ ॥೨೭॥**

**ಸರ್ವಭೂತಾತ್ಮನ್** ಎಲ್ಲ ಜಗತ್ತನ್ನು ವ್ಯಾಪಿಸಿದ, **ಹೇ ಭಗವನ್ !** ಹೇ ಕಪಿಲ ಪರಮಾತ್ಮನೇ! **ತವ** ನಿನ್ನ, **ದರ್ಶನಾತ್** ನೋಡೋಣದರಿಂದ, **ಅದ್ಯ** ಇಂದು **ನಃ** ನಮ್ಮ **ಕಾಮಕರ್ಮೇಂದ್ರಿಯಾಶ್ರಯಃ** ವಿಷಯ ಕರ್ಮೇಂದ್ರಿಯಗಳು ಆಶ್ರಯವಾಗಿ ಉಳ್ಳ (ಅವುಗಳಲ್ಲಿರುವ) **ದೃಢಃ** ನಿನ್ನ ಇಚ್ಛೆ ಇಲ್ಲದೇ ತೊಲಗದ, **ಮೋಹಪಾಶಃ** ಅಜ್ಞಾನನಿಮಿತ್ತಕ ಸ್ನೇಹವು, **ಛಿನ್ನಃ** ನಷ್ಟವಾಯಿತು (ಕಡಿಯಿತು)

**ತಾತ್ಪರ್ಯ-** ಸರ್ವರ ಹೃದಯದಲ್ಲಿ ನಿಯಾಮಕನಾಗಿ ವಾಸಿಸಿರುವ ಭಗವಂತನೇ ನಿನ್ನ ದರ್ಶನದಿಂದ ವಿಷಯಗಳಲ್ಲಿ ಇಂದ್ರಿಯಗಳಲ್ಲಿ, ಆಸಕ್ತವಾದ ಸ್ನೇಹಪಾಶವು ಕಡಿಯಿತು. ಧನ್ಯನಾದೆನು. ಎಂದು ಸ್ತುತಿಸಿದನು. ಇಲ್ಲಿ **ಸರ್ವ ಭೂತಾತ್ಮನ್** ಎಂಬ ವಿಶೇಷಣದಿಂದ ಪುತ್ರಾದಿಗಳಲ್ಲಿ ಪರಮಾತ್ಮನು ಸನ್ನಿಹಿತ- ನಾಗಿರುವನು, ಎಂದು ತಿಳಿದು ಸ್ನೇಹ ಮಾಡುವದು, ದೋಷವಲ್ಲವೆಂದು ಸೂಚಿಸುವರು. ॥೨೭॥

**ಶ್ರೀಶುಕ ಉವಾಚ-**

**ಇತ್ಥಂ ಗೀತಾನುಭಾವಸ್ತಂ ಭಗವಾನ್ಕಪಿಲೋ ಮುನಿಃ ।**
**ಅಂಶುಮಂತಮುವಾಚೇದಮನುಗೃಹ್ಯ ಧಿಯಾ ನೃಪ ॥೨೮॥**

**ಇತ್ಥಂ** ಈ ರೀತಿಯಾಗಿ **ನೃಪ** ರಾಜನೇ, **ಗೀತಾನುಭಾವಃ** ಸ್ತುತಿಸಲ್ಪಟ್ಟ ಮಹಾತ್ಮ್ಯ ಉಳ್ಳವನಾದ, **ಭಗವಾನ್** ಷಡ್ಗುಣಸಂಪನ್ನನಾದ, **ಮುನಿಃ** ಜ್ಞಾನಿಯಾದ, **ಕಪಿಲಃ** ಕಪಿಲಋಷಿಯು, **ತಂ ಅಂಶುಮಂತಂ** ಆ ಅಂಶುಮಂತನನ್ನು, **ಧಿಯಾ**

ಮನಃಪೂರ್ವಕವಾಗಿ, **ಅನುಗೃಹ್ಯ** ಆಶೀರ್ವದಿಸಿ **ಇದಂ** ಮುಂದೆ ಹೇಳುವ ಮಾತನ್ನು **ಉವಾಚ** ಆಡಿದನು.

**ತಾತ್ಪರ್ಯ-** ಅಂಶುಮಂತನಿಂದ ಈ ರೀತಿ ಸ್ತುತಿಸಲ್ಪಟ್ಟ ಕಪಿಲನಾಮಕ ಪರಮಾತ್ಮನು ಮನಃಪೂರ್ವಕ ಅನುಗ್ರಹಮಾಡಿ ಮುಂದೆ ಹೇಳುವ ಮಾತನ್ನಾಡಿದನು. ।।೨೮।।

**ಶ್ರೀ ಭಗವಾನುವಾಚ-**

**ಅಶ್ವೋಽಯಂ ನೀಯತಾಂ ವತ್ಸ ಪಿತಾಮಹಪಶುಸ್ತವ ।**
**ಇಮೇ ಚ ಪಿತರೋ ದಗ್ಧಾ ಗಂಗಾಂಭೋಽರ್ಹಂತಿ ನೇತರತ್ ।।೨೯।।**

**ಹೇ ವತ್ಸ** ಮಗುವೇ, **ತವ** ನಿನ್ನ, **ಪಿತಾಮಹಪಶುಃ** ಅಜ್ಜನ ಯಜ್ಞಪಶುವಾದ, **ಅಯಂ ಅಶ್ವಃ** ಈ ಕುದುರೆಯು **ನೀಯತಾಂ** ಒಯ್ಯಲ್ಪಡಲಿ. **ದಗ್ಧಾಃ** ಭಸ್ಮರಾದ **ಇಮೇ ಪಿತರಃ** ಈ ನಿನ್ನ ಕಕ್ಕಂದಿರು, **ಗಂಗಾಂಭಃ** ಗಂಗಾ ನೀರನ್ನು, **ಅರ್ಹಂತಿ** ಅಪೇಕ್ಷಿಸುವರು, **ನ ಇತರತ್** ಬೇರೇಯದನ್ನು ಅಪೇಕ್ಷಿಸುವುದಿಲ್ಲ.

**ತಾತ್ಪರ್ಯ-** ಅಂಶುಮಂತನೇ ಈ ನಿನ್ನ ಅಜ್ಜನ (ತಾತ) ಯಜ್ಞ ಪಶುವಾದ ಕುದುರೆಯನ್ನು ಅವಶ್ಯ ತೆಗೆದುಕೊಂಡು ಹೋಗು. ನಿನ್ನ ಭಸ್ಮೀಭೂತರಾದ ಕಕ್ಕಂದಿರು ಗಂಗಾನೀರನ್ನು ಅಪೇಕ್ಷಿಸುವರು, ಎಂದು ಭಗವಾನ್ ಕಪಿಲಮುನಿ ಹೇಳಿದನು. ।।೨೯।।

**ತಂ ಪರಿಕ್ರಮ್ಯ ಶಿರಸಾ ಪ್ರಸಾದ್ಯ ಹಯಮಾನಯತ್ ।**
**ಸಗರಸ್ತೇನ ಪಶುನಾ ಕ್ರತುಶೇಷಂ ಸಮಾಪಯತ್ ।।೩೦।।**

**ತಂ** ಕಪಿಲರನ್ನು, **ಪರಿಕ್ರಮ್ಯ** ಪ್ರದಕ್ಷಿಣೆ ಮಾಡಿ, **ಶಿರಸಾ (ಪ್ರಣಮ್ಯ)** ತಲೆ ಬಾಗಿ ನಮಸ್ಕರಿಸಿ, **ಪ್ರಸಾದ್ಯ** ಸಂತೋಷಗೊಳಿಸಿ, **ಹಯಂ** ಕುದುರೆಯನ್ನು **ಅನಯತ್** ತೆಗೆದುಕೊಂಡು ಬಂದನು. **ಸಗರಃ** ಸಗರರಾಜನು, **ತೇನ** ಅಂಶುಮಂತನಿಂದ ತರಲ್ಪಟ್ಟ **ಪಶುನಾ** ಪಶುವಿನಿಂದ **ಕ್ರತುಶೇಷಂ** ಯಜ್ಞದ ಉಳಿದ ಭಾಗವನ್ನು **ಸಮಾಪಯತ್** ಪೂರ್ತಿಮಾಡಿದನು.

**ತಾತ್ಪರ್ಯ-** ಕಪಿಲರನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಅವರನ್ನು ಸಂತೋಷಗೊಳಿಸಿ, ಅಂಶುಮಂತನು ಕುದುರೆಯನ್ನು ತಂದನು. ಆದ್ದರಿಂದ ಸಗರ ಮಹಾರಾಜನು ತನ್ನ ಅಶ್ವಮೇಧವನ್ನು ಪೂರ್ತಿಮಾಡಿದನು. ।।೩೦।।

**ರಾಜ್ಯಮಂಶುಮತೇ ನ್ಯಸ್ಯ ನಿಃಸ್ಪೃಹೋ ಮುಕ್ತಬಂಧನಃ ।**
**ಔರ್ವೋಪದಿಷ್ಟಮಾರ್ಗೇಣ ಲೇಭೇ ಗತಿಮನುತ್ತಮಾಮ್ ।।೩೧।।**

(**ಸಗರಃ** ಸಗರ ರಾಜನು) **ಅಂಶುಮತೇ** ಅಂಶುಮಂತನಿಗೆ, **ರಾಜ್ಯಂ** ರಾಜ್ಯವನ್ನು, **ನ್ಯಸ್ಯ** ಕೊಟ್ಟು, **ನಿಃಸ್ಪೃಹಃ** ವಿಷಯಸ್ನೇಹ ಇಲ್ಲದವನಾಗಿ, **ಮುಕ್ತಬಂಧನಃ** ಸಂಸಾರಬಂಧನದಿಂದ ಮುಕ್ತನಾಗಿ, **ಔರ್ವೋಪದಿಷ್ಟಮಾರ್ಗೇಣ** ಔರ್ವರು ಹೇಳಿದ ಹಾದಿಯಿಂದ, **ಅನುತ್ತಮಾಂ ಗತಿಂ** ಶ್ರೇಷ್ಠವಾದ ಗತಿಯನ್ನು **ಲೇಭೇ** ಹೊಂದಿದನು.

**ತಾತ್ಪರ್ಯ-** ಸಗರ ಮಹಾರಾಜನು ಯಜ್ಞಸಮಾಪ್ತಿಮಾಡಿ ರಾಜ್ಯವನ್ನು ಮೊಮ್ಮಗನಾದ ಅಂಶುಮಂತನಿಗೆ ಒಪ್ಪಿಸಿ ವೈರಾಗ್ಯವನ್ನು ಹೊಂದಿ ಸಂಸಾರದಿಂದ ಬಿಡುಗಡೆ ಹೊಂದಿ ಗುರುಗಳಾದ ಔರ್ವರ ಉಪದೇಶದ ಪ್ರಕಾರ ವರ್ತಿಸಿ ಉತ್ತಮೋತ್ತಮ ಸದ್ಗತಿಯನ್ನು ಹೊಂದಿದನು. ||೩೧||

**ಅಂಶುಮಾಂಶ್ಚ ತಪಸ್ತೇಪೇ ಗಂಗಾಽಽಗಮನಕಾಮ್ಯಯಾ ।**
**ಕಾಲಂ ಮಹಾಂತಂ ನಾಶಕ್ನೋತ್ತತಃ ಕಾಲೇನ ಸಂಸ್ಥಿತಃ ||೩೨||**

**ಅಂಶುಮಾನ್** ಅಂಶುಮಂತನು, **ಗಂಗಾಽಽಗಮನಕಾಮ್ಯಯಾ** ಗಂಗೆಯು ಭೂಮಿಗೆ ಬರಬೇಕೆಂಬ ಇಚ್ಛೆಯಿಂದ **ಮಹಾಂತಂ ಕಾಲಂ** ಬಹುದಿನಗಳು, **ತಪಃ** ತಪಸ್ಸನ್ನು **ತೇಪೇ** ಮಾಡಿದನು. ಆದರೆ **ನ ಅಶಕ್ನೋತ್** ಗಂಗೆಯನ್ನು ತರಲು ಸಮರ್ಥನಾಗಲಿಲ್ಲ. **ತತಃ** ಅನಂತರ, **ಕಾಲೇನ ಸಂಸ್ಥಿತಃ** ಕಾಲಮೃತ್ಯುವಿನ ವಶವಾದನು.

**ತಾತ್ಪರ್ಯ-** ಅಂಶುಮಂತನು ಮಹಾಪರಾಧದಿಂದ ಬಂದ ಪಾಪಮೋಚನ ಮಾಡಿ ತನ್ನವರ ಉದ್ಧಾರಕ್ಕಾಗಿ ಬಹಳಕಾಲ ತಪಸ್ಸು ಮಾಡಿದನು. ಆದರೆ ಗಂಗೆಯನ್ನು ಭೂಮಿಗೆ ತರುವದು ಅವನಿಗೆ ಆಗಲಿಲ್ಲ. ಕೊನೆಗೆ ಕಾಲಮೃತ್ಯುವಿನ ವಶವಾದನು. ||೩೨||

**ದಿಲೀಪಸ್ತತ್ಸುತಸ್ತದ್ವದಶಕ್ತಃ ಕಾಲಮೇಯಿವಾನ್ ।**
**ಭಗೀರಥಸ್ತಸ್ಯ ಪುತ್ರಸ್ತೇಪೇ ಸ ಸುಮಹತ್ತಪಃ ||೩೩||**

**ತತ್ಸುತಃ** ಅಂಶುಮಂತನ ಮಗನಾದ **ದಿಲೀಪಃ** ದಿಲೀಪ ರಾಜನು, **ತದ್ವತ್** ಅಂಶುಮಂತನಂತೆ **ಅಶಕ್ತಃ** ಗಂಗೆಯನ್ನು ತರಲು ಅಸಮರ್ಥನಾಗಿ, **ಕಾಲಂ ಏಯಿವಾನ್** ಮರಣ ಹೊಂದಿದನು. **ತಸ್ಯ** ದಿಲೀಪನ **ಪುತ್ರಃ** ಮಗನು **ಭಗೀರಥಃ** ಭಗೀರಥನು **ಸಃ** ಇವನು, **ಸುಮಹತ್ತಪಃ** ಅತಿಮಹತ್ತರವಾದ ತಪಸ್ಸನ್ನು **ತೇಪೇ** ಮಾಡಿದನು.

**ತಾತ್ಪರ್ಯ-** ಅಂಶುಮಂತನಿಗೆ ದಿಲೀಪನೆಂಬ ಮಗನು, ಇವನೂ ಸಹ ಗಂಗೆಗಾಗಿ ತಪಸ್ಸು ಮಾಡಿ ವಿಫಲನಾದನು. ಇವನು ಕಾಲವಾದ ಮೇಲೆ ಇವನ ಮಗ ಭಗೀರಥ ಮಹತ್ತರ ತಪಸ್ಸು ಮಾಡಿದನು. ।।೩೩।।

**ದರ್ಶಯಾಮಾಸ ತಂ ದೇವೀ ಪ್ರಸನ್ನಾ ವರದಾಽಸ್ಮಿ ತೇ ।**
**ಇತ್ಯುಕ್ತಃ ಸ್ವಮಭಿಪ್ರಾಯಂ ಶಶಂಸಾವನತೋ ಭೃಶಮ್ ।।೩೪।।**

**ಪ್ರಸನ್ನಾ** ಸಂತುಷ್ಟಳಾದ, **ದೇವೀ** ಭಾಗೀರಥಿಯು, **ತಂ ಪ್ರತಿ** ಆ ಭಗೀರಥನಿಗೆ ತನ್ನನ್ನು , **ದರ್ಶಯಾಮಾಸ** ತೋರಿಸಿದಳು, **ತೇ** ನಿನಗೆ **ವರದಾ ಅಸ್ಮಿ** ವರಕೊಡುವೆನು, **ಇತ್ಯುಕ್ತಃ** ಹೀಗೆ ಹೇಳಿಸಿಕೊಳ್ಳಲ್ಪಟ್ಟ ಭಗೀರಥನು, **ಭೃಶಂ** ಬಹಳ, **ಅವನತಃ** ವಿನೀತನಾಗಿ, **ಸ್ವಂ ಅಭಿಪ್ರಾಯಂ** ತನ್ನ ಮನಸ್ಸಿನ ಅಭಿಪ್ರಾಯವನ್ನು **ಶಶಂಸ** ಹೇಳಿದನು.

**ತಾತ್ಪರ್ಯ-** ಭಗೀರಥನ ತಪಸ್ಸಿನಿಂದ ಸಂತುಷ್ಟಳಾದ ಗಂಗಾದೇವಿಯು ಪ್ರತ್ಯಕ್ಷಳಾಗಿ ವರವನ್ನು ಕೊಡುವುದಾಗಿ ಹೇಳಿದಾಗ ಭಗೀರಥನು ಅತಿವಿನಯದಿಂದ ತನ್ನ ಮನದ ಅಭಿಪ್ರಾಯವಾದ ತನ್ನ ಪಿತೃಗಳ ಭಸ್ಮವನ್ನು ಪವಿತ್ರಮಾಡಲು ಕೇಳಿಕೊಂಡನು. ।।೩೪।।

**ಗಂಗೋವಾಚ-**

**ಕೊ ವಿಧಾರಯಿತಾ ವೇಗಂ ಪತಂತ್ಯಾ ಮೇ ಮಹಿತಲೇ ।**
**ಅನ್ಯಥಾ ಭೂತಲಂ ಭಿತ್ವಾ ನೃಪ ಯಾಸ್ಯೇ ರಸಾತಲಮ್ ।।೩೫।।**

**ಹೇ ನೃಪ** ಎಲೋ ಭಗೀರಥ ರಾಜನೇ! **ಮಹೀತಲೇ** ಭೂಮಿಯಲ್ಲಿ **ಪತಂತ್ಯಾ** ಆಕಾಶದಿಂದ ಬೀಳುವ, **ಮೇ** ನನ್ನ, **ವೇಗಂ** ವೇಗವನ್ನು **ಕಃ** ಯಾರು **ವಿಧಾರಯಿತಾ** ಧಾರಣ ಮಾಡುವರು? **ಅನ್ಯಥಾ** ಯಾರೂ ಧಾರಣ ಮಾಡದಿದ್ದರೆ, **ಭೂತಲಂ** ಭೂಮಿಯನ್ನು, **ಭಿತ್ವಾ** ಸೀಳಿಕೊಂಡು **ರಸಾತಲಂ** ರಸಾತಲ ಲೋಕಕ್ಕೆ **ಯಾಸ್ಯೇ** ಹೋಗುವೆನು.

**ತಾತ್ಪರ್ಯ-** ಎಲೋ ರಾಜನೇ! ಆಕಾಶದಿಂದ ಭೂಮಿಗೆ ಬೀಳುವ ನನ್ನ ವೇಗವನ್ನು ಯಾರು ಧರಿಸುವರು? ನಿನ್ನಿಷ್ಟಕ್ಕೆ ನೀನು ಇಳಿದು ಬಾ ಎಂದರೆ ನಾನು ಬಂದೂ ಪ್ರಯೋಜನವಾಗದು. ಭೂಮಿಯನ್ನು ಭೇದಿಸಿ ರಸಾತಲಕ್ಕೆ ಹೋಗಿ ಬಿಡುವೆನು ಹೀಗೆ ಹೇಳಿದಳು. ।।೩೫।।

ರಸಾತಲಕ್ಕೆ ಹೋಗುವದೊಂದೇ ಅನರ್ಥವಲ್ಲ, ಇನ್ನು ಒಂದಿದೆ ಎಂದು ಹೇಳಿದಳು-

**ಕಿಂ ಚಾಹಂ ದುರ್ಗತಿಂ ಯಾಸ್ಯೇ ನರಾ ಮಯ್ಯಾಮೃಜಂತ್ಯಘಮ್ ।**
**ಮೃಜಾಮಿ ತದಘಂ ಕ್ರೂರಂ ರಾಜಂಸ್ತತ್ರ ವಿವಿಚ್ಯತಾಮ್ ॥೩೬॥**

**ಕಿಂಚ** ಇನ್ನೊಂದು ದೋಷವೂ ಕೂಡ ಇದೆ, **ಅಹಂ** ನಾನು **ದುರ್ಗತಿಂ** ನರಕವನ್ನು **ಯಾಸ್ಯೇ** ಹೊಂದುವೆನು, ಏಕೆಂದರೆ? **ನರಾಃ** ಪಾಪಿಗಳಾದ ಜನರು, **ಮಯಿ** ನನ್ನಲ್ಲಿ **ಅಘಂ** ಪಾಪವನ್ನು **ಆಮೃಜಂತಿ** ತೊಳೆದುಕೊಳ್ಳುವರು, **ಕ್ರೂರಂ** ಕಠಿಣವಾದ **ತದಘಂ** ಆ ಪಾಪವನ್ನು, **ಅಹಂ** ನಾನು **ಕ್ವ** ಎಲ್ಲಿ **ಮೃಜಾಮಿ** ತೊಳೆದುಕೊಳ್ಳಲಿ, **ರಾಜನ್** ರಾಜನೇ! **ತತ್ರ** ಎರಡು ವಿಷಯವನ್ನು **ವಿವಿಚ್ಯತಾಂ** ನಿಶ್ಚಯಿಸು ರಸಾತಲಕ್ಕೆ ಹೋದರೆ ನಿನ್ನ ಅಭೀಷ್ಟ ಸಿದ್ಧಿಸಲಾರದು ಎಂದು ಹೇಳಿದಳು. **ವಿಚಿಂತ್ಯತಾಂ** ಎಂದೂ ಪಾಠವಿದೆ. ಆಗ **ನರಾಃ** ನಿನ್ನ ಪಿತೃಗಳು **ಕಥಂ, ಅಘಂ ಮೃಜಂತಿ** ಹೇಗೆ ಪಾಪ ಕಳೆದುಕೊಳ್ಳುವರು **ಅಹಂ ಚ** ನಾನಾದರೂ **ತದಘಂ** ಅವರ ಪಾಪವನ್ನು **ಕಥಂ ಮೃಜಾಮಿ** ಹೇಗೆ ಕಳೆದೇನು, **ವಿಚಿಂತ್ಯತಾಂ** ವಿಚಾರ ಮಾಡು ಎಂದರ್ಥವು.

**ತಾತ್ಪರ್ಯ-** ರಾಜನೇ! ನಾನು ಭೂಮಿಗೆ ಬಂದರೆ ಅಲ್ಲಿರುವ ಜನರು ತಮ್ಮ ಪಾಪವನ್ನು ನನ್ನಲ್ಲಿ ಬಿಟ್ಟು ತಾವು ಶುದ್ಧರಾಗುವರು. ಆದರೆ ಆ ಎಲ್ಲ ಘೋರ ಪಾಪವನ್ನು ನಾನು ಹೇಗೆ ಕಳೆದುಕೊಳ್ಳಲಿ? ನನ್ನ ಪಾಪವನ್ನು ಕಳೆಯುವವರು ಯಾರು? ಮತ್ತು ನನ್ನ ವೇಗ ಧರಿಸುವವರಾರು? ಇದನ್ನು ವಿಚಾರಮಾಡಿ ನಿಶ್ಚಯಿಸಿ ಹೇಳು, ಎಂದು ಹೇಳಿದಳು. ॥೩೬॥

**ರಾಜೋವಾಚ-**

**ಸಾಧವೋ ನಿರಾಶಿಷಃ ಶಾಂತಾ ಬ್ರಹ್ಮಿಷ್ಠಾ ಲೋಕಪಾವನಾಃ ।**
**ಹರಂತ್ಯಘಂ ತೇಽಂಗಸಂಗಾದ್ಯೇ ಪ್ರಾಪ್ತಾಃ ಸ್ವಹೃದಾ ಹರಿಮ್ ॥೩೭॥**

**ಸಾಧವಃ** ಸಜ್ಜನರು, **ಶಾಂತಾಃ** ಶಾಂತಸ್ವಭಾವದವರು, **ನಿರಾಶಿಷಾಃ** ಸ್ವರ್ಗಾದಿ ಸುಖವನ್ನು ಅಪೇಕ್ಷಿಸುವವರು, **ಬ್ರಹ್ಮಿಷ್ಠಾಃ** ಅತಿಶಯ ಬ್ರಹ್ಮೋಪಾಸನೆ ಉಳ್ಳವರು, **ಲೋಕಪಾವನಾಃ** ದರ್ಶನಮಾತ್ರದಿಂದ ಜಗತ್ತನ್ನು ಪವಿತ್ರಗೊಳಿಸುವ, **ಯೇ** ಯಾರು **ಸ್ವಹೃದಾ ಹರಿಂ ಪ್ರಾಪ್ತಾಃ** ತಮ್ಮ ಹೃದಯದಲ್ಲಿ ಪರಮಾತ್ಮನನ್ನು ಹೊಂದಿರುವರೋ, **ತೇ** ಅವರು, **ಅಂಗಸಂಗಾತ್** ಪಾದಪೂಜೆ ಮಾಡಿದಾಗ ಆಗುವ ತಮ್ಮ ಪಾದಸಂಬಂಧದಿಂದ **ಅಘಂ** ಜನರ ಪಾಪವನ್ನು **ಹರಂತಿ** ಕಳೆಯುವರು, **ತೇ** ಅವರು **ಅಂಗಸಂಗಾತ್** ನಿನ್ನಲ್ಲಿ ಸ್ನಾನಮಾಡುವಾಗ ಆಗುವ ದೇಹಸಂಬಂಧದಿಂದ, **ತೇ** ನಿನ್ನ, **ಅಘಂ** ಪಾಪವನ್ನು, **ಹರಂತಿ** ಕಳೆಯುವರು.

**ತಾತ್ಪರ್ಯ-** ಮೊದಲು ಧಾರಕನಾರೆಂಬ ಪ್ರಶ್ನೆಗೆ ಉತ್ತರಿಸಬೇಕಾಗಿದ್ದರೂ, ಗಂಗೆಯು ಭೂಮಿಗೆ ಬರಲು ತಡೆಯುತ್ತಿರುವ ಪಾಪಶಂಕೆಯು ತನ್ನ ಪಿತೃಗಳ

ಉದ್ಧೃತಿಗೆ ತಡೆಯಾಗಿ ತನ್ನ ಮನಸ್ಸಿಗೆ ಕಳವಳಕ್ಕೆ ಕಾರಣವಾದ್ದರಿಂದ ಪಾಪ ನಿವಾರಣ ಉಪಾಯವನ್ನು ಹೇಳುವನು.

ಪರಮಾತ್ಮನನ್ನು ಹೃದಯದಲ್ಲಿ ಧಾರಣ ಮಾಡಿದ ಸಜ್ಜನರು ಅನಾಯಾಸವಾಗಿ ತಮ್ಮ ದರ್ಶನ ಮಾತ್ರದಿಂದ ಪವಿತ್ರಗೊಳಿಸುವ ಸಾಮರ್ಥ್ಯವುಳ್ಳವರು. ಅವರು ತಮ್ಮ ಪಾದ ಪೂಜೆ ಮಾಡುವಾಗ ಜನರ ಕೈಗಳಿಗೆ ಆದ ಪಾದಸಂಬಂಧದಿಂದ ಸಮಸ್ತ ಪಾಪಗಳನ್ನು ಕಳೆಯುವರು. ಅವರಿಗೆ ಹರಿಯ ಸನ್ನಿಧಾನದಿಂದ ಪಾಪವು ಇರುವುದಿಲ್ಲ. ಅವರು ನಿನ್ನಲ್ಲಿ ಸ್ನಾನ ಮಾಡಿದಾಗ ಅವರ ಅಂಗಸಂಗದಿಂದ ನಿನ್ನ ಪಾಪವನ್ನು ಕಳೆಯುವರು. ಹೀಗೆ ಹೇಳಿದನು. ನೀನು ಸರ್ವದಾ ಪದ್ಮನಾಭನ ಪಾದಕಮಲವನ್ನು ಹೊಂದಿದವಳು. ನಿನಗೆಲ್ಲಿಯ ಪಾಪದ ಭಯವು ಎಂದೂ ಹೇಳಿದನು. ಗಂಗೆಯಾದರೂ ನಾನು ಕೇವಲ ಹರಿಯ ಚರಣವನ್ನು ಸ್ಪರ್ಶ ಮಾಡಿದವಳು, ಇವರಾದರೂ ಮನಸಾ ಹರಿಯನ್ನೇ ಹೊಂದಿದ ಮಹನೀಯರು. ಕಾರಣ ನನ್ನ ಪಾಪವನ್ನು ಕಳೆಯುವದು ಇವರಿಗೇನು ಅಸಾಧ್ಯವಲ್ಲವೆಂದು ಸ್ವಸ್ತಟಿನೀ (ಗಂಗೆಯು) ಸ್ವಸ್ಥಳಾದಳು. (ಸಮಾಧಾನಳಾದಳು). ।।೩೭।।

ಮೊದಲನೆ ಪ್ರಶ್ನೆಗೆ ಉತ್ತರಿಸುವನು-

**ಧಾರಯಿಷ್ಯಂತಿ ತೇ ವೇಗಂ ರುದ್ರಸ್ತ್ವಾತ್ಮಾ ಶರೀರಿಣಾಮ್ ।**
**ಯಸ್ಮಿನ್ನೋತಮಿದಂ ಪ್ರೋತಂ ವಿಶ್ವಂ ಶಾಟೀವ ತಂತುಷು ।।೩೮।।**

**ಶರೀರಿಣಾಂ** ದೇಹಧರಿಸಿದವರಿಗೆ, **ಆತ್ಮಾ** ಅಹಂಕಾರಾಭಿಮಾನಿಯಾದ್ದರಿಂದ ಸ್ವಾಮಿಯಾದ **ಯಸ್ಮಿನ್** ಯಾವಾತನಲ್ಲಿ **ಇದಂ ವಿಶ್ವಂ** ಈ ಪ್ರಪಂಚವು **ತಂತುಷು** ದಾರದಲ್ಲಿ, **ಶಾಟೀ ಇವ** ಬಟ್ಟೆಯಂತೆ **ಓತಂ ಪ್ರೋತಂ** ಆಶ್ರಯಿಸಿಕೊಂಡಿದೆಯೋ, **ಸಃ ರುದ್ರಃ** ಅಂಥ ರುದ್ರದೇವರು, **ತೇ** ನಿನ್ನ **ವೇಗಂ** ವೇಗವನ್ನು, **ಧಾರಯಿಷ್ಯತಿ** ಧರಿಸುತ್ತಾನೆ.

**ತಾತ್ಪರ್ಯ-** ಸಮಸ್ತ ಜಗತ್ತಿಗೆ ಆಧಾರನಾದ ಸರ್ವಸ್ವಾಮಿಯಾದ ರುದ್ರದೇವರು ಶೀಘ್ರದಲ್ಲಿ ಫಲ ಕೊಡುವನೆಂದು ಕೇಳಿ ತಿಳಿದವನಾದ ಕಾರಣ ಸದಾಶಿವನ ಹೆಸರು ತೆಗೆದುಕೊಂಡನು. ।।೩೮।।

**ಇತ್ಯುಕ್ತ್ವಾ ಸ ನೃಪೋ ದೇವೀಂ ತಪಸಾತೋಷಯಚ್ಛಿವಮ್ ।**
**ಕಾಲೇನಾಲ್ಪೀಯಸಾ ರಾಜಂಸ್ತಪಸಾ ಚಾಪ್ಯತುಷ್ಯತ ।।೩೯।।**

**ರಾಜನ್** ರಾಜನೇ! **ಸಃ** ಆ **ನೃಪಃ** ಭಗೀರಥರಾಜನು **ದೇವೀಂ** ಗಂಗಾದೇವಿಯನ್ನು ಕುರಿತು, **ಇತಿ** ಈ ರೀತಿಯಾಗಿ **ಉಕ್ತ್ವಾ** ಹೇಳಿ, **ಅಲ್ಪೀಯಸಾ ಕಾಲೇನ** ಸ್ವಲ್ಪಕಾಲದಲ್ಲಿ, **ಅಲ್ಪೀಯಸಾ ತಪಸಾ** ಸ್ವಲ್ಪೇ ತಪಸ್ಸಿನಿಂದ **ಶಿವಂ** ರುದ್ರದೇವರನ್ನು **ಅತೋಷಯತ್**

ಸಂತೋಷಪಡಿಸಿದನು. (ಸಃ ಆ ರುದ್ರದೇವರು) **ತಪಸಾ** ಭಗೀರಥನು ಮಾಡಿದ ತಪಸ್ಸಿನಿಂದ **ಆಶು** ಬೇಗನೇ **ಅತುಷ್ಯತ** ಸಂತುಷ್ಟರಾದರು.

**ತಾತ್ಪರ್ಯ-** ಗಂಗಾದೇವಿಗೆ ಈ ರೀತಿ ಉತ್ತರವನ್ನು ಹೇಳಿದ ಭಗೀರಥನು ರುದ್ರದೇವರನ್ನು ಕುರಿತು ತಪಸ್ಸು ಮಾಡಿದನು. ಸ್ವಲ್ಪೇ ಕಾಲದಲ್ಲಿ ರುದ್ರದೇವರು ಪ್ರಸನ್ನನಾದರು. ||೩೯||

**ತಥೇತಿ ರಾಜ್ಞಾಭಿಹಿತಃ ಸರ್ವಲೋಕಹಿತಃ ಶಿವಃ ।**
**ದಧಾರಾವಹಿತೋ ಗಂಗಾ ಪಾದಪೂತಜಲಾಂ ಹರೇಃ ||೪೦||**

**ಇತಿ** ಗಂಗಾದೇವಿಯು ಹೇಳಿದ ಪ್ರಕಾರ, **ರಾಜ್ಞಾ** ಭಗೀರಥನಿಂದ **ಅಭಿಹಿತಃ** ಹೇಳಿಸಿಕೊಳ್ಳಲ್ಪಟ್ಟ, **ಸರ್ವಲೋಕಹಿತಃ** ಸಮಸ್ತ ಜಗತ್ತಿಗೆ ಕಲ್ಯಾಣ ಮಾಡುವ **ಶಿವಃ** ರುದ್ರದೇವರು, **ತಥಾ ಇತಿ** ಹಾಗೇ ಆಗಲೆಂದು **ಅಭಿಹಿತಃ ಸನ್** ಹೇಳಿದವನಾಗಿ (ಆ ಅಭಿಹಿತಂ ಯಸ್ಯ ಸಃ) **ಹರೇಃ** ಪರಮಾತ್ಮನ, **ಪಾದಪೂತಜಲಾಂ** ಪಾದಪೂಜೆಯಿಂದ ಪವಿತ್ರವಾದ ನೀರುಳ್ಳ, **ಗಂಗಾಂ** ಗಂಗಾ ನದಿಯನ್ನು, **ಅವಹಿತಃ** ಧಾರಣ ಮಾಡುವೆನೆಂದು ಸಂಕಲ್ಪಿಸಿದ್ದರಲ್ಲಿ ಸ್ವಲ್ಪ ತಪ್ಪಿದರೂ ಪಾಪ ಬಂದೀತೆಂದು ಸಾವಧಾನ ಮನಸ್ಕನಾಗಿ, **ದಧಾರ** ಧಾರಣೆ ಮಾಡಿದನು.

**ತಾತ್ಪರ್ಯ-** ಭಗೀರಥನು, ತಪಸ್ಸಿನಿಂದ ಸಂತುಷ್ಟನಾದ ರುದ್ರದೇವರಿಗೆ ಗಂಗೆಯನ್ನು ಧಾರಣ ಮಾಡಲು ಪ್ರಾರ್ಥಿಸಿದನು. ಆಗ ಹಾಗೇ ಆಗಲೆಂದು ಹೇಳಿದ ಶಿವನು ಜಗತ್ಕಲ್ಯಾಣ ಮಾಡಲು ಮತ್ತು ತನ್ನ ಉದ್ಧಾರಕ್ಕಾಗಿಯೂ ಪರಮಾತ್ಮನ ಪಾದ ಸಂಪರ್ಕದಿಂದ ಪವಿತ್ರವಾದ ಗಂಗೆಯನ್ನು ವ್ಯತ್ಯಾಸವಾದರೆ ಪಾಪ ಬಂದೀತೆಂದು ಬಹಳ ಜಾಗರೂಕತೆಯಿಂದ ಧಾರಣ ಮಾಡಿದನು. ||೪೦||

**ಭಗೀರಥೋಽಪಿ ರಾಜರ್ಷಿರ್ನಿನ್ಯೇ ಭುವನಪಾವನೀಮ್ ।**
**ಯತ್ರ ಸ್ವಪಿತೃಣಾಂ ದೇಹಾ ಭಸ್ಮೀಭೂತಾಃ ಸ್ಮ ಶೇರತೇ ||೪೧||**

**ರಾಜರ್ಷಿಃ** ರಾಜರ್ಷಿಯಾದ **ಭಗೀರಥಃ** ಭಗೀರಥನು **ಭುವನಪಾವನೀಂ** ಜಗತ್ತನ್ನು ಪವಿತ್ರಗೊಳಿಸುವ ಗಂಗೆಯನ್ನು, **ಯತ್ರ** ಎಲ್ಲಿ **ಸ್ವಪಿತೃಣಾಂ** ತನ್ನ ಪಿತೃಗಳ **ದೇಹಾಃ** ದೇಹಗಳು, **ಭಸ್ಮೀಭೂತಾಃ** ಬೂದಿಯಾಗಿ, **ಶೇರತೇ ಸ್ಮ** ಮಲಗಿದಂತಿದ್ದವೋ **ತತ್ರ** ಅಲ್ಲಿ **ನಿನ್ಯೇ** ಕರೆದೊಯ್ದನು. ಇದರಿಂದ ಗಂಗೆಯ ಕರುಣೆಯು ಎದ್ದು ತೋರುವದು.

**ತಾತ್ಪರ್ಯ-** ಭಗೀರಥನು ತನ್ನ ಪಿತೃಗಳ ದೇಹದ ಭಸ್ಮವಿದ್ದಲ್ಲಿ ಗಂಗೆಯನ್ನು ಬರಮಾಡಿಕೊಂಡನು. ||೪೧||

**ರಥೇನ ವಾಯುವೇಗೇನ ಪ್ರಯಾಂತಮನುಧಾವತೀ ।**
**ದೇಶಾನ್ಪುನಂತೀ ನಿರ್ದಗ್ಧಾನಸಿಂಚತ್ಸಗರಾತ್ಮಜಾನ್ ॥೪೨॥**

**ವಾಯುವೇಗೇನ** ವಾಯುವೇಗವುಳ್ಳ, **ರಥೇನ** ರಥದಿಂದ **ಪ್ರಯಾಂತಂ** ಮುಂದೆ ಹೋಗುವ ಭಗೀರಥನನ್ನು, **ಅನುಧಾವತೀ** ಹಿಂಬಾಲಿಸಿ ಬರುವ ಗಂಗೆಯು, **ದೇಶಾನ್** ಮಾರ್ಗದಲ್ಲಿ ಬರುವ ದೇಶಗಳನ್ನು, **ಪುನಂತೀ** ಪವಿತ್ರಗೊಳಿಸುವಳಾಗಿ, **ನಿರ್ದಗ್ಧಾನ್** ಸುಟ್ಟು ಬಿದ್ದಿರುವ, **ಸಗರಾತ್ಮಜಾನ್** ಸಗರ ಪುತ್ರರನ್ನು **ಅಸಿಂಚತ್** ತೋಯಿಸಿದಳು.

**ತಾತ್ಪರ್ಯ-** ವಾಯುವೇಗದಿಂದ ಹೋಗುವ ರಾಜನನ್ನು ಹಿಂಬಾಲಿಸಿ ದೇಶಗಳನ್ನು ಪಾವನ ಮಾಡುತ್ತಾ ಬೂದಿಯಾದ ಸಗರನ ಮಕ್ಕಳನ್ನು ಪಾವನಗೊಳಿಸಿದಳು. ॥೪೨॥

**ಯಜ್ಜಲಸ್ಪರ್ಶಮಾತ್ರೇಣ ಬ್ರಹ್ಮದಂಡಹತಾ ಅಪಿ ।**
**ಸಗರಾತ್ಮಜಾ ದಿವಂ ಜಗ್ಮುಃ ಕೇವಲಂ ದೇಹಭಸ್ಮಭಿಃ ॥೪೩॥**

**ಕೇವಲಂ ದೇಹಭಸ್ಮಭಿಃ** ಸಾಕ್ಷಾತ್ ಅಲ್ಲದೇ, ಕೇವಲ ದೇಹದ ಬೂದಿಯ ದ್ವಾರಾ **ಯಜ್ಜಲಸ್ಪರ್ಶಮಾತ್ರೇಣ** ಯಾವ ಗಂಗಾನದಿಯ ನೀರಿನ ಸಂಬಂಧದಿಂದಲೇ **ಬ್ರಹ್ಮದಂಡಹತಾ ಅಪಿ** ಕಪಿಲನಾಮಕ ಪರಮಾತ್ಮನಿಗೆ ಕುದುರೆ ಕಳ್ಳನೆಂದು ಅಪರಾಧದಿಂದ ನಷ್ಟರಾದವರೂ ಸಹ, **ಸಗರಾತ್ಮಜಾಃ** ಸಗರಕುವರರು, **ದಿವಂ** ಸ್ವರ್ಗವನ್ನು ಕುರಿತು, **ಜಗ್ಮುಃ** ಹೋದರು.

**ತಾತ್ಪರ್ಯ-** ಸಗರಪುತ್ರರು ಪರಮಾತ್ಮನ ವಿಷಯದಲ್ಲಿ ಅಪರಾಧವನ್ನು ಮಾಡಿದ್ದರು. ಅವರ ದೇಹದ ಭಸ್ಮಕ್ಕೆ ಗಂಗೆಯ ಸ್ಪರ್ಶವಾದ ಮಾತ್ರಕ್ಕೆ ಆ ಎಲ್ಲ ಸಗರ ಪುತ್ರರು ಪುನೀತರಾದರು. ಸ್ವರ್ಗಕ್ಕೆ ಹೋದರು. ಅಂಥ ಗಂಗಾನದಿಯ ಮಹಿಮೆಯನ್ನು ಏನೆಂದು ವರ್ಣಿಸುವುದು ? ॥೪೩॥

ಹಿಂದೆ ಹೇಳಿದ್ದನ್ನೇ ವಿವರಿಸುವರು.

**ಭಸ್ಮೀಭೂತಾಂಗಸಂಗೇನ ಸ್ವರ್ಯಾತಾಃ ಸಗರಾತ್ಮಜಾಃ ।**
**ಕಿಂ ಪುನಃ ಶ್ರದ್ಧಯಾ ದೇವೀಂ ಯೇ ಸೇವಂತೇ ಧೃತವ್ರತಾಃ ॥೪೪॥**

**ಭಸ್ಮೀಭೂತಾಂಗಸಂಗೇನ** ಬೂದಿಯಲ್ಲಿರುವ ಅಸ್ಥಿಗಳಿಗೆ ಆದ ಗಂಗಾಜಲ ಸಂಬಂಧದಿಂದ, **ಸಗರಾತ್ಮಜಾಃ** ಸಗರನ ಮಕ್ಕಳು, **ಸ್ವರ್ಯಾತಾಃ** ಸ್ವರ್ಗಕ್ಕೆ ತೆರಳಿದರು. ಅಂದಮೇಲೆ, **ಯೇ** ಯಾರು, **ಧೃತವ್ರತಾಃ** ಸಂಕಲ್ಪಪೂರ್ವಕವಾಗಿ **ಶ್ರದ್ಧಯಾ**

ಭಕ್ತಿಯಿಂದ **ದೇವೀಂ** ಭಾಗೀರಥಿಯನ್ನು, **ಸೇವಂತೇ** ಸೇವಿಸುವರೋ, **ತೇ** ಅವರು **ಗಚ್ಛೇಯುಃ** ಸ್ವರ್ಗಕ್ಕೆ ಹೋಗುವರೆಂದು **ಪುನಃ ಕಿಂ** ಮತ್ತೇನು ಹೇಳುವದು? ಹೇಳಬೇಕಿಲ್ಲ ನಿಶ್ಚಯವಾಗಿ ಹೋಗುವರು.

**ತಾತ್ಪರ್ಯ-** ಅಸ್ಥಿಗೆ ಗಂಗಾಸಂಬಂಧವಾದರೇನೇ ಸಗರನ ಮಕ್ಕಳು ಸ್ವರ್ಗಕ್ಕೆ ಹೋದರೆಂದ ಮೇಲೆ ಬುದ್ಧಿಪೂರ್ವಕವಾಗಿ ಸಂಕಲ್ಪಮಾಡಿ ಭಕ್ತಿಯಿಂದ ಸಾಕ್ಷಾತ್ ಸ್ನಾನಮಾಡಿದವರು ಸ್ವರ್ಗವನ್ನು ಸೇರುವರೆಂದು ಪ್ರತ್ಯೇಕ ಹೇಳಬೇಕಿಲ್ಲ. ।।೪೪।।

ಈ ವಿಧವಾದ ಮಾಹಾತ್ಮ್ಯವು ಗಂಗೆ ಬಂದದ್ದು ಪರಮಾತ್ಮನ ಪಾದಸಂಬಂಧ-ದಿಂದಲೇ ಆದ್ದರಿಂದ ಏನೂ ಆಶ್ಚರ್ಯವಲ್ಲವೆಂದು ಹೇಳುವರು.

**ನ ಹ್ಯೇತತ್ಪರಮಾಶ್ಚರ್ಯಂ ಸ್ವರ್ಧುನ್ಯಾ ಯದಿಹೋದಿತಮ್ ।**
**ಅನಂತಚರಣಾಂಭೋಜಪ್ರಸೂತಾಯಾ ಭವಚ್ಛಿದಃ ।।೪೫।।**

**ಇಹ** ಸಗರಪುತ್ರರ ಕಥಾಪ್ರಸಂಗದಲ್ಲಿ, **ಭವಚ್ಛಿದಃ** ಸಂಸಾರಮೋಚಕಳಾದ **ಅನಂತಚರಣಾಂಭೋಜಪ್ರಸೂತಾಯಾಃ** ವಿಷ್ಣುವಿನ ಪಾದಕಮಲದಿಂದ ಉತ್ಪನ್ನಳಾದ **ಸ್ವರ್ಧುನ್ಯಾಃ** ಗಂಗೆಯ **ಯತ್** ಯಾವ ಮಾಹಾತ್ಮ್ಯವು **ಉದಿತಂ** ಹೇಳಲ್ಪಟ್ಟಿತ್ತೋ, **ಏತತ್** ಇದು **ಪರಮಾಶ್ಚರ್ಯಂ ನ** ಅತ್ಯಾಶ್ಚರ್ಯವಲ್ಲ.

**ತಾತ್ಪರ್ಯ-** ಸಗರ ಪುತ್ರರ ಚರಿತ್ರೆಯನ್ನು ಹೇಳುವಾಗ ಹೇಳಿದ ಗಂಗೆಯ ಮಹಿಮೆ ಆಶ್ಚರ್ಯ ಪಡುವಂಥದೇನಲ್ಲ. ಕಾರಣವಿಷ್ಟೇ. ಈ ಎಲ್ಲ ಮಾಹಾತ್ಮ್ಯವು ಸಂಸಾರ ಮೋಚಕನಾದ ಭಗವಂತನ ಪಾದಸಂಬಂಧದಿಂದಲೇ ಬಂದದ್ದು ಎಂದಭಿಪ್ರಾಯ. ।।೪೫।।

ಯಾವ ಪರಮಾತ್ಮನ ಪಾದಸಂಗದಿಂದ ಭಾಗೀರಥಿಯು ಇಷ್ಟು ಮಹಿಮೆ ಉಳ್ಳವಳಾದಳೋ ಅಂಥ ಪರಮಾತ್ಮನ ಮಾಹಾತ್ಮ್ಯವನ್ನು ಎಷ್ಟೆಂದು ವರ್ಣಿಸಲಿ ಎಂದು ಪರವಶರಾಗಿ ಹೇಳುವರು.

**ಸನ್ನಿವೇಶ್ಯ ಮನೋ ಯಸ್ಮಿನ್ ಶ್ರದ್ಧಯಾ ಮುನಯೋಽಮಲಾಃ ।**
**ತ್ರೈಗುಣ್ಯಂ ದುಸ್ತ್ಯಜಂ ಹಿತ್ವಾ ಸದ್ಯೋ ಯಾತಾಸ್ತದಾತ್ಮತಾಮ್ ।।೪೬।।**

**ಯಸ್ಮಿನ್** ಶ್ರೀಹರಿಯಲ್ಲಿ, **ಮನಃ** ಮನಸ್ಸನ್ನು, **ಶ್ರದ್ಧಯಾ** ಭಕ್ತಿಯಿಂದ **ಸನ್ನಿವೇಶ್ಯ** ಸಂಪೂರ್ಣವಾಗಿ ಇಟ್ಟು, **ಮುನಯಃ** ಜ್ಞಾನಿಗಳು, **ಅಮಲಾಃ ಸಂತಃ** ದೋಷರಹಿತರಾಗಿ **ದುಸ್ತ್ಯಜಂ** ಬಿಡಲಶಕ್ಯವಾದ **ತ್ರೈಗುಣ್ಯಂ** ಸತ್ವಾದಿ ಗುಣಕಾರ್ಯವಾದ ಸಂಸಾರವನ್ನು, **ಹಿತ್ವಾ** (ಕಳೆದುಕೊಂಡು) ತೊರೆದು,

**ತದಾತ್ಮತಾಂ** ಸಾಯುಜ್ಯವನ್ನು, **ಸದ್ಯಃ** ಇದೇ ಕಲ್ಪದಲ್ಲಿ ಬ್ರಹ್ಮದೇವರ ಒಟ್ಟಿಗೆ, **ಯಾತಾಃ** ಹೊಂದುವರು.

**ತಾತ್ಪರ್ಯ-** ಜ್ಞಾನಿಗಳು ಭಗವಂತನಲ್ಲಿ ಭಕ್ತಿಯಿಂದ ಮನಸ್ಸನ್ನು ಸಂಪೂರ್ಣ ನೆಟ್ಟು ನಿಷ್ಕಲ್ಮಷರಾಗಿ ಕಠಿಣವಾದ ಸಂಸಾರವನ್ನು ದೂರಮಾಡಿ ಸಾಯುಜ್ಯವೆಂಬ ಮೋಕ್ಷವನ್ನು ಹೊಂದುವರು. ಇಂಥ ಪರಮಾತ್ಮನ ಪಾದಸಂಭೂತಳಾದ ಗಂಗೆಯು ಸಗರಪುತ್ರರನ್ನು ಉದ್ಧರಿಸಿದ್ದು ಏನಾಶ್ಚರ್ಯ. ಸಂಸಾರ ನಿವಾರಣೆ ಮಾಡುವವ ಮುಖ್ಯವಾಗಿ ಭಗವಂತನೇ ಮಿಕ್ಕವರೆಲ್ಲ ನಿಮಿತ್ತ ಮಾತ್ರ ಔಪಚಾರಿಕವಾಗಿ ಹೇಳುವದಷ್ಟೇ. ॥೪೬॥

ಪ್ರಾಸಂಗಿಕವಾದ ಭಾಗೀರಥೀಮಾಹಾತ್ಮ್ಯವನ್ನು ಹೇಳಿ ಪ್ರಸ್ತುತವಾದ ಭಗೀರಥನ ವಂಶವನ್ನು ನಿರೂಪಿಸುವರು.

**ಶ್ರುತೋ ಭಗೀರಥಾಜ್ಜಜ್ಞೇ ತಸ್ಯ ನಾಭೋ ವರೋಽಭವತ್ ।**
**ಸಿಂಧೂದ್ವೀಪಸ್ತತಸ್ತಸ್ಮಾದಯುತಾಯುಸ್ತತೋಽಭವತ್ ॥೪೭॥**

**ಋತುಪರ್ಣೋ ನಲಸಖೋ ಯೋಽಶ್ವವಿದ್ಯಾಮಯಾನ್ನಲಾತ್ ।**
**ದತ್ವಾಽಕ್ಷಹೃದಯಂ ತಸ್ಮೈ ಸರ್ವಕಾಮಸ್ತು ತತ್ಸುತಃ ॥೪೮॥**

**ಭಗೀರಥಾತ್** ಭಗೀರಥನಿಂದ, **ಶ್ರುತಃ** ಶ್ರುತನು, **ಜಜ್ಞೇ** ಹುಟ್ಟಿದನು. **ತಸ್ಯ** ಶ್ರುತನಿಗೆ **ನಾಭಃ** (ನಾಮ್ನೈಕದೇಶಗ್ರಹಣ) **ನಾಭಾಗನು** (ಮನುಪುತ್ರನಿಂದ ಬೇರೆಯವನು) **ತತಃ** ನಾಭಾಗನಿಂದ, **ವರಃ** ವರನು, **ತತಃ** ವರನಿಂದ **ಸಿಂಧುದ್ವೀಪಃ** ಸಿಂಧುದ್ವೀಪನು, **ತಸ್ಮಾತ್** ಸಿಂಧುದ್ವೀಪನಿಂದ **ಅಯುತಾಯುಃ** ಅಯುತಾಯುವು, **ಅಭವತ್** ಹುಟ್ಟಿದನು. **ತತಃ** ಅಯುತಾಯುವಿನಿಂದ **ಯಃ** ಯಾರು, **ನಲಸಖಃ** ನಲರಾಜನ ಸ್ನೇಹಿತನೋ, **ತಸ್ಮೈ** ನಲನಿಗೆ **ಅಕ್ಷಹೃದಯಂ** ದ್ಯೂತವಿದ್ಯೆಯನ್ನು, **ದತ್ವಾ** ಉಪದೇಶ ಮಾಡಿ **ಅಶ್ವವಿದ್ಯಾಂ** ಕುದುರೆಯ ಪರೀಕ್ಷೆಯನ್ನು ಮಾಡುವ ಶಾಸ್ತ್ರವನ್ನು **ನಲಾತ್** ನಲನಿಂದ **ಅಯಾತ್** ಹೊಂದಿದನೋ, **ಸಃ** ಅಂಥ **ಋತುಪರ್ಣಃ** ಋತುಪರ್ಣನು, **ಅಭವತ್** ಹುಟ್ಟಿದನು. **ತತ್ಸುತಃ** ಋತುಪರ್ಣನ ಮಗನು, **ಸರ್ವಕಾಮಃ** ಸರ್ವಕಾಮನು. ॥೪೭-೪೮॥

**ತತಃ ಸುದಾಸಸ್ತತ್ಪುತ್ರೋ ಮದಯಂತೀ ಪತಿರ್ನೃಪಃ ।**
**ಆಹುರ್ಮಿತ್ರಸಹಂ ಯಂ ವೈ ಕಲ್ಮಾಷಾಂಘ್ರಿಮುತ ಕ್ವಚಿತ್ ॥೪೯॥**

**ತತಃ** ಸರ್ವಕಾಮನಿಂದ, **ಸುದಾಸಃ** ಸುದಾಸನು, **ತತ್ಪುತ್ರಃ** ಸುದಾಸನ ಮಗನು, **ಸೌದಾಸಃ** ಸೌದಾಸನು (ಶೇಷವು) **ಮದಯಂತೀಪತಿಃ** ಮದಯಂತೀ ಎಂಬುವಳ

ಪತಿಯು, **ನೃಪಃ** ರಾಜನು, **ಯಂ** ಯಾವ ಸೌದಾಸನನ್ನು **ಮಿತ್ರಸಹಂ** ಮಿತ್ರಸಹನೆಂದು **ಉತ** ಮತ್ತು **ಕ್ವಚಿತ್** ಮುಂದೊಮ್ಮೆ **ಕಲ್ಮಾಷಾಂಘ್ರಿಂ** ಕಲ್ಮಾಷಪಾದನೆಂದು, **ಆಹುಃ** ಕರೆದರು.

ಇಲ್ಲಿ ಸತ್ಯಧರ್ಮರ ವ್ಯಾಖ್ಯಾನ ಪ್ರಕಾರ, **ತತ್ಪುತ್ರಃ** ಸರ್ವಕಾಮನ ಮಗನು, **ಸುದಾಸಃ** ಸುದಾಸನು, ಇವನೇ ಮದಯಂತೀಪತಿಯು. **ತತಃ** ಅನಂತರ **ಕ್ವಚಿತ್ಕಲ್ಮಾಷಪಾದನಾಮ್ನಾ ಸೌದಾಸಶ್ಚ ಅಭವತ್.** ಎಂದರೆ ತಾನೇ ತನ್ನ ಕಾಲಮೇಲೆ ಶಾಪೋದಕವನ್ನು ಹಾಕಿಕೊಂಡು ಕಲ್ಮಾಷಪಾದನೆಂಬ ಅವಸ್ಥೆಗೆ ಕಾರಣನಾದ್ದರಿಂದ ಇವನಿಗೇ ಸೌದಾಸ, ಎಂದು ಕಲ್ಮಾಷಪಾದನೆಂದೂ, ಹೆಸರುಗಳು ಬಂದವು. ॥೪೯॥

**ವಸಿಷ್ಠಶಾಪಾದ್ರಕ್ಷೋಽಭೂದನಪತ್ಯಃ ಸ್ವಕರ್ಮಣಾ ॥೫೦॥**

ಇವನು **ಸ್ವಕರ್ಮಣಾ** ಪ್ರಾಚೀನಕರ್ಮದಿಂದ, **ಅನಪತ್ಯಃ** ಅಪುತ್ರನು, **ಸ್ವಕರ್ಮಣಾ** ಈಗ ಮಾಡಿದ ಕರ್ಮದಿಂದ **ವಸಿಷ್ಠಶಾಪಾತ್** ವಸಿಷ್ಠರ ಶಾಪದಿಂದ **ರಕ್ಷಃ** ರಾಕ್ಷಸನು, **ಅಭೂತ್** ಆದನು.

**ತಾತ್ಪರ್ಯ-** ಪ್ರಾಸಂಗಿಕವಾದ ಭಾಗೀರಥೀ ಮಹಿಮೆಯನ್ನು ವಿವರಿಸಿ, ಭಗೀರಥನ ವಂಶವನ್ನು ವಿವರಿಸುವರು. ಭಗೀರಥನ ಮಗನು ಶ್ರುತ. ಶ್ರುತನಿಗೆ ನಾಭಾಗನು. ಅವನಿಗೆ ವರನು. ಅವನಿಂದ ಸಿಂಧುದ್ವೀಪ. ಇವನಿಂದ ಅಯುತಾಯುವು. ಅಯುತಾಯುವಿಗೆ ಋತುಪರ್ಣನು ಹೀಗೆ ಜನಿಸಿದರು. ಋತುಪರ್ಣನು ದ್ಯೂತದಲ್ಲಿನಿಪುಣನು. ತನ್ನ ಈ ದ್ಯೂತವಿದ್ಯೆಯನ್ನು ನಲರಾಜನಿಗೆ ಉಪದೇಶಿಸಿ ಅವನಿಂದ ಕುದುರೆಗಳನ್ನು ಪರೀಕ್ಷೆ ಮಾಡುವ ವಿದ್ಯೆಯನ್ನು ಪಡೆದನು. ಹೀಗೆ ನಲಸಖನಾದ ಋತುಪರ್ಣನಿಗೆ ಸರ್ವಕಾಮನು. ಇವನಿಗೆ ಸುದಾಸನು, ಇವನ ಮಗನ ಸೌದಸನು. ಈ ಸೌದಾಸನು ಮದಯಂತೀ ಪತಿಯು. ಇವಳು ತನ್ನ ಪತಿಗೆ ಬಂದಿರುವ ದುಷ್ಟಬುದ್ಧಿಯನ್ನು ಪರಿಹರಿಸಿರುವಳು, ಕಾರಣ ಈ ವಿಶೇಷಣ ಕೊಟ್ಟಿರುವರು. ಇವನಿಗೆ ಮಿತ್ರಸಹ, ಕಲ್ಮಾಷಪಾದ ಎಂದೂ ಹೆಸರುಗಳು. ಈತನು ತನ್ನ ಪ್ರಾಚೀನಕರ್ಮದಿಂದ ಮಕ್ಕಳಿಲ್ಲದವನು. ಈಗ ಅಪರಾಧ ಮಾಡಿದ್ದರಿಂದ ವಸಿಷ್ಠರ ಶಾಪದಿಂದ ರಾಕ್ಷಸನಾದನು. ॥೪೭-೫೦॥

**ರಾಜೋವಾಚ-**

**ಕಿಂ ನಿಮಿತ್ತೋ ಗುರೋಃ ಶಾಪಃ ಸೌದಸಸ್ಯ ಮಹಾತ್ಮನಃ ।**
**ಏತದ್ವೇದಿತುಮಿಚ್ಛಾಮಃ ಕಥ್ಯತಾಂ ನ ರಹೋ ಯದಿ ॥೫೧॥**

**ಮಹಾತ್ಮನಃ** ಮಹಾತ್ಮನಾದ, **ಸೌದಾಸಸ್ಯ** ಸೌದಾಸನಿಗೆ, **ಮಹಾತ್ಮನಃ** ಮಹಾತ್ಮರಾದ, **ಗುರೋಃ** ಗುರುಗಳಾದ ವಸಿಷ್ಠರ, **ಶಾಪಃ** ಶಾಪವು, **ಕಿಂ ನಿಮಿತ್ತಃ** ಯಾವ ಕಾರಣವುಳ್ಳದ್ದು, **ಏತತ್** ಇದನ್ನು, **ವೇದಿತುಂ** ತಿಳಿಯಲು, **ಇಚ್ಛಾಮಃ** ಇಚ್ಛಿಸುವೆವು, **ಯದಿ** ಒಂದು ವೇಳೆ, **ನ ರಹಃ** ರಹಸ್ಯವಾಗದಿದ್ದರೆ, **ಕಥ್ಯತಾಂ** ಹೇಳಲ್ಪಡಲಿ.

**ತಾತ್ಪರ್ಯ-** ಮಹಾತ್ಮನಾದ ಸೌದಾಸನಿಗೆ ಮಹಾತ್ಮರಾದ ವಸಿಷ್ಠರು ಶಾಪ ಕೊಡಲು ಕಾರಣವೇನು? ಎಂಬುದು ಗೌಪ್ಯವಾಗದಿದ್ದರೆ ಕೇಳಲು ಇಚ್ಛಿಸುವೆನು ದಯಮಾಡಿ ಹೇಳಿರಿ ಎಂದು (ಪರೀಕ್ಷಿತನು) ಕೇಳಿದನು. ।।೫೧।।

**ಶ್ರೀಶುಕ ಉವಾಚ-**

**ಸೌದಾಸೋ ಮೃಗಯಾಂ ಕಿಂಚಿಚ್ಚರನ್ ರಕ್ಷೋ ಜಘಾನ ಹ ।**
**ಶುಶೋಚ ಭ್ರಾತರಂ ಸೋಽಥ ಗತಃ ಪ್ರತಿಚಿಕೀರ್ಷಯಾ ।।೫೨।।**

**ಸೌದಾಸಃ** ಸೌದಾಸನು, **ಮೃಗಯಾಂ** ಬೇಟೆಯನ್ನು, **ಚರನ್** ಆಡುತ್ತಾ, **ಕಿಂಚಿತ್ ರಕ್ಷಃ** ಒಬ್ಬ ರಾಕ್ಷಸನನ್ನು, **ಜಘಾನ** ಕೊಂದನು. **ಹ** ಪ್ರಸಿದ್ಧವು. ಇವನ ಸಹೋದರನು, **ಭ್ರಾತರಂ** ಮೃತನಾದ ತಮ್ಮನನ್ನು ಕುರಿತು **ಶುಶೋಚ** ದುಃಖಪಟ್ಟನು. **ಅಥ** ಅನಂತರ, **ಸಃ** ರಾಕ್ಷಸ ಸಹೋದರನು, **ಪ್ರತಿಚಿಕೀರ್ಷಯಾ** ಪ್ರತೀಕಾರ ಮಾಡುವ ಇಚ್ಛೆಯಿಂದ, **ಗತಃ** ರಾಜನ ಮನೆ ಸೇರಿದನು. ।।೫೨।।

**ಸ ಚಿಂತಯನ್ನಘಂ ರಾಜ್ಞಃ ಸೂದರೂಪಧರೋ ಗೃಹೇ ।**
**ಗುರವೇ ಭೋಕ್ತುಕಾಮಾಯ ಪಕ್ತ್ವಾ ನಿನ್ಯೇ ನರಾಮಿಷಮ್ ।।೫೩।।**

**ಸಃ** ರಾಕ್ಷಸನು, **ರಾಜ್ಞಃ** ರಾಜನಿಗೆ (ಸೌದಾಸ) **ಅಘಂ** ಅನಿಷ್ಟವನ್ನು **ಚಿಂತಯನ್** ಮಾಡಲು ಇಚ್ಛಿಸಿ, **ಗೃಹೇ** ರಾಜಗೃಹದಲ್ಲಿ, **ಸೂದರೂಪಧರಃ** ಅಡಿಗೆಯವನ ವೇಷವನ್ನು ಸ್ವೀಕರಿಸಿ, **ಭೋಕ್ತುಕಾಮಾಯ** ಊಟಮಾಡಲು ಇಚ್ಛಿಸುವ **ಗುರವೇ** ವಸಿಷ್ಠರಿಗೆ, **ನರಾಮಿಷಂ** ಮನುಷ್ಯಮಾಂಸವನ್ನು, **ಪಕ್ತ್ವಾ** ಬೇಯಿಸಿ, **ನಿನ್ಯೇ** ಕೊಂಡೊಯ್ದನು.

**ತಾತ್ಪರ್ಯ-** ರಾಕ್ಷಸನು ರಾಜನಿಗೆ ಕೆಡಕು ಮಾಡಲು ಅಡಿಗೆಯವನ ರೂಪವನ್ನು ತೆಗೆದುಕೊಂಡು, ಮನುಷ್ಯಮಾಂಸದಿಂದ ಅಡಿಗೆ ಮಾಡಿ ವಸಿಷ್ಠರಿಗೆ ಬಡಿಸಲು ತೆಗೆದುಕೊಂಡು ಬಂದನು. ।।೫೩।।

**ಪರಿವೇಷ್ಯಮಾಣಂ ಭಗವಾನ್ವಿಲೋಕ್ಯಾಭಕ್ಷ್ಯಮಂಜಸಾ ।**
**ರಾಜಾನಮಶಪತ್ಕ್ರುದ್ಧೋ ರಕ್ಷೋ ಹ್ಯೇವಂ ಭವಿಷ್ಯಸಿ ।।೫೪।।**

**ಭಗವಾನ್** ವಸಿಷ್ಠರು, **ಪರಿವೇಷ್ಯಮಾಣಂ** ಬಡಿಸುತ್ತಿರುವದನ್ನು, **ಅಭಕ್ಷ್ಯಂ** ಭುಂಜಿಸಲು ಅಯೋಗ್ಯವೆಂದು **ಅಂಜಸಾ** ಜ್ಞಾನದೃಷ್ಟಿಯಿಂದ, **ವಿಲೋಕ್ಯ** ತಿಳಿದು, **ರಾಜಾನಂ** ಸೌದಾಸನನ್ನು, **ಕ್ರುದ್ಧಃ** ಸಿಟ್ಟಾಗಿ **ಏವಂ** ಈ ಬಡಿಸುವವನಂತೆ, **ರಕ್ಷಃ** ರಾಕ್ಷಸನು, **ಭವಿಷ್ಯಸಿ** ಆಗುವಿ (ಇತಿ ಎಂದು) **ಅಶಪತ್** ಶಾಪಕೊಟ್ಟರು.

**ತಾತ್ಪರ್ಯ-** ಜ್ಞಾನದೃಷ್ಟಿಯಿಂದ ಬಡಿಸುತ್ತಿರುವದು ನರಮಾಂಸವೆಂದು ತಿಳಿದು, ಸಿಟ್ಟಾಗಿ, ರಾಜನಿಗೆ ನೀನು ಇವನಂತೆ ರಾಕ್ಷಸನಾಗುವಿ ಎಂದು ಶಪಿಸಿದನು. ॥೫೪॥

ರಾಜನು ಅಪರಾಧ ಮಾಡಿಲ್ಲ. ಮಾಡಿದವನು ರಾಕ್ಷಸನು. ನನ್ನ ಮಾತೂ ಸುಳ್ಳಾಗಬಾರದು. ಕಾರಣ ಶಾಪವನ್ನು ಸಂಕೋಚ ಮಾಡೋಣವೆಂದು ದಯೆಯಿಂದ ಈ ರೀತಿ ಸೂಚಿಸಿದರು-

**ರಕ್ಷಃಕೃತಂ ತದ್ವಿದಿತ್ವಾ ಚಕ್ರೇ ದ್ವಾದಶವಾರ್ಷಿಕಮ್ ।**
**ಸೋಽಪ್ಯಪೋಽಂಜಲಿನಾಽಽದಾಯ ಗುರುಂ ಶಪ್ತುಂ ಸಮುದ್ಯತಃ॥೫೫॥**

**ತತ್** ನರಮಾಂಸ ತಂದು ಹಾಕಿದ್ದು, **ರಕ್ಷಃಕೃತಂ** ರಾಕ್ಷಸನು ಮಾಡಿದ್ದೆಂದು **ವಿದಿತ್ವಾ** ತಿಳಿದು, (**ಸ್ವಶಾಪಂ** ತನ್ನ ಶಾಪವನ್ನು) **ದ್ವಾದಶವಾರ್ಷಿಕಂ** ಹನ್ನೆರಡು ವರ್ಷಕ್ಕೆ ಸೀಮಿತವನ್ನಾಗಿ **ಚಕ್ರೇ** ಮಾಡಿದನು, **ಸಃ ಅಪಿ** ಸೌದಾಸನಾದರೂ **ಅಂಜಲಿನಾ** ಬೊಗಸೆಯಿಂದ **ಅಪಃ** ನೀರನ್ನು, **ಆದಾಯ** ತೆಗೆದುಕೊಂಡು, **ಗುರುಂ** ವಸಿಷ್ಠರನ್ನು, **ಶಪ್ತುಂ** ಶಪಿಸಲು **ಸಮುದ್ಯತಃ** ಸಿದ್ಧನಾದನು.

**ತಾತ್ಪರ್ಯ-** ಅತಿಕ್ರುದ್ಧರಾದ ವಸಿಷ್ಠರು ರಾಜನಿಗೆ ಶಾಪವನ್ನು ಕೊಟ್ಟರು. ನಂತರ ವಿಚಾರ ಮಾಡಿ ರಾಜನ ಅಪರಾಧವಲ್ಲ. ಇದೆಲ್ಲವು ರಾಕ್ಷಸನದೇ ಎಂದು ತಿಳಿದು, ರಾಜನ ಮೇಲೆ ದಯೆಯಿಂದ ತಮ್ಮ ಶಾಪವನ್ನು ಹನ್ನೆರಡು ವರ್ಷ ಮಾತ್ರ ರಾಕ್ಷಸನಾಗು, ಎಂದು ಸಂಕೋಚಗೊಳಿಸಿದರು. ಇಲ್ಲಿ ರಾಕ್ಷಸರು ಇಬ್ಬರು, ಒಬ್ಬನು ರಾಜನಲ್ಲಿ ಪ್ರವೇಶ ಮಾಡಿದವನು. ಇನ್ನೊಬ್ಬನು ಅಡಿಗೆಯವನಾದವನು. ರಾಜನಲ್ಲಿ ಪ್ರವೇಶಿಸಿದವನು ಮಾಡಿದ್ದೆಂದು ತಿಳಿದು ಎಂದು ಅರ್ಥಮಾಡಬೇಕು. ಅಂದರೆ ಭಾರತದಲ್ಲಿ ಆದಿಪರ್ವದಲ್ಲಿ ರಾಜನಿಂದ ಪ್ರೇರಿತನಾಗಿ ನರಮಾಂಸ ಬೇಯಿಸಿದನೆಂದು ಹೇಳಿದುದಕ್ಕೆ ಮತ್ತು ಇಲ್ಲಿ ರಾಕ್ಷಸನೇ ಮಾಡಿದ್ದೆಂದು ತಿಳಿದು ಎಂದು ಹೇಳಿದ್ದಕ್ಕೆ ವಿರೋಧ ಬರುವದಿಲ್ಲ. ಭಾರತದಲ್ಲಿ ಹೀಗೆ ಹೇಳಿದೆ. ವಿಶ್ವಾಮಿತ್ರರು ರಾಜನಲ್ಲಿ ಪ್ರವೇಶ ಮಾಡೆಂದು ರಾಕ್ಷಸನಿಗೆ ಹೇಳಿದರು. ಕಿಂಕರನೆಂಬ ರಾಕ್ಷಸನು ರಾಜನಲ್ಲಿ ಪ್ರವೇಶ ಮಾಡಿದನು. ರಾಕ್ಷಸಾವೇಶದಿಂದ ರಾಜನು ಅಡಿಗೆಯವನಿಗೆ ನರಮಾಂಸ ಬೇಯಿಸಲು ಹೇಳಿದನು. ಆಗ ಇನ್ನೊಬ್ಬ

ರಾಕ್ಷಸನೇ ಅಡಿಗೆಯವನ ವೇಷದಲ್ಲಿದ್ದು, ಅಡಿಗೆ ಮಾಡಿದನು. ಎಂದು ಹೇಳಿದ್ದರಿಂದ ಎಲ್ಲವನ್ನೂ ರಾಕ್ಷಸರೇ ಮಾಡಿದಂತಾಯಿತು. ।।೩೫।।

**ವಾರಿತೋ ಮದಯಂತ್ಯಾಪೋ ರುಶತೀಃ ಪಾದಯೋರ್ಜಹೌ ।**
**ದಿಶಃ ಖಮವನೀಂ ಸರ್ವಾಂ ಪಶ್ಯನ್ ಜೀವಮಯೀಂ ನೃಪಃ ।।೩೬।।**

**ನೃಪಃ** ಸೌದಾಸನು, **ಮದಯಂತ್ಯಾ** ಹೆಂಡತಿಯಾದ ಮದಯಂತಿಯಿಂದ **ವಾರಿತಃ** ನಿವಾರಿಸಲ್ಪಟ್ಟವನಾಗಿ, **ದಿಶಃ** ದಿಕ್ಕುಗಳನ್ನು **ಜೀವಮಯ್ಯಃ** ಜೀವಪೂರ್ಣಗಳನ್ನಾಗಿ, **ಖಂ** ಆಕಾಶವನ್ನು, **ಜೀವಮಯಂ** ಜೀವಪೂರ್ಣವೆಂದು **ಸರ್ವಾಂ ಅವನೀಂ** ಎಲ್ಲ ಭೂಮಿಯನ್ನು **ಜೀವಮಯೀಂ** ಜೀವಪೂರ್ಣವೆಂದು, **ಪಶ್ಯನ್** ನೋಡಿ, **ರುಶತೀಃ** ಮಂತ್ರಿತವಾದ್ದರಿಂದ ಕ್ರೂರವಾದ, **ಅಪಃ** ನೀರನ್ನು **ಪಾದಯೋಃ** ತನ್ನ ಕಾಲಮೇಲೆ **ಜಹೌ** ಬಿಟ್ಟನು.

**ತಾತ್ಪರ್ಯ-** ನೀರನ್ನು ಕೈಯಲ್ಲಿ ಹಿಡಿದು ಶಪಿಸಲು ಸಿದ್ಧನಾದಾಗ ಸಾಧ್ವಿಯಾದ ಅವನ ಪತ್ನಿ ಮದಯಂತಿಯು ಗುರುಗಳಿಗೆ ಶಾಪಕೊಡುವುದು, ಉಚಿತವಲ್ಲವೆಂದು ತಡೆದಳು. ರಾಜನು ಎಲ್ಲೆಲ್ಲಿಯೂ ಜೀವರನ್ನು ಕಂಡು ಒಬ್ಬ ರಾಕ್ಷಸನನ್ನು ಕೊಂದು ಈ ಗತಿ ಆಗಿದೆ, ಇನ್ನು ಈ ನೀರಿನಿಂದ ಅನೇಕ ಜೀವರಿಗೆ ಪೀಡೆಯಾದರೆ ನನ್ನ ಗತಿ ಇನ್ನೇನಾದೀತು, ಎಂದು ವಿಚಾರಿಸಿ ತನ್ನ ಕಾಲ ಮೇಲೆಯೇ ಅಭಿಮಂತ್ರಿತ ನೀರನ್ನು ಹಾಕಿಕೊಂಡನು. ।।೩೬।।

**ರಾಕ್ಷಸಂ ಭಾವಮಾಪನ್ನಃ ಪಾದೇ ಕಲ್ಮಾಷತಾಂ ಗತಃ ।**
**ವ್ಯವಾಯಕಾಲೇ ದದೃಶೇ ವನೌಕೌ ದಂಪತೀ ದ್ವಿಜೌ ।।೩೭।।**

**ರಾಕ್ಷಸಂ ಭಾವಂ** ರಾಕ್ಷಸರೂಪವನ್ನು, **ಆಪನ್ನಃ** ಹೊಂದಿ, **ಪಾದೇ ಕಲ್ಮಾಷತಾಂ** (ಅಡವಿ ಉದ್ದಿನ ಬಣ್ಣ) ಕಪ್ಪು ಬಣ್ಣವನ್ನು, **ಗತಃ** ಹೊಂದಿದೆನು. **ವ್ಯವಾಯ-ಕಾಲೇ** ಸುರತಸಮಯದಲ್ಲಿ, **ವನೌಕೌ** ಅಡವಿಯಲ್ಲಿ ವಾಸವಾಗಿರುವ, **ದಂಪತೀ** ಪತ್ನಿಯರಾದ, **ದ್ವಿಜೌ** ಬ್ರಾಹ್ಮಣರನ್ನು, **ದದೃಶೇ** ನೋಡಿದನು.

ದ್ವಿಜಾ ಚ ದ್ವಿಜಶ್ಚ ದ್ವಿಜೌ ಪುಮೇಕಶೇಷವು ಶಬ್ದದಲ್ಲಿ ಮಾತ್ರ . ಅರ್ಥತಃ ಈಗ ಸ್ತ್ರೀವಿಶೇಷವೇ ಎಂದು ಧ್ವನಿತ.

ಸೌದಾಸನು ವಸಿಷ್ಠರ ಶಾಪದಿಂದ ರಾಕ್ಷಸನಾದನು. ತನ್ನ ಶಾಪದ ನೀರನ್ನು ಕಾಲ ಮೇಲೆ ಹಾಕಿಕೊಂಡದ್ದರಿಂದ ಕಾಲುಗಳೆರಡೂ ಕಪ್ಪಾದವು.

ಸ್ವಕರ್ಮಣಾನಪತ್ಯಃ ಎಂದು ಹೇಳಿದ್ದನ್ನೇ ವಿವರಿಸುವರು. ಅಡವಿಯಲ್ಲಿ ವಾಸವಾಗಿರುವ ಬ್ರಾಹ್ಮಣದಂಪತಿಯನ್ನು ಅವರ ಸುರತಸಮಯದಲ್ಲಿ ಕಂಡನು.

**ಕ್ಷುಧಾರ್ತೋ ಜಗೃಹೇ ವಿಪ್ರಂ ತತ್ಪತ್ನ್ಯಾಹಾಕೃತಾರ್ಥವತ್ ।**
**ನ ಭವಾನ್ ರಾಕ್ಷಸಃ ಸಾಕ್ಷಾದಿಕ್ಷ್ವಾಕೂಣಾಂ ಮಹಾರಥಃ ॥೫೮॥**

**ಕ್ಷುಧಾರ್ತಃ** ಹಸಿವೆಯಿಂದ ಪೀಡಿತನಾಗಿ ಸೌದಾಸನು, **ವಿಪ್ರಂ** ಬ್ರಾಹ್ಮಣನನ್ನು, **ಜಗೃಹೇ** ತಿನ್ನಲು ಹಿಡಿದುಕೊಂಡನು. **ಅಕೃತಾರ್ಥವತ್** ಯದ್ಯಪಿ ಲಜ್ಜೆಯು ಸ್ತ್ರೀಯರಿಗೆ ಸ್ವಭಾವ, ಆದರೂ ಲಜ್ಜೆಯನ್ನು ತೊರೆದು ಲಜ್ಜಾರಹಿತ ಅಕೃತಾರ್ಥ-ಪುರುಷನಂತೆ ರಾಜನನ್ನು ಕುರಿತು ಹೇಳಿದಳು. ಅಥವಾ ಅಕೃತಾರ್ಥವತೀ ಎಂದೇ ಅರ್ಥ. ಪತಿಯಿಂದ ಸುರತವು ಅಸಮಾಪ್ತವಾದ್ದರಿಂದ ಅಕೃತಾರ್ಥಳು. (ಅಕೃತಾರ್ಥ ಶಬ್ದದ ಮೇಲೆ ಮನ್ ಪ್ರತ್ಯಯ ಜೀಪ್ ಪ್ರತ್ಯಯ ಛಾಂದಸವಾದ್ದರಿಂದ ಲೋಪವಾದಾಗ ಅಕೃತಾರ್ಥವತ್ ಎಂದು ರೂಪ). **ಪತ್ನೀ** ಹೆಂಡತಿಯು, **ಆಹ** ಕೊಲ್ಲದಿರಲು ಮುಂದೆ ಹೇಳುವಂತೆ ಹೇಳಿದಳು. **ಭವಾನ್** ನೀನು **ಸಾಕ್ಷಾತ್‌ರಾಕ್ಷಸಃ** ಸ್ವಾಭಾವಿಕ ರಾಕ್ಷಸಜಾತಿಯವನು. **ನ** ಅಲ್ಲ **ಇಕ್ಷ್ವಾಕೂಣಾಂ** ಇಕ್ಷ್ವಾಕುವಂಶದ **ಮಹಾರಥಃ** ಮಹಾರಥಿಕನು. ॥೫೮॥

**ಮದಯಂತ್ಯಾಃ ಪತಿರ್ವೀರ ನಾಧರ್ಮಂ ಕರ್ತುಮರ್ಹಸಿ ।**
**ದೇಹಿ ಮೇಽಪತ್ಯಕಾಮಾಯಾ ಅಕೃತಾರ್ಥಂ ಪತಿಂ ದ್ವಿಜಮ್ ॥೫೯॥**

**ವೀರ** ಎಲೋ ವೀರನೇ, **ಮದಯಂತ್ಯಾಃ** ಮದಯಂತಿಯ, **ಪತಿಃ** ಪತಿಯು (ಈ ವಿಶೇಷಣದಿಂದ ನೀನು ಸ್ತ್ರೀಸುಖವನ್ನು ತಿಳಿದವನು, ನನ್ನ **ಪತಿಂ** ಪತಿಯನ್ನು ಬಿಡು ಇಲ್ಲವಾದರೆ ನನ್ನಂತೆ ನಿನಗೂ ಸುರತಸುಖವು ನಷ್ಟವಾದೀತು ಎಂದು ಸೂಚಿಸುವಳು). **ಅಧರ್ಮಂ** ಅನ್ಯಾಯವನ್ನು, **ಕರ್ತುಂ** ಮಾಡಲು, **ನ** **ಅರ್ಹಸಿ** ಯೋಗ್ಯನಲ್ಲ, **ಅಪತ್ಯಕಾಮಾಯಾಃ** ಮಕ್ಕಳನ್ನು ಅಪೇಕ್ಷಿಸುವ, **ಮೇ** ನನಗೆ **ಅಕೃತಾರ್ಥಂ** ಸುರತವನ್ನು ಮುಗಿಸದಿರುವ, **ಪತಿಂ ದ್ವಿಜಂ** ಗಂಡನಾದ ಬ್ರಾಹ್ಮಣನನ್ನು, **ದೇಹಿ** ಕೊಡು, ಹಿಂಸೆ ಮಾಡಬೇಡ. ॥೫೯॥

**ದೇಹೋಽಯಂ ಮಾನುಷೋ ರಾಜನ್ ಪುರುಷಸ್ಯಾಖಿಲಾರ್ಥದಃ ।**
**ತಸ್ಮಾದಸ್ಯ ವಧೋ ವೀರ ಸರ್ವಾರ್ಥವಧ ಉಚ್ಯತೇ ॥೬೦॥**

**ರಾಜನ್** ರಾಜನೇ, **ಅಯಂ** ಈ **ಮಾನುಷಃ ದೇಹಃ** ಮನುಷ್ಯದೇಹವು, **ಪುರುಷಸ್ಯ** ಜನರಿಗೆ **ಅಖಿಲಾರ್ಥದಃ** ಸಕಲಾಭೀಷ್ಟಪ್ರದವು, **ತಸ್ಮಾತ್** ಆದ್ದರಿಂದ **ವೀರಃ** ಸಮರ್ಥನೇ, **ಅಸ್ಯ** ಈ ದೇಹದ, **ವಧಃ** ಸಂಹಾರವು, **ಸರ್ವಾರ್ಥವಧಃ** ಸಕಲಾಭೀಷ್ಟನಾಶವಿದ್ದಂತೆ ಎಂದು **ಉಚ್ಯತೇ** ಕರೆಸಿಕೊಳ್ಳುತ್ತದೆ. ॥೬೦॥

**ಏಷ ಹಿ ಬ್ರಾಹ್ಮಣೋ ವಿದ್ವಾಂಸ್ತಪಃಶೀಲಗುಣಾನ್ವಿತಃ ।**
**ಆರಿರಾಧಯಿಷುರ್ಬ್ರಹ್ಮ ಮಹಾಪುರುಷಸಂಜ್ಞಿತಮ್ ॥೬೦॥**

**ಸರ್ವಭೂತಾತ್ಮಭಾವೇನ ಭೂತೇಷ್ವಂತರ್ಹಿತಂ ಗುಣೈಃ ।**
**ಸೋಽಯಂ ಬ್ರಹ್ಮರ್ಷಿವರ್ಯಸ್ತೆ ರಾಜರ್ಷಿಪ್ರವರಾದ್ವಿಭೋ ॥೬೧॥**

**ಕಥಮರ್ಹತಿ ಧರ್ಮಜ್ಞ ವಧಂ ಪಿತುರಿವಾತ್ಮಜಃ ।**
**ತಸ್ಯ ಸಾಧೋರಪಾಪಸ್ಯ ಭ್ರೂಣಸ್ಯ ಬ್ರಹ್ಮವಾದಿನಃ ॥೬೩॥**

**ಏಷಃ** ಇವನು, **ಬ್ರಾಹ್ಮಣಃ** ದ್ವಿಜನು, **ವಿದ್ವಾನ್** ಜ್ಞಾನಿಯು, **ತಪಃಶೀಲಗುಣಾನ್ವಿತಃ** ತಪಸ್ಸು ಆಚಾರ ಇವುಗಳಿಂದ ಕೂಡಿದವನು, **ಮಹಾಪುರುಷಸಂಜ್ಞಿತಂ** ಮಹಾಪುರುಷನೆಂಬ, **ಬ್ರಹ್ಮ** ನಾರಾಯಣನನ್ನು, **ಸರ್ವಭೂತಾತ್ಮಭಾವೇನ** ಸರ್ವಪ್ರಾಣಿನಿಯಾಮಕನಾಗಿ, **ಭೂತೇಷು** ಎಲ್ಲ ಪದಾರ್ಥಗಳಲ್ಲಿ **ಅಂತರ್ಹಿತಂ** ಅದೃಶ್ಯನಾಗಿರುವನು, **ಗುಣೈಃ** ಗುಣಗಳಿಂದ (ಪೂರ್ಣಂ ಪೂರ್ಣನೆಂದು) **ಆರಿರಾಧಯಿಷುಃ** ಆರಾಧಿಸಲು ಇಚ್ಛಿಸುವ, **ಸಃ** ಪ್ರಸಿದ್ಧನಾದ **ಅಯಂ ಬ್ರಹ್ಮರ್ಷಿವರ್ಯಃ** ಈ ಬ್ರಹ್ಮಜ್ಞಾನಿಶ್ರೇಷ್ಠನು, **ರಾಜರ್ಷಿಪ್ರವರಾತ್** ರಾಜಶ್ರೇಷ್ಠನಾದ **ವಿಭೋಃ** ಸಮರ್ಥನಾದ, **ತವ ಸಕಾಶಾತ್** ನಿನ್ನಿಂದ, **ಧರ್ಮಜ್ಞಃ** ಧರ್ಮವನ್ನು ತಿಳಿದವನೇ, **ಪಿತುಃ** ತಂದೆಯಿಂದ **ಆತ್ಮಜಃ ಇವ** ಮಗನಂತೆ, **ವಧಂ ಕಥಂ ಅರ್ಹತಿ** ಸಂಹಾರ ಹೊಂದಲು ಹೇಗೆ ಯೋಗ್ಯನಾಗುವನು? **ತಸ್ಯ** ಆ **ಸಾಧೋಃ** ಸಾಧುವಾದ, **ಅಪಾಪಸ್ಯ** ಪಾಪರಹಿತನಾದ, **ಭ್ರೂಣಸ್ಯ** ಸ್ತ್ರೈಣಗರ್ಭನಾದ ತಾನು ಮಗನಾಗಿ ಇನ್ನು ಹುಟ್ಟಿಲ್ಲ ತಾನು ತಾನೇ ಇದ್ದಾನೆ ಇಂಥವನು) **ಬ್ರಹ್ಮವಾದಿನಃ** ವೇದವೇದಾಂಗ ಪಾರಂಗತನಾದ, **ತಸ್ಯ** ಬ್ರಾಹ್ಮಣನ ವಧವು ಯೋಗ್ಯವಲ್ಲ. ॥೬೦-೬೩॥

**ಕಥಂ ವಧಂ ಯಥಾ ಬಭ್ರೋರ್ಮನ್ಯತೇ ಸಮ್ಮತೋ ಭವಾನ್ ।**
**ಯದ್ಯಯಂ ಕ್ರಿಯತೇ ಭಕ್ಷ್ಯಸ್ತರ್ಹಿ ಮಾಂ ಖಾದ ಪೂರ್ವತಃ ॥೬೪॥**

**ನ ಜೀವಿಷ್ಯೇ ವಿನಾ ಯೇನ ಕ್ಷಣಂ ಚ ಮೃತಕಂ ಯಥಾ ।**
**ಏವಂ ಕರುಣಭಾಷಿಣ್ಯಾ ವಿಲಪಂತ್ಯಾ ಅನಾಥವತ್ ॥೬೫॥**

**ಸಮ್ಮತಃ** ಸಜ್ಜನನೆಂದು ಎಲ್ಲರಿಂದಲೂ ಅಂಗೀಕೃತನಾದ **ಭವಾನ್** ನೀನು, **ಬಭ್ರೋಃ** ಆಕಳಿನ **(ವಧಂ** ಸಂಹಾರವು **ಯಥಾ** ಹೇಗೆ ಮಾಡಬಾರದೋ) **(ತಥಾ)** ಹಾಗೆ ಬ್ರಾಹ್ಮಣವಧವು ಮಾಡಲು ಅಯೋಗ್ಯವು, **(ಸಃ)** ಅಂಥ ಬ್ರಾಹ್ಮಣವಧವು, **ಕಥಂ, ಮನ್ಯತೇ** ಯೋಗ್ಯವೆಂದು ಹೇಗೆ ತಿಳಿಯುವಿ. **ಅಯಂ** ನನ್ನ ಗಂಡನು, **ಯದಿ** ಒಂದುವೇಳೆ **ಭಕ್ಷ್ಯಃ** ಆಹಾರವಾಗಿ, **ಕ್ರಿಯತೇ ತರ್ಹಿ** ಮಾಡುವದಾದರೆ **ಪೂರ್ವತಃ** ಮೊದಲು, **ಮಾಂ** ನನ್ನನ್ನು, **ಖಾದ** ತಿನ್ನು. **ಯೇನ**

ಯಾರನ್ನು, **ವಿನಾ** ಬಿಟ್ಟು, **ಕ್ಷಣಂ** ಒಂದು ನಿಮಿಷವು, **ನ ಜೀವಿಷ್ಯೇ** ನಾನು ಬದುಕಲಾರೆನು, (**ಮೃತಕಂ ಯಥಾ** ಸತ್ತಂತಿರುವ ಶವದಂತೆ) **ಕರುಣಭಾಷಿಣ್ಯಾ** ದಯೆ ಬರುವಂತೆ ಮಾಡನಾಡುತ್ತಿರುವ **ಅನಾಥವತ್** ರಕ್ಷಕರಿಲ್ಲದವರಂತೆ **ವಿಲಪಂತ್ಯಾ** ರೋದಿಸುತ್ತಿರುವ ಬ್ರಾಹ್ಮಣಸ್ತ್ರೀಯಿಂದ, **ಏವಂ (ಪ್ರಾರ್ಥಿತೇऽಪಿ)** ಈ ರೀತಿ ಪ್ರಾರ್ಥಿತನಾದರೂ ॥೬೪-೬೫॥

**ವ್ಯಾಘ್ರಃ ಪಶುಮಿವಾಖಾದತ್ ಸೌದಾಸಃ ಶಾಪಮೋಹಿತಃ ।**
**ಬ್ರಾಹ್ಮಣೀ ವೀಕ್ಷ್ಯ ಭರ್ತಾರಂ ಪುರುಷಾದೇನ ಭಕ್ಷಿತಮ್ ॥೬೬॥**

**ವ್ಯಾಘ್ರಃ** ಹುಲಿಯು, **ಪಶುಂ ಇವ** ಹಸುವನ್ನು ತಿನ್ನುವಂತೆ, **ಸೌದಾಸಃ** ಸೌದಾಸನು, **ಶಾಪಮೋಹಿತಃ** ಶಾಪದಿಂದ ಜ್ಞಾನಶೂನ್ಯನಾಗಿ, **ಅಖಾದತ್** ತಿಂದನು. **ಪುರುಷಾದೇನ** ರಾಕ್ಷಸನಿಂದ (ಪ್ರಕೃತದಲ್ಲಿ ರಾಕ್ಷಸನಾದ ರಾಜನಿಂದ) **ಭಕ್ಷಿತಂ** ತಿನ್ನಲ್ಪಟ್ಟ **ಭರ್ತಾರಂ** ಪತಿಯನ್ನು, **ವೀಕ್ಷ್ಯ** ನೋಡಿ, ॥೬೬॥

**ಶೋಚಂತ್ಯಾತ್ಮಾನಮುರ್ವೀಶಮಶಪತ್ಕುಪಿತಾ ಸತೀ ।**
**ಯಸ್ಮಾನ್ಮೇ ಭಕ್ಷಿತಃ ಪಾಪ ಕಾಮಾರ್ತಾಯಾ ಪತಿಸ್ತ್ವಯಾ ॥೬೭॥**

**ಆತ್ಮಾನಂ ಶೋಚಂತ್ಯಾ** ನನ್ನನ್ನೂ ಸಹ ಕೊಲ್ಲು ಎಂದು ತನ್ನ ವಿಷಯದಲ್ಲಿ ವಿಚಾರಮಾಡುತ್ತಿರುವ (ದೇಹವನ್ನು ಬಡಿದುಕೊಂಡು ಅಳುತ್ತಿರುವ) **ಸತೀ** ಪತಿವ್ರತೆಯಾದ ಬ್ರಾಹ್ಮಣಪತ್ನಿಯು, **ಉರ್ವೀಶಂ** ರಾಜನನ್ನು, **ಅಶಪತ್** ಶಪಿಸಿದಳು, **ಪಾಪ** ಪಾಪಿಷ್ಠನೇ, **ಯಸ್ಮಾತ್** ಯಾವಕಾರಣ **ಕಾಮಾರ್ತಾಯಾಃ** ಕಾಮಪೀಡಿತಳಾದ **ಮೇ** ನನ್ನ, **ಪತಿಃ** ಗಂಡನು, **ತ್ವಯಾ** ನಿನ್ನಿಂದ, **ಭಕ್ಷಿತಃ** ತಿನ್ನಲ್ಪಟ್ಟನೋ, **ತಸ್ಮಾತ್** ಆ ಕಾರಣ ॥೬೭॥

**ತವಾಪಿ ಮೃತ್ಯುರಾಧಾನಾ(ಪಾತಾ)ದಕೃತಪ್ರಜ್ಞ ದರ್ಶಿತಃ ।**
**ಏವಂ ಮಿತ್ರಸಹಂ ಶಪ್ತ್ವಾ ಪತಿಲೋಕಪರಾಯಣಾ ॥೬೮॥**

**ತದಸ್ಥೀನಿ ಸಮಿದ್ಧೇऽಗ್ನೌ ಪ್ರಾಸ್ಯ ಭರ್ತುರ್ಗತಿಂ ಗತಾ।**

**ಅಕೃತಪ್ರಜ್ಞ** ಅಶಿಕ್ಷಿತಬುದ್ಧಿ ಉಳ್ಳವನೇ, **ತವಾಪಿ** ನಿನಗೂ ಸಹ, **ಆಧಾನಾತ್** ಗರ್ಭಾಧಾನದಿಂದ, **ಮೃತ್ಯುಃ** ಮರಣವು, **ದರ್ಶಿತಃ** ಸ್ಪಷ್ಟವಾಗಿದೆ (ಆಗುವದು) **ಆಪಾತಾತ್** ಎಂಬ ಪಾಠವಿದ್ದಾಗ ಕಾಲಾತ್ ಎಂದು ಶೇಷ ಮಾಡಿಕೊಂಡು ಅನಿರೀಕ್ಷಿತಕಾಲದಲ್ಲಿ ಎಂದು ಅರ್ಥ ಹೇಳಬೇಕು. **ಏವಂ** ಗರ್ಭಾಧಾನ ಸಮಯದಲ್ಲಿ, **ದರ್ಶಿತೋ ಭವೇತ್** ಆಗುವುದು. (ಆಪಾತಾತ್ ಗರ್ಭೋತ್ಪತ್ತಿ-ಯಾಗುವಂತೆ, ರೇತಃಪಾತವಾಗುವ ಮುಂಚೆ ಹೀಗೂ ಅರ್ಥ ಮಾಡಲು

ಬರುವುದು.) **ಏವಂ** ಈ ರೀತಿ **ಮಿತ್ರಸಹಂ** ರಾಜನನ್ನು, **ಶಪ್ತ್ವಾ** ಶಪಿಸಿ, **ಪತಿಲೋಕಪರಾಯಣಾ** ಪತಿಲೋಕವೇ ತನಗಾಗಲೆಂದು ಆಸಕ್ತಿ ಉಳ್ಳವಳಾಗಿ, **ತದಸ್ಥೀನಿ** ಗಂಡನ ಎಲುಬುಗಳನ್ನು, **ಸಮಿದ್ಧೇ** ಪ್ರಜ್ವಲಿಸುವ **ಅಗ್ನೌ** ಬೆಂಕಿಯಲ್ಲಿ, **ಪ್ರಾಸ್ಯ** ಹಾಕಿ **ಭರ್ತುಃ** ಪತಿಯ ಗತಿಯನ್ನು **ಗತಾ** ಹೊಂದಿದಳು. (ಸಹಗಮನ ಮಾಡಿದಳು)

**ವಿಶಾಪೋ ದ್ವಾದಶಾಬ್ದಾಂತೇ ಮೈಥುನಾಯ ಸಮುದ್ಯತಃ ॥೬॥**

**ದ್ವಾದಶಾಬ್ದಾಂತೇ** ಹನ್ನೆರಡು ವರ್ಷವಾದ ಮೇಲೆ **ವಿಶಾಪಃ** ಶಾಪರಹಿತನಾಗಿ (ರಾಕ್ಷಸರೂಪವನ್ನು ತ್ಯಜಿಸಿ) ಮನೆಗೆ ತೆರಳಿ, **ಮೈಥುನಾಯ** ಸ್ತ್ರೀಸಂಬಂಧ ಮಾಡಲು, **ಸಮುದ್ಯತಃ** ಸಿದ್ಧನಾದನು.

**ವಿಜ್ಞಾಯ ಬ್ರಾಹ್ಮಣೀಶಾಪಂ ಮಹಿಷ್ಯಾ ಸ ನಿವಾರಿತಃ ।**
**ತತ ಊರ್ಧ್ವಂ ಸ ತತ್ಯಾಜ ಸ್ತ್ರೀಸುಖಂ ಕರ್ಮಣಾ ಪ್ರಜಾಮ್ ॥೭೦॥**

**ಬ್ರಾಹ್ಮಣೀಶಾಪಂ** ಬ್ರಾಹ್ಮಣಪತ್ನಿಯ ಶಾಪವನ್ನು, **ವಿಜ್ಞಾಯ** ತಿಳಿದು **ಸಃ** ಮಿತ್ರಸಹನು, **ಮಹಿಷ್ಯಾ** ಹೆಂಡತಿಯಿಂದ, **ನಿವಾರಿತಃ** ತಡೆಯಲ್ಪಟ್ಟನು. **ತತಃ ಊರ್ಧ್ವಂ** ಅಂದಿನಿಂದ, **ಕರ್ಮಣಾ** ಶಾಪಸ್ಮರಣರೂಪಕರ್ಮದಿಂದ, **ಪ್ರಜಾಂ** (ಉದ್ದಿಶ್ಯ) ಸಂತತಿಗಾಗಿ, **ಸ್ತ್ರೀಸುಖಂ** ಸ್ತ್ರೀಸುಖ ಸಂಬಂಧವನ್ನು, **ತತ್ಯಾಜ** ಬಿಟ್ಟನು. (ಪಾಠಾಂತರ **ಅಪ್ರಜಾಃ** ಪ್ರಜಾರಹಿತರಾಗಿದ್ದರೂ) (**ಅಪ್ರಜಃ** ಪ್ರಜಾಯತೇ ಸ್ವಯಂ ಪುತ್ರಾತ್ಮನಾ ಇತಿ ಪ್ರಜಃ ನ ಪ್ರಜಃ **ಅಪ್ರಜಃ** ಮಗನಾಗಿ ಹುಟ್ಟದಿರುವ)

**ತಾತ್ಪರ್ಯ-** ಇತ್ತ ಸೌದಾಸನು ಹನ್ನೆರಡು ವರ್ಷವಾದ ಮೇಲೆ ರಾಕ್ಷಸ ಜನ್ಮವನ್ನು ತೊರೆದು ಮನೆಗೆ ತೆರಳಿದನು. ತನ್ನ ಮಡದಿಯ ಸಂಬಂಧಮಾಡಲು ಇಚ್ಛಿಸಿದನು. ಆಗ ಬ್ರಾಹ್ಮಣಪತ್ನಿಯ ಶಾಪ ಸ್ಮರಣೆಯಾಯಿತು. ಮದಯಂತಿಗೂ ಈ ವಿಷಯ ತಿಳಿದಿತ್ತು. ಅವಳೂ ಸಹ ಸಂಬಂಧಮಾಡಲು ನಿರಾಕರಿಸಿದಳು. ಅಂದಿನಿಂದ ಸ್ತ್ರೀಸಂಗವನ್ನು, ಅದರಿಂದ ಸಂತತಿಯನ್ನು ಪ್ರಜಾರಹಿತನಾಗಿದ್ದರೂ ಬಿಟ್ಟನು. ॥೭೦॥

ಹಾಗಾದರೆ ಇವನಿಗೆ ಮಕ್ಕಳಾದ ಬಗೆ ಹೇಗೆ ಎಂದು ಹೇಳುವರು-

**ವಸಿಷ್ಠಸ್ತದನುಜ್ಞಾತೋ ಮದಯಂತ್ಯಾಂ ಪ್ರಜಾಮಧಾತ್ ।**
**ಸಾ ವೈ ಸಪ್ತಸಮಾ ಗರ್ಭಮಬಿಭ್ರನ್ನ ವ್ಯಜಾಯತ ॥೭೧॥**

**ತದನುಜ್ಞಾತಃ** ಸೌದಾಸನಿಂದ ನನ್ನ ಪತ್ನಿಯಲ್ಲಿ ಮಕ್ಕಳನ್ನು ಹುಟ್ಟಿಸು ಎಂದು ಅನುಮತಿಯನ್ನು ಪಡೆದ, **ವಸಿಷ್ಠಃ** ವಸಿಷ್ಠರು, **ಮದಯಂತ್ಯಾಂ** ಸೌದಾಸನ

ಹೆಂಡತಿಯಲ್ಲಿ, **ಪ್ರಜಾಂ ಅಧಾತ್** ಗರ್ಭಧಾನ ಮಾಡಿದರು. **ಸಾ** ಮದಯಂತಿಯು, **ಸಪ್ತಸಮಾಃ** ಏಳುವರ್ಷ, **ಗರ್ಭಂ** ಗರ್ಭವನ್ನು **ಅಬಿಭ್ರತ್** ಧಾರಣ ಮಾಡಿದಳು. **ನ ವ್ಯಜಾಯತ** ಪ್ರಸವಿಸಲಿಲ್ಲ.

**ತಾತ್ಪರ್ಯ-** ಸೌದಾಸನು ತನ್ನ ಅಸಹಾಯಕತೆಯನ್ನು ಕಂಡು ವಸಿಷ್ಠರನ್ನು ತನ್ನ ಪತ್ನಿಯಲ್ಲಿ ಪ್ರಜೋತ್ಪಾದನೆ ಮಾಡಲು ಪ್ರಾರ್ಥಿಸಿದನು. ಆ ಪ್ರಕಾರ ಅವರು ಮದಯಂತಿಯಲ್ಲಿ ಗರ್ಭಧಾನ ಮಾಡಿದರು. ಇವಳು ಏಳುವರ್ಷ ಗರ್ಭಧಾರಣೆ ಮಾಡಿದಳು. ಮಗು ಜನಿಸಲಿಲ್ಲ. ।।೭೧।।

ಅನಂತರ ಇವಳೇನು ಮಾಡಿದಳು ಎಂದು ಹೇಳುವರು-

**ಜಘ್ನೇಽಶ್ಮನೋದರಂ ತಸ್ಮಾತ್ಸೋಽಶ್ಮಕಸ್ತೇನ ಕಥ್ಯತೇ ।**
**ಅಶ್ಮಕಾನ್ಮೂಲಕೋ ಜಜ್ಞೇ ಯಃ ಸ್ತ್ರೀಭಿಃ ಪರಿರಕ್ಷಿತಃ ।।೭೨।।**

**ನಾರೀಕವಚ ಇತ್ಯುಕ್ತೋ ನಿಃಕ್ಷತ್ರೇ ಮೂಲಕೋಽಭವತ್ ।**
**ತತೋ ದಶರಥಸ್ತಸ್ಮಾತ್ಪುತ್ರ ಏಲಬಿಲಿಃ ಸ್ಮೃತಃ ।।೭೩।।**

**ಯಸ್ಮಾತ್** ಯಾವ ಕಾರಣ, **ಅಶ್ಮನಾ** ಕಲ್ಲಿನಿಂದ, **ಉದರಂ** ಹೊಟ್ಟೆಯನ್ನು, **ಜಘ್ನೇ** ಹೊಡೆದುಕೊಂಡಳೋ, **ಸಃ** ಆಗ ಉತ್ಪನ್ನನಾದ ಮಗನು, **ತಸ್ಮಾತ್** ಕಲ್ಲಿನಿಂದ ಹೊಟ್ಟೆಗೆ ಹೊಡೆದ ನಂತರ ಹುಟ್ಟಿದವನಾದ್ದರಿಂದ, **ಅಶ್ಮಕಃ** ಅಶ್ಮಕನೆಂದು, **ಕಥ್ಯತೇ** ಕರೆಸಿಕೊಳ್ಳುವನು. **ಅಶ್ಮಕಾತ್** ಅಶ್ಮಕನಿಂದ, **ಮೂಲಕಃ** ಮೂಲಕನು, **ಜಜ್ಞೇ** ಹುಟ್ಟಿದನು. **ಯಃ** ಯಾವ ಮೂಲಕನು **ಸ್ತ್ರೀಭಿಃ** ಹೆಣ್ಣು ಮಕ್ಕಳಿಂದ, **ಪರಿರಕ್ಷಿತಃ** ಪರಶುರಾಮರಿಂದ ವಧವಾಗದಂತೆ ತಾವೆಲ್ಲರೂ ಸುತ್ತಲೂ ಕುಳಿತು ಇಲ್ಲಿ ಯಾರೂ ಪುರುಷರಿಲ್ಲವೆಂದು ಹೇಳಿ ರಕ್ಷಿಸಲ್ಪಟ್ಟನು, ಕಾರಣ **ನಾರೀಕವಚಃ ಇತ್ಯುಕ್ತಃ** ನಾರೀಕವಚನು ಎಂದು ಕರೆಯಲ್ಪಟ್ಟನು. (ನಾರ್ಯಃ ಏವ ಕವಚಂ ಯಸ್ಯ ಸಃ ಸ್ತ್ರೀಯರೇ ಕವಚವಾಗಿ ಉಳ್ಳವನು) **ನಿಃಕ್ಷತ್ರೇ** ಪರಶುರಾಮರಿಂದ ಎಲ್ಲ ದುಷ್ಟಕ್ಷತ್ರಿಯರು ನಾಶವಾದಾಗ, **ಮೂಲಕೋಽಭವತ್** ಕ್ಷತ್ರಿಯಕುಲಕ್ಕೆ ಮೂಲನಾದನು ಕಾರಣ ಮೂಲಕನೆಂದು ಹೆಸರು ಬಂದಿತು. **ತತಃ** ಮೂಲಕನಿಂದ **ದಶರಥಃ** ದಶರಥನು (ರಾಮನ ತಂದೆ ಅಲ್ಲ). **ತಸ್ಮಾತ್** ದಶರಥನಿಂದ, **ಏಲಬಿಲಿಃ** ಈ ಹೆಸರಿನ, **ಪುತ್ರಃ** ಮಗನೆಂದು **ಸ್ಮೃತಃ** ಹೇಳಲ್ಪಟ್ಟಿದೆ.

**ತಾತ್ಪರ್ಯ-** ಏಳುವರ್ಷ ಮಗು ಜನಿಸದಿದ್ದಾಗ ಕಲ್ಲಿನಿಂದ ಹೊಟ್ಟೆಯನ್ನು ಕುಟ್ಟಿಕೊಂಡಳು. ಆಗ ಮಗು ಜನಿಸಿತು. ಕಾರಣ ಇವನಿಗೆ ಅಶ್ಮಕ ಎಂದು ಹೆಸರಾಯಿತು. ಇದರಿಂದ ಬ್ರಾಹ್ಮಣಪತ್ನಿ ಶಾಪಕೊಡುವಾಗ ತಾನು ಕಲ್ಲಿನಿಂದ

ಒಡೆದುಕೊಳ್ಳುತ್ತಾ ನಿನಗೆ ಸಾಕ್ಷಾತ್ ಸಂತತಿ ಆಗುವುದು ಬೇಡ. ಬೇರೆ ರೀತಿಯಿಂದ ನಿನ್ನ ಮಡದಿ ಗರ್ಭವತಿಯಾದರೂ ಇದೇ ರೀತಿ (ಹೊಟ್ಟೆ ಒಡೆದುಕೊಂಡೇ) ಮಗು ಆಗಲಿ ಎಂದು ಮನಸ್ಸಿನಲ್ಲಿ ಮಾಡಿಕೊಂಡದ್ದರಿಂದ ಶ್ರೀಹರಿಯು ಮದಯಂತಿಗೆ ಈ ರೀತಿ ಪ್ರೇರಿಸಿದನು ಎಂದು ತೋರುವದು. ಈ ಅಶ್ಮಕನಿಂದ ಮೂಲಕನು ಜನಿಸಿದನು. ಆಗ ಪರಶುರಾಮರು ದುಷ್ಟ ಕ್ಷತ್ರಿಯರನ್ನು ಸಂಹರಿಸುತ್ತಾ ಬಂದರು. ಅಶ್ಮಕನ ಮಗ ಇರುವಲ್ಲಿಗೆ ಬಂದಾಗ ಸ್ತ್ರೀಯರೆಲ್ಲರೂ ಮಗುವಿನ ಸುತ್ತ ಕುಳಿತು ಇಲ್ಲಿ ಯಾರೂ ಗಂಡಸರಿಲ್ಲವೆಂದು ಹೇಳಿ, ಈ ಮಗುವನ್ನು ರಕ್ಷಿಸಿದರು. ಕಾರಣ ಇವನಿಗೆ ನಾರೀಕವಚನೆಂಬ ಹೆಸರು ಬಂದಿತು. ಪರಶುರಾಮರು ಕ್ಷತ್ರಿಯ ಕುಲವನ್ನೇ ನಾಶಮಾಡಿದಾಗ ಉಳಿದ ನಾರೀಕವಚನೇ ಕ್ಷತ್ರಿಯಕುಲಕ್ಕೆ ಮೂಲನಾದ್ದರಿಂದ ಮೂಲಕನೆಂದು ಕರೆಯಿಸಿಕೊಂಡನು. ಇವನಿಗೆ ದಶರಥನೆಂಬುವನು, ದಶರಥನಿಗೆ ಏಲಬಿಲಿ ಎಂಬ ಮಕ್ಕಳು ಜನಿಸಿದರು (ಈ ದಶರಥನು ಶ್ರೀರಾಮನ ತಂದೆಯಲ್ಲ.)

**ರಾಜಾ ವಿಶ್ವಸಹೋ ಯಸ್ಯ ಖಟ್ವಾಂಗಶ್ಚಕ್ರವರ್ತ್ಯಭೂತ್ ।**
**ಯೋ ದೇವೈರರ್ಥಿತೋ ದೈತ್ಯಾನವಧೀದ್ಯುಧಿ ದುರ್ಜಯಾನ್ ॥೭೪॥**

**ಯಸ್ಯ** ಏಲಬಿಲನಿಗೆ **ಯಃ** ಯಾರು **ದೇವೈಃ** ದೇವತೆಗಳಿಂದ, **ಅರ್ಥಿತಃ** ಪ್ರಾರ್ಥಿತನಾಗಿ, **ಯುಧಿ** ಯುದ್ಧದಲ್ಲಿ **ದುರ್ಜಯಾನ್** ಗೆಲ್ಲಲಸಾಧ್ಯರಾದ **ದೈತ್ಯಾನ್** ದೈತ್ಯರನ್ನು, **ಅವಧೀತ್** ಸಂಹರಿಸಿದನೋ ಅಂಥ, **ವಿಶ್ವಸಹಃ** ಎಲ್ಲವನ್ನು ಸಹಿಸುವ ಕ್ಷಮಾಗುಣವುಳ್ಳ, **ಖಟ್ವಾಂಗಃ** ಖಟ್ವಾಂಗನೆಂಬ **ರಾಜಾ** ರಾಜನು ಮಗನು, ಇವನು **ಚಕ್ರವರ್ತೀ ಅಭೂತ್** ಸಮಸ್ತಭೂಮಂಡಲಕ್ಕೆ ಒಡೆಯನಾದನು.

**ತಾತ್ಪರ್ಯ–** ಏಲಬಿಲನಿಗೆ ಖಟ್ವಾಂಗನೆಂಬ ಮಗನು. ಇವನು ಕ್ಷಮಾಗುಣ-ವುಳ್ಳವನು. ಅಂತಲೇ ವಿಶ್ವಸಹನೆಂಬ ಹೆಸರು. ಖಟ್ವಾಂಗನೆಂಬುದು ತಂದೆ ಇಟ್ಟ ಹೆಸರು. ಸಮಸ್ತ ಭೂಮಂಡಲಕ್ಕೆ ಏಕೈಕಾಧಿಪತಿಯಾಗಿದ್ದನು. ದೇವತೆಗಳು ಹೇಳಿದ ಪ್ರಕಾರ ಅಜೇಯರಾದ ದೈತ್ಯರನ್ನು ಯುದ್ಧದಲ್ಲಿ ಸಂಹರಿಸಿದನು. ಆಗ ಸಂತುಷ್ಟರಾದ ದೇವತೆಗಳು ವರಬೇಡು ಎಂದಾಗ ನನ್ನ ಆಯುಷ್ಯ ಎಷ್ಟು ಎಂದು ಕೇಳಿದನು. ಒಂದು ಮುಹೂರ್ತವೆಂದು ಹೇಳಿದರು. ॥೭೪॥

**ಮುಹೂರ್ತಮಾಯುರ್ಜ್ಞಾತ್ವೇತ್ಯ ಸ್ವಪುರಂ ಸಂದಧೇ ಮನಃ ।**
**ನ ಮೇ ಬ್ರಹ್ಮಕುಲಾತ್ಪ್ರಾಣಾಃ ಕುಲದೈವಾನ್ನಚಾತ್ಮಜಾಃ ॥೭೫॥**

**ನ ಶ್ರಿಯೋ ನ ಮಹೀ ರಾಜ್ಯಂ ನ ದಾರಾಶ್ಚಾತಿವಲ್ಲಭಾಃ ।**
**ನ ಬಾಲ್ಯೇಽಪಿ ಮತಿರ್ಮಹ್ಯಮಧರ್ಮೇ ರಮತೇ ಕ್ವಚಿತ್ ॥೭೬॥**

**(ಖಟ್ವಾಂಗನು) ಆಯುಃ** ತನ್ನ ಜೀವಿತಕಾಲವನ್ನು, **ಮುಹೂರ್ತಂ** ನಲವತ್ತೆಂಟು ನಿಮಿಷಮಾತ್ರ ಉಳಿದಿದೆ ಎಂದು, (ಒಂದೇ ಕ್ಷಣವು ಆಗಬಹುದು) (ಮುಹೂರ್ತಮಲ್ಪಕಾಲೇ ಸ್ಯಾದ್ ಘಟಿಕಾದ್ವಿತಯೇಽಪಿ ಚ ಹೇಮ) **ಜ್ಞಾತ್ವಾ** ತಿಳಿದು, **ಸ್ವಪುರಂ ಏತ್ಯ** ತನ್ನ ಪಟ್ಟಣಕ್ಕೆ ಬಂದು, (ದೇವತೆಗಳು ಕೊಟ್ಟ ವಿಮಾನದಿಂದ) **ಮನಃ** ಮನಸ್ಸನ್ನು **ಸಂದಧೇ** ನಿಶ್ಚಯಿಸಿದನು. ಈಗ ಖಟ್ವಾಂಗನು ತನ್ನ ಒಳ್ಳೆಯ ನಡುವಳಿಕೆಯನ್ನು ಸ್ಮರಿಸುತ್ತ ಭಗವಂತನ ಶರಣಾಗತಿಯನ್ನು ಹೊಂದಿದ ಪ್ರಕಾರವನ್ನು 'ನ ಮೇ' ಇಲ್ಲಿಂದ ''ತಮಹಂ ಪ್ರಪದ್ಯೇ'' ಇಲ್ಲಿಯ ವರೆಗೆ ವಿವರಿಸುವರು, **ಮೇ** ನನಗೆ, **ಬ್ರಹ್ಮಕುಲಾತ್** ಬ್ರಾಹ್ಮಣಕುಲಕ್ಕಿಂತ **ಪ್ರಾಣಾಃ** ಪ್ರಾಣಗಳು **ನ ಅತಿವಲ್ಲಭಾಃ** ಹೆಚ್ಚು ಪ್ರಿಯವಾದವುಗಳಲ್ಲ, **ಕುಲದೈವಾತ್** ಕುಲದೇವತೆಯಾದ ವಾಸುದೇವನಿಗಿಂತ, **ಆತ್ಮಜಾಃ** ಮಕ್ಕಳು, **ನ** ಪ್ರಿಯರಲ್ಲ, **ಶ್ರಿಯಃ** ಸಂಪತ್ತು , ನ ಪ್ರಿಯವಲ್ಲ, **ಮಹೀ** ಭೂಮಿಯು, ನ ಪ್ರಿಯವಲ್ಲ, **ರಾಜ್ಯಂ** ರಾಜ್ಯವು, **ದಾರಾಃ ಚ** ಹೆಂಡತಿಯೂ ಸಹ, **ನ ಅತಿವಲ್ಲಭಾಃ** ಹೆಚ್ಚು ಪ್ರಿಯಕರವಲ್ಲ, **ಬಾಲ್ಯೇ ಅಪಿ** ಬಾಲ್ಯದಲ್ಲಿಯೂ, **ಮಹ್ಯಂ** ನನ್ನ, **ಮತಿಃ** ಬುದ್ಧಿಯು, **ಅಧರ್ಮೇ** ಪಾಪ ಕೆಲಸಗಳಲ್ಲಿ **ಕ್ವಚಿತ್** ಒಮ್ಮೆಯೂ, **ನ ರಮತೇ** ಹೋಗಲಿಲ್ಲ. ।।೭೫-೭೬।।

**ನಾಪಶ್ಯಮುತ್ತಮಶ್ಲೋಕಾದನ್ಯತ್ಕಿಂಚನ ವಸ್ತ್ವಹಮ್ ।**
**ದೇವೈಃ ಕಾಮವರೋ ದತ್ತೋ ಮಹ್ಯಂ ತ್ರಿಭುವನೇಶ್ವರೈಃ ।।೭೭।।**

**ಉತ್ತಮಶ್ಲೋಕಾತ್** ದೋಷರಹಿತವಾದ ಕೀರ್ತಿಯುಳ್ಳ ಭಗವಂತನಿಂದ, **ಅನ್ಯತ್** ಭಿನ್ನವಾದ, **ಕಿಂಚನ** ಯಾವದೂ, **ವಸ್ತು** ಶಕ್ತವಾದದ್ದನ್ನು, **ನ ಅಪಶ್ಯಂ** ಕಂಡಿಲ್ಲ, **ತ್ರಿಭುವನೇಶ್ವರೈಃ** ಮೂರುಲೋಕಕ್ಕೆ ಒಡೆಯರಾದ, **ದೇವೈಃ** ದೇವತೆಗಳಿಂದ, **ಕಾಮವರಃ** ಇಷ್ಟವಾದ ವರವು **ಮಹ್ಯಂ** ನನಗೆ, **ದತ್ತಃ** ಕೊಡಲ್ಪಟ್ಟಿತು. ।।೭೭।।

**ನ ವೃಣೇ ಹ್ಯವಮಂ ಕರ್ಮ ಭೂತಭಾವನಭಾವನಾತ್ ।**
**ಯೇಽವಿಕ್ಷಿಪ್ತೇಂದ್ರಿಯಧಿಯೋ ದೇವಾಸ್ತೇ ಸ್ವಹೃದಿ ಸ್ಥಿತಮ್ ।।೭೮।।**

**ನ ವಿಂದಂತಿ ಪ್ರಿಯಂ ಶಶ್ವದಾತ್ಮಾನಂ ಕಿಮುತಾಪರೇ ।।೭೯।।**

**ಅಹಂ** ನಾನು, **ಅವಮಂ** ನೀಚವಾದ (**ಕಾಮಂ** ಅಭೀಷ್ಟವನ್ನು), **ನ ವೃಣೇ** ಸ್ವೀಕರಿಸುವದಿಲ್ಲ, **ಭೂತಭಾವನಭಾವನಾತ್** ಜಗತ್ತಿನ ಸೃಷ್ಟಿಕರ್ತನಾದ ಭಗವಂತನ ಉಪಾಸನೆಯಿಂದ (**ಅನ್ಯತ್** ಭಿನ್ನವಾದ), **ಕರ್ಮ** ಕೆಲಸವನ್ನು, **ನ ವೃಣೇ** ಮಾಡುವುದಿಲ್ಲ. ಈ ಅರ್ಥವು ದುರ್ಘಟಭಾವದೀಪ ಪ್ರಕಾರ. ಹೀಗೆ ಅರ್ಥ ಮಾಡುವದರಿಂದ ಹಿಂದಿನ ಶ್ಲೋಕದಲ್ಲಿ ''ಕಾಮವರೋ ದತ್ತಃ'' ಎಂದು ಹೇಳಿದ್ದರಿಂದ ಅವಮಂ ಕಾಮಂ ನ ವೃಣೇ ಎಂದು ಹೇಳಬೇಕು. ಕರ್ಮ, ನ, ವೃಣೇ

ಎನ್ನುವುದು ಅಸಂಗತವು. ಭೂತಭಾವನಭಾವನಾತ್ ಎನ್ನುವುದು ಅನನ್ವಿತವು ಎಂಬ ಶಂಕೆಗೆ ಅವಕಾಶವಿಲ್ಲ. ಕಾಮಂ ಮತ್ತು ಅನ್ಯತ್ ಎಂಬ ಪದಗಳನ್ನು ಅಧ್ಯಾಹಾರ ಮಾಡಿ ನ ವೃಣೇ ಎನ್ನುವುದಕ್ಕೆ ಆವೃತ್ತಿಯನ್ನು ಒಪ್ಪಿಕೊಂಡು ವೃಣೇ ಎಂಬ ಶಬ್ದಕ್ಕೆ ಸ್ವೀಕಾರ ಮಾಡುವದು. ಎರಡು ಅರ್ಥಗಳನ್ನು ಇಟ್ಟುಕೊಂಡು (ಕಾಮಂ ನ ಸ್ವೀಕರೋಮಿ ಭೂತಭಾವನಭಾವನಾದನ್ಯತ್, ಕರ್ಮ ನ ಕರೋಮಿ ಎಂದು ಅರ್ಥಮಾಡಿದ್ದರಿಂದ ಶಂಕೆಯು ದೂರವಾಯಿತು).

**ಶ್ರೀಸತ್ಯಧರ್ಮರು – ಶ್ರೀವಿಜಯಧ್ವಜರ ಪ್ರಕಾರ ಃ-**

**ಹಿ** ಯಾವ ಕಾರಣ, **ಕರ್ಮ** ಕರ್ಮವು, **ಭೂತಭಾವನಭಾವನಾತ್** ಭಗವಂತನ ಉಪಾಸನೆಗಿಂತ, **ಅವಮಂ** ಅನಿತ್ಯಫಲಕವಾದ್ದರಿಂದ ನೀಚವು (**ಅತಃ** ಆದ್ದರಿಂದ) **ನ ವೃಣೇ** ಇಚ್ಛಿಸುವುದಿಲ್ಲ, ಭಗವಂತನ ಜ್ಞಾನವು ಕಷ್ಟಸಾಧ್ಯವೆಂದು ಹೇಳುವರು. **ಯೇ** ಯಾರು **ಅವಿಕ್ಷಿಪ್ತೇಂದ್ರಿಯಧಿಯಃ** ವಿಷಯದಲ್ಲಿ ಆಸಕ್ತವಾಗದಿರುವ ಇಂದ್ರಿಯಗಳು ಮತ್ತು ಬುದ್ಧಿ ಉಳ್ಳವರೋ, **ತೇ ದೇವಾಃ** ಅಂಥ ದೇವತೆಗಳು **ಶಶ್ವತ್ಪ್ರಿಯಂ** ಸರ್ವದಾ ಪ್ರಿಯವಾದ, **ಆತ್ಮಾನಂ** ಸ್ವಾಮಿಯನ್ನು, **ಸ್ವಹೃದಿಸ್ಥಿತಂ ಅಪಿ** ತಮ್ಮ ಹೃದಯದಲ್ಲಿದ್ದರೂ, **ನ ವಿಂದಂತಿ** ತಿಳಿಯುವುದಿಲ್ಲ. **ಕಿಮುತ ಅಪರೇ** ಉಳಿದ ನನ್ನಂಥವರು ತಿಳಿಯಲಾರರು ಎಂದು ಏನು ಹೇಳುವದು?

ಬಹಳ ಹೇಳುವುದರಿಂದೇನು? ಇದು ನನ್ನ ನಿಶ್ಚಯವು ಎಂದು ಹೇಳುವರು.

**ಅಥೇಶಮಾಯಾರಚಿತೇಷು ಸಂಗಂ**
**ಗುಣೇಷು ಗಂಧರ್ವಪುರೋಪಮೇಷು ।**
**ರೂಢಂ ಪ್ರಕೃತ್ಯಾತ್ಮನಿ ವಿಶ್ವಭರ್ತು-**
**ರ್ಭಾವೇನ ಹಿತ್ವಾ ತಮಹಂ ಪ್ರಪದ್ಯೇ ॥೮೦॥**

**ಅಥ** ಆದ್ದರಿಂದ **ಈಶಮಾಯಾರಚಿತೇಷು** ಪರಮಾತ್ಮನ ಇಚ್ಛೆ ಮತ್ತು ಪ್ರಕೃತಿಯಿಂದ ನಿರ್ಮಿತಗಳಾದ, **ಗಂಧರ್ವಪುರೋಪಮೇಷು** ಗಂಧರ್ವ ನಗರದಂತೆ ನಶ್ವರ (ಅನಿತ್ಯ)ಗಳಾದ, **ಗುಣೇಷು** ದೇಹೇಂದ್ರಿಯಾದಿಗಳಲ್ಲಿ, **ಪ್ರಕೃತ್ಯಾ** ಸ್ವಾಭಾವಿಕವಾಗಿ, **ಆತ್ಮನಿ** ಜಡಮನಸ್ಸಿನಲ್ಲಿ, **ರೂಢಂ** ಉಂಟಾದ, **ಸಂಗಂ** ಸ್ನೇಹವನ್ನು, **ವಿಶ್ವಭರ್ತುಃ** ಜಗದ್ರಕ್ಷಕನಾದ ಪರಮಾತ್ಮನ, **ಭಾವೇನ** ಭಕ್ತಿಯಿಂದ, **ಹಿತ್ವಾ** ತೊರೆದು, **ತಂ** ಪರಮಾತ್ಮನನ್ನು, **ಅಹಂ** ನಾನು, **ಪ್ರಪದ್ಯೇ** ಹೊಂದುವೆನು.

**ತಾತ್ಪರ್ಯ-** ಖಟ್ವಾಂಗರಾಜನು ದೇವತೆಗಳಿಂದ ತಿಳಿದ ಆಯುಷ್ಯವು ಸ್ವಲ್ಪವೇ ಕಾಲ ಉಳಿದಿದೆಯೆಂದು ತಿಳಿದೊಡನೆ ಅವರು ಕೊಟ್ಟ ವಿಮಾನದಿಂದ ತನ್ನ ಪಟ್ಟಣಕ್ಕೆ ಬಂದನು. ಹೀಗೆ ವಿಚಾರ ಮಾಡಿದನು. ನನಗೆ ಬ್ರಾಹ್ಮಣರಿಗಿಂತ ಪ್ರಾಣಗಳಾಗಲಿ,

ಕುಲಸ್ವಾಮಿಯಾದ ವಾಸುದೇವನಿಗಿಂತ ಮಕ್ಕಳಾಗಲಿ, ಸಂಪತ್ತು, ರಾಜ್ಯ, ಭೂಮಿ, ಹೆಂಡತಿ ಮುಂತಾದವುಗಳಾಗಲಿ, ಅತ್ಯಂತ ಪ್ರಿಯವಾದವುಗಳಲ್ಲ. ''ಹಲ್ಲುಗಳಿದ್ದಾಗ ಕಡಲೆಗಳಿಲ್ಲ ಕಡಲೆ ಇದ್ದಾಗ ಹಲ್ಲುಗಳಿಲ್ಲ'' ಎಂಬ ಗಾದೆಯ ಮಾತಿನಂತೆ ಆಯುಷ್ಯವಿದ್ದಾಗ ಸಾಧನ ಮಾಡುವ ಮನಸ್ಸಿಲ್ಲ, ಮನಸ್ಸಿರುವಾಗ ಆಯುಷ್ಯವಿಲ್ಲ ಹೀಗಲ್ಲ, ಹುಟ್ಟಿದಾಗಿನಿಂದ, ಬಾಲ್ಯದಲ್ಲಿಯೂ ನನ್ನ ಮನಸ್ಸು ಅಧರ್ಮದಲ್ಲಿ ಹೋಗಿಲ್ಲ. ಭಗವಂತನ ಅಧೀನವಾಗದಿರುವ ಸಮರ್ಥವಾದ ಯಾವ ಪದಾರ್ಥವನ್ನು ನಾನು ಕಂಡಿಲ್ಲ. ಮೂರುಲೋಕಕ್ಕೂ ಒಡೆಯರಾದ ದೇವತೆಗಳು ನಿನಗಿಷ್ಟವಾದ ವರವನ್ನು ಬೇಡಿಕೋ ಕೊಡುವೆವು ಎಂದು ಹೇಳಿರುವರು. ಆದರೆ ನಾನು ಅಧಮವಾದ ಯಾವ ಅಭೀಷ್ಟವನ್ನೂ ಸ್ವೀಕರಿಸುವದಿಲ್ಲ. ಭಗವಂತನ ಉಪಾಸನೆಯನ್ನು ಬಿಟ್ಟು ಯಾವ ಕೆಲಸವನ್ನೂ ಮಾಡಲಾರೆ. ವಿಷಯಾಸಕ್ತಿಯಿಲ್ಲದಿರುವ ದೇವತೆಗಳೂ ಸಹ ನಿತ್ಯದಲ್ಲಿಯೂ ಪ್ರಿಯನಾದ ಹರಿಯನ್ನು ತಮ್ಮ ಹೃದಯದಲ್ಲಿಯೇ ಇದ್ದರೂ ತಿಳಿಯಲಾರರು. ಅಂದಮೇಲೆ ನಮ್ಮಂಥವರ ಪಾಡೇನು? ಭಗವಂತನ ಜ್ಞಾನವು ದೇಹೇಂದ್ರಿಯಾದಿಗಳಲ್ಲಿ ಸ್ವಾಭಾವಿಕವಾಗಿಯೇ ನೆಲೆಸಿದ ಸ್ನೇಹವನ್ನು ಭಗವಂತನಲ್ಲಿ ಭಕ್ತಿಮಾಡುವದರಿಂದ ಕಳೆದುಕೊಂಡು ಆ ಭಗವಂತನನ್ನೇ ಹೊಂದುವೆನು. ।।೭೫-೮೦।।

**ಇತಿ ವ್ಯವಸಿತೋ ಬುದ್ಧ್ಯಾ ನಾರಾಯಣಗೃಹೀತಯಾ ।**
**ಹಿತ್ವಾಽನ್ಯಭಾವಮಜ್ಞಾನಂ ತತಃ ಸ್ವಂ ಭಾವಮಾಶ್ರಿತಃ ।।೮೧।।**

**ಯತ್ತದ್ಬ್ರಹ್ಮ ಪರಂ ಸೂಕ್ಷ್ಮಮಶೂನ್ಯಂ ಶೂನ್ಯಕಲ್ಪಿತಮ್ ।**
**ಭಗವಾನ್ವಾಸುದೇವೇತಿ ಯಂ ಗೃಣಂತಿ ಹಿ ಸಾತ್ವತಾಃ ।।೮೨।।**

**(ಖಟ್ವಾಂಗನು) ನಾರಾಯಣಗೃಹೀತಯಾ** ನಾರಾಯಣವಿಷಯಕವಾದ (ನಾರಾಯಣಃ ಗೃಹೀತಃ ವಿಷಯೀಕೃತಃ ಯಯಾ ಸಾ) ಅಥವಾ, ನಾರಾಯಣನಿಂದ ಕೊಡಲ್ಪಟ್ಟ (ಅಂತರ್ಣೀತಣ್ಯರ್ಥವಾದದ್ದು ಗೃಹೀತ ಪದವು) **ಬುದ್ಧ್ಯಾ** ಬುದ್ಧಿಯಿಂದ, **ಇತಿ** ಹಿಂದೆ ಹೇಳಿದ ಪ್ರಕಾರ, **ವ್ಯವಸಿತಃ** ನಿಶ್ಚಯಿಸಿದವನಾಗಿ, **ಅಜ್ಞಾನಂ** ಅಜ್ಞಾನನಿಮಿತ್ತಕವಾದ, **ಅನ್ಯಭಾವಂ ಅನ್ಯಸ್ಮಿನ್** ಶರೀರಾದಿಗಳಲ್ಲಿ, **ಭಾವಂ** ಇರುವ ನನ್ನದು (ಮಮತಾ) ಎಂಬ ಸ್ನೇಹವನ್ನು **ಹಿತ್ವಾ** ಬಿಟ್ಟು ಅಥವಾ **ಅನ್ಯಭಾವಂ ಅನ್ಯಾನ್** ಬೇರೆಯವರನ್ನು, **ಭಾವಯತಿ** ಭಗವಂತನೆಂದು ಕಲ್ಪಿಸಲು ಕಾರಣವಾದ, ಅಥವಾ **ಅನ್ಯೇನ** ಬೇರೆಯವರನ್ನು, **ಭಾವಯತಿ** ಭಗವಂತನೆಂದು ಕಲ್ಪಿಸಲು ಕಾರಣವಾದ, ಅಥವಾ **ಅನ್ಯೇನ** ಸ್ವತಂತ್ರನಾದ ಪರಮಾತ್ಮನಿಂದ ಭಿನ್ನರಾದವರಿಂದ **ಭಾವಃ ಸತ್ತಾ** ಇರುವಿಕೆ ಸ್ಥಿತಿ ಆಗುವುದು ಎಂಬ ಜ್ಞಾನಕ್ಕೆ

ಕಾರಣವಾದ, ಅಥವಾ **ಅನಿನಾಂ** ಪ್ರಾಣಿಗಳಿಗೆ, **ಅಭಾವಃ** ಈಶ್ವರನಿಂದ ಭಿನ್ನವಾಗಿ ಇಲ್ಲದಿರುವಿಕೆಯು ಎಂಬ ಅಥವಾ **ಅನ್ಯಸ್ಯ** ಎಲ್ಲರಿಂದ ಭಿನ್ನನಾದ ಹರಿಯ, **ಭಾವಂ** ಧರ್ಮವಿಷಯಕವಾದ ಹರಿಯೇ ನಾನೆಂಬ, **ಅಜ್ಞಾನಂ** ಅಜ್ಞಾನವನ್ನು, ಅಥವಾ (ಭಾವರೂಪ ಅಜ್ಞಾನದಿಂದ ಕೂಡಿದ, **ಅನ್ಯಭಾವಂ** ಹರಿಯಿಂದ ಭಿನ್ನವಾದ ಬ್ರಹ್ಮಾದಿಪದಾರ್ಥಗಳನ್ನು) **ಹಿತ್ವಾ** ಬಿಟ್ಟು, **ಯತ್** ಯಾವ ವಸ್ತುವು (ಪೂರ್ವದಲ್ಲಿ ಸ್ತುತವಾದದ್ದು) **ತತ್** ಸರ್ವಪ್ರಮಾಣ ಸಿದ್ಧವಾದುದೋ, **ಯಂ** ಯಾವದನ್ನು, **ವೇದಾಂತಿನಃ** ವೇದಾಂತಿಗಳು, **ಪರಂ** ಸರ್ವೋತ್ತಮವಾದ, ಗುಣಪೂರ್ಣನೆಂದು, **ಗೃಣಂತಿ** ಹೇಳುವರೋ, (**ಯೋಗಿನಃ** ಯೋಗಿಗಳು) **ಸೂಕ್ಷ್ಮಂ** ಇಂದ್ರಿಯ ಗೋಚರನಲ್ಲವೆಂದುಹೇಳುವರು, ಅದುಸರಿಯಲ್ಲಾಎಂದುಹೇಳುವರು, **ಅಶೂನ್ಯಂ** ಗುಣಗಳಿಂದ ಶೂನ್ಯನಾಗದಿರುವ ಪೂರ್ಣನಾದ (**ಶೂನ್ಯಕಲ್ಪಿತಂ** ಅಯೋಗ್ಯರಿಗೆ, **ಶಂ** ಸುಖವನ್ನು, **ಊನಂ** ಕಡಿಮೆಮಾಡುವುದರಿಂದ ಶೂನ್ಯನೆಂದು ಕರೆಸಿಕೊಳ್ಳುವ ಅಥವಾ ಭಿನ್ನವಾದ ಗುಣಗಳಿಲ್ಲದಿರುವುದರಿಂದ ಶೂನ್ಯವಿದ್ದಂತೆ. ಕಲ್ಪಿತದಂತೆ (ಕಲ್ಪಿತವಲ್ಲ) ಅಥವಾ ಶೂನ್ಯನಾಮಕ ಮೂಲರೂಪದಿಂದ ಅಭಿವ್ಯಕ್ತವಾದ) **ಸಾತ್ವತಾಃ** ಪಾಂಚರಾತ್ರಿಕರು, **ಯಂ** ಯಾರನ್ನು, **ಭಗವಾನ್** ಭಗವಂತನೆಂದು, **ವಾಸುದೇವಃ ಇತಿ** ವಾಸುದೇವನೆಂದು, **ಗೃಣಂತಿ** ಕರೆಯುವರೋ, **ತತಃ** ಆದ್ದರಿಂದ **ತಂ** ಆ **ಸ್ವಭಾವಂ** ಸ್ವತಂತ್ರವಾದ ನಾರಾಯಣನೆಂಬ ಪದಾರ್ಥವನ್ನು, **ಆಶ್ರಿತಃ** ಹೊಂದಿದನು, **ಹಿ** ಪ್ರಸಿದ್ಧವು.

**ತಾತ್ಪರ್ಯ-** ನಾರಾಯಣನಿಂದ ಅನುಗೃಹೀತವಾದ ಬುದ್ಧಿಯಿಂದ ಹಿಂದೆ ಹೇಳಿದಂತೆ ನಿಶ್ಚಯಿಸಿ ಜೀವಬ್ರಹ್ಮೈಕ್ಯ ಮೊದಲಾದ ಅಜ್ಞಾನವನ್ನು ತೊರೆದು ಸರ್ವೋತ್ತಮನಾದ ಅತೀಂದ್ರಿಯನಾದ ಗುಣಪೂರ್ಣನಾದ ಶೂನ್ಯನಾಮಕ ಮೂಲರೂಪದಿಂದ ವ್ಯಕ್ತವಾದ ವಾಸುದೇವ, ಭಗವಂತ ಪರಬ್ರಹ್ಮನೆಂದು ಕರೆಸಿಕೊಂಡ ಸ್ವತಂತ್ರನಾದ ಭಗವಂತನನ್ನು ಹೊಂದಿದನು. ॥೮೧-೮೨॥

**ಖಟ್ವಾಂಗಾದ್ದೀರ್ಘಬಾಹುಶ್ಚ ರಘುಸ್ತಸ್ಮಾತ್ಪೃಥುಶ್ರವಾಃ ।**
**ಅಜಸ್ತಸ್ಮಾನ್ಮಹಾರಾಜಸ್ತಸ್ಮಾದ್ದಶರಥೋಽಭವತ್ ॥೮೩॥**

**ಖಟ್ವಾಂಗಾತ್** ಖಟ್ವಾಂಗನ ದೆಸೆಯಿಂದ, **ದೀರ್ಘಬಾಹುಃ** ದೀರ್ಘಬಾಹುವು, **ತಸ್ಯ** ದೀರ್ಘಬಾಹುವಿನಿಂದ **ಪೃಥುಶ್ರವಾಃ** ವಿಶಾಲವಾದ ಕೀರ್ತಿಯುಳ್ಳ, **ರಘುಃ** ರಘುರಾಜನು, **ತಸ್ಮಾತ್** ರಘುವಿನಿಂದ, **ಅಜಃ** ಅಜರಾಜನು, **ತಸ್ಮಾತ್** ಅಜರಾಜನಿಂದ, **ಮಹಾರಾಜಃ** ಮಹಾರಾಜನಾದ, **ದಶರಥಃ** ದಶರಥನು, **ಅಭವತ್** ಹುಟ್ಟಿದನು.

**ತಾತ್ಪರ್ಯ-** ಖಟ್ವಾಂಗನಿಂದ ದೀರ್ಘಬಾಹುವು ಅವನಿಂದ ವಿಶಾಲ ಕೀರ್ತಿಯುಳ್ಳ ರಘುವು, ಆ ರಘುವಿನಿಂದ ಅಜನು, ಅಜನಿಂದ ಮಹಾರಾಜನಾದ ದಶರಥರಾಜನು ಹುಟ್ಟಿದನು.

ಇಲ್ಲಿ ದಶರಥನ ಮೂಲರೂಪ ವಿಷಯದಲ್ಲಿ ಪುರಾಣಗಳಲ್ಲಿ ಅಪಾತತಃ ಮತಭೇದಗಳು ಕಂಡುಬರುತ್ತವೆ. ಪದ್ಮಪುರಾಣದಲ್ಲಿ ಹೀಗೆ ಉಲ್ಲೇಖವಿದೆ.

**''ತಸ್ಯಾಭೂತ್ ಪ್ರಥಮಂ ಜನ್ಮ ಮನೋಃ ಸ್ವಾಯಂಭುವಸ್ಯ ತು ।**
**ರಘೂಣಾಮನ್ವಯೇ ಪೂರ್ವಂ ರಾಜಾ ದಶರಥೋಽಭವತ್ ॥**
**ದ್ವಿತೀಯೇ ವಸುದೇವೋಽಭೂತ್ ವೃಷ್ಣೀನಾಮನ್ವಯೇ ಮನುಃ ।**
**ಕಾಲೇ ದಶಸಹಸ್ರಾಬ್ದೇ ಗ್ರಾಮೇ ಶಂಬಲಸಂಜ್ಞಿತೇ ।**
**ವಿಷ್ಣುವ್ರತೋಽಭವತ್ ... .. .॥''**

ಇದರಿಂದ ದಶರಥನು ಮೂಲತಃ ಸ್ವಾಯಂಭೂವನೆಂದೂ ರಘುರಾಜನ ವಂಶದಲ್ಲಿ ಜನಿಸಿದನೆಂದೂ ಗೊತ್ತಾಗುತ್ತದೆ. ಇವನೇ ಎರಡನೇ ಜನ್ಮದಲ್ಲಿ ವೃಷ್ಣಿವಂಶದಲ್ಲಿ ವಸುದೇವನಾಗಿ ಹುಟ್ಟಿದನೆಂದೂ ಮುಂದೆ ದಶಸಹಸ್ರವರ್ಷಗಳ ನಂತರ ಶಂಬಲಗ್ರಾಮದಲ್ಲಿ ವಿಷ್ಣುವ್ರತನಾಗಿ ಅವತರಿಸಿದನೆಂದೂ ಕಂಡು ಬರುತ್ತದೆ.

ಇನ್ನು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು ೧೧ ನೇ ಅಧ್ಯಾಯದಲ್ಲಿ ವಸುದೇವನ ಮೂಲರೂಪವನ್ನು ವಿವರಿಸುವ ಸಂದರ್ಭದಲ್ಲಿ ''ಸ ಕಶ್ಯಪೋ ದ್ರಾಗ್'' ಎಂದು ವಸುದೇವನು ಪೂರ್ವದಲ್ಲಿ ಕಶ್ಯಪನೆಂದು ಹೇಳಿರುವರು. ಮತ್ತು ಅಲ್ಲಿಯೇ ಮುಂದೆ ಅದನ್ನೇ ವಿಶದಪಡಿಸಿ ''ಶೂರಾತ್ಸ ಜಾತೋ ಬಹುಗೋಧನಾಢ್ಯಃ ಭೂಮೌ ಯಮಾಹುರ್ವಸುದೇವ ಇತ್ಯಪಿ'' ಎಂದೂ ನಿರೂಪಿಸಿರುವರು. ಮತ್ತು ಕಶ್ಯಪನಿಗೆ ಈ ಪೂರ್ವದಲ್ಲಿ ದಶರಥನೆಂಬ ಜನ್ಮವಿದ್ದಿತೆಂದು ೩ನೇ ಅಧ್ಯಾಯದಲ್ಲಿ ''ಸ ಕಶ್ಯಪಸ್ಯಾದಿತಿಗರ್ಭಜನ್ಮನೋ ವಿವಸ್ವತಸ್ತಂತುಭವಸ್ಯ ಭೂಭೃತಃ । ಗೃಹೇ ದಶಸ್ಯಂದನನಾಮಿನೋಽಭವತ್'' ಎಂದು ವರ್ಣಿಸಿರುವರು. ಇಲ್ಲಿ ''ಅದಿತಿಗರ್ಭಜನ್ಮನಃ'' ಎಂಬಲ್ಲಿ ಅದಿತ್ಯಾಂ ಗರ್ಭಸ್ಯಜನ್ಮ ಅಂಕುರಣಂ ಯಸ್ಮಾತ್ ಎಂದು ವಿಗ್ರಹವಿರುವುದರಿಂದ ಅದಿತಿಯ ಪತಿಯಾದ ಕಶ್ಯಪನು ವೈವಸ್ವತಮನುವೆಂದು ಅವನೇ ದಶರಥನೆಂದೂ ತಿಳಿದು ಬರುತ್ತದೆ. ಇಲ್ಲಿ 'ವಿವಸ್ವತಸ್ತಂತುಭವಸ್ಯ' ಎಂಬುದಾಗಿ ವರ್ಣಿಸಿದ್ದಕ್ಕೆ ವಾಮನಪುರಾಣವು ಆಧಾರವಾಗಿದೆ. ಅಲ್ಲಿ ಹೀಗೆ ವರ್ಣನೆಯಿದೆ.

''ಭವಿಷ್ಯದಂತರೇ ಭೂತ್ವಾ ಮನುರ್ವೈವಸ್ವತೋ ಭವಾನ್ ।
ತಸ್ಯ ವಂಶೇ ಭವಾಮ್ಯಂಗ ರಾಮೋ ದಾಶರಥಿಃ ಸ್ವಯಮ್ ।
ಪುನರ್ದಶರಥೋ ಭೂತ್ವಾ ತ್ವಮೇವಾಸಿ ಪಿತಾಮಹ ।''

ಇದರಿಂದ ದಶರಥನು ವೈವಸ್ವತಮನುವೆಂದು ತೋರುತ್ತದೆ. ನಾರಾಯಣ ಪಂಡಿತಾಚಾರ್ಯರಿಂದ ರಚಿತವಾದ ಅಂಶಾವತಾರವೆಂಬ ಗ್ರಂಥದಲ್ಲಿ ''ರಾಜಾ ದಶರಥಃ ಪೂರ್ವಂ ಮನುಃ ಸ್ವಾಯಂಭುವಃ ಸ್ಮೃತಃ'' ದಶರಥನು ಸ್ವಾಯಂಭುವಿನ ಅಂಶನೆಂದು ಹೇಳಲ್ಪಟ್ಟಿದೆ.

ಅಂತೂ ಮೇಲಿನ ಪ್ರಮಾಣಗಳಿಂದ ಕಶ್ಯಪನ ಅಂಶವೆಂದು, ಸ್ವಾಯಂಭುವಿನ ಅಂಶನೆಂದು ವೈವಸ್ವತನ ಅಂಶವೆಂದು ಮೂರುಕಲ್ಪಗಳು ದಶರಥನ ಮೂಲರೂಪ ವಿಷಯದಲ್ಲಿ ಉದ್ಭವಿಸುತ್ತದೆ. ಇವು ಒಂದಕ್ಕೊಂದು ವಿರುದ್ಧವಾಗಿದೆ. ಇವುಗಳನ್ನು ಪರ್ಯಾಲೋಚಿಸಿ, ಅವುಗಳ ಸಮನ್ವಯ ಪ್ರಕಾರವನ್ನು ಸತ್ಯಧರ್ಮರು ತಮ್ಮ ವ್ಯಾಖ್ಯಾನದಲ್ಲಿ ಸ್ಪಷ್ಟಗೊಳಿಸಿರುವರು. ದಶರಥನು ಕಶ್ಯಪನ ಸಾಕ್ಷಾತ್ ಅಂಶಸಂಭವನು. ಈ ವಿಷಯದಲ್ಲಿ ಸ ಕಶ್ಯಪಸ್ಯಾದಿತಿಗರ್ಭಜನ್ಮನಃ ಎಂಬ ಮತ್ತು 'ಸ ಕಶ್ಯಪೋ ದ್ರಾಕ್' ಎಂಬ ಶ್ರೀಮದಾಚಾರ್ಯರ ನಿರವಕಾಶ ವಾಕ್ಯಗಳು ಆಧಾರವಾಗಿದೆ. 'ವಿವಸ್ವತಸ್ತಂತು ಭವಸ್ಯ ಭೂಭೃತಃ' ಎಂಬ ವಾಕ್ಯವು ಸಾವಕಾಶವಾಗಿದೆ. ಇದಕ್ಕೆ ವಿವಸ್ವತ ವಂಶಸಂಭವನೆಂದು ಹೇಳಬಹುದು. ಮತ್ತು ಅವನ ಒಂದು ಅಂಶದಿಂದ ಮಾತ್ರ ಕೂಡಿದವನೆಂದು ಅರ್ಥೈಸಬಹುದು. ಹಾಗೆಯೇ ಪದ್ಮಪುರಾಣ ವಾಕ್ಯಕ್ಕೂ ಸಹ ದಶರಥನು ಸ್ವಾಯಂಭುವಿನ ಅಂಶದಿಂದ ಮಾತ್ರ ಕೂಡಿದವನೆಂದೇ ಅಭಿಪ್ರಾಯವು. ಅಂತೂ ಕಶ್ಯಪರೇ ದಶರಥನಾಗಿ ಮುಂದೆ ವಸುದೇವನಾಗಿ ಅವತರಿಸಿದರೆಂಬುದೇ ನಿರರ್ಗಲವಾದ ಪ್ರಮೇಯವು. ಅಂಶಾವತಾರಗ್ರಂಥಕ್ಕೂ ಅದೇ ಅಭಿಪ್ರಾಯವು.

**ತಸ್ಯಾಪಿ ಭಗವಾನೇಷ ಸಾಕ್ಷಾತ್ ಬ್ರಹ್ಮಮಯೋ ಹರಿಃ ।**
**ಅಂಶಾಂಶೇನ ಚತುರ್ಧಾಽಗಾತ್ ಪುತ್ರತ್ವಂ ಪ್ರಾರ್ಥಿತಂ ಸುರೈಃ ।**
**ರಾಮಲಕ್ಷ್ಮಣಭರತಶತ್ರುಘ್ನಾಶ್ಚೇತಿ ಸಂಜ್ಞಯಾ ॥೮೪॥**

**ಸುರೈಃ** ದೇವತೆಗಳಿಂದ **ಪ್ರಾರ್ಥಿತಃ** ಪ್ರಾರ್ಥಿತನಾಗಿ **ಬ್ರಹ್ಮಮಯಃ** ವೇದಗಳ ಮುಖ್ಯಾರ್ಥವಾದ, **ಸಾಕ್ಷಾತ್ ಹರಿಃ** ಬ್ರಹ್ಮಾಂಡದ ಹೊರಗೆ ವಾಸುದೇವಾದಿ ನಾನಾವತಾರಗಳಿಗೆ ಬೀಜಭೂತನಾದ ಮೂಲರೂಪಿ ನಾರಾಯಣನು, **ಅಂಶಾಂಶೇನ ಅಂಶಃ** ತನ್ನ ಬ್ರಹ್ಮಾಂಡದೊಳಗಿರುವ ಅನೇಕ ಅವತಾರಗಳಿಗೆ ಕಾರಣವಾದ ಪುರುಷನಾಮಕ ಪದ್ಮನಾಭನು, **ಅಂಶೇನ** ವಾಸುದೇವ, ಸಂಕರ್ಷಣ,

ಅನಿರುದ್ಧ, ಪ್ರದ್ಯುಮ್ನ ನಾಮಕ ಅಂಶದಿಂದ, **ಚತುರ್ಧಾ** ನಾಲ್ಕು ವಿಧವಾದ, **ರಾಮಲಕ್ಷ್ಮಣಭರತಶತ್ರುಘ್ನಾಶ್ಚೇತಿ ಸಂಜ್ಞಯಾ** (ಇತ್ಥಂ ವಿಚಿಂತ್ಯ ಪರಮಃ ಸ ತು ವಾಸುದೇವನಾಮಾ ಬಭೂವ) ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ಹೆಸರಿನಿಂದ **ಪುತ್ರತ್ವಂ** ಪುತ್ರಭಾವವನ್ನು, **ತಸ್ಯ** ದಶರಥನ, **ಅಗಾತ್** ಮಗನಾಗಿ ಜನಿಸಿದನು. ಬ್ರಹ್ಮಾಂಡದ ಹೊರಗೆ ವಾಸುದೇವಾದಿ ಎಲ್ಲ ರೂಪಗಳಿಗೆ ಮೂಲರೂಪದಿಂದಲೇ ವಿಭಾಗ ''ಏತನ್ನಾನಾವತಾರಾಣಾಂ ನಿದಾನಂ ಬೀಜಮವ್ಯಯಂ'' ಬ್ರಹ್ಮಾಂಡದ ಒಳಗೆ ವಾಸುದೇವಾದಿ ಅವತಾರಗಳಿಗೆ ಪದ್ಮನಾಭನಿಂದ ವಿಭಾಗ. ಪುನಃ ಅವನಲ್ಲಿಯೇ ಸಂಯೋಗ. (ಐಕ್ಯ) ಬ್ರಹ್ಮಾಂಡದ ಹೊರಗೆ ನಾರಾಯಣನು ಮೊದಲು ವಾಸುದೇವಾದಿ ರೂಪಗಳನ್ನು ಧರಿಸಿದನು. ಇದರಂತೆ ಪದ್ಮನಾಭನು ಬ್ರಹ್ಮಾಂಡದ ಒಳಗೆ ವಾಸುದೇವಾದಿ ನಾಲ್ಕು (೪) ರೂಪಗಳನ್ನು ಸ್ವೀಕರಿಸಿದನು. ವಾಸುದೇವನು ರಾಮನಾದನು, ಸಂಕರ್ಷಣನು ಶೇಷಾವತಾರನಾದ ಲಕ್ಷ್ಮಣನಲ್ಲಿ ಪ್ರವೇಶ ಮಾಡಿದನು. ಪ್ರದ್ಯುಮ್ನನು ಚಕ್ರಾಭಿಮಾನಿ ಕಾಮಾವತಾರನಾದ ಭರತನಲ್ಲಿ ಪ್ರವೇಶ ಮಾಡಿದನು. ಅನಿರುದ್ಧನು ಶಂಖಾಭಿಮಾನಿ ಕಾಮಪುತ್ರ ಅನಿರುದ್ಧಾವತಾರನಾದ ಶತ್ರುಘ್ನನಲ್ಲಿ ಪ್ರವೇಶಿಸಿದನು.

**ತಸ್ಯಾನುಚರಿತಂ ರಾಜನೃಷಿಭಿಸ್ತತ್ವದರ್ಶಿಭಿಃ ।**
**ಶ್ರುತಂ ಹಿ ವರ್ಣಿತಂ ಭೂರಿ ತ್ವಯಾ ಸೀತಾಪತೇರ್ಮುಹುಃ ॥೮॥**

**ರಾಜನ್** ಪರೀಕ್ಷಿತನೇ, **ತತ್ವದರ್ಶಿಭಿಃ** ಯಥಾರ್ಥಜ್ಞಾನಿಗಳಾದ **ಋಷಿಭಿಃ** ವಾಲ್ಮೀಕಿ ಮೊದಲಾದ ಋಷಿಗಳಿಂದ, **ಭೂರಿ** ಅನೇಕಸಲ **ವರ್ಣಿತಂ** ಹೇಳಲ್ಪಟ್ಟ, **ಸೀತಾಪತೇಃ** ಸೀತಾಪತಿಯಾದ, **ತಸ್ಯ** ರಾಮಚಂದ್ರನ, **ಅನುಚರಿತಂ** ಚರಿತ್ರೆಯು **ಮುಹುಃ** ಮತ್ತೆ ಮತ್ತೆ **ತ್ವಯಾ** ನಿನ್ನಿಂದ, **ಶ್ರುತಂ ಅಪಿ** ಕೇಳಲ್ಪಟ್ಟಿದೆ ಆದರೂ, **ಭೂರಿ** ಮಹಾಫಲ ಉಳ್ಳದ್ದು ಕಾರಣ **ಅನು** ನೀನು ಕೇಳಿದ್ದನ್ನನುಸರಿಸಿ (ಅಹಮಪಿ) ನಾನೂ ಸಹ (ವರ್ಣಯಾಮಿ) ಹೇಳುವೆನು.

**ತಾತ್ಪರ್ಯ-** ರಾಜನೇ! ಈಗಾಗಲೇ ಪೂರ್ವದಲ್ಲಿ ಇಲ್ಲಿಗೆ ಬಂದ ವಾಲ್ಮೀಕಿಗಳೇ ಮೊದಲಾದವರು ಸೀತಾಪತಿಯಾದ ರಾಮಚಂದ್ರನ ಚರಿತ್ರೆಯನ್ನು ಅನೇಕ ಸಲ ಹೇಳಿರುವರು. ನೀನೂ ಕೇಳಿರುವೆ. ಆದರೂ ಮತ್ತೆ ಮತ್ತೆ ಕೇಳಿದರೆ ಮಹಾ ಫಲಪ್ರದವಾಗಿದೆ. ಕಾರಣ ಕೇಳಿದ್ದನ್ನೇ ಪುನಃ ಹೇಳುವೆನು ಕೇಳು. ॥೮॥

ಜ್ಞಾನಿಗಳು ಅನೇಕಸಲ ಭಗವತ್ಸ್ಮರಣ ಮಾಡುವದರಿಂದ ಮಹಾಫಲಪ್ರದವಾದ ಕಾರಣ ಸಂಕ್ಷೇಪವಾಗಿ ಮತ್ತು ವಿಸ್ತಾರವಾಗಿ ಹೇಳುವರು. ಅದರಂತೆ ಸಂಕ್ಷೇಪವಾಗಿ ತಿಳಿದಾಗ ವಿಸ್ತಾರವಾಗಿ ರಾಮಚರಿತೆಯನ್ನು ಹೇಳಲು ಎಲ್ಲ ರಾಮಚಂದ್ರ ಚರಿತ್ರೆಯ

ಸಂಗ್ರಹವಾಗುವಂತೆ ಸೂತ್ರರೂಪವಾದ ಶ್ಲೋಕದಿಂದ ಶುಕಾಚಾರ್ಯರು ಹೇಳಿರುವರು. ತಮ್ಮ ಸಂರಕ್ಷಣೆಯನ್ನೂ ಪ್ರಾರ್ಥನೆ ಮಾಡುವರು.

**ಗುರ್ವರ್ಥೇ ತ್ಯಕ್ತರಾಜ್ಯೋ ವ್ಯಚರದನುವನಂ**
**ಪದ್ಮಪದ್ಭ್ಯಾಂ ಪ್ರಿಯಯಾಃ ।**
**ಪಾಣಿಸ್ಪರ್ಶಾಕ್ಷಮಾಭ್ಯಾಂ ಮೃಜಿತಪಥಿರುಜೋ**
**ಯೋ ಹರೀಂದ್ರಾನುಜಾಭ್ಯಾಮ್ ॥**
**ವೈರೂಪ್ಯಾಚ್ಛೂರ್ಪಣಖ್ಯಾಃ ಪ್ರಿಯವಿರಹರುಷಾಽಽ**
**ರೋಪಿತಭ್ರೂವಿಜೃಂಭಃ ।**
**ಶ್ರುತ್ವಾಽವಿ(ತ್ರಸ್ತಾಬ್ಧಿ)ರ್ಬದ್ಧಸೇತುಃ ಖಲದವದಹನಃ**
**ಕೋಸಲೇಂದ್ರೋಽವತೀರ್ಣಃ (ವತಾನ್ನಃ)** ॥೮೬॥

**ಯಃ** ಯಾರು **ಗುರ್ವರ್ಥೇ** ತಂದೆಯಾದ ದಶರಥನ ವಾಕ್ಯವನ್ನು ಸತ್ಯಗೊಳಿಸಲು (ಗುರುರ್ನಿಷೇಕಾದಿಕರೇ ಪಿತ್ರಾದಾವಿತ್ಯಮರಃ) **ತ್ಯಕ್ತಃ ರಾಜ್ಯಃಸನ್** ಹದಿನಾಲ್ಕು ವರ್ಷ ಮುಗಿಯುವವರೆಗೆ ರಾಜ್ಯವನ್ನು ಬಿಟ್ಟವನಾಗಿ (ಬಿಡಲ್ಪಟ್ಟ ರಾಜ್ಯ ಉಳ್ಳವನಾಗಿ) **ಪ್ರಿಯಾಯಾಃ** ಹೆಂಡತಿಯಾದ ಸೀತಾದೇವಿಯ **ಪಾಣಿಸ್ಪರ್ಶಾಕ್ಷ-ಮಾಭ್ಯಾಂ** ಕೈಗಳ ಸ್ಪರ್ಶದಲ್ಲಿಯೂ ಅಸಮರ್ಥಗಳಾದ, **ಪದ್ಮಪದ್ಭ್ಯಾಂ** ಕಮಲಗಳಂತೆ ಕೋಮಲಗಳಾದ ಕಾಲುಗಳಿಂದ (ಪಾದ ಶಬ್ದಕ್ಕೆ ಆದೇಶವಾದ ರೂಪಪದ್ಭ್ಯಾಂ) (ಅಥವಾ ''ಪದಂಘ್ರಿಶ್ಚರಣೋಽಸ್ತ್ರಿಯಾಂ'' ಎಂದು ಹೇಳಿದ ಸ್ವತಂತ್ರಶಬ್ದ) **ಮೃಜಿತಪಥಿರುಜಃ** ತೊಳೆಯಲ್ಪಟ್ಟ ಮಾರ್ಗಾಯಾಸ ಉಳ್ಳವನಾಗಿ (ಕೋಮಲವಾದ ಪಾದಗಳಾದರೂ ಮಾರ್ಗಾಯಾಸವಿಲ್ಲದೆ) (ಮೃಜೂಷ್ ಶುದ್ಧೌ ಧಾತು) **ಹರೀಂದ್ರಾನುಜಾಭ್ಯಾಂ** ಕಪಿಶ್ರೇಷ್ಠರಾದ ಹನುಮಂತ, ಅಥವಾ ಸುಗ್ರೀವ ಮತ್ತು ಲಕ್ಷ್ಮಣನಿಂದ ಕೂಡಿಕೊಂಡು **ಅನುವನಂ** ಪ್ರತಿವನದಲ್ಲಿ, **ವ್ಯಚರತ್** ಸಂಚರಿಸಿದನು. (ಅನು ಉಪಪದದಿಂದ ಒಂದೆಡೆಗೆ ಇರದೇ ಬೇರೆ ಬೇರೆ ಸ್ಥಳದಲ್ಲಿ ಸಂಚರಿಸಿದನೆಂದು ಸೂಚಿಸಿದರು) **ಶೂರ್ಪಣಖ್ಯಾಃ** ಶೂರ್ಪಣಖೆಯ, **ವೈರೂಪ್ಯಾತ್** ಕಿವಿ, ಮೂಗುಗಳನ್ನು ಕತ್ತರಿಸಿ ವಿಕಾರಗೊಳಿಸಿದ್ದರಿಂದ ಅವಳಿಂದ ಪ್ರೇರಿತನಾದ ರಾವಣನಿಂದ ಸೀತಾದೇವಿಯು ಅಪಹರಿಸಲ್ಪಟ್ಟಿದ್ದರಿಂದ ಉಂಟಾದ **ಪ್ರಿಯವಿರಹರುಷಾ** ಹೆಂಡತಿಯ ವಿಯೋಗದಿಂದ ಉಂಟಾದ ಸಿಟ್ಟಿನಿಂದ, **ಆರೋಪಿತಭ್ರೂವಿಜೃಂಭಃ ಆರೋಪಿತ** ಮೇಲೇರಿಸಲ್ಪಟ್ಟ, **ಭ್ರೂ** ಹುಬ್ಬಿನ **ವಿಜೃಂಭಃ** ವಿಲಾಸ ಉಳ್ಳವನು, ಅದರಿಂದಲೇ **ತ್ರಸ್ತಾಬ್ಧಿಃ** ಭಯಗೊಳಿಸಲ್ಪಟ್ಟಸಮುದ್ರರಾಜನುಳ್ಳ ಸಮುದ್ರರಾಜನಿಂದ ಪ್ರಾರ್ಥಿತನಾಗಿ, **ಬದ್ಧಸೇತುಃ** ಸೇತುವೆಯನ್ನು ಕಟ್ಟಿದ, **ಖಲದವದಹನಃ ಖಲ** ದೈತ್ಯರೆಂಬ, **ದವ** ವನಕ್ಕೆ, **ದಹನಃ** ಅಗ್ನಿಯಂತಿರುವ,

**ಕೋಸಲೇಂದ್ರಃ ಸನ್** ಕೋಸಲದೇಶಕ್ಕೆ ಒಡೆಯನಾಗಿ, **ಅವತೀರ್ಣಃ** ಅವತರಿಸಿದನು, ಅಥವಾ **ಕೋಸಲೇಂದ್ರಃ** ಕೋಸಲಾಧಿಪತಿಯಾದ ರಾಮಚಂದ್ರನು, **ನಃ** ನಮ್ಮನ್ನು **ಅವತಾತ್** ರಕ್ಷಿಸಲಿ.

ಮೇಲೆ ''ತ್ರಸ್ತಾಬ್ಧಿಃ'' ಎಂಬ ಪಾಠವನ್ನಿಟ್ಟುಕೊಂಡು ಅರ್ಥ ಬರೆದಿದೆ. 'ಶ್ರುತ್ವಾವಿರ್ಬದ್ಧಸೇತುಃ' ಎಂಬ ಪಾಠವಿದ್ದಾಗ, **ಆವಿಃ (ಆವಿರ್ಭಾವಂ) ಭಾವಂ**, ಸ್ಥಿತಿಯನ್ನು (ಹನುಮಂತನ ಮುಖದಿಂದ ಸೀತಾದೇವಿಯ ಲಂಕೆಯಲ್ಲಿರುವುದನ್ನು) **ಶ್ರುತ್ವಾ** ಕೇಳಿ **ಆರೋಪಿತಭ್ರೂವಿಜೃಂಭಃ** ಮೇಲೆತ್ತಲ್ಪಟ್ಟ ಹುಬ್ಬುಗಳ ವಿಕಾಸದಿಂದ ಹರ್ಷಗೊಂಡು ಮುಂದೆ **ಪ್ರಿಯವಿರಹರುಷಾ ಪ್ರಿಯಸ್ಯ** ತನ್ನ ಗಂಡನಾದ, ಅಕಂಪನನ **ವಿರಹೇಣ,** ರಾವಣನು ತಿಳಿಯದಲೇ ಯುದ್ಧದಲ್ಲಿ ಕೊಂದಿದ್ದ-ರಿಂದುಂಟಾದ ವಿಯೋಗದಿಂದ ಉತ್ಪನ್ನವಾದ ಲಂಕೆಯನ್ನು ಬಿಡುವದಕ್ಕೆ ಕಾರಣವಾದ, **ರುಷಾ** ಸಿಟ್ಟಿನಿಂದ ಮತ್ತು **ವೈರೂಪ್ಯಾತ್** ಮಂಗಲಸೂತ್ರ ಮೊದಲಾದವುಗಳಿಲ್ಲದಿರುವದರಿಂದ ಬಂದೊದಗಿದ ವಿಕಾರವನ್ನು **ಪ್ರಾಪ್ಯ** ಹೊಂದಿ ಬಂದಿರುವ ಶೂರ್ಪಣಖೆಯ **ವೈರೂಪ್ಯಾತ್** ಕಿವಿ-ಮೂಗುಗಳನ್ನು ಭೇದಿಸುವದ-ರಿಂದ ವಿಕಾರವನ್ನು **ಆತಯತಿ ಇತಿ** ಉಂಟು ಮಾಡುವವನಾದ್ದರಿಂದ ವೈರೂಪ್ಯಾತ್. (ಇದು ಪ್ರಥಮಾಂತ, ರಾಮನಿಗೆ ವಿಶೇಷಣ ಅಥವಾ ಲ್ಯಬ್ಲೋಪನಿಮಿತ್ತ ಪಂಚಮೀ) ವೈರೂಪ್ಯಂ, **ವಿರಚಯ್ಯ** ವಿಕಾರವನ್ನುಂಟುಮಾಡಿ **ವ್ಯಚರತ್** ಸಂಚರಿಸಿದನು. ||

**ಖಲದವದಹನಃ** ಮೊದಲು ಖರದೂಷಣರಿಂದ ಸಹಿತವಾದ ಹದಿನಾಲ್ಕುಸಾವಿರ ರಾಕ್ಷಸರೆಂಬ ವನಕ್ಕೆ ಅಗ್ನಿಯಂತಿರುವ ಮತ್ತು ರಾವಣಾದಿ ಸ್ವೇಚ್ಛಾಚಾರಿಗಳಾದ ರಾಕ್ಷಸರೆಂಬ ವನಕ್ಕೆ ಅಗ್ನಿಯಂತಿರುವ,

ಈ ಶ್ಲೋಕದಲ್ಲಿ **ಯಃ** ಯಾರು, **ಅನುವನಂ** ನೀರನ್ನನುಸರಿಸಿ, **ವ್ಯಚರತ್** ಸಂಚರಿಸಿದನೋ, **ಸಃ** ಅವನೇ, **ಅವತೀರ್ಣಃ** ಅವತರಿಸಿದನು. ಹೀಗೆ ಅನ್ವಯ ಮಾಡಿದರೆ ನಾರಾಯಣನೇ ರಾಮಚಂದ್ರನು ಎಂಬ ಭಾವವು ಧ್ವನಿತವಾಗುವುದು. (ಸಮುದ್ರಶಾಯಿಯೇ ಎಂದರ್ಥ).

**ದಶಾವತಾರಗಳ ಸಂಗ್ರಹವು ಸೂಚಿತವಾಗಿದೆ.**

೧. **ಗುರ್ವರ್ಥೇ** - ಪೂಜ್ಯನಾದ ಸತ್ಯವ್ರತನ ಮೇಲೆ ಇಡಲ್ಪಟ್ಟ ಭಾರರೂಪ ಪ್ರಯೋಜನಕ್ಕಾಗಿ, **ಅವತೀರ್ಣಃ** ಅವತರಿಸಿದವನು, ಮತ್ಸ್ಯನು, **ಅನುವನಂ** ನೀರಲ್ಲಿ, **ವ್ಯಚರತ್** ಸಂಚರಿಸಿದನು. ಅಥವಾ ಯಃ ವ್ಯಚರತ್ ಸಃ ಮತ್ಸ್ಯಃ ಅವತಾತ್ ರಕ್ಷಣೆ ಮಾಡಲಿ, ಎಂದು ಅನ್ವಯ ಮಾಡಬಹುದು. ||೧||

**ಯಃ ಗುರ್ವರ್ಥೇ** ಮಂದರಪರ್ವತದ ಭಾರವನ್ನು ಧರಿಸುವುದಕ್ಕಾಗಿ **ಅನುವನಂ ವ್ಯಚರತ್** ಸಮುದ್ರಜಲದಲ್ಲಿ ಸಂಚರಿಸಿದ, ಕೂರ್ಮಾವತಾರ, ।।೨।।

**ಅನುವನಂ** ಅಡವಿಯಲ್ಲಿ **ಪಾಣಿಸ್ಪರ್ಶಾಕ್ಷಮಾಭ್ಯಾಂ** ಪಾಣಿಭ್ಯಾಂ ಸ್ಪರ್ಶಃ ಪಾಣಿಸ್ಪರ್ಶಃ, ಪಾಣಿಸ್ಪರ್ಶೇ ಆ ಕ್ಷಮಾ ಯಯೋಃ ತೌ, ತಾಭ್ಯಾಂ, ಪಾಣಿಸ್ಪರ್ಶಾಕ್ಷಮಾಭ್ಯಾಂ ಎಂದು ವಿಗ್ರಹಮಾಡಿ ಕೈಗಳಿಂದ ಸ್ಪರ್ಶಿಸುವಲ್ಲಿ ಚೆನ್ನಾಗಿ ಸಮರ್ಥಳಾದ ಧರಾದೇವಿಯುಳ್ಳ **ಪದ್ಮಪದ್ಭ್ಯಾಂ** ಕಮಲ ಕೋಮಲ ಪಾದಗಳಿಂದ **ವ್ಯಚರತ್** ಸಂಚಾರಮಾಡಿದನು. (ಯಾವಾತನ ಪಾದ ಸಂವಹನನ ಮಾಡುವವಳು ಭೂದೇವಿಯೋ, ಅವನು) ವರಾಹನು. ।।೩।।

**ಗುರೋಃ** ಪ್ರಹ್ಲಾದನ ತಂದೆಯ **ಅರ್ಥೇ** ನಾಶ ಮಾಡುವದಕ್ಕಾಗಿ, **ಯಃ ಅವತೀರ್ಣಃ** ಅವತರಿಸಿದನೋ ನರಸಿಂಹನು (ಅರ್ಥೋಽಭಿಧೇಯರೈವಸ್ತು ಪ್ರಯೋಜನನಿವೃತ್ತಿಷು) ನಿವೃತ್ತಿ ನಾಶ ಎಂದರ್ಥ. ।।೪।।

**ಗುರು** ಬೃಹಸ್ಪತ್ಯಾಚಾರ್ಯರ **ಅರ್ಥೇ** ಅದರ್ಶನವೆಂಬ ನಾಶವಾದಾಗ **ತ್ಯಕ್ತರಾಜ್ಯಃ** ರಾಜ್ಯವನ್ನು ಪರಿತ್ಯಾಗಮಾಡಿದ, **ಗುರ್ವರ್ಥೇ** ಜ್ಯೇಷ್ಠಭ್ರಾತೃವಾದ್ದರಿಂದ ತಂದೆಯ ಸಮಾನನಾದ ಇಂದ್ರನಿಗೆ, **ತ್ಯಕ್ತರಾಜ್ಯಃ** ಬಲಿಚಕ್ರವರ್ತಿಯಿಂದ ರಾಜ್ಯವನ್ನು ಕಸಿದುಕೊಂಡು ಕೊಟ್ಟವನು ಎಂದರೆ ವಾಮನನು. ।।೫।।

**ಗುರ್ವರ್ಥೇ** ಪೂಜ್ಯರಾದ ಕಶ್ಯಪರಿಗೆ **ತ್ಯಕ್ತರಾಜ್ಯಃ** ಭೂಮಿಯನ್ನು ದಾನ ಮಾಡಿದವನು ಪರಶುರಾಮನು. ।।೬।।

ರಾಮಚಂದ್ರನನ್ನು ವರ್ಣಿಸಿದೆ. ।।೭।।

**ಗುರ್ವರ್ಥೇ** ಉಗ್ರಸೇನನಿಗಾಗಿ, **ತ್ಯಕ್ತರಾಜ್ಯಃ** ರಾಜ್ಯವನ್ನು ಬಿಟ್ಟುಕೊಟ್ಟಿರುವ, **ಯಾಃ** ಯಾವ **ಪ್ರಿಯಾಃ** ಮನೋಹರವಾದ, **ಅತ್ಯಕ್ತರಾಜ್ಯಃ** (ತಾಸಾಂ) **ಅತ್ಯಕ್ತ** ಬಿಡದಿರುವ **ರಾಜ್ಯಃ** ಪಂಕ್ತಿಗಳುಳ್ಳ **ಪಾಣಿಸ್ಪರ್ಶಾಕ್ಷಮಾಭ್ಯಾಂ** ಕರಸ್ಪರ್ಶವನ್ನು ಸಹಿಸದ **ಪದ್ಮಪದ್ಭ್ಯಾಂ** ಕಮಲಕೋಮಲಗಳಾದ ಪಾದಗಳಿಂದ ವನದಲ್ಲಿ **ಮೃಜಿತಪಥಿರುಜಃ** ಮಾರ್ಗಶ್ರಮವಿಲ್ಲದೇ ಸಂಚರಿಸಿದವನು ಕೃಷ್ಣನು. ।।೮।।

**ಯಃ ವೈರೂಪ್ಯಾತ್** ವೈರೂಪ್ಯೇಣ ದಿಗಂಬರನಾಗಿ, **ಅತತಿ** ಸಂಚರಿಸುವನೋ, **ಸಃ** ಬುದ್ಧನು. ।।೯।।

**ಯಃ** ಯಾರು **ಹರೀಂದ್ರಾನುಜಾಭ್ಯಾಂ ಹರೀಂದ್ರಸ್ಯ** ಕುದುರೆಯ, **ಅನು** ಹಿಂಭಾಗದಲ್ಲಿ, **ಜ** ಉತ್ಪನ್ನವಾದ ಪಾದಗಳೆರಡು, **ಪಾಣಿಸ್ಪರ್ಶಾಕ್ಷಮಾಭ್ಯಾಂ** ಪಾಣಿಸ್ಪರ್ಶಮಾತ್ರೇಣ **ನ ವಿದ್ಯತೇ, ಕ್ಷ್ಮಾ** ಭೂಮಿ, **ಸ್ಪರ್ಶತ್ವೇನ ಯಯೋಃ ತಾಭ್ಯಾಂ** ಕೈಯಿಂದ ಮುಟ್ಟುವುದರಿಂದಲೇ ಎತ್ತಲ್ಪಟ್ಟ ಮುಂದಿನ ಪಾದಗಳೆರಡು ಈ ರೀತಿ

ನಾಲ್ಕು ಪಾದಗಳುಳ್ಳ ಕುದುರೆಯಿಂದ **ಮೃಜಿತಪಥಿರುಜಃ** ಮಾರ್ಗದಿಂದಾಗುವ ವ್ಯಥೆ ಇಲ್ಲದ ಸಂಚರಿಸಿದ ಕಲ್ಕಿಯು ನಮ್ಮನ್ನು ರಕ್ಷಿಸಲಿ. ।।೧೦।।

ಉಳಿದೆಲ್ಲ ವಿಶೇಷಣಗಳು ಎಲ್ಲ ರೂಪಗಳಿಗೆ ಅಭೇದವಿರುವುದರಿಂದ ಅನ್ವಿತವಾಗುವವು ಎಂದು ತಿಳಿಯಬೇಕು.

**ತಾತ್ಪರ್ಯ-** ಯಾವ ರಾಮಚಂದ್ರನು ತಂದೆಯ ಮಾತನ್ನು ಸತ್ಯಮಾಡಲು ರಾಜ್ಯಪರಿತ್ಯಾಗ ಮಾಡಿ ಹನುಮಂತ ಲಕ್ಷ್ಮಣರಿಂದ ಕೂಡಿಕೊಂಡು ಹೆಂಡತಿಯ ಕರಸ್ಪರ್ಶವನ್ನೂ ಸಹ ಸಹಿಸದಷ್ಟು ಕಮಲಕೋಮಲಪಾದಗಳಿಂದಾದರೂ ಮಾರ್ಗದಿಂದ ಉಂಟಾಗುವ ಶ್ರಮವಿಲ್ಲದೇ ವನ, ವನ, ಸಂಚರಿಸಿದನು. ಮತ್ತು ಶೂರ್ಪಣಖಿಯು ತನ್ನ ಮೂಗುಕಿವಿಗಳನ್ನು ಕತ್ತರಿಸಿದ್ದರಿಂದ ತನ್ನ ಅಣ್ಣ ರಾವಣನಿಗೆ ಹೇಳಿ ಸೀತೆಯನ್ನು ಅಪಹರಿಸುವಂತೆ ಮಾಡಿದಳು. ಹೆಂಡತಿಯ ವಿಯೋಗದಿಂದುಂಟಾದ ಸಿಟ್ಟಿನಿಂದ ಹುಬ್ಬುಗಂಟ್ಟಿಕ್ಕಿದಾಗ ಸಮುದ್ರರಾಜನು ಭಯಗೊಂಡು ಅವಶ್ಯವಾಗಿ ಸೇತುಬಂಧನ ಮಾಡೆಂದು ಪ್ರಾರ್ಥಿಸಿದಾಗ, ಸೇತುಬಂಧನಮಾಡಿ, ಸಮಸ್ತ ರಾವಣಾದಿ ರಾಕ್ಷಸರನ್ನು ಸಂಹಾರ ಮಾಡಿದನು. ದಶಾವತಾರ ಮಾಡಿ ಸತ್ಯವ್ರತನಿಗೆ ವೇದೋಪದೇಶ ಮಾಡಿದ ಮತ್ಸ್ಯ, ಮಂದರಪರ್ವತ ಧರಿಸಿದ ಕೂರ್ಮ, ಧರೆಯಿಂದ ಒತ್ತಲ್ಪಡುವ ಪಾದದಿಂದ ಸಂಚರಿಸಿದ ವರಾಹ, ಹಿರಣ್ಯಕಶಿಪುವಿನ ಸಂಹಾರಕ್ಕಾಗಿ ಅವತರಿಸಿದ ನಾರಸಿಂಹ, ಬಲಿಯಿಂದ ರಾಜ್ಯವನ್ನು ಅಪಹರಿಸಿ ಅಣ್ಣನಾದ ಇಂದ್ರನಿಗಿತ್ತ ವಾಮನ, ಕಶ್ಯಪರಿಗೆ ಭೂಮಿಯನ್ನು ದಾನಮಾಡಿದ ಪರಶುರಾಮ, ಸೀತಾಪತಿರಾಮ, ಉಗ್ರಸೇನನಿಗೆ ರಾಜ್ಯವನ್ನು ಒಪ್ಪಿಸಿ ಸುಂದರಪಾದಗಳಿಂದ ಸಾಲುಸಾಲಾಗಿ ಮಾಡಿದ ಹೆಜ್ಜೆಗಳಿಂದ ವನದಲ್ಲಿ ಸಂಚರಿಸಿದ ಶ್ರೀಕೃಷ್ಣ, ದಿಗಂಬರನಾಗಿ ಸಂಚರಿಸಿದ ಬುದ್ಧ,, ಉತ್ತಮವಾದ ಕುದುರೆಯನ್ನೇರಿದ ಕಲ್ಕಿ, ಇವರಿಂದ ಅಭಿನ್ನನಾದ ಕೋಸಲ ದೇಶದ ಅಧಿಪತಿಯಾಗಿ ಅವತರಿಸಿದ ರಾಮಚಂದ್ರನು ನಮ್ಮನ್ನು ಸಂರಕ್ಷಿಸಲಿ. ।।೮೬।।

ಸಂಕ್ಷೇಪವಾಗಿ ಹೇಳಿದ ರಾಮಚರಿತ್ರೆಯನ್ನು ಮೊದಲಿನಿಂದ ಸ್ವಲ್ಪ ವಿವರಿಸುವರು.

**ವಿಶ್ವಾಮಿತ್ರಾಧ್ವರೇ ಯೇನ ಮಾರೀಚ್ಯಾದ್ಯಾ ನಿಶಾಚರಾಃ ।**
**ಪಶ್ಯತೋ ಲಕ್ಷ್ಮಣಸ್ಯೈವ ಹತಾ ನೈಋತಪುಂಗವಾಃ ।।೮೭।।**

**ಯೇನ ಏವ** ಯಾವ ರಾಮಚಂದ್ರನಿಂದಲೇ, **ವಿಶ್ವಾಮಿತ್ರಾಧ್ವರೇ** ವಿಶ್ವಾಮಿತ್ರರ ಯಜ್ಞ ಪೂರ್ತಿಗಾಗಿ **ಲಕ್ಷ್ಮಣಸ್ಯ ಪಶ್ಯತಃ ಸತಃ** ಲಕ್ಷ್ಮಣ ನೋಡುತ್ತಿರುವಾಗಲೇ

ಅವನನ್ನು ಅಪೇಕ್ಷಿಸದೇ, **ನೈಋತಪುಂಗವಾಃ** ರಾಕ್ಷಸಶ್ರೇಷ್ಠರಾದ, **ಮಾರಿಚ್ಯಾದ್ಯಾಃ** ಮಾರೀಚ ಮೊದಲಾದ, **ನಿಶಾಚರಾಃ** ಅಸುರರು **ಹತಾಃ** ಕೊಲ್ಲಲ್ಪಟ್ಟರು.

**ತಾತ್ಪರ್ಯ-** ರಾಮಚಂದ್ರನು ಲಕ್ಷ್ಮಣನ ಸಹಾಯವಿಲ್ಲದೇ ವಿಶ್ವಾಮಿತ್ರರ ಯಜ್ಞಸಂರಕ್ಷಣೆಗಾಗಿ ರಾಕ್ಷಸರನ್ನು ಸಂಹರಿಸಿದನು. ಇಲ್ಲಿ ಮಾರೀಚ್ಯಾದ್ಯಾಃ ಎಂಬುವದು ಅತದ್ಗುಣಸಂವಿಜ್ಞಾನ ಬಹುವ್ರೀಹಿ ಎಂದು ತಿಳಿಯಬೇಕು. ಅಂದರೆ ಮಾರೀಚನನ್ನು ಬಿಟ್ಟು ಮಿಕ್ಕೆಲ್ಲರನ್ನು ಸಂಹರಿಸಿದನು ಎಂದು ಭಾವವು. ಈಗ ಮಾರೀಚನನ್ನು ದೂರ ಎಸೆದನು. ಅಥವಾ ಇಲ್ಲಿ ಪ್ರಾರಂಭದಿಂದ ಕಥಾ ಹೇಳದಿರುವದರಿಂದ ತದ್ಗುಣಸಂವಿಜ್ಞಾನವೆಂದೇ ಇಟ್ಟುಕೊಂಡು ಮಾರೀಚನನ್ನೂ ಸಂಹರಿಸಿದನೆಂಬ ಮುಂದಿನ ಕಥೆಯನ್ನು ಹೇಳಿರುವರೆಂದು ತಿಳಿಯಬೇಕು. ।।೮೭।।

**ಯೋ ಲೋಕವೀರಸಮಿತೌ ಧನುರೈಶಮುಗ್ರಂ**
**ಸೀತಾಸ್ವಯಂವರಮುಖೇ ತ್ರಿಶತೋಪನೇಯಮ್ ।**
**ಆದಾಯ ಬಾಲಗಜಲೀಲ ಇವೇಕ್ಷುಯಷ್ಟಿಂ**
**ಸಜ್ಜೀಕೃತಂ ನೃಪ ವಿಕೃಷ್ಯ ಬಭಂಜ ಮಧ್ಯೇ ।।೮೮।।**

**ಹೇ ನೃಪ** ರಾಜನೇ, **ಯಃ** ರಾಮಚಂದ್ರನು, **ಲೋಕವೀರಸಮಿತೌ** ಜಗತ್ತಿನಲ್ಲಿರುವ ಎಲ್ಲ ವೀರರ ಸಭೆಯಲ್ಲಿ **ಸೀತಾಸ್ವಯಂವರಮುಖೇ** ಸೀತಾಸ್ವಯಂವರ ಪ್ರಾರಂಭದಲ್ಲಿ, **ತ್ರಿಶತೋಪನೇಯಂ** ಮೂರು ನೂರು ಜನರಿಂದ ಸಮೀಪ ತರಲು ಯೋಗ್ಯವಾದ, **ಉಗ್ರಂ** ಕ್ರೂರವಾದ **ಐಶಂ** ಈಶ ಸಂಬಂಧಿಯಾದ **ಧನುಃ** ಬಿಲ್ಲನ್ನು, **ಆದಾಯ** ಸ್ವೀಕರಿಸಿ, **ಸಜ್ಜೀಕೃತಂ** ಜ್ಯಾಸಹಿತವನ್ನಾಗಿ ಮಾಡಿ, **ವಿಕೃಷ್ಯ** ಸೆಳೆದು, **ಮಧ್ಯೇ** ಮಧ್ಯದಲ್ಲಿ, **ಬಾಲಗಜಲೀಲಃ ಇವ** ಚಿಕ್ಕ ಆನೆಯಂತೆ ಶೃಂಗಾರಕ್ರಿಯೆ ಉಳ್ಳ (ಬಾಲಗಜಸ್ಯ ಲೀಲೇವ ಲೀಲಾ ಯಸ್ಯ ಸಃ) (ಅಥವಾ ಲೀಲಾಸು ಅಸ್ತೀತಿ ಲೀಲಾಃ ಬಾಲಗಜಶ್ಚಾಸೌ ಲೀಲಶ್ಚ ಬಾಲಗಜಲೀಲಃ ಇವ) ಶೃಂಗಾರ ಚೇಷ್ಟೆ ಉಳ್ಳ ಆನೆಯು, **ಇಕ್ಷುಯಷ್ಟಿಂ ಇವ** ಕಬ್ಬನ್ನು ಮುರಿಯುವಂತೆ ಅನಾಯಾಸವಾಗಿ **ಬಭಂಜ** ಮುರಿದನು.

**ತಾತ್ಪರ್ಯ-** ಸಕಲವೀರರ ಸಮಕ್ಷದಲ್ಲಿ ಅನೇಕ ಜನರು ತಂದಿಟ್ಟ ಭಯಂಕರವಾದ ರುದ್ರಧನಸ್ಸನ್ನು ಆನೆಯು ಕಬ್ಬನ್ನು ಮುರಿದಂತೆ ಅನಾಯಾಸವಾಗಿ ಮುರಿದನು.

**ವಿಶೇಷ ವಿಚಾರ** - ಇಲ್ಲಿ ಧನುಸ್ಸನ್ನು ತಂದವರು ಮೂರುನೂರು ಜನರು ಎಂದು ಹೇಳಿದೆ. ರಾಮಾಯಣದಲ್ಲಿ ಐವತ್ತುನೂರು ಜನರೆಂದು ಹೇಳಿದೆ. ಪದ್ಮಪುರಾಣದಲ್ಲಿ ಸೈನಿಕರಿಂದ ಎಂದು ಹೇಳಿದೆ. ಕಾರಣ ವಿರೋಧ ಕಾಣಿಸುವುದು.

ಇದಕ್ಕೆ ಸಮಾಧಾನ ಇಷ್ಟೇ ಮುಖ್ಯರಾದ ಕಿಂಕರರ ವಿವಕ್ಷೆಯಿಂದ ಭಾಗವತ ಹೊರಟಿದೆ. ರಾಮಾಯಣವು ಮುಖ್ಯ ಅಮುಖ್ಯ ಎಲ್ಲರನ್ನು ಹೇಳಲು ಹೊರಟಿದೆ. ಸೇನೆಯಲ್ಲಿ ಸೇರಿದವರು ಸೈನಿಕರು ಎಂದು ಸಾಮಾನ್ಯ ಸೈನಿಕರನ್ನು ಹೇಳುವದು ಪದ್ಮಪುರಾಣವು. ಅಂದರೆ ಐದುಸಾವಿರ ಜನರು ಒಟ್ಟು. ಅದರಲ್ಲಿ ಪ್ರಮುಖರು ಮೂರುನೂರು ಜನ. ಸೇನೆಯಲ್ಲಿ ಸೇರಿದವರೂ ಸಹ ಇವರಲ್ಲಿ ಇದ್ದರೆಂದು ಅಭಿಪ್ರಾಯವು ತೋರುವುದು.

ಆಚಾರ್ಯರು ಹೇಳದಿದ್ದರೂ ಪ್ರಾಚೀನವಾದ ಎರಡು ರಾಮಾಯಣದಲ್ಲಿ ಅಷ್ಟಚಕ್ರಮಂಜೂಷಯಾ ತಯಾ ಅಭಿಗುಪ್ತಂ ಎಂದು ಇರುವದರಿಂದ ಪೆಟ್ಟಿಗೆಯಿಂದ ಸಹಿತವಾಗಿ ತರಲ್ಪಟ್ಟಿತು ಎಂದು ಅರ್ಥವನ್ನು ತಿಳಿಯಬೇಕು. ಹೇಳದಿರುವದು ಅಯುಕ್ತತೆಗೆ ಕಾರಣವೇನಲ್ಲ ವಿರುದ್ಧವಾಗೇನು ಹೇಳಿಲ್ಲ. ||೮೮||

**ಜಿತ್ವಾತ್ಮರೂಪಗುಣಶೀಲವಯೋಽನುರೂಪಾಂ**
**ಸೀತಾಭಿಧಾಂ ಶ್ರಿಯಮುರಸ್ಯಭಿಲಬ್ಧಮಾನಾಮ್ ।**
**ಮಾರ್ಗೇ ವ್ರಜನ್ ಭೃಗುಪತೇರ್ವ್ಯನಯತ್ಪ್ರರೂಢಂ**
**ದರ್ಪಂ ಮಹೀಂ ಕೃತವತೋ ಹತರಾಜಬೀಜಾಮ್ ||೮೯||**

**ಉರಸಿ** ಹೃದಯದಲ್ಲಿ **ಅಭಿಲಬ್ಧಮಾನಾಂ** ಹೊಂದಲ್ಪಟ್ಟ ಸತ್ಕಾರ ಉಳ್ಳ, **ಆತ್ಮರೂಪಗುಣಶೀಲವಯೋಽನುರೂಪಾಂ** ತನಗೆ ರೂಪ, ಗುಣ, ಸ್ವಭಾವ, ವಯಸ್ಸುಗಳಿಂದ ಯೋಗ್ಯಳಾದ, **ಸೀತಾಭಿಧಾಂ** ಸೀತಾ ಎಂಬ ಹೆಸರುಳ್ಳ, **ಶ್ರಿಯಂ** ಲಕ್ಷ್ಮಿಯನ್ನು, **ಜಿತ್ವಾ** ಹೊಂದಿ, **ಮಾರ್ಗೇ** ಅಯೋಧ್ಯೆಯ ಮಾರ್ಗದಲ್ಲಿ, **ವ್ರಜನ್** ಹೋಗುವವನಾಗಿ, **ಪ್ರರೂಢಂ** ಅಭಿವೃದ್ಧವಾದ, **ದರ್ಪಂ** ಗರ್ವವನ್ನು ನಿಮಿತ್ತಮಾಡಿ, **ಹತರಾಜಬೀಜಾಂ** ನಿರ್ಮೂಲವಾದ ರಾಜಸಂತತಿ ಉಳ್ಳದ್ದನ್ನಾಗಿ **ಮಹೀಂ** ಭೂಮಿಯನ್ನು, **ಕೃತವತಃ** ಮಾಡಿದ **ಭೃಗುಪತೇಃ** ಪರಶುರಾಮದೇವರಿಂದ ತನಗೆ ಅಭೇದವನ್ನು ತೋರಿಸಿ ಮತ್ತೆ ತನ್ನನ್ನು ಬೇರೆಯಾಗಿ **ವ್ಯನಯತ್** ನಯನ ಮಾಡಿದನೋ (ಆದನೋ) ಅವನು ನಮ್ಮನ್ನು ರಕ್ಷಿಸಲಿ,

**''ಸಮೇತ್ಯ ಚೈಕ್ಯಂ ಜಗತೋಽಭಿಪಶ್ಯತಃ ದ್ವಿಧೈವ ಭೂತ್ವಾ ಭೃಗುವರ್ಯ ಆತ್ಮನಾ ।**
**ರಘೂತ್ತಮೇನೈಕ್ಯಮಗಾತ್ಸಮಕ್ಷಂ ಪ್ರದಾಯ ರಾಮಾಯ ಧನುರ್ವರಂ ತದಾ'' ||**
**ಮ.ಭಾ.ತಾ. ನಿ. ೪-೬೨ ||**

ಎಂದು ಆಚಾರ್ಯರು ಹೇಳಿದ ಪ್ರಕಾರ ಅರ್ಥವನ್ನು ತಿಳಿಯಬೇಕು. ಇನ್ನು ಭೃಗುಪತೇಃ ಪ್ರರೂಢಂ ದರ್ಪಂ ಧನುರ್ಭಂಗದ ಮಹಾನಾದವನ್ನು ಕೇಳಿ ಸಿಟ್ಟಿಗೆದ್ದ ಪರಶುರಾಮನ ದರ್ಪವನ್ನು ವ್ಯನಯತ್ ಪರಿಹರಿಸಿದನು. ಹೀಗೂ

ಅನ್ವಯ ಮಾಡಿ ಅರ್ಥ ಹೇಳಿರುವರು. ಆಗ ಕೇವಲ ಅಜ್ಞಜನರ ಮೋಹನಕ್ಕಾಗಿ ಲೌಕಿಕರಂತೆ ನಟನೆ ಮಾಡಿದನೆಂದು ತಿಳಿಯಬೇಕು. ॥೮೯॥

ಗುರ್ವರ್ಥೇ ಎಂಬ ಶ್ಲೋಕವನ್ನು ವಿವರಿಸುವರು.

**ಯಃ ಸತ್ಯಪಾಶಪರಿವೀತಪಿತುರ್ನಿದೇಶಂ**
**ಸ್ತ್ರೈಣಸ್ಯ ಚಾಪಿ ಶಿರಸಾ ಜಗೃಹೇ ಸಭಾರ್ಯಃ।**
**ರಾಜ್ಯಶ್ರಿಯಂ ಪ್ರಣಯಿನಃ ಸುಹೃದೋಽಧಿವಾಸಂ**
**ತ್ಯಕ್ತ್ವಾ ಯಯೌ ವನಮಸೂನಿವ ಮುಕ್ತಸಂಗಃ ॥೯೦॥**

**ಯಃ** ಶ್ರೀರಾಮಚಂದ್ರನು, **ಸ್ತ್ರೈಣಸ್ಯಾಪಿ** ಸ್ತ್ರೀಜಿತನಾಗಿದ್ದರೂ, **ಸತ್ಯಪಾಶ-ಪರಿವೀತಪಿತುಃ** ಸತ್ಯವೆಂಬ ಪಾಶದಿಂದ ಕಟ್ಟಲ್ಪಟ್ಟ ತಂದೆಯ, **ನಿದೇಶಂ** ಆಜ್ಞೆಯನ್ನು, **ಶಿರಸಾ** ತಲೆಬಾಗಿ **ಜಗೃಹೇ** ಸ್ವೀಕರಿಸಿದನು. **ಮುಕ್ತಸಂಗಃ** ಯೋಗಿಯಾದವನು, **ಅಸೂನ್ ಇವ** ಪ್ರಾಣವನ್ನು ಬಿಡುವಂತೆ, **ರಾಜ್ಯಶ್ರಿಯಂ** ರಾಜಲಕ್ಷ್ಮಿಯನ್ನು, **ಪ್ರಣಯಿನಃ** ಸ್ನೇಹಿತರನ್ನು **ಸುಹೃದಃ** ಬಂಧುಗಳನ್ನು **ಅಧಿವಾಸಂ** ಅರಮನೆಯನ್ನು, ಅಯೋಧ್ಯೆಯನ್ನು **ತ್ಯಕ್ತ್ವಾ** ಬಿಟ್ಟು **ಸಭಾರ್ಯಃ** ಹೆಂಡತಿಯಿಂದ ಕೂಡಿಕೊಂಡು **ವನಂ** ವನವನ್ನು ಕುರಿತು, **ಯಯೌ** ಹೋದನು. **ಮುಕ್ತಸಂಗಃ** ನಿತ್ಯದಲ್ಲಿ ಸಂಗರಹಿತ ಎಂದು ಅರ್ಥಮಾಡಿ ರಾಮನಿಗೂ ಅನ್ವಯ ಮಾಡಬಹುದು.

**ತಾತ್ಪರ್ಯ-** ಒಂದು ಸಲ ದಶರಥನು ಯುದ್ಧ ಮಾಡುವಾಗ ರಥದ ಕೀಲು ಬಿಚ್ಚಿದಾಗ ತನ್ನ ಬೆರಳನ್ನು ಇಟ್ಟು ಸಂರಕ್ಷಣ ಮಾಡಿದ್ದರಿಂದ ಕೈಕೇಯಿಗೆ ನೀನು ಬೇಡಿದ್ದನ್ನು ಕೊಡುವೆನೆಂದು ಹೇಳಿದ್ದನು. ಅನಂತರ ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡಬೇಕೆಂದು ನಿಶ್ಚಯಿಸಿದಾಗ ಕೈಕೇಯಿಯು ಭರತನಿಗೆ ರಾಜ್ಯವಾಗಬೇಕೆಂದು ರಾಮನು ವನಕ್ಕೆ ತೆರಳಬೇಕೆಂದು ಬೇಡಿದಳು. ಆಗ ಸತ್ಯವೆಂಬ ಪಾಶದಿಂದ ಕಟ್ಟಲ್ಪಟ್ಟ ದಶರಥನು ರಾಮನಿಗೆ ವನಕ್ಕೆ ಹೋಗೆಂದು ಅಪ್ಪಣೆ ಮಾಡಿದನು. ಆಗ ನಿತ್ಯಮುಕ್ತನಾದ ರಾಮನು ಯೋಗಿಯು ಪ್ರಾಣಗಳನ್ನು ಸಂತೋಷವಾಗಿ ಬಿಡುವಂತೆ ದುಸ್ತ್ಯಜವಾದ ರಾಜಲಕ್ಷ್ಮಿಯನ್ನು, ಸ್ನೇಹಿತರನ್ನು, ಬಂಧುಗಳನ್ನು, ಅಯೋಧ್ಯೆಯನ್ನು, ಬಿಟ್ಟು ಸೀತಾಸಮೇತನಾಗಿ ಅರಣ್ಯಕ್ಕೆ ತೆರಳಿದನು. ಇವನು ನಮ್ಮನ್ನು ರಕ್ಷಿಸಲಿ.

**ವಿಶೇಷಾರ್ಥ-** ಸತ್ಯಪಾಶಪರಿವೀತಸತೀ ಹೆಂಡತಿ ಎಂಬ ಅಪಾಶ ಪಾಶಭಿನ್ನ ಪಾಶಸದೃಶ ಪಾಶವಲ್ಲದಿದ್ದರೂ ಪಾಶದಂತೆ ಬಂಧಕಳಾದ ಹೆಂಡತಿಯೆಂಬ ಪಾಶದಿಂದ ಕಟ್ಟಲ್ಪಟ್ಟ ಎಂದು ಅರ್ಥ. ॥೯೦॥

**ರಕ್ಷಃಸ್ವಸುರ್ವ್ಯಕೃತ ರೂಪಮಶುದ್ಧಬುದ್ಧೇ-**
**ಸ್ತಸ್ಯಾಃ ಖರತ್ರಿಶಿರದೂಷಣಮುಖ್ಯಬಂಧೂನ್ ।**
**ಜಘ್ನೇ ಚತುರ್ದಶಸಹಸ್ರಮವಾರಣೀಯ-**
**ಕೋದಂಡಪಾಣಿರಟಮಾನ ಉವಾಸ ಕೃಚ್ಛ್ರಮ್ ॥೯॥**

**ಅಶುದ್ಧಬುದ್ಧೇಃ** ದುಷ್ಟಬುದ್ಧಿಯುಳ್ಳ, **ರಕ್ಷಃಸ್ವಸುಃ** ರಾವಣನ ತಂಗಿಯಾದ ಶೂರ್ಪಣಖೆಯ, **ರೂಪಂ** ರೂಪವನ್ನು, **ವ್ಯಕೃತ** ಕಿವಿ-ಮೂಗುಗಳನ್ನು ಲಕ್ಷ್ಮಣನಿಂದ ಕತ್ತರಿಸಿ ವಿಕಾರಗೊಳಿಸಿದನು. (ಈ ಅರ್ಥ ಬರಲು **ಅಟಮಾನಃ** ಎನ್ನುವಲ್ಲಿ ಆಟ, ಮಾ, ನಃ ಹೀಗೆ ಪದಚ್ಛೇದ ಮಾಡಿ **ತ್ವಂ** ನೀನು, **ನಃ** ನಮ್ಮ ಸಮೀಪದಲ್ಲಿ **ಮಾ, ಆಟ** ಸಂಚರಿಸ ಬೇಡ, ಲಕ್ಷ್ಮಣನ ಹತ್ತಿರ ಹೋಗು ಎಂದು ಅರ್ಥ ಮಾಡಬೇಕು. ''ಗಚ್ಛಾನುಜಂ ಮ ಇಹ ನ'' ಎಂದು ಆಚಾರ್ಯರು ಹೇಳಿರುವರು) **ಅವಾರಣೀಯಕೋದಂಡಪಾಣಿಃ** ಅನ್ಯರಿಂದ ಧಾರಣಮಾಡಲು ಅಶಕ್ಯವಾದ ಕೋದಂಡವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದ ರಾಮಚಂದ್ರನು, **ತಸ್ಯಾಃ** ಶೂರ್ಪಣಖೆಯ **ಖರತ್ರಿಶಿರದೂಷಣಮುಖ್ಯಬಂಧೂನ್** ಖರ, ತ್ರಿಶಿರ, ದೂಷಣವೆಂಬ ಮುಖ್ಯಬಂಧುಗಳನ್ನು, **ಜಘ್ನೇ** ಸಂಹಾರ ಮಾಡಿದನು. ಅವಾರಣೀಯಂ ಎಂಬ ಪಾಠವಿದ್ದಾಗ, ಸಹಸ್ರಂ ಎಂಬುವದಕ್ಕೆ ವಿಶೇಷಣ ಮತ್ತು **ಚತುರ್ದಶಸಹಸ್ರಂ** ಹದಿನಾಲ್ಕು ಸಾವಿರ ರಾಕ್ಷಸರನ್ನು, **ಜಘ್ನೇ** ಸಂಹಾರ ಮಾಡಿದನು. **ಅಟಮಾನಃ** ವನದಲ್ಲಿ ಸಂಚರಿಸುತ್ತಾ **ಕೃಚ್ಛ್ರಂ** ಕಷ್ಟದಿಂದ, **ಉವಾಸ** ವಾಸಮಾಡಿದನು. ಅಸುರಜನಮೋಹನಕ್ಕಾಗಿ ಹಾಗೆ ತೋರಿಸಿದನು.

**ತಾತ್ಪರ್ಯ-** ಅವಾರ್ಯವಾದ ಕೋದಂಡವನ್ನು ಧರಿಸಿದ ರಾಮಚಂದ್ರನು ರಾವಣನ ತಂಗಿಯನ್ನು ಲಕ್ಷ್ಮಣನಿಂದ ವಿಕೃತಗೊಳಿಸಿ, ಸಿಟ್ಟಿನಿಂದ ಯುದ್ಧಕ್ಕೆ ಬಂದ ಖರ,ದೂಷಣ,ತ್ರಿಶಿರ ಮೊದಲಾದ ಬಂಧುಗಳನ್ನು ವಾರಣೀಯವಾದ ಹದಿನಾಲ್ಕುಸಾವಿರ ರಾಕ್ಷಸರನ್ನು ಸಂಹರಿಸಿದನು. ವನದಲ್ಲಿ ಬಿಸಿಲಿನಿಂದ, ಬಾಯಾರಿಕೆಯಿಂದ ಬಳಲಿದವನಂತೆ ನಟಿಸುತ್ತಾ ವಾಸಮಾಡಿದನು. ॥೯॥

**ಸೀತಾಕಥಾಶ್ರವಣದೀಪಿತಹೃಚ್ಛಯೇನ**
**ಸೃಷ್ಟಂ ವಿಲೋಕ್ಯ ನೃಪತೇ ದಶಕಂಧರೇಣ ।**
**ಜಘ್ನೇ ಕೃ(ದ್ಭುತ)ತೈಣವಪುಷಾ ಶ್ರಮತೋಽಪಕೃಷ್ಟೋ**
**ಮಾರೀಚಮಾಶು ವಿಶಿಖೇನ ಯಥಾರಿಮುಗ್ರಃ ॥೧೦॥**

**ಹೇ ನೃಪತೇ** ರಾಜನೇ, ಶೂರ್ಪನಖೆಯ ಮುಖದಿಂದ, **ಸೀತಾಕಥಾಶ್ರವಣ-ದೀಪಿತಹೃಚ್ಛಯೇನ** ಸೀತಾದೇವಿಯ ಸೌಂದರ್ಯವಿಷಯಕವಾದ ವೃತ್ತಾಂತ-

ವನ್ನು ಕೇಳುವದರಿಂದ ಪ್ರಜ್ವಲಿತವಾದ ಕಾಮ ಉಳ್ಳ **ದಶಕಂಧರೇಣ** ಹತ್ತುತಲೆಯ ರಾವಣನಿಂದ, **ಸೃಷ್ಟಂ** ಪ್ರೇರಣೆಮಾಡಿ ಕಳಿಸಲ್ಪಟ್ಟ, **ಕೃತೈಣವಪುಷಾ** ಸ್ವೀಕೃತವಾದ ಜಿಂಕೆಯ ದೇಹದಿಂದ, **ಆಶ್ರಮತಃ** ಆಶ್ರಮದ (ಸಮೀಪೇ ಹತ್ತಿರ) (ವಿಚರಂತಂ ಸಂಚರಿಸುವದನ್ನು) **ವಿಲೋಕ್ಯ** ನೋಡಿ ಸೀತೆಯಿಂದ ಪ್ರೇರಿತನಾಗಿ, **ಆಶ್ರಮತಃ** ಕುಟೀರದಿಂದ **ಅಪಕೃಷ್ಟಃ** ದೂರ ಕರೆದೊಯ್ಯಲ್ಪಟ್ಟವನಾಗಿ, **ಮಾರೀಚಂ** ಮಾರೀಚನೆಂಬ ರಾಕ್ಷಸನನ್ನು, **ಆಶು** ಶೀಘ್ರವಾಗಿ, **ವಿಶಿಖೇನ** ಬಾಣದಿಂದ, **ಉಗ್ರಃ** ನರಸಿಂಹದೇವರು **ಅರಿಂ** ಹಿರಣ್ಯಕಶಿಪುವನ್ನು ಅಥವಾ ರುದ್ರದೇವರು, ಅಂಧಕನನ್ನು, ತ್ರಿಪುರನನ್ನು, **ಯಥಾ** ಹೇಗೋ, **ತಥಾ** ಹಾಗೆ, **ಜಘ್ನೇ** ಕೊಂದನು. **ಅದ್ಭುತೈಣವಪುಷಾ** ಎಂಬ ಪಾಠದಲ್ಲಿ ಬಂಗಾರರತ್ನಗಳಿಂದ ವಿರಚಿತವಾದ್ದರಿಂದ ಆಶ್ಚರ್ಯಕರವಾದ ಚಿಗರಿಯ ರೂಪ ತಾಳಿದ ಎಂದು ಅರ್ಥ ತಿಳಿಯಬೇಕು.

ಶೂರ್ಪಣಖೆಯು ತನ್ನ ಇಚ್ಛೆಯು ನೆರವೇರದಿದ್ದಾಗ ರಾವಣನಲ್ಲಿ ಹೋಗಿ ಸೀತಾದೇವಿಯ ಸೌಂದರ್ಯವನ್ನು ವರ್ಣಿಸಿದಳು. ಆಗ ರಾವಣನು ಮೋಹಿತನಾಗಿ, ವಂಚಿಸುವದಕ್ಕಾಗಿ ಮಾರೀಚನಿಗೆ ಹೇಳಿದನು. ಅವನು ಬಂಗಾರದ ಜಿಂಕೆಯ ವೇಷವನ್ನು ಧರಿಸಿ ಆಶ್ರಮದ ಸಮೀಪ ತಿರುಗಾಡಿದನು. ಸೀತಾದೇವಿಯು ಜಿಂಕೆಯನ್ನು ಹಿಡಿದು ತಾರೆಂದು ಬೇಡಿದಾಗ, ರಾಮಚಂದ್ರನು ಜಿಂಕೆಯನ್ನು ಬೆನ್ನಟ್ಟಿ ದೂರ ಹೋಗಿ ಸಂಹರಿಸಿದನು. ಸಾಯುವ ಮಾರೀಚನು ಲಕ್ಷ್ಮಣನನ್ನು ಕೂಗಿದನು. ರಾಮನ ಕೂಗೆಂದು ತಿಳಿದು ಸೀತೆಯನ್ನು ಕಾಯುತ್ತಿದ್ದ ಲಕ್ಷ್ಮಣನೂ ದೂರ ಹೋದಾಗ, ಸಂನ್ಯಾಸಿವೇಷದಿಂದ ಬಂದು ಸೀತಾದೇವಿಯನ್ನು ಅಪಹರಿಸಿದನು. ॥೯೨॥

**ರಕ್ಷೋಽಧಮೇನ ವೃಕವದ್ವಿಪಿನೇ ಸಮಕ್ಷಂ**
**ವೈದೇಹರಾಜದುಹಿತರ್ಯಪಯಾಪಿತಾಯಾಮ್ ।**
**ಭ್ರಾತ್ರಾ ವನೇ ಕೃಪಣವತ್ಪ್ರಿಯಯಾ ವಿಯುಕ್ತಃ**
**ಸ್ತ್ರೀಸಂಗಿನಾಮಿತಿ ರತಿಂ ಪ್ರಥಯಂಶ್ಚಚಾರ ॥೯೩॥**

**ವೃಕವತ್ (ಸ್ಥಿತೇನ)** ತೋಳದಂತೆ ಇರುವ (ವೇಷವನ್ನು ಬದಲಾಯಿಸಿದರು) (ವೃಣೋತಿ ಆವೃಣೋತೀತಿ ವೃಕಃ) **ರಕ್ಷೋಽಧಮೇನ** ನೀಚನಾದ ರಾವಣನಿಂದ **ಅಸಮಕ್ಷಂ** ರಾಮದೇವರಿಲ್ಲದಿರುವಾಗ, ಅವನೇ ರಕ್ಷಣೆಗಾಗಿ, **ಯಃ** ಯಾರು **ವಿಯುಕ್ತಃ** ವಿಶೇಷವಾಗಿ ನಿಯೋಜಿಸಲ್ಪಟ್ಟಿದ್ದನೋ, **ತೇನ** ಅಂಥಾ, **ಭ್ರಾತ್ರಾ** ತಮ್ಮನಿಂದ (**ರಹಿತಾಯಾಂ** ಇಲ್ಲದಂತಾದಾಗ) **ವಿಮುಕ್ತಃ** ಬಿಡಲ್ಪಟ್ಟಿದ್ದರಿಂದ (ವಿಯುಜ್ಯತೇ ಇತಿ ವಿಯಕ್ ಭಾವ ಪ್ರಧಾನ ವಿಯಕ್ತತಃ ವಿಯುಕ್ತತ್ವಾತ್) **ವೈದೇಹರಾಜದುಹಿತಂ**

ವಿದೇಹರಾಜನ ಮಗಳಾದ ಸೀತಾದೇವಿಯು, **ಅಪಯಾಪಿತಾಯಾಂ** ಕದ್ದೊಯ್ಯ- ಲ್ಪಡುತ್ತಿರಲು, ಅಪಹರಿಸಲ್ಪಡುತ್ತಿರಲು, **ಪ್ರಿಯಯಾ** ಹೆಂಡತಿಯಿಂದ, **ವಿಯುಕ್ತಃ** ವಿಯೋಗ ಉಳ್ಳವನಾಗಿ (ಲೋಕದೃಷ್ಟಿಯಿಂದ) **ಕೃಪಣವತ್** ದೀನನಂತೆ, ದುಃಖಿತನಂತೆ, **ಸ್ತ್ರೀಸಂಗಿನಾಂ** ಸ್ತ್ರೀಯರಲ್ಲಿ ಆಸಕ್ತರಾದವರಿಗೆ, **ಇತಿ** ಈ ರೀತಿಯಾದ **ರತಿಂ** ಆಸಕ್ತಿಯನ್ನು **ಗತಿಂ** ಅವಸ್ಥೆಯಾಗುವದನ್ನು **ಪ್ರಥಯನ್** ತೋರಿಸುವವನಾಗಿ, **ಭ್ರಾತ್ರಾ ಸಹ** ತಮ್ಮನ ಒಟ್ಟಿಗೆ **ವನೇ** ಅರಣ್ಯದಲ್ಲಿ, **ಚಚಾರ** ಸಂಚರಿಸಿದನು.

**ತಾತ್ಪರ್ಯ-** ರಾಮಲಕ್ಷ್ಮಣರಿಲ್ಲದಾಗ ವೇಷಾಂತರದಿಂದ ಸೀತಾದೇವಿಯನ್ನು ರಾವಣನು ಕರೆದುಕೊಂಡು ಹೋದದ್ದರಿಂದ ಅಜ್ಞಜನರಿಗೆ ಸ್ತ್ರೈಣರಾದ ವಿಟಪುರುಷರಿಗೆ ಈ ರೀತಿ ದುರವಸ್ಥೆ ಬರುವದೆಂದು ತೋರಿಸುವದಕ್ಕಾಗಿ, ವಿರಹ ದುಃಖದಿಂದ ಸಂಚರಿಸಿದಂತೆ ನಟಿಸಿದನು. ||೯೩||

**[೧]ದಗ್ಧ್ವಾತ್ಮಕೃತ್ಯಹತಕೃತ್ಯಮಹನ್ಕಬಂಧಂ**
**ಸಖ್ಯಂ ವಿಧಾಯ ಕಪಿಭಿರ್ದಯಿತಾಗತಿಂ ತೈಃ ।**
**ಬುಧ್ವಾಽಥ ವಾಲಿನಿ ಹತೇ ಪ್ಲವಗೇಂದ್ರಸೈನ್ಯೈ**
**ರ್ವೇಲಾಮಗಾತ್ಸಮನುಜೋಽಜಭವಾರ್ಚಿತಾಂಘ್ರಿಃ ||೯೪||**

**ಆತ್ಮಕೃತ್ಯಹತಕೃತ್ಯಂ, ಆತ್ಮಕೃತ್ಯ** ಸೀತಾದೇವಿಯ ರಕ್ಷಣವೆಂಬ ತನ್ನ (ರಾಮನ) ಕಾರ್ಯಕ್ಕಾಗಿ, **ಹತಕೃತ್ಯಂ** ನಿರ್ವ್ಯಾಪಾರನಾದ ಮರಣ ಹೊಂದಿದ, ಅಥವಾ **ಆತ್ಮನಃ** ತನ್ನ (ಜಟಾಯುವಿನ) **ಕೃತ್ಯೇನ** ಯುದ್ಧರೂಪ ವ್ಯಾಪಾರದಿಂದ, **ಹತಕೃತ್ಯಂ** ನಿಶ್ಚೇಷ್ಟಿತನಾದ ಅನಂತರ ಅಸುನೀಗಿದ ಜಟಾಯುವನ್ನು, **ದಗ್ಧ್ವಾ** ಅಗ್ನಿಸಂಸ್ಕಾರ ಮಾಡಿ, (ಹತ ಶಬ್ದಕ್ಕೆ ಆವೃತ್ತಿ ಮಾಡಿ, ಹತಕೃತ್ಯಂ ಹತಂ ಗತಂ ಕೃತ್ಯಂ ಪ್ರೇತಕಾರ್ಯಂ ಯಸ್ಯ ಸಃ ಹತಕೃತ್ಯಃ ಹತಶ್ಚಾಸೌ ಹತಕೃತ್ಯಶ್ಚ ಹತಹತಕೃತ್ಯಃ ತಂ ಸತ್ತ ಮತ್ತು ಪ್ರೇತಕಾರ್ಯವನ್ನು ಹೊಂದಿದ) **ಕಬಂಧಂ** ನನ್ನನ್ನು ಕೊಲ್ಲಲು ಕೈಚಾಚಿ ಬಂದ ಕಬಂಧನೆಂಬ ರಾಕ್ಷಸನನ್ನು, **ಅಹನ್** ಸಂಹಾರ ಮಾಡಿದನು. **ಕಪಿಭಿಃ** ಸುಗ್ರೀವಾದಿಗಳಿಂದ **ಸಖ್ಯಂ** ಸ್ನೇಹವನ್ನು **ವಿಧಾಯ** ಮಾಡಿ, **ವಾಲಿನಿ** ವಾಲಿಯು **ಹತೇ ಸತಿ** ತನ್ನಿಂದ ಕೊಲ್ಲಲ್ಪಡಲು, **ತೈಃ** ಹನುಮಂತ ಮೊದಲಾದವರಿಂದ

---

೧ ದಗ್ಧ್ವಾ ಎಂಬ ಶ್ಲೋಕವು ಪ್ರಕ್ಷಿಪ್ತವೆಂದು ವಿಜಯಧ್ವಜರು ವ್ಯಾಖ್ಯಾನ ಮಾಡಿಲ್ಲ. **ಕಥಾಸಂಗ್ರಾಹಕವಾದ್ದರಿಂದ (ಪ್ರಕ್ಷಿಪ್ತವೆಂಬ ನಿರ್ಣಯವಿಲ್ಲದ್ದರಿಂದ) ಗಂಗಾಜಲದಲ್ಲಿ ಸೇರಿದ ಇತರ ನೀರಿನಂತೆ ಈ ಶ್ಲೋಕವನ್ನೂ ವ್ಯಾಖ್ಯಾನ ಮಾಡುವುದಾಗಿ ಶ್ರೀಸತ್ಯಧರ್ಮರು, ಛಲಾರಿ ಶೇಷಾಚಾರ್ಯರು ಹೇಳಿದ್ದರಿಂದ ಅನೇಕ ಪುಸ್ತಕದಲ್ಲಿ ಶ್ಲೋಕವು ದೊರೆಯುವದರಿಂದ ಅನುವಾದ ಮಾಡುವೆನು -**

**ದಯಿತಾಗತಿಂ** ಹೆಂಡತಿಯ ಸ್ಥಿತಿಯನ್ನು, **ಬುಧ್ವಾ** ತಿಳಿದು **ಪ್ಲವಗೇಂದ್ರಸೈನ್ಯೈಃ** (ಸಹ) ಕಪಿಗಳ ರಾಜನಾದ ಸುಗ್ರೀವನ ಸೈನ್ಯದೊಡನೆ, **ವೇಲಾಂ** ಸಮುದ್ರತೀರಕ್ಕೆ **ಅಜಭವಾರ್ಚಿತಾಂಘ್ರಿಃ** ಬ್ರಹ್ಮರುದ್ರಾದಿಗಳಿಂದ ಪೂಜಿತ ಪಾದನಾದ, **ಮನುಜಃ** ಮನುಷ್ಯನಾಗಿ ಅವತರಿಸಿದ, **ಸಃ** ರಾಮಚಂದ್ರನು, **ಅಗಾತ್** ಹೋದನು.

ಸಃ ಮನುಜಃ (ಕಾಕುಸ್ವರಃ) ಮನುಷ್ಯನೇನು? ನ ಮನುಜಃ ಮನುಷ್ಯನಲ್ಲಾ ಹೀಗೂ ಅರ್ಥ. ಅಥವಾ **ಯಃ ಮನುಜಃ** ಯಾವ ಮನುಷ್ಯನಾಗಿ ಅವತರಿಸಿದ **ಸಃ ತ್ವಂ** ನೀನು, **ಅಜ** ಹರಿಯೇ **ಅರ್ಚಿತಾಂಘ್ರಿಃ** ಪೂಜಿತಪಾದನು, **ಭವ** ಆಗು ಎಂದು ಶುಕಾಚಾರ್ಯರು ಪ್ರಾರ್ಥಿಸುವರು ಹೀಗೂ ವ್ಯಾಖ್ಯಾನ ಮಾಡಿರುವರು.

**ತಾತ್ಪರ್ಯ-** ಸೀತಾದೇವಿಯು ಕಾಣದಾದಾಗ ಹುಡುಕುತ್ತಾ ಹೊರಟನು. ಮಾರ್ಗದಲ್ಲಿ ಸೀತಾದೇವಿಯನ್ನು ರಾವಣನಿಂದ ಬಿಡಿಸಲು ಅವನೊಡನೆ ಯುದ್ಧವನ್ನು ಮಾಡಿ ಅವನ ಹೊಡೆತದಿಂದ ನಿರ್ವ್ಯಾಪಾರನಾಗಿ ಬಿದ್ದಿದ್ದ ಜಟಾಯುಪಕ್ಷಿಯು ರಾಮನಿಗೆ ಸಮಾಚಾರವನ್ನು ಹೇಳಿ ಅಸು ನೀಗಿತು. ಆಗ ಅದಕ್ಕೆ ಅಗ್ನಿಸಂಸ್ಕಾರ ಪ್ರೇತಕಾರ್ಯವನ್ನು ಮುಗಿಸಿದನು. ಕಬಂಧನನ್ನು ಕೊಂದನು. ಆಮೇಲೆ ಸುಗ್ರೀವನೊಡನೆ ಸ್ನೇಹ ಮಾಡಿದನು. ವಾಲಿಯನ್ನು ಸಂಹರಿಸಿದನು. ಹನುಮಂತ ಮೊದಲಾದವರು ಸೀತೆಯನ್ನು ಹುಡುಕಿ ಲಂಕೆಯಲ್ಲಿರುವ ಸಮಾಚಾರವನ್ನು ತಂದ ಮೇಲೆ ಕಪಿಸೈನ್ಯದೊಡನೆ ಸಮುದ್ರತೀರಕ್ಕೆ ಬಂದನು. ಅಲ್ಲಿ ಮೂರುದಿನ ದಾರಿ ನೋಡಿದರೂ ಸಮುದ್ರ ರಾಜನು ದಾರಿ ನೀಡದಿರುವಾಗ ನಡೆದ ವೃತ್ತಾಂತ ಮುಂದಿನ ಶ್ಲೋಕದಿಂದ ಹೇಳುವರು. ॥೯॥

ಹಿಂದಿನ ಶ್ಲೋಕದಲ್ಲಿ ಮನುಜ ಪದವನ್ನು ಉಪಯೋಗಿಸಿದ್ದರಿಂದ ವಿಪರೀತ ಜ್ಞಾನದಿಂದ ಮಂದಮತಿಗಳು ದುರ್ಗತಿಯನ್ನು ಹೊಂದುವರು. ಹೀಗಾಗಬಾರದೆಂದು ಅನೇಕ ಶ್ಲೋಕಗಳಿಂದ ಅಭಿಪ್ರಾಯ ತಿಳಿಸುವುದಕ್ಕಾಗಿ ಮಿಕ್ಕಾವ ದೇವತೆಗಳಲ್ಲಿ ಇಲ್ಲದಿರುವ ಅಸಾಧಾರಣ ಗುಣಗಳನ್ನು ವರ್ಣಿಸುವರು.

ಶ್ರೀರಾಮಚಂದ್ರನು ಸಾಕ್ಷಾತ್ ನಾರಾಯಣಾವತಾರನು, ಯಃ ಕಶ್ಚಿತ್ ವ್ಯಕ್ತಿಯಲ್ಲ. ಅವನ ಸೀತಾವಿರಹ ದುಃಖಪ್ರದರ್ಶನವು ಅಸುರಮೋಹನಕ್ಕಾಗಿ ಮತ್ತು ಮನುಷ್ಯರಾಗಿ ಜನಿಸಿದಾಗ ಅವರಂತೆಯೇ ಇರಬೇಕೆಂದು ದೇವತೆಗಳಿಗೆ ತಿಳಿಸುವುದಕ್ಕಾಗಿ ಎಂದು ಇಲ್ಲಿಯ ಶ್ಲೋಕಗಳಿಂದಲೇ ತಿಳಿಯಬಹುದಾಗಿದೆ ಎಂಬ ಅಭಿಪ್ರಾಯದಿಂದ ಅವನ ಮಾಹಾತ್ಮ್ಯವನ್ನು ವರ್ಣಿಸುವರು.

**ಯದ್ರೋಷತೀವ್ರಪರಿವೃತ್ತಕಟಾಕ್ಷಪಾತ**
**ಸಂಭ್ರಾಂತನಕ್ರಮಕರೋ ಭಯಗೀರ್ಣಘೋಷಃ ।**

**ಸಿಂಧುಃ ಶಿರಸ್ಯರ್ಹಣಂ ಪರಿಗೃಹ್ಯ ರೂಪೀ**
**ಪಾದಾರವಿಂದಮುಪಗಮ್ಯ ಬಭಾಷ ಏತತ್ ॥೯೫॥**

**ಯದ್ರೋಷತೀವ್ರಪರಿವೃತ್ತಕಟಾಕ್ಷಪಾತಸಂಭ್ರಾಂತನಕ್ರಮಕರಃ, ಯಸ್ಯ** ಯಾವ ರಾಮಚಂದ್ರನು ತೋರಿಸಿದ, **ರೋಷೇಣ** ಸಿಟ್ಟಿನಿಂದ, **ತೀವ್ರ** ವೇಗವಾಗಿ, **ಪರಿವೃತ್ತ** ತಿರುಗಿಸಲ್ಪಟ್ಟ, **ಕಟಾಕ್ಷ** ಕಣ್ಣಿನ ತುದಿಯು, **ಪಾತ** ಬೀಳುವದರಿಂದ (ರಾಮನ ಕೋಪಾಗ್ನಿಯುಕ್ತ ತುದಿಗಣ್ಣೋಟದಿಂದ) **ಸಂಭ್ರಾಂತ** ಅತ್ತಿತ್ತ ಚಲಿಸುವ **ನಕ್ರಾಃ (ಅವಹರಾಃ** ಹಾವು ಮೀನುಗಳು) **ಮಕರಾಃ** ಮೊಸಳೆಗಳುಳ್ಳ **ಭಯಗೀರ್ಣಘೋಷಃ** ಭಯದಿಂದ ನಷ್ಟವಾದ ಶಬ್ದ ಉಳ್ಳ, **ಸಿಂಧುಃ** ಸಮುದ್ರನು, **ರೂಪೀ** ಮೂರ್ತಿಮಂತನಾಗಿ, **ಶಿರಸಿ** ತಲೆಯ ಮೇಲೆ, **ಅರ್ಹಣಂ** ಪೂಜಾ ಸಾಮಗ್ರಿಗಳನ್ನು **ಪರಿಗೃಹ್ಯ** ತೆಗೆದುಕೊಂಡು, **ಪಾದಾರವಿಂದಂ** ಪಾದಕಮಲಗಳನ್ನು **ಉಪಗಮ್ಯ** ಹೊಂದಿ, **ಏತತ್** ಮುಂದೆ ಹೇಳುವುದನ್ನು **ಬಭಾಷೇ** ಮಾತನಾಡಿದನು.

ವರುಣನು ತನ್ನಿಂದ ಅಭಿಮನ್ಯಮಾನವಾದ ಜಲಪುತ್ರಿಯಾದ ಧಾತ್ರಿಯ ಜನಕವಾದದ್ದೆಂಬ ಸಂಬಂಧದಿಂದ (ಅದ್ಭ್ಯಃ ಪೃಥಿವೀ, ಪದ್ಭ್ಯಾಂ ಭೂಮಿಃ ಎಂದು ಶ್ರುತಿ ಇರುವದು) ತನ್ನಿಂದ ಅಭಿಮನ್ಯಮಾನ ಜಲದಲ್ಲಿ ಹುಟ್ಟಿದ್ದು ಪದ್ಮ ಈ ಸಂಬಂಧ, ಮತ್ತು ತನ್ನ ಪತ್ನಿ ಗಂಗಾಜನಕವಾದದ್ದರಿಂದಲೂ ಪಾದಪದ್ಮವನ್ನು ಹೊಂದಿದನು. ಶ್ರೀರಾಮನು ದಯಾಮಾಡುವನು ಎಂದು ತಿಳಿಯಬೇಕು.

**ತಾತ್ಪರ್ಯ-** ಸಮುದ್ರ ತೀರದಲ್ಲಿ ವಾಸಮಾಡಿದ ರಾಮಚಂದ್ರನು ಎದ್ದು ಬರದಿರುವ ಸಮುದ್ರರಾಜನ ಮೇಲೆ ರೋಷದಿಂದ ನೋಡಿದನು. ಆ ನೋಟದಿಂದ ಎಲ್ಲ ಜಲಚರಪ್ರಾಣಿಗಳು ಭಯಗೊಂಡವು. ಆಗ ಸಮುದ್ರರಾಜನು ಭಯದಿಂದ ನಿಶ್ಶಬ್ದನಾದನು. ಸಾಕಾರನಾಗಿ, ತಲೆಯ ಮೇಲೆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಬಂದು ಶ್ರೀರಾಮನ ಪಾದಕಮಲಗಳಿಗೆ ಎರಗಿ ಪ್ರಾರ್ಥನೆ ಮಾಡಿದನು. ॥೯೫॥

ಇಲ್ಲಿಯವರೆಗೆ ಏಕೆ ಬರಲಿಲ್ಲ? ಎಂಬ ಪ್ರಶ್ನೆಗೆ ಎಡೆ ನೀಡದೆ ಸಮುದ್ರನು ಸಮುದ್ರಶಯನನಿಗೆ ತನ್ನ ಅಜ್ಞಾನವನ್ನು ವಿಜ್ಞಾಪಿಸಿದನು-

**ತಂ ತ್ವಾ ವಯಂ ಜಡಧಿಯೋ ನ ವಿದಾಮ ಭೂಮನ್**
**ಕೂಟಸ್ಥಮಾದಿಪುರುಷಂ ಜಗತಾಮಧೀಶಮ್ ।**
**ತ್ವಂ ಸತ್ವತಃ ಸುರಗಣಾನ್ ರಜಸಃ ಪ್ರಜೇಶಾನ್**
**ಮನ್ಯೋಶ್ಚ ಭೂತಪತಯಃ ಸ ಭವಾನ್ ಗುಣೇಶಃ ॥೯೬॥**

**ಹೇ ಭೂಮನ್** ಪೂರ್ಣನೇ, **ಕೂಟಸ್ಥಂ** ನಿರ್ವಿಕಾರನಾದ, **ಆದಿಪುರುಷಂ** ಪುರಾತನ ಪುರುಷನಾದ, **ಜಗತಾಂ** ಜಗತ್ತಿಗೆ ಪ್ರಾಣಿಗಳಿಗೆ (ಜಗತ್ಪ್ರಾಣ-ಸಮೀರಣಃ ಎಂದು ಅಮರವಿದೆ) **ಅಧೀಶಂ** ಒಡೆಯನಾದ, **ಯಃ ತ್ವಂ** ಯಾವ ನೀನು **ಸತ್ವತಃ** ಸತ್ವಗುಣದಿಂದ, **ಸುರಗಣಾನ್** ದೇವತೆಗಳ ಸಮೂಹವನ್ನು, **ರಜಸಃ** ರಜೋಗುಣದಿಂದ, **ಪ್ರಜೇಶಾನ್** ಮನುಷ್ಯರನ್ನು, **ಮನ್ಯೋಃ** ಮನ್ಯು ಕೋಪ ಅದಕ್ಕೆ ಕಾರಣವಾದ ತಮೋಗುಣದಿಂದ, **ಭೂತಪತಯಃ** ಬ್ರಹ್ಮರಾಕ್ಷಸ ಮೊದಲಾದ ಅಸುರರನ್ನು **ಅಸ್ರಾಕ್ಷೀಃ** ಸೃಜಿಸಿದೆಯೋ, **ಸಃ ಭವಾನ್** ಆ ನೀನು, **ಗುಣೇಶಃ** ಸತ್ವಾದಿಗುಣ ನಿಯಾಮಕನು, **ಇತಿ** ಎಂದು **ಜಡಧಿಯಃ** ಅಜ್ಞಾನಿಗಳಾದ, **ವಯಂ** ನಾವು **ನ ವಿದಾಮಃ** ತಿಳಿಯಲಾರೆವು.

**ತಾತ್ಪರ್ಯ–** ಹೇ ಪೂರ್ಣಪುರುಷನೇ ನೀನು ನಿರ್ವಿಕಾರನು. ಜಗದೊಡೆಯನು ಸತ್ವಾದಿಗುಣಗಳಿಂದ ಸೃಷ್ಟಿಕರ್ತನು. ಹೀಗಿದ್ದರೂ ನಿಯಾಮಕನಾದ್ದರಿಂದ ಗುಣತ್ರಯಗಳ ಬಾಧೆ ನಿನಗಿಲ್ಲ, ಮಂದಮತಿಯಾದ ನಾನು ತಿಳಿಯದೇ ಅಪರಾಧ ಮಾಡಿದೆನು ಎಂದು ಪ್ರಾರ್ಥಿಸಿದನು. ಇಲ್ಲಿ ಶಾಸ್ತ್ರದಲ್ಲಿ ವಿಷ್ಣುಲಕ್ಷಣವೆಂದು ಸಿದ್ಧವಾದ ಜಗತ್ಕರ್ತೃತ್ವವನ್ನು ಹೇಳಿ ರಾಮಚಂದ್ರನು ಸಾಕ್ಷಾತ್ ನಾರಾಯಣನೇ ಎಂದು ಸಿದ್ಧಪಡಿಸುವನು. ||೯೬||

ವರುಣನ ವಚನವನ್ನೇ ವಿವರಿಸುವರು -

**ಕಾಮಂ ಪ್ರಯಾಹಿ ಜಹಿ ವಿಶ್ರವಸೋಽವಮೇಹಂ**
**ತ್ರೈಲೋಕ್ಯರಾವಣಮವಾಪ್ನುಹಿ ವೀರ ಪತ್ನೀಮ್ ।**
**ಬಧ್ನೀಹಿ ಸೇತುಮಿಹ ತೇ ಯಶಸೋ ವಿತತ್ಯೈ**
**ಗಾಯಂತಿ ದಿಗ್ವಿಜಯಿನೋ ಯಮುಪೇತ್ಯ ಭೂಪಾಃ ||೯೭||**

**ಹೇ ವೀರ** ಸರ್ವಸಮರ್ಥನಾದ ರಾಮಚಂದ್ರನೇ, **ಕಾಮಂ** ನಿನ್ನ ಇಚ್ಛಾನುಸಾರ **ಪ್ರಯಾಹಿ** ಪ್ರಯಾಣ ಮಾಡು, **ವಿಶ್ರವಸಃ** ವಿಶ್ರವಸ ಋಷಿಯ **ಅವಮೇಹಂ** ಮಲಸದೃಶನಾದ **ತ್ರೈಲೋಕ್ಯರಾವಣಂ** ಮೂರು ಲೋಕಗಳನ್ನು ಅಳಿಸುವ ರಾವಣನನ್ನು (ರಾವಯತಿ ಇತಿ ರಾವಣಃ) (**ವಿಶ್ರವಸಃ** ಋಷಿಗಿಂತ **ಅವಮಾ** ನೀಚವಾದ, **ಈಹಾ** ವ್ಯಾಪಾರವುಳ್ಳ (ಆದ್ದರಿಂದ ಋಷಿಕುಮಾರ- ನಾಗಲು ಅಯೋಗ್ಯನಾದ) **ಜಹಿ** ಸಂಹಾರ ಮಾಡು, **ಪತ್ನೀಂ** ಹೆಂಡತಿಯನ್ನು, **ಅವಾಪ್ನುಹಿ** ಪಡೆಯುವಿ, **ಇಹ** ನನ್ನಲ್ಲಿ **ತೇ** ನಿನ್ನ **ಯಶಸಃ** ಕೀರ್ತಿಯ, **ವಿತತ್ಯೈ** ವಿಸ್ತಾರವಾಗಲು, **ಸೇತುಂ ಬಧ್ನೀಹಿ** ಕಟ್ಟು, **ದಿಗ್ವಿಜಯಿನಃ** ವಿಜಯಶಾಲಿಯಾದ, **ತೇ** ನಿನ್ನ ಸಂಬಂಧಿ

ಯಾದ, **ಯಂ** ಸೇತುವೆಯನ್ನು, **ಉಪೇತ್ಯ** ಹೊಂದಿ **ದಿಗ್ವಿಜಯಿನಃ** ವಿಜಯಿಗಳಾದ, **ಭೂಪಾಃ** ರಾಜರುಗಳು, **ಗಾಯಂತಿ** ಗಾನ ಮಾಡುವರು.

**ತಾತ್ಪರ್ಯ-** ಹೇ ಸಮರ್ಥನಾದ ರಾಮಚಂದ್ರನೇ ನಿನ್ನ ಇಚ್ಛಾನುಸಾರ ಸಮುದ್ರವನ್ನು ಅವಶ್ಯವಾಗಿ ದಾಟು. ನಿನಗೆ ನನ್ನ ನೀರುಗಳೇನು ಪ್ರತಿಬಂಧಕಗಳಲ್ಲ. ನಿನ್ನ ದಯೆಯಿಂದ ಕಪಿಗಳಿಗೂ ದಾಟುವುದು ಅಸಾಧ್ಯವೇನಲ್ಲ. ಆದರೂ ನಿನ್ನ ಕೀರ್ತಿಯು ವಿಸ್ತಾರವಾಗಲು ಸೇತುವೆಯನ್ನು ಕಟ್ಟು. ಮುಂದೆ ದಿಗ್ವಿಜಯಿಗಳಾದ ರಾಜರುಗಳು ಈ ಸೇತುವೆಯನ್ನು ನೋಡಿ ನಿನ್ನ ಪರಾಕ್ರಮವನ್ನು ವರ್ಣಿಸುವಂತಾಗುವದು. ಲಂಕೆಗೆ ಹೋಗಿ ಲೋಕಕಂಟಕನಾದ, ವಿಶ್ರವಸಋಷಿಯ ಮಲದಂತಿರುವ ಅವನ ಪುತ್ರನಾಗಲು ಅಯೋಗ್ಯನಾದ ರಾವಣನನ್ನು ಸಂಹಾರಮಾಡಿ ನಿನ್ನ ಪತ್ನಿಯನ್ನು ಹೊಂದು. ಹೇಗೆ ದೇಹದಿಂದ ಹೊರಬಂದ ಮಲವು ನಾಯಿಯಿಂದ ತಿನ್ನಲು ಆಹಾರವಾಗುವದೋ ಅದರಂತೆ ಆ ರಾವಣನು ವಿಶ್ರವಸನ ದೇಹದಿಂದ ಹೊರಟವನಾದ್ದರಿಂದ ಮಲಸ್ಥಾನದಲ್ಲಿರುವನು. ನಿನ್ನ ಬಾಣದಿಂದ ಮೃತನಾಗಿ ನಾಯಿಗೆ ಆಹಾರವಾಗಲಿ ಎಂದು ಸೂಚಿಸಲು ಅವಮೇಹಂ ಎಂದಿದ್ದಾರೆ.

ಸಮುದ್ರರಾಜನ ಪ್ರಾರ್ಥನೆಯಂತೆ ಮಾಡಿದ ವ್ಯಾಪಾರವನ್ನು ಹೇಳುವರು-

**ಬಧ್ವೋದಧೌ ರಘುಪತಿರ್ವಿವಿಧಾದ್ರಿಕೂಟೈಃ**
**ಸೇತುಂ ಕಪೀಂದ್ರಕರಕಂಪಿತಭೂರುಹಾಂಗೈಃ ।**
**ಸುಗ್ರೀವನೀಲಹನುಮತ್ಪ್ರಮುಖೈ(ರನೀಕೈ)ರ್ನರೇಂದ್ರೈ-**
**ರ್ಲಂಕಾಂ ವೀಭಿಷಣದೃಶಾऽವಿಶದಗ್ರದಗ್ಧಾಮ್ ॥೯೮॥**

**ರಘುಪತಿಃ** ರಾಮಚಂದ್ರನು, **ಕಪೀಂದ್ರಕರಕಂಪಿತಭೂರುಹಾಂಗೈಃ, ಕಪೀಂದ್ರ** ಬಲಿಷ್ಠ ಕಪಿಗಳ **ಕರ** ಕೈಗಳಿಂದ **ಕಂಪಿತ** ಚಲಿಸಲ್ಪಟ್ಟ, **ಭೂರುಹ** ಗಿಡಗಳ **ಅಂಗೈಃ** ಟೊಂಗೆಗಳುಳ್ಳ **ವಿವಿಧಾದ್ರಿಕೂಟೈಃ** ಅನೇಕ ಪರ್ವತಗಳ ಶಿಖರಗಳಿಂದ, **ಸುಗ್ರೀವನೀಲಹನುಮತ್ಪ್ರಮುಖೈಃ** ಸುಗ್ರೀವ, ನೀಲ ಹನುಮಂತ ಮೊದಲಾದವರಿಂದ **ನರೇಂದ್ರೈಃ** ರಾಜರಿಂದ **ಉದಧೌ** ಸಮುದ್ರದಲ್ಲಿ, **ಸೇತುಂ** ಸೇತುವೆಯನ್ನು, **ಬಧ್ವಾ** ಕಟ್ಟಿಸಿ, **ಅಗ್ರದಗ್ಧಾಂ** ಸೀತಾನ್ವೇಷಣೆಗೆ ಹೋದಾಗ ಹನುಮಂತನಿಂದ ಮುಂಚೆಯೇ ಸುಡಲ್ಪಟ್ಟ, **ಲಂಕಾಂ** ಲಂಕಾಪಟ್ಟಣವನ್ನು, **ವಿಭೀಷಣದೃಶಾ** ವಿಭೀಷಣನ ಬುದ್ಧಿಯಿಂದ (ತೋರಿಸಿದ ಮಾರ್ಗದಿಂದ) **ಸುಗ್ರೀವನೀಲಹನುಮತ್ಪ್ರಮುಖೈಃ ಅನೀಕೈಃ ಸಹ** ಸುಗ್ರೀವಪ್ರಧಾನವಾದ ಸೈನ್ಯದೊಡನೆ **ಆಶು** ಶೀಘ್ರದಲ್ಲಿ, **ಆವಿಶತ್** ಪ್ರವೇಶ ಮಾಡಿದನು. ಸೇತುವೆಯನ್ನು ಕಟ್ಟುವ ಸಾಮರ್ಥ್ಯ ರಾಮನದೇ ಎಂದು ತಿಳಿಸಲು, ಬಧ್ವಾ ಎಂದು ಅಣಿಜಂತ ಪ್ರಯೋಗ ಮಾಡಿರುವರು.

ಶ್ರೀರಾಮಚಂದ್ರನು ಸುಗ್ರೀವ ಮೊದಲಾದವರಿಂದ, ಕಪಿಗಳು ತಂದುಕೊಡುವ ಪರ್ವತಗಳಿಂದ ಸೇತುವೆಯನ್ನು ಕಟ್ಟಿಸಿದನು. ವಿಭೀಷಣನು ತೋರಿಸಿದ ಮಾರ್ಗದಿಂದ ಸೈನ್ಯಸಮೇತನಾಗಿ ಮೊದಲೇ ಹನುಮಂತನಿಂದ ಸುಡಲ್ಪಟ್ಟ ಲಂಕಾವನ್ನು ಪ್ರವೇಶಮಾಡಿದನು.

ಯಾವಾಗ ರಾಮನು ಲಂಕೆಯನ್ನು ಪ್ರವೇಶಿಸಿದನೋ ಆಗ ಅದು ಯಾವ ಯಾವ ಅವಸ್ಥೆಯನ್ನು ಹೊಂದಿತು ಎಂದು ಹೇಳುವರು -

**ಸಾ ವಾನರೇಂದ್ರಬಲರುದ್ಧವಿಹಾರಕೋಷ್ಠ-**
**ಸದ್ವಾರಗೋಪುರಸದೋವಲಭೀವಿಟಂಕಾ ।**
**ನಿರ್ಭಜ್ಯಮಾನಧಿಷಣಧ್ವಜಹೇಮಕುಂಭ-**
**ಶೃಂಗಾಟಕಾಗಜಕುಲೈರ್ಹ್ರದಿನೀವ ಘೂರ್ಣಾ ॥೯॥**

**ಸಾ** ಆ ಲಂಕೆಯು, **ವಾನರೇಂದ್ರ** ವಾನರರಾಜರ **ಬಲ** ಸೈನ್ಯದಿಂದ, **ರುದ್ಧ** ನಿವಾರಿಸಲ್ಪಟ್ಟ (ನಾಶಮಾಡಿದ) **ವಿಹಾರ** ಕ್ರೀಡಾಸ್ಥಾನ, **ಕೋಷ್ಠ** ಮನೆಯ ಒಳಗಿರುವ ಕೋಣೆಗಳು ಅಥವಾ ಉಗ್ರಾಣಗಳು, **ಸದ್ವಾರ** ಸಭೆಗಳ ಬಾಗಿಲು (ಉತ್ತಮ ಬಾಗಿಲು) **ಗೋಪುರ** ಪಟ್ಟಣದ ಹೆಬ್ಬಾಗಿಲು, **ಸದಃ** ಸಭಾಸ್ಥಾನ, **ವಲಭೀ** (ಗೋಪಾನಸಿ) ಮನೆಯ ಸೂರಿಗೆ ಆಧಾರವಾದ ಮರದಪಟ್ಟಿ (ಹೆಂಚು ಹೊದಿಸುವ ಇಳಿಜಾರು ಛಾವಣಿಯ ಸೂರಿಗೆ ಆಧಾರವಾದ ಮರದಪಟ್ಟಿ) **ವಿಟಂಕಾ** ಪಕ್ಷಿಯ ಗೂಡುಗಳುಳ್ಳದ್ದು, ಅಥವಾ **ಉಲ್ಲೋಚ** ಅಂದರೆ ಬಟ್ಟೆಯ ಛತ್ತು (ಚಪ್ಪರ ಉಳ್ಳದ್ದು) **ನಿರ್ಭಜ್ಯಮಾನ** ಮುರಿಯಲ್ಪಟ್ಟ, **ಧಿಷಣ** ಮನೆಗಳ, **ಧ್ವಜ** ಪತಾಕೆಗಳು, **ಹೇಮಕುಂಭ** ಮನೆಯ ಮೇಲಿರಿಸಿದ ಬಂಗಾರದ ಕಲಶಗಳು, **ಶೃಂಗಾಟಕಾ** ನಾಲ್ಕು ಮಾರ್ಗಗಳು ಸೇರುವ ಸ್ಥಾನ (ಚೌಕು) ಉಳ್ಳದ್ದು, **ಅಭೂತ್** ಆಯಿತು, **ಗಜಕುಲೈಃ** ಆನೆಗಳ ಸಮೂಹದಿಂದ **ಹ್ರದಿನೀ ಇವ** ನದಿಯಂತೆ, **ಘೂರ್ಣಾ** ಕಂಪಿಸಿತು (ಚಲಿಸಿತು) **ಸಾವಾಸಾಪಿ** ಆ ಲಂಕೆಯಾದರೂ, **ನರೇಂದ್ರ** ರಾಮನ ಸೇನೆಯಿಂದ ಹೀಗೂ ಅರ್ಥ ಮಾಡಬಹುದು.

**ತಾತ್ಪರ್ಯ-** ಲಂಕೆಯನ್ನು ಪ್ರವೇಶ ಮಾಡಿದೊಡನೇ ಉತ್ಸಾಹದಿಂದ ನಾನು ತಾನೆಂದು ಮುಂದೆಬಿದ್ದು ಲೆಕ್ಕವಿಲ್ಲದ ಕಪಿಸೈನ್ಯವು ಅಲ್ಲಿರುವ ಕ್ರೀಡಾಸ್ಥಾನಗಳನ್ನು ಸಭಾಸ್ಥಾನಗಳನ್ನು ಮನೆಗಳ ಮುಂಭಾಗಗಳನ್ನು ಕೆಡವಿದವು. ಪತಾಕೆಗಳನ್ನು ಮುರಿದು ಕಲಶಗಳನ್ನು ಕಿತ್ತು ಚತುಷ್ಪಥ (ಚೌಕ)ಗಳನ್ನು ನಾಶ ಮಾಡಿದವು. ಈ ಕಪಿಸೈನ್ಯದ ಹಾವಳಿಯಿಂದ ಲಂಕಾಪಟ್ಟಣವು ಆನೆಗಳು ಪ್ರವೇಶಿಸಿದ ನದಿಯಂತೆ ಭಯದಿಂದ ನಡುಗಿತು. ॥೯॥

**ರಕ್ಷಃಪತಿಸ್ತದವಲೋಕ್ಯ ನಿಕುಂಭಕುಂಭ-**
**ಧೂಮ್ರಾಕ್ಷದುರ್ಮುಖಸುರಾಂತನರಾಂತಕಾದೀನ್ ।**
**ಪುತ್ರಾನ್ಪ್ರಹಸ್ತಮತಿಕಾಯವಿಕಂಪನಾದೀನ್**
**ಸರ್ವಾನುಗಾನ್ ಸಮಹಿನೋದಥ ಕುಂಭಕರ್ಣಮ್ ॥೧೦೦॥**

**ರಕ್ಷಃಪತಿಃ** ರಾವಣನು, **ತತ್** ವಾನರಸೈನ್ಯವು ಮಾಡಿದ ವಿಧ್ವಂಸಕ ಕಾರ್ಯವನ್ನು **ವಿಲೋಕ್ಯ** ನೋಡಿ, **ನಿಕುಂಭಕುಂಭಧೂಮ್ರಾಕ್ಷದುರ್ಮುಖಸುರಾಂತನರಾಂತಕಾದೀನ್** ನಿಕುಂಭ, ಕುಂಭರೆಂಬ ಕುಂಭಕರ್ಣನ ಮಕ್ಕಳು ಧೂಮ್ರಾಕ್ಷ, ದುರ್ಮುಖ, ದೇವಾಂತಕ, ನರಾಂತಕ, ಮೊದಲಾದ ಮೇಘನಾದ ಮುಂತಾದ, **ಅತಿಕಾಯವಿಕಂಪನಾದೀನ್** ಅತಿಕಾಯ ವಿಕಂಪನ ಮೊದಲಾದ, **ಪುತ್ರಾನ್** ಮಕ್ಕಳನ್ನು, (ಕುಂಭಕರ್ಣನ ಮಕ್ಕಳು ರಾವಣನಿಗೆ ಮಕ್ಕಳಿದ್ದಂತೆ, ಕಾರಣ ಪುತ್ರಾನ್ ಎಂದಿದ್ದಾರೆ). **ಪ್ರಹಸ್ತಂ** ಪ್ರಹಸ್ತನೆಂಬ ಸೇನಾಪತಿಯನ್ನು **ಸರ್ವಾನುಗಾನ್** ಎಲ್ಲ ಸೈನ್ಯಸಹಿತವಾಗಿ **ಸಮಹಿನೋತ್** ಕಳಿಸಿದನು. **ಅಥ** ಇವರೆಲ್ಲ ಸತ್ತ ನಂತರ, **ಕುಂಭಕರ್ಣಂ** ಕುಂಭಕರ್ಣನನ್ನು ಕಳಿಸಿದನು. ಯುದ್ಧದಲ್ಲಿ ಚಿಕ್ಕವರು ದೊಡ್ಡವರು ಎಲ್ಲರೂ ಸಾಯುವವರೇ ಕಾರಣ ಏನೂ ವ್ಯತ್ಯಾಸವಿಲ್ಲವೆಂದು ಸೂಚಿಸಲು ಕ್ರಮವಾಗಿ ಹೇಳಿಲ್ಲ.

**ತಾತ್ಪರ್ಯ-** ರಾವಣನು ಕಪಿಸೈನ್ಯವನ್ನು ತಡೆಯಲು ನಿಕುಂಭ, ಕುಂಭ, ಧೂಮ್ರಾಕ್ಷ, ದುರ್ಮುಖ, ದೇವಾಂತಕ, ನರಾಂತಕ, ಇಂದ್ರಜಿತ್, ಕುಂಭಕರ್ಣ ಮೊದಲಾದವರನ್ನು ರಾಕ್ಷಸ ಸೈನ್ಯಸಹಿತವಾಗಿ ಕಳಿಸಿದನು. ॥೧೦೦॥

**ತಾಂ ಯಾತುಧಾನಪೃತನಾಮಸಿಶೂಲಚಾಪ-**
**ಪ್ರಾಸರ್ಷ್ಟಿಶಕ್ತಿಶರತೋಮರಖಡ್ಗಜುಷ್ಟಾಮ್ ।**
**ಸುಗ್ರೀವಲಕ್ಷ್ಮಣಮರುತ್ಸುತಗಂಧಮಾದ-**
**ನೀಲಾಂಗದರ್ಕ್ಷಪನಸಾದಿಭಿರನ್ವಿತೋಽಯಾತ್ ॥೧೦೧॥**

**ಅಸಿ** ಖಡ್ಗ **ಶೂಲ** ಶೂಲಾಯುಧ **ಚಾಪ** ಬಿಲ್ಲು **ಪ್ರಾಸ** ಕುಂತಾಯುಧ, **ಋಷ್ಟಿ** ಚಂದ್ರಹಾಸವೆಂಬ ಆಯುಧವು, **ಶಕ್ತಿ** ಶಕ್ತ್ಯಾಯುಧ **ಶರ** ಬಾಣ **ತೋಮರ** ಈಟಿ (ತುದಿಯಲ್ಲಿ ಚೂಪಾಗಿರುವ ಆಯುಧ). ಖಡ್ಗ ಇವುಗಳಿಂದ **ಜುಷ್ಟಾಂ** ಕೂಡಿದ **ತಾಂ** ಆ **ಯಾತುಧಾನಪೃತನಾಂ** ರಾಕ್ಷಸಸೇನೆಯನ್ನು ಕುರಿತು **ಸುಗ್ರೀವಲಕ್ಷ್ಮಣಮರುತ್ಸುತಗಂಧಮಾದನೀಲಾಂಗದರ್ಕ್ಷಪನಸಾದಿಭಿಃ** ಸುಗ್ರೀವ, ಲಕ್ಷ್ಮಣ, ಮರುತ್ಸುತ, ಹನುಮಂತ, ಗಂಧಮಾದ ನೀಲ, ಅಂಗದ, ಋಕ್ಷ

ಜಾಂಬುವಂತ ಪನಸ ಇವರೇ ಮೊದಲಾದವರಿಂದ, **ಅನ್ವಿತಃ** ಕೂಡಿಕೊಂಡು, **ಆಯಾತ್** ಎದುರಾದನು.

**ತಾತ್ಪರ್ಯ-** ಆ ರಾಕ್ಷಸಸೇನೆಯು ಖಡ್ಗ, ಶೂಲ, ಬಿಲ್ಲು, ಬಾಣ, ಈಟಿ, ಶಕ್ತಿ, ಕುಂತ ಮುಂತಾದ ಅಸ್ತ್ರಧಾರಣ ಮಾಡಿ ಭೀಕರವಾಗಿತ್ತು . ಆಗ ಶ್ರೀರಾಮಚಂದ್ರನು ತನ್ನ ತಮ್ಮ ಲಕ್ಷ್ಮಣ, ಸುಗ್ರೀವ, ನೀಲ, ಅಂಗದ, ಜಾಂಬುವಂತ ಪನಸ ಮುಖ್ಯವಾಗಿ ಹನುಮಂತ ಮೊದಲಾದವರಿಂದ ಕೂಡಿಕೊಂಡು ರಾಕ್ಷಸಸೈನ್ಯವನ್ನು ಸಂಹರಿಸಲು ಹೊರಟನು. ||೧೦೧||

**ತೇऽನೀಕಪಾ ರಘುಪತೇರಭಿಪತ್ಯ ಸರ್ವೇ**
**ದ್ವಂದಂ ವರೂಥಮಿಭಪತ್ತಿರಥಾಶ್ವಯೋಧಮ್ ।**
**ಜಘ್ನುರ್ದ್ರುಮೈರ್ಗಿರಿಗದೇಷುಭಿರಂಗದಾದ್ಯಾಃ**
**ಸೀತಾಭಿಮರ್ಶಹತಮಂಗಲರಾವಣೇಶಮ್ ॥೧೦೨॥**

**ರಘುಪತೇಃ** ಶ್ರೀರಾಮಚಂದ್ರನ, **ತೇ** ಹಿಂದೆ ಹೇಳಿದ **ಅನೀಕಪಾಃ** ಸೇನಾನಾಯಕರಾದ **ಅಂಗದಾದ್ಯಾಃ** ಅಂಗದ ಮೊದಲಾದವರು, **ಸರ್ವೇ** ಎಲ್ಲರೂ, **ದ್ವಂದ್ವಂ** ಇಬ್ಬಿಬ್ಬರಾಗಿ **ಇಭಪತ್ತಿರಥಾಶ್ವಯೋಧಂ, ಇಭ** ಆನೆ **ಪತ್ತಿ** ಕಾಲಾಳು **ರಥ** ರಥ **ಅಶ್ವ** ಕುದುರೆ **ಯೋಧ** ಸೈನಿಕ ಇವರಿಂದ ಕೂಡಿದ **ಸೀತಾಭಿಮರ್ಶಹತಮಂಗಲ-ರಾವಣೇಶಂ** ಸೀತಾಪಹಾರದಿಂದ ನಷ್ಟವಾದ ಜೀವನಕಾರಣವಾದ ಪುಣ್ಯವುಳ್ಳ ರಾವಣನೇ ಒಡೆಯನಾಗಿ ಉಳ್ಳ **ವರೂಥಂ** ಸೈನ್ಯವನ್ನು, **ಅಭಿಪತ್ಯ** ಮೇಲೆ ಬಿದ್ದು **ದ್ರುಮೈಃ** ಗಿಡಗಳಿಂದ, **ಗಿರಿಗದೇಷುಭಿಃ** ಗುಡ್ಡ ಗದೆ ಬಾಣಗಳಿಂದ, **ಜಘ್ನುಃ** ಸಂಹಾರ ಮಾಡಿದನು.

ವರೂಥಂ ಎಂದರೆ ರಥವನ್ನು ರಕ್ಷಿಸುವ ಹೊದಿಕೆ. ಇಲ್ಲಿ ಲಕ್ಷಣಯಾ ರಥದಲ್ಲಿ ಉಪಯೋಗಿಸಿರುವರು. ಪತ್ತಿ ಒಂದು ರಥ ಒಂದು ಗಜ ಮೂರು ಅಶ್ವಗಳು ಮತ್ತು ಐದು ಕಾಲಾಲುಗಳುಳ್ಳ ಸೇನೆಯ ಒಂದು ಗುಂಪು (ಅಥವಾ ಐವತ್ತೈದು ಮನುಷ್ಯ ಸೇನೆಯ ಒಂದು ಗುಂಪು).

**ತಾತ್ಪರ್ಯ-** ಶ್ರೀರಾಮಚಂದ್ರನ ಸೈನಿಕರು ಸೇನಾಧಿಪತಿಗಳಾದ ಅಂಗದ ಮೊದಲಾದವರು, ಅನೆ,ಕುದುರೆ,ಕಾಲಾಳುಗಳಿಂದ ಕೂಡಿದ, ಸೀತಾದೇವಿಯನ್ನು ಅಪಹಾರ ಮಾಡಿದ್ದರಿಂದ ಪುಣ್ಯವನ್ನು ಕಳೆದುಕೊಂಡು ಸ್ವಯಂನಷ್ಟನಾದ ರಾವಣನ ಸೇನೆಯನ್ನು ತಮ್ಮ ಜಾತಿಗೆ ಅನುಗುಣವಾದ ಗಿಡಗುಡ್ಡಗಳಿಂದ ಶತ್ರುಸೈನ್ಯದಿಂದ ಕಿತ್ತುಕೊಂಡ ಗದೆ ಬಾಣಗಳಿಂದ ಸಂಹಾರ ಮಾಡಿದರು. ||೧೦೨||

**ರಕ್ಷಃಪತಿಃ ಸ್ವಬಲನಷ್ಟಿಮವೇಕ್ಷ್ಯ ರುಷ್ಟ-**
**ಆರುಹ್ಯ ಯಾನಕಮಥಾಭಿಸಸಾರ ರಾಮಮ್ ।**
**ಸ್ವಃ ಸ್ಯಂದನೇ ದ್ಯುಮತಿ ಮಾತಲಿನೋಪನೀತೇ**
**ವಿಭ್ರಾಜಮಾನಮಹನನ್ನಿಶಿತೈಃ ಕ್ಷುರಪ್ರೈಃ ॥೧೦೩॥**

**ರಕ್ಷಃಪತಿಃ** ರಾಕ್ಷಸರಾಜನಾದ ರಾವಣನು, **ಸ್ವಬಲನಷ್ಟಿಂ** ತನ್ನ ಸೈನ್ಯದ ನಾಶವನ್ನು, **ಅವೇಕ್ಷ್ಯ** ನೋಡಿ **ರುಷ್ಟಃ** ಕೋಪತಾಳಿದವನಾಗಿ, **ಯಾನಕಂ** ಪುಷ್ಪಕವೆಂಬ (ಕುಬೇರನ ವಿಮಾನ) ವಾಹನದಲ್ಲಿ, **ಆರುಹ್ಯ** ಹತ್ತಿ **ಸ್ವಃ** ಸ್ವರ್ಗದಿಂದ **ಮಾತಲಿನಾ** ಇಂದ್ರನ ಸಾರಥಿಯಿಂದ, **ಉಪನೀತೇ** ತರಲ್ಪಟ್ಟ **ದ್ಯುಮತಿ** ಪ್ರಕಾಶಮಾನವಾದ, **ಸ್ಯಂದನೇ** ರಥದಲ್ಲಿ, **ವಿಭ್ರಾಜಮಾನಂ** ಶೋಭಿಸುವ, **ರಾಮಂ** ಶ್ರೀರಾಮನನ್ನು **ಅಭಿಸಸಾರ** ಎದುರಾಗಿ ಬಂದನು. **ಅಥ** ನಂತರ, **ನಿಶಿತೈಃ** ಹರಿತವಾದ **ಕ್ಷುರಪ್ರೈಃ** ಅರ್ಧಚಂದ್ರಾಯುಧಗಳಿಂದ, **ಅಹನತ್** ಹೊಡೆದನು.

ಯಾನಕಂ ಎಂಬಲ್ಲಿ ಕಪ್ರತ್ಯಯದಿಂದ ರಾಮನಿಗೆ ವಾಹನವಿಲ್ಲದಿರುವಾಗ ವಾಹನವೇರಿ ಬರುವದು ನಿಂದ್ಯವೆಂದು ಸೂಚಿಸಿರುವರು (ಕಃ ಕುತ್ಸನೇ)

**ತಾತ್ಪರ್ಯ-** ರಾವಣನು ತನ್ನ ಸೈನ್ಯವೆಲ್ಲ ನಾಶವಾದಾಗ ಕುಪಿತನಾಗಿ ಶ್ರೀರಾಮನ ಮೇಲೆರಗಿದನು. ಶ್ರೀರಾಮನು ಇಂದ್ರನ ಅಪ್ಪಣೆಯಂತೆ ಮಾತಲಿಯು ಸ್ವರ್ಗದಿಂದ ತಂದ ಪ್ರಕಾಶಮಾನವಾದ ರಥದಲ್ಲಿ ವಿರಾಜಮಾನನಾಗಿದ್ದನು. ರಾವಣನು ನಿಶಿತವಾದ ಅರ್ಧಚಂದ್ರಾಯುಧಗಳನ್ನು ಶ್ರೀರಾಮನ ಮೇಲೆ ಪ್ರಯೋಗಿಸಿದನು. ॥೧೦೩॥

**ರಾಮಸ್ತಮಾಹ ಪುರುಷಾದಪುರೀಷ ಯನ್ನಃ**
**ಕಾಂತಾ ಸಮಕ್ಷಮಸತಾಪಹೃತಾ ಸ್ವಯಂ ತೇ ।**
**ತ್ಯಕ್ತತ್ರಪಸ್ಯ ಫಲಮದ್ಯ ಜುಗುಪ್ಸಿತಸ್ಯ**
**ಇಚ್ಛಾಮಿ ಕಾಲ ಇವ ಕರ್ತುಮಲಂಘ್ಯವೀರ್ಯಃ ॥೧೦೪॥**

**ರಾಮಃ** ರಾಮಚಂದ್ರದೇವರು, **ತಂ** ರಾವಣನನ್ನು ಕುರಿತು, **ಹೇ ಪುರುಷಾದಪುರೀಷ** ರಾಕ್ಷಸಾಧಮನೇ (ಅಪಕೃಷ್ಟಂ ಪುರೀಷಂ ಸ್ಯಾತ್ ವಿಷ್ಠಾ ನಿಷ್ಠ್ಯೂತಮಪ್ಯುತ ಎಂದು ಅಭಿಧಾನವಿರುವದು) **ಯತ್** ಯಾವ ಕಾರಣ **ನಃ** ನಮ್ಮ **ಅಸಮಕ್ಷಂ** ಕಣ್ಣುತಪ್ಪಿಸಿ, **ನಃ** ನನ್ನ **ಕಾಂತಾ** ಪತ್ನಿಯು **ಸ್ವಯಂ** ಸ್ವಾಭಾವಿಕವಾಗಿ, **ಅಸತಾ** ದುಷ್ಟನಾದ ನಿನ್ನಿಂದ, **ಅಪಹೃತಾ** ಕದ್ದು ಒಯ್ಯಲ್ಪಟ್ಟಳೋ, **ತತಃ** ಆದ್ದರಿಂದ **ಜುಗುಪ್ಸಿತಸ್ಯ** ನಿಂದಿತನಾದ, **ತ್ಯಕ್ತತ್ರಪಸ್ಯ** ನಿರ್ಲಜ್ಜನಾದ, **ತೇ** ನಿನಗೆ **ಅದ್ಯ** ಇಂದೇ

**ಅಲಂಘ್ಯವೀರ್ಯಃ** ಮೀರಲು ಅಸಾಧ್ಯವಾದ ಪರಾಕ್ರಮಿಯಾದ ನಾನು, **ಕಾಲ ಇವ** ಯಮನಂತೆ, **ಫಲಂ ಕರ್ತುಂ** ತಕ್ಕ ಫಲವನ್ನು ಕೊಡಲು, **ಇಚ್ಛಾಮಿ** ಇಚ್ಛಿಸುವೆನು.

**ತಾತ್ಪರ್ಯ–** ಎಲೈ ರಾಕ್ಷಸಾಧಮನೇ! ಯಾರೂ ಇಲ್ಲದಿರುವಾಗ ಪತಿವ್ರತೆಯಾದ ನನ್ನ ಪತ್ನಿಯನ್ನು ಅಪಹಾರ ಮಾಡಿರುವಿ. ಈಗ ನಿರ್ಲಜ್ಜನಾಗಿ ಯುದ್ಧಕ್ಕೆ ಬಂದು ನಿಂತಿರುವಿ. ನಿನ್ನ ನಿಂದ್ಯವಾದ ಕಾರ್ಯಕ್ಕೆ ತಕ್ಕ ಶಿಕ್ಷೆಯನ್ನು ಕಾಲಮೃತ್ಯುವಿನಂತೆ ಈಗಲೇ ಕೊಡುವೆನು. ನನ್ನ ಸಾಮರ್ಥ್ಯವನ್ನು ಎದುರಿಸಲು ಯಾರಿಂದಲೂ ಆಗದು ಎಂದು ಹೇಳಿದನು.

**ಏವಂ ಕ್ಷಿಪನ್ ಧನುಷಿ ಸಂಧಿತಮುತ್ಸಸರ್ಜ**
**ಬಾಣಂ ಸವಜ್ರಮಿವ ತದ್ಧೃದಯಂ ಬಿಭೇದ ।**
**ಸೋಽಸೃಗ್ವಮನ್ ದಶಮುಖೈರ್ನ್ಯಪತದ್ವಿಮಾನಾ-**
**ದ್ಧಾಹೇತಿ ಜಲ್ಪತಿ ಜನೇ ಸುಕೃತೀವ ರಕ್ಷಃ ॥೧೦೫॥**

**ಏವಂ** ಈ ರೀತಿಯಾಗಿ, **ಕ್ಷಿಪನ್** ನಿಂದಿಸುತ್ತಾ , **ಧನುಷಿ** ಧನುಸ್ಸಿನಲ್ಲಿ, **ಸಂಧಿತಂ** ಹೂಡಿದ (ಸೇರಿಸಲ್ಪಟ್ಟ) **ಬಾಣಂ** ಬಾಣವನ್ನು **ಉತ್ಸಸರ್ಜ** ಬಿಟ್ಟನು. **ಸಃ** ಬಾಣವು, **ವಜ್ರಂ ಇವ** ವಜ್ರಾಯುಧದಂತೆ **ತದ್ಧೃದಯಂ** ರಾವಣನ ಹೃದಯವನ್ನು **ಬಿಭೇದ** ಛೇದಿಸಿತು, **ಜನೇ** ರಾವಣನ ಕಡೆ ಜನರು, **ಹಾಹಾ ಇತಿ ಜಲ್ಪತಿ** ಹಾಹಾಕಾರ ಮಾಡುತ್ತಿರಲು **ಸುಕೃತೀ ಇವ** ಕ್ಷೀಣಪುಣ್ಯ ಉಳ್ಳವನು ಸ್ವರ್ಗದಿಂದ ಬೀಳುವಂತೆ, **ರಕ್ಷಃ** ರಾವಣನು **ದಶಮುಖೈಃ** ಹತ್ತೂ ಮುಖಗಳಿಂದ **ಅಸೃಕ್** ರಕ್ತವನ್ನು **ವಮನ್** ಕಾರುತ್ತಾ **ವಿಮಾನಾತ್** ಪುಷ್ಪಕದಿಂದ **ನ್ಯಪತತ್** ಬಿದ್ದನು.

**ತಾತ್ಪರ್ಯ–** ಶ್ರೀರಾಮಚಂದ್ರನು ಈ ರೀತಿ ನಿಂದಿಸುತ್ತಾ ಬಿಲ್ಲಿನಲ್ಲಿ ಬಾಣವನ್ನು ಹೂಡಿ ರಾವಣನಿಗೆ ಹೊಡೆದನು. ಈ ಬಾಣವು ವಜ್ರಾಯುಧದಂತೆ ರಾವಣನ ಎದೆ ಸೀಳಿತು. ಜನರು ಪುಣ್ಯವು ತೀರಿದ ಮೇಲೆ ಸ್ವರ್ಗದಿಂದ ಬೀಳುವಂತೆ ಆಗ ರಾವಣನು ತನ್ನ ಹತ್ತೂ ಮುಖಗಳಿಂದ ರಕ್ತ ಕಾರುತ್ತಾ ಬಿದ್ದನು. ಅವನ ಜನರು ಹಾಹಾಕಾರ ಮಾಡಿದರು. ॥೧೦೫॥

**ತತೋ ನಿಷ್ಕ್ರಮ್ಯ ಲಂಕಾಯಾ ಯಾತುಧಾನ್ಯಃ ಸಹಸ್ರಶಃ ।**
**ಮಂಡೋ(ದೂ)ದರ್ಯಾ ಸಮಂ ತಸ್ಮಿನ್ ಪ್ರರುದಂತ್ಯ ಉಪಾದ್ರವನ್ ॥**

**ತತಃ** ರಾವಣನು ಬಿದ್ದ ಮೇಲೆ, **ಸಹಸ್ರಶಃ** ಸಾವಿರ ಸಾವಿರರಾಗಿ, **ಯಾತುಧಾನ್ಯಃ** ರಾಕ್ಷಸಸ್ತ್ರೀಯರು **ಲಂಕಾಯಾಃ** ಲಂಕೆಯಿಂದ, **ನಿಷ್ಕ್ರಮ್ಯ** ಹೊರಗೆ ಬಂದು, **ತಸ್ಮಿನ್** ಆ ರಣಭೂಮಿಯಲ್ಲಿ **ಮಂದೂದರ್ಯಾ** ಅಲ್ಪವಾದ ಉದರ ಉಳ್ಳ

(ಮಂಡೋದರ್ಯಾ ಎಂಬ ಪಾಠದಲ್ಲಿ ಮಂಡ ಇರುವೆಯ ಮಧ್ಯದಂತೆ ಉದರ ಉಳ್ಳ) ರಾವಣಪತ್ನಿಯಿಂದ, **ಸಮಂ** ಕೂಡಿಕೊಂಡು, **ಪ್ರರುದಂತ್ಯಃ** ರೋದನ ಮಾಡುವವರಾಗಿ **ಉಪಾದ್ರವನ್** ಕಳವಳಗೊಂಡರು. ।।೧೦೬।।

**ಸ್ವಾನ್ ಸ್ವಾನ್ಬಂಧೂನ್ಪರಿಷ್ವಜ್ಯ ಲಕ್ಷ್ಮಣೇಷುಭಿರರ್ದಿತಾನ್ ।**
**ರುರುದುಃ ಸುಸ್ವರಂ ದೀನಾ ಘ್ನಂತ್ಯ ಆತ್ಮಾನಮಾತ್ಮನಾ ।।೧೦೭।।**

**ಲಕ್ಷ್ಮಣೇಷುಭಿಃ** ರಾಮ-ಲಕ್ಷ್ಮಣರ ಬಾಣಗಳಿಂದ **ಅರ್ದಿತಾನ್** ಹತರಾದ, **ಸ್ವಾನ್ ಸ್ವಾನ್** ತಮ್ಮ ತಮ್ಮ, **ಬಂಧೂನ್** ಪತಿಗಳನ್ನು, **ಪರಿಷ್ವಜ್ಯ** ಆಲಂಗಿಸಿ **ಆತ್ಮಾನಂ** ಎದೆಯನ್ನು, **ಆತ್ಮನಾ** ಕೈಯಿಂದ, **ಘ್ನಂತ್ಯಃ** ಬಡೆದುಕೊಳ್ಳುತ್ತಾ, **ದೀನಾಃ** ದುಃಖಿತರಾಗಿ, **ಸುಸ್ವರಂ** ಕೇಳುವವರಿಗೆ ದಯೆ ಹುಟ್ಟುವಂತೆ **ರುರುದುಃ** ವಿಲಾಪ ಮಾಡಿದರು.

ಇಲ್ಲಿ ''ಶತಂ ದುರ್ಯೋಧನಾದೀಂಸ್ತೇ ಧನಂಜಯಶರೈರ್ಹತಾನ್'' ಮುಂತಾಗಿ ಪುರುಷವ್ಯತ್ಯಾಸ ಮಾಡಿದಂತೆ ಎಂದಿಟ್ಟುಕೊಂಡು ಲಕ್ಷ್ಮಣ ಎಂದರೆ ರಾಮ ಎಂದು ಕೆಲವರು ಅರ್ಥ ಮಾಡುವರು. ಲಕ್ಷ್ಮಣಂ, ಯೇಷು ಇಷುಷು, ತೇ ಲಕ್ಷ್ಮಣೇಷವಃ ರಾಮನಾಮವೆಂಬ ಚಿಹ್ನೆಗಳುಳ್ಳ ಬಾಣಗಳಿಂದ ಎಂದರ್ಥವು. (ಲಕ್ಷ್ಮಣಂ ನಾಮ್ನಿ ಚಿಹ್ನೇ ಚ ರಾಮಭ್ರಾತರಿ ಲಕ್ಷ್ಮಣಃ ಎಂದು ವಿಶ್ವವು ಇರುವದು). ರಾಮನಾಮಾಂಕಿತೈಃ ಶರೈಃ ಎಂದು ರಾಮಾಯಣದಲ್ಲಿ ಇದೆ. ।।೧೦೭।।

**ಹಾ ಹತಾಃ ಸ್ಮ ವಯಂ ನಾಥ ಲೋಕರಾವಣ ರಾವಣ ।**
**ಕಂ ಯಾಯಾಚ್ಛರಣಂ ಲಂಕಾ ತ್ವದ್ವಿಹೀನಾ ಪರಾರ್ದಿತಾ ।।೧೦೮।।**

**ಹೇ ನಾಥ** ಎಲೈ ಸ್ವಾಮಿಯೇ, **ಲೋಕರಾವಣರಾವಣ** ಎಲ್ಲ ಲೋಕದ ಜನರನ್ನು ಅಳಿಸುವ ರಾವಣನೇ, **ವಯಂ** ನಾವು, **ಹತಾಃ ಸ್ಮ** ನಷ್ಟರಾದೆವು, **ಹಾ** ಕಷ್ಟವು, **ಪರಾರ್ದಿತಾ** ಶತ್ರುಪೀಡಿತವಾದ, **ಲಂಕಾ** ಅಲ್ಲಿರುವ ಜನರು, **ತ್ವದ್ವಿಹೀನಾ** ನಿನ್ನಿಂದ ರಹಿತವಾಗಿ, **ಕಂ** ಯಾರನ್ನು ಕುರಿತು **ಶರಣಂ** ಮೊರೆಯನ್ನು, **ಯಾಯಾತ್** ಹೊಂದಬೇಕು. ।।೧೦೮।।

**ನ ವೈ ವೇದ ಮಹಾಭಾಗ ಭವಾನ್ಕಾಮವಶಂ ಗತಃ ।**
**ತೇಜೋಽನುಭಾವಂ ಸೀತಾಯಾ ಯೇನ ನೀತೋ ದಶಾಮಿಮಾಮ್ ।।**

**ಕಾಮವಶಂ ಗತಃ** ಕಾಮಕ್ಕೆ ಬಲಿಯಾಗಿ, **ಮಹಾಭಾಗ** ಹೇ ಪುಣ್ಯಶಾಲಿಯೇ! (ಅಪಹಾಸ) **ತ್ವಂ** ನೀನು, **ಯೇನ** ಯಾವ ಸೀತಾದೇವಿಯ ಸಾಮರ್ಥ್ಯದಿಂದ **ಇಮಾಂ ದಶಾಂ** ಈ ಅವಸ್ಥೆಯನ್ನು **ನೀತಃ** ಹೊಂದಿಸಲ್ಪಟ್ಟಿಯೋ, **ತಂ** ಅಂಥ

**ಸೀತಾಯಾಃ** ಸೀತಾದೇವಿಯ, **ತೇಜೋಽನುಭಾವಂ** ಸಾಮರ್ಥ್ಯವನ್ನು, **ನ ವೇದ ವೈ** ತಿಳಿಯಲೇ ಇಲ್ಲ. ||೧೦೯||

**ಕೃತೈಷಾ ವಿಧವಾ ಕಾಲಂ ವಯಂ ಚ ಕುಲನಂದನ |**
**ದೇಹಃ ಕೃತೋಽಯಂ ಗೃಧ್ರಾಣಾಮಾತ್ಮಾ ನರಕಹೇತವೇ ||೧೧೦||**

**ಕುಲನಂದನ** ಕುಲಾನಂದಕರನೇ! **ಏಷಾ ಲಂಕಾ** ಈ ಲಂಕೆಯು, **ವಿಧವಾ** ಅನಾಥವಾಗಿ, **ಕೃತಾ** ಮಾಡಲ್ಪಟ್ಟಿತು. **ವಯಂ ಚ** ನಾವೂ ಸಹ **ವಿಧವಾಃ** ಗಂಡನಿಲ್ಲದಂತೆ, **ಕೃತಾಃ** ಮಾಡಲ್ಪಟ್ಟೆವು, **ಅಯಂ ದೇಹಃ** ಈ ದೇಹವು, **ಗೃಧ್ರಾಣಾಂ** ಹದ್ದುಗಳಿಗೆ ಆಹಾರವಾಗಿ, **ಕೃತಃ** ಮಾಡಲ್ಪಟ್ಟಿತು. **ಆತ್ಮಾ** ಜೀವನು, **ನರಕಹೇತವೇ** ನರಕಭೋಗಕ್ಕಾಗಿ **ಕೃತಃ** ಮಾಡಲ್ಪಟ್ಟನು.

**ತಾತ್ಪರ್ಯ-** ರಾವಣನು ಸತ್ತದ್ದು ಕೇಳಿ ಮಂಡೋದರಿ ಮೊದಲಾದ ರಾಕ್ಷಸ ಸ್ತ್ರೀಯರು ಓಡಿ ಬಂದು ಶ್ರೀರಾಮನ ಬಾಣದಿಂದ ಮೃತರಾಗಿಬಿದ್ದ ತಮ್ಮ ತಮ್ಮ ಪತಿಗಳ ದೇಹವನ್ನು ಆಲಂಗಿಸಿ ಎದೆಯನ್ನು ಬಡಿದುಕೊಳ್ಳುತ್ತಾ ದೈನ್ಯದಿಂದ ರೋದಿಸಿದರು. ಅಯ್ಯೋ ಕೆಟ್ಟೆವು. ಸ್ವಾಮಿಯೇ ನೀನು ಇಲ್ಲದ್ದರಿಂದ ಲಂಕಾಪುರಿ ಕಳೆಗುಂದಿದೆ. ಶತ್ರುಗಳ ಪಾಲಾಯಿತು. ಇನ್ನು ಮೇಲೆ ಲಂಕಾನಿವಾಸಿಗಳಿಗೆ ಧಿಕ್ಕಾರ ? ಹೇ ನಾಥನೇ! ನೀನು ಕಾಮಾಂಧನಾಗಿ ಸೀತಾದೇವಿಯ ಪ್ರಭಾವವನ್ನು ಅರಿಯದೇ ಮಹಾಪರಾಧ ಮಾಡಿದೆ. ಈ ದುಷ್ಕೃತ್ಯದಿಂದಲೇ ಈ ದುಃಸ್ಥಿತಿಯು ಉಂಟಾಯಿತು. ಲಂಕಾಪಟ್ಟಣವು ಅನಾಥವಾಯಿತು. ನಾವೆಲ್ಲಾ ವಿಧವೆಯರಾದೆವು. ರಾಕ್ಷಸಚಕ್ರವರ್ತಿಯಾದ ನಿನ್ನ ದೇಹವು ಹದ್ದುಗಳಿಗೆ ಆಹಾರವಾಯಿತು. ನಿನ್ನ ಆತ್ಮವು ನರಕಾನುಭವಕ್ಕೆ ಸಿದ್ಧವಾಯಿತು. ಎಂದು ನಾನಾರೀತಿಯಿಂದ ವಿಲಾಪಮಾಡಿದರು. ||೧೧೦||

**ಶ್ರೀಶುಕ ಉವಾಚ-**

**ಸ್ವಾನಾಂ ವಿಭೀಷಣಶ್ಚಕ್ರೇ ಕೊಸಲೇಂದ್ರಾನುಮೋದಿತಃ |**
**ಪಿತೃಮೇಧವಿಧಾನೇನ ಯದುಕ್ತಂ ಸಾಂಪರಾಯಿಕಮ್ ||೧೧೧||**

**ಕೋಸಲೇಂದ್ರಾನುಮೋದಿತಃ** ಶ್ರೀರಾಮನ ಅಪ್ಪಣೆಯಂತೆ **ವಿಭೀಷಣಃ** ವಿಭೀಷಣನು, **ಸ್ವಾನಾಂ** ತನ್ನ ಜ್ಞಾತಿಗಳಿಗೆ **ಪಿತೃಮೇಧವಿಧಾನೇನ** ಮಂತ್ರಾಗ್ನಿ ಮೊದಲಾದ ವಿಧಿ ಪೂರ್ವಕವಾಗಿ **ಯದುಕ್ತಂ** ಶಾಸ್ತ್ರದಲ್ಲಿ ಹೇಳಿದ **ಸಾಂಪರಾಯಿಕಂ** ಪರಲೋಕದಲ್ಲಿ ಸುಖಸಾಧನವಾದ ಔರ್ಧ್ವದೇಹಿಕ ಕ್ರಿಯೆಯನ್ನು, **ಚಕ್ರೇ** ಮಾಡಿದನು.

**ತಾತ್ಪರ್ಯ-** ನಂತರ ಶ್ರೀರಾಮನ ಆಜ್ಞೆಯಂತೆ ವಿಭೀಷಣನು ಶಾಸ್ತ್ರೋಕ್ತ ವಿಧಾನದಿಂದ ಜ್ಞಾತಿಗಳಿಗೆ ಔರ್ಧ್ವದೇಹಿಕ ಕ್ರಿಯಾ ಮಾಡಿ ಮುಗಿಸಿದನು.।।೧೧೧।।

**ತತೋ ದದರ್ಶ ಭಗವಾನಶೋಕವನಿಕಾಶ್ರಮೇ ।**
**ಕ್ಷಾಮಾಂ ಸ್ವವಿರಹವ್ಯಾಧೇಃ ಶಿಂಶುಪಾಮೂಲಮಾಶ್ರಿತಾಮ್ ।।೧೧೨।।**

**ತತಃ** ಅನಂತರ, **ಭಗವಾನ್** ರಾಮಚಂದ್ರನು, **ಅಶೋಕವನಿಕಾಶ್ರಮೇ** ಅಶೋಕ ವನವೆಂಬ ಆಶ್ರಮದಲ್ಲಿ **ಶಿಂಶುಪಾಮೂಲಂ ಆಶ್ರಿತಾಂ** ಕೃಷ್ಣಾಗರುಗಿಡದ ಬುಡದಲ್ಲಿ ಕುಳಿತಿರುವ, **ಸ್ವವಿರಹವ್ಯಾಧೇಃ** ತನ್ನ ವಿಯೋಗವೆಂಬ ರೋಗದಿಂದ, **ಕ್ಷಾಮಾಂ** ಕೊರಗಿ ಸೊರಗಿದ ತನ್ನ ಪ್ರಿಯೆಯನ್ನು **ದದರ್ಶ** ನೋಡಿದನು.

**ತಾತ್ಪರ್ಯ-** ಅನಂತರ ಶ್ರೀರಾಮನು ಅಶೋಕವನದಲ್ಲಿ ಕೃಷ್ಣಾಗರುಗಿಡದ ಬುಡದಲ್ಲಿ ತನ್ನ ವಿರಹದಿಂದ ಸೊರಗಿ ಹೋದ ಸೀತಾದೇವಿಯನ್ನು ನೋಡಿದನು. ಇಲ್ಲಿ ವಿರಹ, ಕೊರಗು, ಸೊರಗುವುದು ಎಲ್ಲಾ ಲೋಕದೃಷ್ಟಿಯಿಂದ ಎಂದು ತಿಳಿಯಬೇಕು. ।।೧೧೨।।

**ರಾಮಃ ಪ್ರಿಯತಮಾಂ ಭಾರ್ಯಾಂ ದೀನಾಂ ವೀಕ್ಷ್ಯಾನ್ವಕಂಪತ ।**
**ಆತ್ಮಸಂದರ್ಶನಾಹ್ಲಾದವಿಕಸನ್ಮುಖಪಂಕಜಾಮ್ ।।೧೧೩।।**

**ರಾಮಃ** ಶ್ರೀರಾಮಚಂದ್ರನು, **ಆತ್ಮಸಂದರ್ಶನಾಹ್ಲಾದವಿಕಸನ್ಮುಖಪಂಕಜಾಂ** ತನ್ನ ಸಂದರ್ಶನದಿಂದುಂಟಾದ ಆನಂದದಿಂದ ಅರಳಿದ ಮುಖಕಮಲ ಉಳ್ಳ, **ದೀನಾಂ** ದುಃಖಿತಳಾದ, **ಪ್ರಿಯತಮಾಂ** ಅತ್ಯಂತ ಪ್ರೀತಿಪಾತ್ರಳಾದ, **ಭಾರ್ಯಾಂ** ತನ್ನ ಪತ್ನಿಯಾದ ಸೀತೆಯನ್ನು, **ವೀಕ್ಷ್ಯ** ನೋಡಿ, **ಅನ್ವಕಂಪತ** ಅನುತಾಪ ಹೊಂದಿದನು (ದಯಾಭರಿತನಾದನು)

**ತಾತ್ಪರ್ಯ-** ಶ್ರೀರಾಮಚಂದ್ರನು ತನ್ನ ಸಂದರ್ಶನದಿಂದ ಆನಂದ ಹೊಂದಿದ ದುಃಖಿತಳಾದವಳಂತೆ ನಟಿಸುತ್ತಿರುವ ಸೀತೆಯನ್ನು ನೋಡಿ ಕರುಣೆಯನ್ನು ಮಾಡಿದನು. ।।೧೧೩।।

**ಆರೋಪ್ಯಾರುರುಹೇ ಯಾನಂ ಭ್ರಾತೃಭ್ಯಾಂ ಹನುಮದ್ಯುತಃ ।**
**ವಿಭೀಷಣಾಯ ಭಗವಾನ್ ದತ್ವಾ ರಕ್ಷೋಗಣೇಶತಾಮ್ ।।೧೧೪।।**

**ಭಗವಾನ್** ಶ್ರೀರಾಮಚಂದ್ರನು, **ತಾಂ** ಆ ಸೀತಾದೇವಿಯನ್ನು **ಯಾನಂ** ಪುಷ್ಪಕ-ವಿಮಾನವನ್ನು, **ಆರೋಪ್ಯ** ಹತ್ತಿಸಿ, **ವಿಭೀಷಣಾಯ** ವಿಭೀಷಣನಿಗೆ **ರಕ್ಷೋಗಣೇಶತಾಂ** ರಾಕ್ಷಸಾಧಿಪತ್ಯವನ್ನು, **ದತ್ವಾ** ಕೊಟ್ಟು **ಭ್ರಾತೃಭ್ಯಾಂ** ತನ್ನ ತಮ್ಮನಾದ ಲಕ್ಷ್ಮಣನಿಂದ,

ವಾಲಿಯ ತಮ್ಮನಾದ ಸುಗ್ರೀವನಿಂದ (ಅಥವಾ ರಾವಣನ ತಮ್ಮನಾದ ವಿಭೀಷಣನಿಂದ) ಕೂಡಿಕೊಂಡು **ಹನುಮದ್ಯುತಃ** ಹನುಮಂತನಿಂದ ಸಹಿತನಾಗಿ, **ಆರುರುಹೇ** ಹತ್ತಿದನು.

**ತಾತ್ಪರ್ಯ-** ಶ್ರೀರಾಮಚಂದ್ರನು ರಾಜ್ಯವನ್ನು, ವಿಭೀಷಣನಿಗೆ ಕೊಟ್ಟು ಆ ಸೀತೆಯನ್ನು ಪುಷ್ಪಕ ವಿಮಾನದಲ್ಲಿ ಹತ್ತಿಸಿ, ಹನುಮಂತ, ತನ್ನ ತಮ್ಮನಾದ ಲಕ್ಷ್ಮಣನಿಂದ ವಾಲಿಯ ತಮ್ಮನಾದ ಸುಗ್ರೀವನಿಂದ ಕೂಡಿಕೊಂಡು (ಅಥವಾ ರಾವಣನ ತಮ್ಮನಾದ ವಿಭೀಷಣನಿಂದ) ತಾನು ವಿಮಾನವನ್ನು ಹತ್ತಿದನು.

**ಲಂಕಾಮಾಯುಶ್ಚ ಕಲ್ಪಾಂತಂ ಯಯೌ ತೀರ್ಣವ್ರತಃ ಪುರೀಮ್ ।**
**ಅವಕೀರ್ಯಮಾಣಃ ಕುಸುಮೈರ್ಲೋಕಪಾಲಾರ್ಪಿತೈಃ ಪಥಿ ॥೧೧೪॥**

**ತೀರ್ಣವ್ರತಃ** ವನವಾಸವನ್ನು ಪೂರೈಸಿದ ಶ್ರೀರಾಮಚಂದ್ರನು, **ಲಂಕಾಂ** ಲಂಕೆಯನ್ನು **ಕಲ್ಪಾಂತಂ** ಕಲ್ಪಾಂತದ ವರೆಗೂ, **ಆಯುಶ್ಚ** ಆಯುಷ್ಯವನ್ನು **ದತ್ವಾ** ಕೊಟ್ಟು, **ಪಥಿ** ಮಾರ್ಗದಲ್ಲಿ **ಲೋಕಪಾಲಾರ್ಪಿತೈಃ** ಲೋಕಪಾಲಕರಿಂದ ಅರ್ಪಿತವಾದ **ಕುಸುಮೈಃ** ಪುಷ್ಪಗಳಿಂದ **ಅವಕೀರ್ಯಮಾಣಃ** ಎರಚಲ್ಪಟ್ಟವನಾಗಿ, **ಪುರೀಂ** ಅಯೋಧ್ಯೆಯನ್ನು ಕುರಿತು, **ಯಯೌ** ಹೋದನು. ॥೧೧೪॥

**ತಾತ್ಪರ್ಯ-** ಶ್ರೀರಾಮಚಂದ್ರನು ಹದಿನಾಲ್ಕು ವರ್ಷದ ವನವಾಸವ್ರತವನ್ನು ಮುಕ್ತಾಯ ಮಾಡಿದನು. ತನ್ನ ಭಕ್ತನಾದ ವಿಭೀಷಣನಿಗೆ ಲಂಕಾಧಿಪತ್ಯವನ್ನು ನೀಡಿದನು. ಕಲ್ಪಾಂತದ ವರೆಗೆ ದೀರ್ಘವಾದ ಆಯುಷ್ಯವನ್ನೂ ನೀಡಿದನು. ಮಾರ್ಗದಲ್ಲಿ ಲೋಕಪಾಲಕರಿಂದ ಕುಸುಮವೃಷ್ಟಿಯಿಂದ ಅರ್ಚಿತನಾದನು. ಹೀಗೆ ಸರ್ವತ್ರ ಪೂಜೆಯನ್ನು ಸ್ವೀಕರಿಸುತ್ತಾ ಅಯೋಧ್ಯಾನಗರವನ್ನು ಕುರಿತು ಹೋದನು.

**ಉಪಗೀಯಮಾನಚರಿತಃ ಶತಧೃತ್ಯಾದಿಭಿರ್ಮುದಾ ।**
**ಗೋಮೂತ್ರಯಾವಕಂ ಶ್ರುತ್ವಾ ಭ್ರಾತರಂ ವಲ್ಕಲಾಂಬರಮ್ ॥೧೧೬॥**

**ಶತಧೃತ್ಯಾದಿಭಿಃ** ಬ್ರಹ್ಮನೇ ಮೊದಲಾದವರಿಂದ, **ಮುದಾ** ಸಂತೋಷದಿಂದ, **ಉಪಗೀಯಮಾನಚರಿತಃ** ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ಚರಿತ್ರೆಯುಳ್ಳವನಾಗಿ, **ಭ್ರಾತರಂ** ಸಹೋದರನಾದ ಭರತನನ್ನು, **ಗೋಮೂತ್ರಯಾವಕಂ** ಗೋಮೂತ್ರ ಸಹಿತವಾಗಿ ಪಕ್ವವಾದ ಅನ್ನಭೋಜನ ಮಾಡುತ್ತಿರುವ, **ವಲ್ಕಲಾಂಬರಂ** ನಾರುವಸ್ತ್ರ ಉಟ್ಟವನನ್ನಾಗಿ, **ಶ್ರುತ್ವಾ** ಕೇಳಿ **ಯಯೌ** ಹೊರಟನು.

**ತಾತ್ಪರ್ಯ-** ಶ್ರೀರಾಮಚಂದ್ರನನ್ನು ಬ್ರಹ್ಮಾದಿ ದೇವತೆಗಳು ಸ್ತೋತ್ರ ಮಾಡಿದರು. ತಮ್ಮನಾದ ಭರತನು ನಾರುಬಟ್ಟೆಯನ್ನು ಉಟ್ಟು ಗೋಮೂತ್ರ

ಸಹಿತವಾಗಿ ಪಕ್ವವಾದ ಆಹಾರವನ್ನು ಸೇವಿಸುತ್ತಾ ಶ್ರೀರಾಮನ ಆಗಮನವನ್ನು ನಿರೀಕ್ಷಿಸುತ್ತಿದ್ದನು. ಈ ರೀತಿಯಾಗಿ ಕೇಳಿ ಶ್ರೀರಾಮನು ಹೊರಟನು. ।।೧೧೬।।

**ಮಹಾಕಾರುಣಿಕೋ ತಪ್ಯಜ್ಜಟಿಲಂ ಸ್ಥಂಡಿಲೇಶಯಮ್ ।**
**ಭರತಃ ಪ್ರಾಪ್ತಮಾಕರ್ಣ್ಯ ಪೌರಾಮಾತ್ಯಪುರೋಹಿತೈಃ ।।೧೧೭।।**

**ಮಹಾಕಾರುಣಿಕಃ** ಪರಮದಯಾಳುವಾದ ಶ್ರೀರಾಮಚಂದ್ರನು **ಜಟಿಲಂ** ಜಟಾಧಾರಿಯಾದ, **ಸ್ಥಂಡಿಲೇಶಯಂ** ಕಸಗುಡಿಸಿ ಗೋಮಯದಿಂದ ಸಾರಿಸಿದ ಭೂಮಿಯಲ್ಲಿ ಮಲಗುವ ಭರತನ ವಿಷಯದಲ್ಲಿ, **ಅತಪ್ಯತ್** ಪರಿತಪಿಸಿದನು. **ಭರತಃ** ಭರತನು **ಪ್ರಾಪ್ತಂ** ಶ್ರೀರಾಮನು ಬಂದಿರುವನೆಂದು, **ಆಕರ್ಣ್ಯ** ಕೇಳಿ, **ಪೌರಾಮಾತ್ಯಪುರೋಹಿತೈಃ** ನಾಗರೀಕರು, ಮಂತ್ರಿಗಳು, ಪುರೋಹಿತರುಗಳಿಂದ ಕೂಡಿಕೊಂಡು **ಅಗಾತ್** ಬಂದನು.

**ತಾತ್ಪರ್ಯ-** ಶ್ರೀರಾಮನ ದರ್ಶನ ಆಗುವ ತನಕ ದೀರ್ಘವಾದ ವ್ರತದಲ್ಲಿ ಭರತ ತೊಡಗಿದ್ದ. ಜಟಾಧಾರಿಯಾಗಿದ್ದ. ನೆಲದ ಮೇಲೆ ಮಲಗುತ್ತಿದ್ದ. ಹೀಗೆ ಭರತ ವ್ರತ ಮಾಡುತ್ತಿದ್ದಾನೆಂದು ರಾಮ ಕೇಳಿದ. ರಾಮನ ಅಂತಃಕರಣ ಇದನ್ನು ಕೇಳಿ ಮಿಡಿಯಿತು. ಭರತನಲ್ಲಿ ಕರುಣೆ ತುಂಬಿತು. ಭರತನನ್ನು ನೋಡಲೆಂದು ಹೊರಟ. ಶ್ರೀರಾಮಚಂದ್ರ ಬಂದಿರುವ ವಾರ್ತೆಯನ್ನು ಭರತ ಕೇಳಿದ. ಭರತ ಭಕ್ತಿಭರಿತನಾದ. ಪೌರಜನರು ಸಚಿವರು, ಪುರೋಹಿತರಿಂದ ಕೂಡಿಕೊಂಡು ರಾಮನ ಸಂದರ್ಶನಕ್ಕಾಗಿ ಧಾವಿಸಿದ. ।।೧೧೭।।

**ಪಾದುಕೇ ಶಿರಸಿ ನ್ಯಸ್ಯ ರಾಮಂ ಪ್ರತ್ಯುದ್ಯತೋಽಗ್ರಜಮ್ ।**
**ನಂದಿಗ್ರಾಮಾತ್ ಸ್ವಶಿಬಿರಾದ್ಗೀತವಾದಿತ್ರನಿಃಸ್ವನೈಃ ।।೧೧೮।।**

ಆ ಭರತನು, **ಪಾದುಕೇ** ಎರಡು ಪಾದುಕೆಗಳನ್ನು **ಶಿರಸಿ** ಶಿರಸ್ಸಿನಲ್ಲಿ, **ನ್ಯಸ್ಯ** ಇಟ್ಟುಕೊಂಡು, **ಅಗ್ರಜಂ** ಅಣ್ಣನಾದ, **ರಾಮಂ** ಶ್ರೀರಾಮಚಂದ್ರನನ್ನು **ಪ್ರತಿ** ಕುರಿತು **ಗಂತುಂ** ಹೋಗುವುದಕ್ಕೆ **ಉದ್ಯತಃ** ಪ್ರಯತ್ನ ಮಾಡಿದವನಾಗಿ, **ಗೀತವಾದಿತ್ರನಿಃಸ್ವನೈಃ** ಗೀತವಾದಿತ್ರಗಳ ಧ್ವನಿಯಿಂದ ಕೂಡಿದವನಾಗಿ, **ನಂದಿಗ್ರಾಮಾತ್ ಸ್ವಶಿಬಿರಾತ್** ನಂದಿಗ್ರಾಮದಲ್ಲಿರುವ ತನ್ನ ಕುಟೀರದಿಂದ, **ಅಭಿಯಯೌ** ಎದುರುಗೊಂಡು ಹೋದನು.

**ತಾತ್ಪರ್ಯ-** ಭರತಕುಮಾರನು ಶ್ರೀರಾಮಚಂದ್ರನ ಪಾದುಕೆಗಳನ್ನು ತನ್ನ ಶಿರಸ್ಸಿನಲ್ಲಿ ಧರಿಸಿದ. ಮಂಗಳವಾದ್ಯ ಸಹಿತನಾಗಿ ತನ್ನ ವಾಸಸ್ಥಾನವಾದ ನಂದಿ ಗ್ರಾಮದಿಂದ ಹೊರಟು ಶ್ರೀರಾಮಚಂದ್ರನನ್ನು ಎದುರು ಗೊಂಡನು. ।।೧೧೮।।

**ಬ್ರಹ್ಮಘೋಷೇಣ ಚ ಮುಹುಃ ಪಠದ್ಭಿರ್ಬ್ರಹ್ಮವಾದಿಭಿಃ ।**
**ಸ್ವರ್ಣಕಕ್ಷ್ಯೈರ್ಗಜೈಶ್ಚಾಪಿ ಹೈಮೈಶ್ಚಿತ್ರಧ್ವಜೈ ರಥೈಃ ॥೧೧೯॥**

**ಘೋಷೇಣ** ಉಚ್ಚಧ್ವನಿಯಿಂದ, ಬ್ರಹ್ಮ ವೇದವನ್ನು **ಪಠದ್ಭಿಃ** ಪಠಿಸುತ್ತಿರುವ, **ಬ್ರಹ್ಮವಾದಿಭಿಃ** ಬ್ರಾಹ್ಮಣರಿಂದ, **ಯುಕ್ತಃ** ಸಹಿತನಾಗಿ, **ಸ್ವರ್ಣಕಕ್ಷ್ಯೈಃ** ಬಂಗಾರದ ಸರಪಳಿ ಉಳ್ಳ, **ಗಜೈಃ** ಆನೆಗಳಿಂದಲೂ, **ಹೈಮೈಃ** ಸುವರ್ಣಾಲಂಕೃತವಾದ, **ಚಿತ್ರಧ್ವಜೈಃ** ವಿಚಿತ್ರವರ್ಣಯುಕ್ತವಾದ ಧ್ವಜಗಳಿಂದ ಕೂಡಿದ **ರಥೈಃ** ರಥಗಳಿಂದ ಸಹಿತನಾಗಿ, **ಅಭಿಯಯೌ (ಮುಹುಃ)** ಎದುರುಗೊಂಡನು.

**ತಾತ್ಪರ್ಯ-** ಭರತನು ವೇದಘೋಷ ಮಾಡುತ್ತಿರುವ ಬ್ರಾಹ್ಮಣರಿಂದಲೂ, ನಾನಾ ಧ್ವಜಾಲಂಕಾರಗಳಿಂದ ಕೂಡಿದ ರಥ ಗಜ ತುರಗವಾಹನಗಳಿಂದಲೂ ಸಹಿತನಾಗಿ ಶ್ರೀರಾಮಚಂದ್ರನನ್ನು ಎಂದುರುಗೊಂಡನು. ॥೧೧೯॥

**ಸದಶ್ವೈ ರುಕ್ಮಸನ್ನಾಹೈರ್ಭಟೈಃ ಪುರಟವರ್ಮಭಿಃ ।**
**ಶ್ರೇಣೀಭಿರ್ವಾರಮುಖ್ಯಾಭಿರ್ಭೃತ್ಯೈಶ್ಚಾಗಾತ್ಸದೊದ್ಯತೈಃ ॥೧೨೦॥**

**ಸದಶ್ವೈಃ** ಉತ್ತಮವಾದ ಅಶ್ವಗಳಿಂದಲೂ, **ರುಕ್ಮಸನ್ನಾಹೈಃ** ಬಂಗಾರದ ಕವಚಗಳಿಂದ ಸಹಿತವಾದ, **ಪುರಟವರ್ಮಭಿಃ** ಸುವರ್ಣಕವಚಗಳುಳ್ಳ, **ಭಟೈಃ** ಸೈನಿಕರಿಂದಲೂ, **ಶ್ರೇಣೀಭಿಃ** ಅಂಗರಕ್ಷಕರಿಂದಲೂ, **(ಉಪಾಯನೋದ್ವಹೈಃ** ಉಪಾಯವನ್ನು ಧರಿಸಿರುವ) **ಭೃತ್ಯೈಃ** ಸೇವಕರಿಂದಲೂ ಸಹಿತನಾಗಿ **ವಾರಮುಖ್ಯಾಭಿಃ** ವಾರಾಂಗನೆಯರಿಂದ ಸಹಿತನಾಗಿ **ಅಗಾತ್** ಬಂದನು.

**ತಾತ್ಪರ್ಯ-** ಭರತನು ಉತ್ತಮವಾದ ಅಶ್ವಗಳಿಂದಲೂ, ಬಂಗಾರದ ಕವಚದಿಂದ ಸಹಿತರಾದ ಸೈನಿಕರಿಂದಲೂ ಅಂಗರಕ್ಷಕರಿಂದಲೂ, ವಾರಾಂಗನೆಯರಿಂದ ಸಹಿತನಾಗಿ ಶ್ರೀರಾಮಚಂದ್ರನನ್ನು ಕುರಿತು ಬಂದನು. ॥೧೨೦॥

**ಪಾರಮೇಷ್ಠ್ಯಾನ್ಯುಪಾದಾಯ ಭಾಂಡಾನ್ಯುಚ್ಚಾವಚಾನಿ ಚ ।**
**ಪಾದಯೋರ್ನ್ಯಪತತ್ಪ್ರೇಮ್ಣಾ ಪ್ರಕ್ಲಿನ್ನಹೃದಯೇಕ್ಷಣಃ ॥೧೨೧॥**

**ಪಾರಮೇಷ್ಠ್ಯಾನಿ** ಅನರ್ಘ್ಯವಾದ ಛತ್ರಚಾಮರಾದಿಗಳನ್ನು, **ಉಚ್ಚಾವಚಾನಿ** ಅನೇಕ ವಿಧವಾದ, (ಪಾಠಾಂತರ. **ಪಣ್ಯಾನಿ** ಫಲಗಳನ್ನು, **ಭಾಂಡಾನಿ** ಪಾತ್ರೆಗಳನ್ನು **ಉಪಾದಾಯ** ತೆಗೆದುಕೊಂಡು ಬಂದು, **ಪುರತಃ** ಶ್ರೀರಾಮಚಂದ್ರನ ಎದುರಿನಲ್ಲಿ **ನ್ಯಸ್ಯ** ಅರ್ಪಿಸಿ) **ಪ್ರೇಮ್ಣಾ** ಪ್ರೇಮದಿಂದ, **ಪ್ರಕ್ಲಿನ್ನಹೃದಯೇಕ್ಷಣಃ** ಆರ್ದ್ರವಾದ, ಮನಸ್ಸು ನೇತ್ರ ಉಳ್ಳವನಾಗಿ, **ಪಾದಯೋಃ** ಶ್ರೀರಾಮಚಂದ್ರನ ಪಾದಗಳಲ್ಲಿ, **ನ್ಯಪತತ್** ಬಿದ್ದು ನಮಸ್ಕರಿಸಿದನು.

**ತಾತ್ಪರ್ಯ-** ಅಮೂಲ್ಯವಾದ ಛತ್ರಚಾಮರಾದಿಗಳನ್ನು ಅನೇಕ ವಿಧವಾದ ತೆಂಗಿನಕಾಯಿ ಇತ್ಯಾದಿ ಫಲಗಳನ್ನು ವಿವಿಧ ಪಾತ್ರೆಗಳನ್ನು ತೆಗೆದುಕೊಂಡು ಬಂದು ಶ್ರೀರಾಮಚಂದ್ರನ ಎದುರಿನಲ್ಲಿ ಅರ್ಪಿಸಿ, ಬಂಧುಪ್ರೇಮದಿಂದ ಆರ್ದ್ರವಾದ ಮನಸ್ಸು ನೇತ್ರ ಉಳ್ಳವನಾಗಿ ಆತನ ಪಾದಗಳಲ್ಲಿ ವಂದಿಸಿದನು. ||೧೨೧||

**ಪಾದುಕೇ ನ್ಯಸ್ಯ ಪುರತಃ ಪ್ರಾಂಜಲಿರ್ಬಾಷ್ಪಲೋಚನಃ |**
**ತಮಾಶ್ಲಿಷ್ಯ ದೃಢಂ ದೋರ್ಭ್ಯಾಂ ಸ್ನಾಪಯನ್ನೇತ್ರಜೈರ್ಜಲೈಃ ||೧೨೨||**

**ಪಾದುಕೇ** ಪಾದುಕೆಗಳನ್ನು **ಪುರತಃ** ಎದುರಿನಲ್ಲಿ, **ನ್ಯಸ್ಯ** ಇಟ್ಟು (**ತಸ್ಥೌ** ನಿಂತನು), **ಪ್ರಾಂಜಲಿಃ** ಕೈ ಮುಗಿದುಕೊಂಡವನಾಗಿ ಶ್ರೀರಾಮಚಂದ್ರನು, **ಬಾಷ್ಪಲೋಚನಃ** ಕಣ್ಣೀರನ್ನು ಸುರಿಸುತ್ತಾ, **ದೋರ್ಭ್ಯಾಂ** ತೋಳುಗಳಿಂದ, **ತಂ** ಆ ಭರತನನ್ನು, **ದೃಢಂ** ದೃಢವಾಗಿ **ಆಶ್ಲಿಷ್ಯ** ಆಲಿಂಗಿಸಿ, **ನೇತ್ರಜೈಃ** ಕಣ್ಣಿನಲ್ಲಿ ಉತ್ಪನ್ನವಾದ **ಜಲೈಃ** ಆನಂದಬಾಷ್ಪಗಳಿಂದ **ಸ್ನಾಪಯನ್** ಸ್ನಾನ ಮಾಡಿಸುತ್ತಾ, (**ಶುಶುಭೇ ಶೋಭಿಸಿದನು**)

**ತಾತ್ಪರ್ಯ-** ಪಾದುಕೆಗಳನ್ನು ಶ್ರೀರಾಮಚಂದ್ರನ ಎದುರಿನಲ್ಲಿ ಇಟ್ಟು ಕೈ ಮುಗಿದು ನಿಂತನು. ಶ್ರೀರಾಮಚಂದ್ರನು ಕಣ್ಣೀರನ್ನು ಸುರಿಸುತ್ತಾ ತೋಳುಗಳಿಂದ ಆತನನ್ನು ಆಲಂಗಿಸಿ, ಆನಂದಬಾಷ್ಪಗಳಿಂದ ಆತನನ್ನು ಸ್ನಾನ ಮಾಡಿಸುತ್ತಾ ಶೋಭಿಸಿದನು. ||೧೨೨||

**ರಾಮೋ ಲಕ್ಷ್ಮಣಸೀತಾಭ್ಯಾಂ ವಿಪ್ರೇಭ್ಯೋ ಯೇಽಭವವಂಸ್ತತಃ |**
**ತೇಭ್ಯಃ ಸ್ವಯಂ ನಮಶ್ಚಕ್ರೇ ಪ್ರಜಾಭಿಶ್ಚ ನಮಸ್ಕೃತಃ ||೧೨೩||**

**ರಾಮಃ** ರಾಮಚಂದ್ರನು, **ತತಃ** ಅನಂತರದಲ್ಲಿ **ಸೀತಾಲಕ್ಷ್ಮಣಾಭ್ಯಾಂ** ಸೀತಾ ಲಕ್ಷ್ಮಣರಿಂದ ಸಹಿತನಾಗಿ, **ಯೇ** ಯಾರು **ಅಭವನ್** ಅಲ್ಲಿದ್ದರೋ, **ತೇಭ್ಯಃ ವಿಪ್ರೇಭ್ಯಃ** ಆ ಬ್ರಾಹ್ಮಣರಿಗೆ, **ಸ್ವಯಂ** ತಾನು, **ನಮಃ** ನಮಸ್ಕಾರವನ್ನು **ಚಕ್ರೇ** ಮಾಡಿದನು, **ಪ್ರಜಾಭಿಃ** ಪ್ರಜೆಗಳಿಂದ **ನಮಸ್ಕೃತಃ** ನಮಸ್ಕೃತನಾದನು.

ಸೀತಾಲಕ್ಷ್ಮಣಾಭ್ಯಾಂ ಅನ್ನದಂತೆ ಲಕ್ಷ್ಮಣಸೀತಾಭ್ಯಾಂ ಎಂದದ್ದರಿಂದ ಈ ಅಭಿಪ್ರಾಯವು ತಿಳಿದು ಬರುವದು. ಅರಣ್ಯಕ್ಕೆ ಹೋಗಬೇಕೆಂಬ ಆಜ್ಞೆಯು ರಾಮಚಂದ್ರನಿಗೆ ಮಾತ್ರ ಇದ್ದಿತು. ಅವನ ಜೊತೆಗೆ ಅರಣ್ಯಕ್ಕೆ ಹೋಗಬೇಕೆಂಬ ನಿಶ್ಚಯವನ್ನು ಮೊದಲು ಲಕ್ಷ್ಮಣನು ಮಾಡಿದ. ಆ ಮೇಲೆ ಸೀತಾದೇವಿಯು ನಿಶ್ಚಯ ಮಾಡಿದಳು. ಇದು ಗ್ರಂಥಾಂತರದಲ್ಲಿ ಹೇಳಿದ್ದರಿಂದ ಅದನ್ನು ಸಂಗ್ರಹಿಸಲು ಮೊದಲು ಲಕ್ಷ್ಮಣನನ್ನು ಅನಂತರ ಸೀತಾದೇವಿಯನ್ನು ನಿರ್ದೇಶಿಸಿರುವರು. ಅಥವಾ ಅರಣ್ಯದಲ್ಲಿ ಸೀತಾದೇವಿಯಕ್ಕಿಂತ ಲಕ್ಷ್ಮಣನೇ ಬಹುಕಾಲ ರಾಮನ

ಸಮೀಪದಲ್ಲಿ ಇದ್ದದ್ದನ್ನು ತಿಳಿಸಲು ಹೀಗೆ ಹೇಳಿರುವರು. ಅಥವಾ ಲಕ್ಷ್ಮಣನು ಶೇಷಾಂಶನಾದ್ದರಿಂದ ತನಗೆ ಶಯನರೂಪನಾದ್ದರಿಂದ ಅವನ ಅಪೇಕ್ಷೆಯು ಪೂರ್ವದಲ್ಲಿ ಇರುವದೆಂದು ಸೂಚಿಸಲೂ ಸಹ ಹೀಗೆ ಹೇಳಿರುವರು.

ಅಥವಾ ಅಲಕ್ಷ್ಮಣಸೀತಾಭ್ಯಾಂ ಎಂದು ಪದಚ್ಛೇದ ಮಾಡಬೇಕು. ಲಕ್ಷ್ಮಣ ಶಬ್ದಕ್ಕೆ ಚಿಹ್ನವೆಂದರ್ಥ. ರಾಮಚಂದ್ರನು ಸ್ವತಃ ಕಿರೀಟ ಕುಂಡಲ ಮೊದಲಾದ ಚಿಹ್ನಗಳನ್ನು ಧರಿಸದೇ ಸೀತೆಯಿಂದ ಕೂಡಿಕೊಂಡು ಬ್ರಾಹ್ಮಣರಿಗೆ ನಮಸ್ಕರಿಸಿದನು. ಇದರಿಂದ ಬ್ರಾಹ್ಮಣರಲ್ಲಿ ರಾಮಚಂದ್ರನ ಅತಿಶಯಿತವಾದ ಭಕ್ತಿಯು ಮತ್ತು ನಿಸ್ಪೃಹತೆಯು ವ್ಯಕ್ತವಾಗುವವು. ||೧೨೩||

**ಧುನ್ವಂತ ಉತ್ತರಾಸಂಗಂ ಪತಿಂ ವೀಕ್ಷ್ಯ ಚಿರಾಗತಮ್ ।**
**ಉತ್ತಮಾಃ ಕೋಸಲಾ ಮಾಲ್ಯೈಃ ಕಿರಂತೋ ನನೃತುರ್ಮುದಾ ||೧೨೪||**

**ಉತ್ತಮಾಃ** ಉತ್ತಮರಾದ, **ಕೋಸಲಾಃ** ಅಯೋಧ್ಯಾಪುರವಾಸಿ ಜನರು, **ಚಿರಾಗತಂ** ಬಹುಕಾಲದ ಮೇಲೆ ಬಂದ **ಪತಿಂ** ಸ್ವಾಮಿಯಾದ ರಾಮಚಂದ್ರನನ್ನು, **ವೀಕ್ಷ್ಯ** ನೋಡಿ, **ಉತ್ತರಾಸಂಗಂ** ಉತ್ತರೀಯವಸ್ತ್ರದ ಸಂಗವನ್ನು, **ಧುನ್ವಂತಃ** ಸಂಚಲಿಸುತ್ತಾ, **ಮಾಲ್ಯೈಃ** ಪುಷ್ಪಗಳಿಂದ **ಕಿರಂತಃ** ಎರಚುತ್ತಾ, **ಮುದಾ** ಸಂತೋಷದಿಂದ **ನನೃತುಃ** ನರ್ತನ ಮಾಡಿದರು.

**ತಾತ್ಪರ್ಯ-** ಉತ್ತಮರಾದ ಅಯೋಧ್ಯವಾಸಿ ಜನರು ಬಹುಕಾಲದ ಮೇಲೆ ತಿರುಗಿ ಬಂದಿರುವ ತಮ್ಮ ನಾಯಕನನ್ನು ನೋಡಿ ಉತ್ತರೀಯವಸ್ತ್ರವನ್ನು ಸಂಚಲಿಸುತ್ತ ಪುಷ್ಪವೃಷ್ಟಿ ಮಾಡುತ್ತಾ ಸಂತೋಷದಿಂದ ನರ್ತನ ಮಾಡಿದರು. ||೧೨೪||

**ಪಾದುಕೇ ಭರತೋಽಗೃಹ್ಣಾಚ್ಚಾಮರವ್ಯಜನೋತ್ತಮೇ ।**
**ವಿಭೀಷಣಃ ಸಸುಗ್ರೀವಃ ಶ್ವೇತಚ್ಛತ್ರಂ ಮರುತ್ಸುತಃ ||೧೨೫||**

**ಭರತಃ** ಭರತನು **ಪಾದುಕೇ** ಪಾದುಕೆಗಳನ್ನು, **ಅಗೃಹ್ಣಾತ್** ಹಿಡಿದುಕೊಂಡನು. **ಸಃ ಸುಗ್ರೀವಃ** ಸುಗ್ರೀವಸಹಿತನಾದ **ವಿಭೀಷಣಃ** ವಿಭೀಷಣನು **ಚಾಮರವ್ಯಜ-ನೋತ್ತಮೇ** ಉತ್ತಮವಾದ ಚಾಮರ ಬೀಸಣಿಕೆಯನ್ನು ಹಿಡಿದನು. **ಮರುತ್ಸುತಃ** ಹನುಮಂತನು **ಶ್ವೇತಚ್ಛತ್ರಂ** ಶ್ವೇತಛತ್ರವನ್ನು ಹಿಡಿದನು.

**ತಾತ್ಪರ್ಯ-** ಶ್ರೀರಾಮಚಂದ್ರನಿಗೆ ಪಾದುಕೆಗಳನ್ನು ಭರತನು ಹಾಕಿಸಿದನು. ಸುಗ್ರೀವ-ವಿಭೀಷಣರು, ಚಾಮರವನ್ನು ಬೀಸಣಿಕೆಯನ್ನು ಬೀಸಿದರು. ಹನುಮಂತದೇವರು ಶ್ವೇತಛತ್ರವನ್ನು ಹಿಡಿದರು. ||೧೨೫||

**ಧನುರ್ನಿಷಂಗಾನ್ ಶತ್ರುಘ್ನಃ ಸೀತಾ ತೀರ್ಥಕಮಂಡಲುಮ್ ।**
**ಅಬಿಭ್ರದಂಗದಃ ಖಡ್ಗಂ ಹೈಮಂ ಚರ್ಮರ್ಕ್ಷರಾಟ್ ನೃಪ ॥೧೨೬॥**

**ಶತ್ರುಘ್ನಃ** ಶತ್ರುಘ್ನನು, **ಧನುರ್ನಿಷಂಗಾನ್** ಬತ್ತಳಿಕೆಯನ್ನು ಧನುಸ್ಸನ್ನು **ಸೀತಾ** ಸೀತಾದೇವಿಯು, **ತೀರ್ಥಕಮಂಡಲುಂ** ತೀರ್ಥದ ಕಮಂಡಲುವನ್ನು **ಅಂಗದಃ** ಅಂಗದನು, **ಖಡ್ಗಂ** ಖಡ್ಗವನ್ನು **ಋಕ್ಷರಾಟ್** ಜಾಂಬವಂತನು **ಹೈಮಂ** ಸುವರ್ಣದ, **ಚರ್ಮ** ಚರ್ಮಾಯುಧವನ್ನು, **ಅಬಿಭ್ರತ್** ಧರಿಸಿದರು.

**ತಾತ್ಪರ್ಯ-** ಶತ್ರುಘ್ನನು ಬತ್ತಳಿಕೆಯನ್ನು ಧನುಸ್ಸನ್ನು ಹಿಡಿದನು. ಸೀತಾದೇವಿಯು ತೀರ್ಥಕಮಂಡಲವನ್ನು ಹಿಡಿದಳು. ಅಂಗದನು ಖಡ್ಗವನ್ನು, ಜಾಂಬವಂತನು ಬಂಗಾರದ ಚರ್ಮವನ್ನು ಹಿಡಿದರು. ॥೧೨೬॥

**ಪುಷ್ಪಕಸ್ಥೈರ್ವೃತಸ್ತ್ವೇಭಿಃ ಸ್ತೂಯಮಾನಶ್ಚ ಬಂದಿಭಿಃ ।**
**ವಿರೇಜೇ ಭಗವಾನ್ ರಾಜನ್ ಗ್ರಹೈರಿಂದುರಿವೋದಿತಃ ॥೧೨೭॥**

**ರಾಜನ್** ರಾಜನೇ! **ಪುಷ್ಪಕಸ್ಥೈಃ** ಪುಷ್ಪಕದಲ್ಲಿರುವವರುಗಳಿಂದ, **ವೃತಃ** ಸೇವಿತನಾದ ಶ್ರೀರಾಮಚಂದ್ರನು, **ಏಭಿಃ** ಈ **ಬಂದಿಭಿಃ** ಸ್ತುತಿಪಾಠಕರಿಂದ, **ಸ್ತೂಯಮಾನಃ** ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ **ಭಗವಾನ್** ಶ್ರೀರಾಮಚಂದ್ರನು, **ಉದಿತಃ** ಉದಯಿಸಿದ, **ಇಂದುಃ** ಚಂದ್ರನು, **ಗ್ರಹೈಃ ಇವ** ನಕ್ಷತ್ರಗಳಿಂದ ಹೇಗೋ ಹಾಗೆ, **ವಿರೇಜೇ** ಶೋಭಿಸಿದನು.

**ತಾತ್ಪರ್ಯ-** ರಾಜನೇ! ಪುಷ್ಪಕದಲ್ಲಿರುವವದರಿಂದ ಸೇವಿತನಾದ ಶ್ರೀರಾಮಚಂದ್ರನು, ಈ ಬಂದಿಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತಾ ನಕ್ಷತ್ರಮಂಡಲದಲ್ಲಿ ಶೋಭಿಸುವ ಚಂದ್ರನಂತೆ ಶೋಭಿಸಿದನು. ॥೧೨೭॥

**ಭ್ರಾತೃಭಿರ್ನಂದಿತಃ ಸೋಽಪಿ ಸೋತ್ಸವಾಂ ಪ್ರಾವಿಶತ್ಪುರೀಮ್ ।**
**ಪ್ರವಿಶ್ಯ ರಾಜಭವನಂ ಗುರುಪತ್ನೀಶ್ಚ ಮಾತರಮ್ ॥೧೨೮॥**

**ಭ್ರಾತೃಭಿಃ** ಸಹೋದರರಿಂದ, **ನಂದಿತಃ** ಆನಂದಹೊಂದಿದ, **ಸಃ ಅಪಿ** ಆ ರಾಮಚಂದ್ರನು, **ಸೋತ್ಸವಾಂ** ಉತ್ಸವಸಹಿತವಾದ, **ಪುರೀಂ** ಅಯೋಧ್ಯಾ ನಗರವನ್ನು **ಪ್ರಾವಿಶತ್** ಪ್ರವೇಶ ಮಾಡಿದನು. **ರಾಜಭವನಂ** ಅರಮನೆಯನ್ನು, **ಪ್ರವಿಶ್ಯ** ಪ್ರವೇಶಮಾಡಿ, **ಗುರುಪತ್ನೀಃ** ಗುರುಪತ್ನಿಯರನ್ನು, **ಮಾತರಂ** ತಾಯಿಯರುಗಳನ್ನು, **ವವಂದೇ** ವಂದಿಸಿದನು.

**ತಾತ್ಪರ್ಯ-** ಸಹೋದರರಿಂದ ಆನಂದ ಪಡೆದ ಶ್ರೀರಾಮಚಂದ್ರನು

ಅಯೋಧ್ಯೆಯನ್ನು ಪ್ರವೇಶಿಸಿದನು. ಅರಮನೆಯನ್ನು ಪ್ರವೇಶಿಸಿ ಗುರುಪತ್ನಿಯರನ್ನು, ತಾಯಿಯರನ್ನು, ನಮಸ್ಕರಿಸಿದನು. ।।೧೨೮।।

**ಗುರೂನ್ ವಯಸ್ಯಾವರಜಾನ್ಪೂಜಿತಃ ಪ್ರತ್ಯಪೂಜಯತ್ ।**
**ವೈದೇಹೀ ಲಕ್ಷ್ಮಣಶ್ಚೈವ ಯಥಾಯೋಗ್ಯಂ ಪ್ರಣೇಮತುಃ ।।೧೨೯।।**

**ಗುರೂನ್** ಗುರುಗಳನ್ನು ವಂದಿಸಿದನು. **ವಯಸ್ಯಾವರಜಾನ್** ಸ್ನೇಹಿತರು ಮತ್ತು ತಮ್ಮಂದಿರನ್ನು, **ತೈಃ** ಅವರುಗಳಿಂದ, **ಪೂಜಿತಃ** ಪೂಜಿತನಾಗಿ, **ಪ್ರತ್ಯಪೂಜಯತ್** ಗೌರವಿಸಿದನು. **ವೈದೇಹೀ** ಸೀತೆಯು, **ಲಕ್ಷ್ಮಣಃ** ಲಕ್ಷಣನೂ ಸಹ, **ಯಥಾಯೋಗ್ಯಂ** ಯೋಗ್ಯತಾನುಸಾರ, **ಪ್ರಣೇಮತುಃ** ನಮಸ್ಕರಿಸಿದರು.

**ತಾತ್ಪರ್ಯ-** ಶ್ರೀರಾಮಚಂದ್ರನು ವಸಿಷ್ಠಾದಿ ಗುರುಗಳನ್ನು ನಮಸ್ಕರಿಸಿದನು. ತನಗಿಂತಲೂ ಚಿಕ್ಕವರಿಂದ ಮಿತ್ರರಿಂದ ನಮಸ್ಕೃತನಾದನು. ಅವರಿಗೆ ಗೌರವ ಕೊಟ್ಟನು. ಸೀತಾ, ಲಕ್ಷ್ಮಣರು ಯೋಗ್ಯತಾನುಸಾರ ನಮಸ್ಕರಿಸಿದರು. ।।೧೨೯।।

**ಪುತ್ರಾಂಸ್ತನ್ಮಾತರಸ್ತಾವತ್ಪ್ರಾಣಾಂಸ್ತನ್ವ ಇವೋತ್ಥಿತಾಃ ।**
**ಆರೋಪ್ಯಾಂಕೇಽಭಿಷಿಂಚಂತ್ಯೋ ಬಾಷ್ಪೌಘೈರ್ವಿಜಹುಃ ಶುಚಃ ।।೧೩೦।।**

**ತನ್ಮಾತರಃ** ಶ್ರೀರಾಮಚಂದ್ರನ ಮಾತೆಯರು, **ತಾವತ್** ಆಗ, **ಪುತ್ರಾನ್** ಮಕ್ಕಳನ್ನು ನೋಡಿ, **ಪ್ರಾಣಾನ್** ಪ್ರಾಣವನ್ನು ಕಳೆದುಕೊಂಡ, **ತನವಃ** ದೇಹಗಳು **ಉತ್ಥಿತಾಃ ಇವ** ಪುನಃ ಪ್ರಾಣಗಳನ್ನು ಹೊಂದಿ ಮೇಲಕ್ಕೆ ಎದ್ದಂತೆ ಆದರು. **ಅಂಕೇ** ತೊಡೆಯಲ್ಲಿ, **ಆರೋಪ್ಯ** ಕೂಡಿಸಿಕೊಂಡು, **ಬಾಷ್ಪೌಘೈಃ** ಕಣ್ಣೀರಿನ ಹನಿಗಳಿಂದ, **ಅಭಿಷಿಂಚಂತ್ಯಃ** ಅಭಿಷೇಕ ಮಾಡುತ್ತಾ, **ಶುಚಃ** ದುಃಖವನ್ನು **ವಿಜಹುಃ** ಬಿಟ್ಟರು.

**ತಾತ್ಪರ್ಯ-** ಆಗ ಶ್ರೀರಾಮಚಂದ್ರನ ಮಾತೆಯರು ಮಕ್ಕಳುಗಳನ್ನು ಕಂಡು ಪ್ರಾಣಗಳನ್ನು ಕಳೆದುಕೊಂಡ ದೇಹಗಳು ಪುನಃ ಪ್ರಾಣವನ್ನು ಹೊಂದಿ ಮೇಲಕ್ಕೆ ಏಳುವಂತೆ ಎದ್ದರು. ತೊಡೆಯ ಮೇಲೆ ಕೂಡಿಸಿಕೊಂಡು ಆನಂದಬಾಷ್ಪವನ್ನು ಸುರಿಸುತ್ತಾ ದುಃಖವನ್ನು ಕಳೆದುಕೊಂಡರು.

'ಪುತ್ರಾನ್ ಸ್ವಮಾತರಃ' ಎಂದು ಪಾಠಾಂತರವಿರುವುದು. ಸ್ವಮಾತರಃ ತಮ್ಮ ತಮ್ಮ ತಾಯಂದಿರು, ಪುತ್ರಾನ್ ತಮ್ಮ ತಮ್ಮ ಮಕ್ಕಳನ್ನು ರಾಮನನ್ನು ಕೌಸಲ್ಯೆಯು, ಶತ್ರುಘ್ನ ಲಕ್ಷ್ಮಣರನ್ನು ಸುಮಿತ್ರೆಯು, ಭರತನನ್ನು, ಕೈಕೇಯಿಯು, ತೊಡೆಯ ಮೇಲೆ ಕೂಡಿಸಿಕೊಂಡು ಎಂದು ಅರ್ಥ ಮಾಡಬೇಕು. ಇದರಿಂದ ನಂದಿಗ್ರಾಮದಲ್ಲಿದ್ದರೂ ಭರತ-ಶತ್ರುಘ್ನರು ರಾಮನ ಒಟ್ಟಿಗೇನೆ ತಾಯಿಯನ್ನು ನೋಡುವ ಸಂಕಲ್ಪ ಮಾಡಿದ್ದರೆಂದು ಧ್ವನಿತವಾಗುತ್ತದೆ. ।।೧೩೦।।

**ಜಟಾಂ ನಿರ್ಮುಚ್ಯ ವಿಧಿವತ್ಕುಲವೃದ್ಧೈಃ ಸಮಂ ಗುರುಃ ।**
**ಅಭ್ಯಷಿಂಚದ್ಯಥೈವೇಂದ್ರಂ ಚತುಃಸಿಂಧುಜಲಾದಿಭಿಃ ॥೧೩೧॥**

**ಗುರುಃ** ವಸಿಷ್ಠರು, **ಕುಲವೃದ್ಧೈಃ** ವಂಶದಲ್ಲಿ ವೃದ್ಧರಾದ ಬಂಧುಗಳಿಂದ, **ಸಮಂ** ಸಹಿತವಾಗಿ, **ಜಟಾಂ ನಿರ್ಮುಚ್ಯ** ಶ್ರೀರಾಮಚಂದ್ರನ ಜಟೆಯನ್ನು ತೆಗೆಸಿ, **ವಿಧಿವತ್** ನಿಯಮದಂತೆ, **ಚತುಃಸಿಂಧುಜಲಾದಿಭಿಃ** ನಾಲ್ಕು ದಿಕ್ಕಿನ ಸಮುದ್ರ, ಗಂಗಾದಿ ತೀರ್ಥಗಳ ಜಲದಿಂದ, **ದೇವೇಂದ್ರಂ ಇವ** ಬೃಹಸ್ಪತಿಯು ದೇವೇಂದ್ರನ್ನು ಉಪಾದಿಯಲ್ಲಿ **ಅಭ್ಯಷಿಂಚತ್** ಅಭಿಷೇಕ ಮಾಡಿದರು.

ಶಾಸ್ತ್ರದ ಪ್ರಕಾರ ವಸಿಷ್ಠರಿಗೆ ರಾಮನು ಮಗನಾದ್ದರಿಂದ ಅವರೇ ವಿಧಿಪೂರ್ವಕ ಅಭಿಷೇಕ ಮಾಡಿದರು. ಇದರಿಂದ ಶ್ರೀರಾಮನಿಗೆ ವಿಧಿಪೂರ್ವಕ ಪಟ್ಟಾಭಿಷೇಕವಾಗಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ.

**ತಾತ್ಪರ್ಯ-** ವಸಿಷ್ಠರು ರಾಜವಂಶದ ಹಿರಿಯರಿಂದ ಸಹಿತರಾಗಿ ಶ್ರೀರಾಮ-ಚಂದ್ರನ ಜಟೆಯನ್ನು ತೆಗೆಸಿದರು. ಬೃಹಸ್ಪತಿಗಳು ಇಂದ್ರನನ್ನು ದೇವಲೋಕದಲ್ಲಿ ಅಭಿಷೇಕ ಮಾಡಿದಂತೆ ನಾಲ್ಕು ಸಮುದ್ರ ಜಲದಿಂದ ಶ್ರೀರಾಮನ ಪಟ್ಟಾಭಿಷೇಕವನ್ನು ಮಾಡಿದರು. ॥೧೩೧॥

**ಏವಂ ಕೃತಶಿರಃಸ್ನಾನಃ ಸುವಾಸಾಃ ಸದಲಂಕೃತಃ ।**
**ಸ್ವಲಂಕೃತೈಃ ಸುವಾಸೋಭಿರ್ಭ್ರಾತೃಭಿರ್ಭಾರ್ಯಯಾ ಬಭೌ ॥೧೩೨॥**

**ಏವಂ** ಈ ರೀತಿಯಾಗಿ, **ಕೃತಶಿರಃಸ್ನಾನಃ** ಮಂಗಳಸ್ನಾನವನ್ನು ಮಾಡಿದ **ಸುವಾಸಾಃ** ಉತ್ತಮ ವಸ್ತ್ರವುಳ್ಳ, **ಸದಲಂಕೃತಃ** ಆಭರಣವನ್ನು ಧರಿಸಿದ ಶ್ರೀರಾಮಚಂದ್ರನು, **ಸ್ವಲಂಕೃತೈಃ** ಅಲಂಕಾರ ಹೊಂದಿದ **ಸುವಾಸೋಭಿಃ** ಉತ್ತಮ ವಸ್ತ್ರವನ್ನು ಧರಿಸಿದ, **ಭ್ರಾತೃಭಿಃ** ಸಹೋದರರಿಂದ, **ಭಾರ್ಯಯಾ ಚ** ಹೆಂಡತಿಯಿಂದಲೂ ಸಹಿತನಾಗಿ, **ಬಭೌ** ಪ್ರಕಾಶಿಸಿದನು.

**ತಾತ್ಪರ್ಯ-** ಶ್ರೀರಾಮಚಂದ್ರನು ಈ ರೀತಿಯಾಗಿ ಮಂಗಳಸ್ನಾನ ಮಾಡಿಕೊಂಡು, ಉತ್ತಮ ವಸ್ತ್ರ ಆಭರಣಗಳನ್ನು ಧರಿಸಿ, ಸಹೋದರರು ಮತ್ತು ಹೆಂಡತಿಯಿಂದ ಸಹಿತನಾಗಿ ಶೋಭಿಸಿದನು. ॥೧೩೨॥

**ಅಗ್ರಹೀದಾಸನಂ ಭ್ರಾತ್ರಾ ಪ್ರಣಿಪತ್ಯ ಪ್ರಸಾದಿತಃ ।**
**ಪ್ರಜಾಃ ಸ್ವಧರ್ಮೇ ನಿರತಾ ವರ್ಣಾಶ್ರಮಗುಣಾನ್ವಿತಾಃ ॥೧೩೩॥**

**ಭ್ರಾತ್ರಾ** ಭರತನಿಂದ, **ಪ್ರಣಿಪತ್ಯ** ನಮಸ್ಕೃತನಾಗಿ, **ಪ್ರಸಾದಿತಃ** ಪ್ರಾರ್ಥಿತನಾಗಿ, **ಆಸನಂ** ಸಿಂಹಾಸನವನ್ನು, **ಅಗ್ರಹೀತ್** ಪಡೆದನು. **ಪ್ರಜಾಃ** ಪ್ರಜೆಗಳು **ಸ್ವಧರ್ಮ-**

**ನಿರತಾಃ** ತಮ್ಮ ಧರ್ಮದಲ್ಲಿ ನಿರತರಾಗಿದ್ದರು. ಮತ್ತು **ವರ್ಣಾಶ್ರಮಗುಣಾನ್ವಿತಾಃ** ವರ್ಣಾಶ್ರಮಧರ್ಮಗಳಿಂದ ಕೂಡಿದ್ದರು.

**ತಾತ್ಪರ್ಯ-** ಶ್ರೀರಾಮಚಂದ್ರನು ಭರತನಿಂದ ಪ್ರಾರ್ಥಿತನಾಗಿ ಸಿಂಹಾಸನವನ್ನು ಪಡೆದನು. ಪ್ರಜೆಗಳು ತಮ್ಮ ಧರ್ಮದಲ್ಲೂ ಆಚರಣೆಯಲ್ಲೂ ನಿರತರಾಗಿದ್ದರು.

**ಜುಗೋಪ ಪಿತೃವದ್ರಾಮೋ ಮೇನಿರೇ ಪಿತರಂ ಚ ತಮ್ ।**
**ತ್ರೇತಾಯಾಂ ವರ್ತಮಾನಾಯಾಂ ಕಾಲಃ ಕೃತಸಮೋಽಭವತ್ ॥೧೩೪॥**

**ರಾಮಃ** ಶ್ರೀರಾಮನು ಪ್ರಜೆಗಳನ್ನು, **ಪಿತೃವತ್** ತಂದೆಯಂತೆ, **ಜುಗೋಪ** ಪಾಲಿಸಿದನು. ಪ್ರಜೆಗಳು **ತಂ** ಶ್ರೀರಾಮಚಂದ್ರನನ್ನು, **ಪಿತರಂ** ತಂದೆಯನ್ನಾಗಿ, **ಮೇನಿರೇ** ತಿಳಿದರು. **ತ್ರೇತಾಯಾಂ** ತ್ರೇತಾಯುಗವು **ವರ್ತಮಾನಾಯಾಂ** ನಡೆಯುತ್ತಿರಲು, **ಕಾಲಃ** ಕಾಲವು **ಕೃತಸಮಃ** ಕೃತಯುಗಕ್ಕೆ ಸಮಾನವು, **ಅಭವತ್** ಆಯಿತು.

**ತಾತ್ಪರ್ಯ-** ಶ್ರೀರಾಮನು ಪ್ರಜೆಗಳನ್ನು ತಂದೆಯಂತೆ ರಕ್ಷಿಸಿದನು. ಪ್ರಜೆಗಳು ಈತನನ್ನು ತಂದೆ ಎಂದು ತಿಳಿದರು. ತ್ರೇತಾಯುಗ ನಡೆಯುತ್ತಿರಲು ಕಾಲವು ಕೃತಯುಗದಂತಾಯಿತು. ॥೧೩೪॥

**ರಾಮೇ ರಾಜನಿ ಧರ್ಮಜ್ಞೇ ಸರ್ವಭೂತಸುಖಾವಹೇ ।**
**ವನಾನಿ ನದ್ಯೋ ಗಿರಯೋ ವರ್ಷಾಣಿ ದ್ವೀಪಸಿಂಧವಃ ॥೧೩೫॥**

**ಸರ್ವೇ ಕಾಮದುಘಾ ಆಸನ್ ಪ್ರಜಾನಾಂ ಭರತರ್ಷಭ ।**
**ನಾಧಿವ್ಯಾಧಿಜರಾಕ್ಷುತ್‌ತೃಡ್‌ದುಃಖಶೋಕಭಯಕ್ಲಮಾಃ ॥೧೩೬॥**

**ಸರ್ವಭೂತಸುಖಾವಹೇ** ಎಲ್ಲ ಪ್ರಾಣಿಗಳ ಸುಖವನ್ನು ವಹಿಸಿರುವ, **ಧರ್ಮಜ್ಞೇ** ಧರ್ಮಜ್ಞನಾದ, **ರಾಮೇ** ಶ್ರೀರಾಮನು, **ರಾಜನಿ** ರಾಜನಾಗಿರಲು, **ವನಾನಿ** ವನಗಳು, **ನದ್ಯಃ** ನದಿಗಳು **ಗಿರಯಃ** ಪರ್ವತಗಳು, **ವರ್ಷಾಣಿ** ನವಖಂಡಗಳು, **ದ್ವೀಪಸಿಂಧವಃ** ದ್ವೀಪಗಳು ಸಮುದ್ರಗಳು, **ಕಾಮದುಘಾಃ** ಅಪೇಕ್ಷಿತವನ್ನು ಕೊಡತಕ್ಕವುಗಳು, **ಆಸನ್** ಆದವು. **ಭರತರ್ಷಭ** ರಾಜನೇ, **ಪ್ರಜಾನಾಂ** ಪ್ರಜೆಗಳಿಗೆ **ಆಧಿಃ** ಮನೋಪೀಡೆಯು, **ವ್ಯಾಧಿಃ** ರೋಗವು, **ಜರಾ** ಮುಪ್ಪು, **ಕ್ಷುತ್** ಹಸಿವೆಯ, **ತೃಟ್** ಬಾಯಾರಿಕೆಯೂ, **ದುಃಖಶೋಕಭಯಕ್ಲಮಾಃ ನ** ದುಃಖ, ಶೋಕ, ಭಯಗಳ ಆಯಾಸವು ಆಗುತ್ತಿರಲಿಲ್ಲ.

**ತಾತ್ಪರ್ಯ-** ಎಲ್ಲ ಪ್ರಾಣಿಗಳ ಸುಖವನ್ನು ವಹಿಸುವ ಧರ್ಮಜ್ಞನಾದ ಶ್ರೀರಾಮನು ರಾಜನಾಗಿರಲು ವನಗಳು, ನದಿಗಳು, ಪರ್ವತಗಳು, ನವಖಂಡಗಳು,

ದ್ವೀಪಗಳು, ಸಮುದ್ರಗಳು, ಎಲ್ಲವೂ ಅಪೇಕ್ಷಿಸಿದ್ದನ್ನು ಕೊಡುತ್ತಿದ್ದವು. ಪ್ರಜೆಗಳಿಗೆ ವ್ಯಥೆ, ರೋಗ, ಮುಪ್ಪು, ಹಸಿವೆ, ಬಾಯಾರಿಕೆ, ದುಃಖ, ಶೋಕ, ಭಯಗಳ ಆಯಾಸವೂ ಆಗುತ್ತಿರಲಿಲ್ಲ. ।।೧೩೪-೧೩೬।।

**ಮೃತ್ಯುಶ್ಚಾನಿಚ್ಛತಾಂ ನಾಸೀದ್ರಾಮೇ ರಾಜನ್ಯಧೋಕ್ಷಜೇ ।**
**ಏಕಪತ್ನೀವ್ರತಧರೋ ರಾಜರ್ಷಿಚರಿತಃ ಶುಚಿಃ ।।೧೩೭।।**

(**ರಾಮಃ** ರಾಮಚಂದ್ರನು) **ಏಕಪತ್ನೀವ್ರತಧರಃ** ಏಕಪತ್ನೀವ್ರತಧಾರಿಯು, **ರಾಜರ್ಷಿಚರಿತಃ** ರಾಜರ್ಷಿಗಳ ಆಚರಣೆ ಇರುವವನು **ಶುಚಿಃ** ನಿರ್ಮಲನು ಆಗಿದ್ದನು. **ಅಧೋಕ್ಷಜೇ** ಇಂದ್ರಿಯ ಪ್ರೇರಕನಾದ, **ರಾಮೇ** ರಾಮನು **ರಾಜನಿ** ರಾಜನಾಗಿರಲು, **ಅನಿಚ್ಛತಾಂ** ಅಪೇಕ್ಷೆ ಇಲ್ಲದವರಿಗೆ, **ಮೃತ್ಯುಃ ನ ಆಸೀತ್** ಮರಣವು ಆಗಲಿಲ್ಲ.

**ತಾತ್ಪರ್ಯ-** ರಾಮಂಚಂದ್ರನು ಏಕಪತ್ನೀವ್ರತಸ್ಥನು, ರಾಜರ್ಷಿಚರ್ಯೆ ಉಳ್ಳವನು, ನಿರ್ಮಲನು ಆಗಿದ್ದನು. ಇಂಥ ಶ್ರೀರಾಮನು ರಾಜನಾಗಿರಲು ಇಚ್ಛೆ ಇಲ್ಲದವರಿಗೆ ಮೃತ್ಯುವು ಸಂಭವಿಸುತ್ತಿರಲಿಲ್ಲ. ।।೧೩೭।।

**ಸ್ವಧರ್ಮಂ ಗೃಹಮೇಧೀಯಂ ಶಿಕ್ಷಯನ್ ಸ್ವಯಮಾಚರನ್ ।**
**ಪ್ರೇಮ್ಣಾಽನುವೃತ್ತ್ಯಾ ಶೀಲೇನ ಪ್ರಶ್ರಯಾವನತಾ ಸತೀ ।**
**ಭಿಯಾ ಹ್ರಿಯಾಭಿಭಾವಜ್ಞಾ ಭರ್ತುಃ ಸೀತಾಽಹರನ್ಮನಃ ।।೧೩೮।।**

ಶ್ರೀರಾಮನು **ಗೃಹಮೇಧೀಯಂ** ಗೃಹಸ್ಥಾಶ್ರಮಿಗಳಿಗೆ ಉಚಿತವಾದ, **ಸ್ವಧರ್ಮಂ** ಅವರವರ ಧರ್ಮವನ್ನು **ಶಿಕ್ಷಯನ್** ಶಿಕ್ಷಿಸುತ್ತಾ, **ಸ್ವಯಂ** ತಾನು, **ಆಚರನ್** ಆಚರಿಸುತ್ತಾ ಇದ್ದನು. **ಸೀತಾ** ಸೀತಾದೇವಿಯು **ಹ್ರಿಯಾ** ಲಜ್ಜೆಯಿಂದಲೂ, **ಪ್ರೇಮ್ಣಾ** ಪ್ರೇಮದಿಂದಲೂ **ಅನುವೃತ್ತ್ಯಾ** ಅನುಸರಣೆಯಿಂದಲೂ, **ಶೀಲೇನ** ನಡತೆಯಿಂದಲೂ, **ಪ್ರಶ್ರಯಾವನತಾ ಸತೀ** ವಿನಯದಿಂದ ಬಾಗಿದವಳಾಗುತ್ತಾ ಶ್ರೀರಾಮಚಂದ್ರನ, **ಮನಃ** ಮನಸ್ಸನ್ನು, **ಅಹರತ್** ಆಕರ್ಷಿಸಿದಳು.

**ತಾತ್ಪರ್ಯ-** ಶ್ರೀರಾಮನು ಸಂಸಾರಿಗಳ ಧರ್ಮವನ್ನು ಪ್ರಜೆಗಳಿಗೆ ತಿಳಿಸುತ್ತಾ ತಾನೂ ಆಚರಿಸುತ್ತಿದ್ದನು. ಸೀತಾದೇವಿಯು ಲಜ್ಜೆಯಿಂದಲೂ, ಪ್ರೇಮದಿಂದಲೂ, ನಡತೆಯಿಂದಲೂ, ವಿನಯದಿಂದಲೂ ಅನುಸರಣೆಯಿಂದಲೂ, ನಮ್ರತೆಯಿಂದಲೂ ಶ್ರೀರಾಮನ ಮನಸ್ಸನ್ನು ಆಕರ್ಷಿಸಿದಳು. ।।೧೩೮।।

**★ ।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಅಷ್ಟಮೋಽಧ್ಯಾಯಃ ।। ★**

# ಅಥ ನವಮೋಽಧ್ಯಾಯಃ

**ಶ್ರೀಶುಕ ಉವಾಚ-**

**ಭಗವಾನಾತ್ಮನಾಽತ್ಮಾನಂ ರಾಮ ಉತ್ತಮಕಲ್ಪಕೈಃ ।**
**ಸರ್ವದೇವಮಯಂ ದೇವಮೀಜ ಆಚಾರ್ಯವಾನ್ ಮಖೈಃ ॥೧॥**

ಗುರುಕುಲವಾಸ ಮಾಡಿ ಶಿಕ್ಷಾ ಪಡೆದವನಾದ **ಭಗವಾನ್** ಗುಣಪೂರ್ಣನಾದ, **ಆಚಾರ್ಯವಾನ್** ವಸಿಷ್ಠರಿಂದ ಯುಕ್ತನಾದ **ರಾಮಃ** ಶ್ರೀರಾಮಚಂದ್ರನು, **ಆತ್ಮನಾ** ಮನಸ್ಸಿನಿಂದ, **ಆತ್ಮಾನಂ** ತನ್ನ ಸ್ವರೂಪವನ್ನು ಧ್ಯಾನಮಾಡುತ್ತಾ, **ಉತ್ತಮಕಲ್ಪಕೈಃ** ಮುಖ್ಯಪಕ್ಷದಲ್ಲಿ ಹೇಳಿದ ದಕ್ಷಿಣಾದಿಗಳಿಂದ, **ಸರ್ವದೇವಮಯಂ** ಸರ್ವದೇವಪ್ರಧಾನನಾದ, **ದೇವಂ** ತನ್ನನ್ನೇ ಕುರಿತು, **ಮಖೈಃ** ಯಾಗಗಳಿಂದ, **ಈಜೇ** ಯಾಗ ಮಾಡಿದನು.

**ತಾತ್ಪರ್ಯ-** ಸರ್ವಜ್ಞನಾದರೂ ಲೋಕಶಿಕ್ಷಾರ್ಥವಾಗಿ ಗುರುಕುಲವಾಸ ಮಾಡಿದ ಗುಣಪರಿಪೂರ್ಣನಾದ ತನ್ನ ಮನಸ್ಸಿನಿಂದ ತನ್ನ ಸ್ವರೂಪವನ್ನು ಧ್ಯಾನ ಮಾಡುತ್ತಾ ಉತ್ತಮಕಲ್ಪ ದಕ್ಷಿಣಾದಿಗಳಿಂದ ಸರ್ವದೇವಪ್ರಧಾನವಾದ ತನ್ನನ್ನೇ ಕುರಿತು ಯಜ್ಞಾದಿಗಳಿಂದ ಪೂಜಿಸಿದನು. ॥೧॥

**ಹೋತ್ರೇಽದದಾದ್ದಿಶಂ ಪ್ರಾಚೀಂ ಬ್ರಹ್ಮಣೇ ದಕ್ಷಿಣಾಂ ವಿಭುಃ ।**
**ಅಧ್ವರ್ಯವೇ ಪ್ರತೀಚೀಂ ಚ ಉದೀಚೀಂ ಸಾಮಗಾಯ ಸಃ ॥೨॥**

**ಹೋತ್ರೇ** ಹೋತೃವಿಗೆ, **ಪ್ರಾಚೀಂ** ಪೂರ್ವದಿಕ್ಕನ್ನು, **ಬ್ರಹ್ಮಣೇ** ಬ್ರಹ್ಮನಿಗೆ, **ದಕ್ಷಿಣಾಂ** ದಕ್ಷಿಣದಿಕ್ಕನ್ನು, **ಅಧ್ವರ್ಯವೇ** ಅಧ್ವರ್ಯುವಿಗೆ, **ಪ್ರತೀಚೀಂ** ಪಶ್ಚಿಮದಿಕ್ಕನ್ನು **ಸಾಮಗಾಯ** ಸಾಮಗಾಯಕನಿಗೆ, **ಉದೀಚೀಂ** ಉತ್ತರ ದಿಕ್ಕನ್ನು, **ಅದದಾತ್** ಕೊಟ್ಟನು.

**ತಾತ್ಪರ್ಯ-** ಶ್ರೀರಾಮಚಂದ್ರನು ಹೋತೃವಿಗೆ ಪೂರ್ವದಿಕ್ಕನ್ನು ಬ್ರಹ್ಮನಿಗೆ ದಕ್ಷಿಣ ದಿಕ್ಕನ್ನು, ಅಧ್ವರ್ಯುವಿಗೆ ಪಶ್ಚಿಮದಿಕ್ಕನ್ನು, ಸಾಮಗಾಯಕನಿಗೆ ಉತ್ತರ ದಿಕ್ಕನ್ನು ಕೊಟ್ಟನು. ॥೨॥

**ಆಚಾರ್ಯಾಯ ದದೌ ಶೇಷಾ ಯಾವತೀ ಭೂಸ್ತದಂತರಾ ।**
**ಮನ್ಯಮಾನ ಇದಂ ಕೃತ್ಸ್ನಂ ಬ್ರಾಹ್ಮಣೋಽರ್ಹತಿ ನಿಸ್ಪೃಹಃ ॥೩॥**

**ತದಂತರಾ** ಆ ದಿಕ್ಕುಗಳ ಮಧ್ಯದಲ್ಲಿರುವ, **ಇದಂ** ಈ **ಕೃತ್ಸ್ನಂ** ಸಮಸ್ತವಾದ **ಶೇಷಾ** ಉಳಿದಿರುವ **ಯಾವತೀ ಭೂಃ** ಎಲ್ಲ ಭೂಮಿಯು **ನಿಸ್ಪೃಹಃ** ಯದೃಚ್ಛಾ

ಲಾಭಸಂತುಷ್ಟನಾದ, **ಬ್ರಾಹ್ಮಣಃ** ಬ್ರಾಹ್ಮಣನು, **ಅರ್ಹತಿ** ತೆಗೆದುಕೊಳ್ಳುವುದಕ್ಕೆ ಅರ್ಹನಾಗುತ್ತಾನೆ, ಎಂದು **ಮನ್ಯಮಾನಃ** ತಿಳಿದು, **ಆಚಾರ್ಯಾಯ** ಆಚಾರ್ಯರಿಗೆ **ದದೌ** ಕೊಟ್ಟನು.

**ತಾತ್ಪರ್ಯ-** ಆ ದಿಕ್ಕುಗಳ ಮಧ್ಯದಲ್ಲಿರುವ ಎಲ್ಲ ಭೂಪ್ರದೇಶವನ್ನು ಪಡೆಯಲು ನಿಸ್ಪೃಹನಾದ ಬ್ರಾಹ್ಮಣನು ಅರ್ಹನೆಂದು ತಿಳಿದು ಎಲ್ಲಾ ಭೂಮಿಯನ್ನು ಆಚಾರ್ಯರಿಗೆ ಕೊಟ್ಟನು. ॥೩॥

**ಇತ್ಯದಾತ್ಸ್ವಮಲಂಕಾರಂ ವಾಸೋಭ್ಯಾಮವಶೇಷಿತಃ ।**
**ತಥಾ ರಾಜ್ಞ್ಯಪಿ ವೈದೇಹೀ ಸೌಮಂಗಲ್ಯಾವಶೇಷಿತಾ** ॥೪॥

**ವಾಸೋಭ್ಯಾಂ** ಎರಡು ವಸ್ತ್ರಗಳಿಂದ, **ಅವಶೇಷಿತಃ** ಉಳಿದಿರುವವನಾಗಿ ಎಲ್ಲವನ್ನು, **ಇತಿ** ಈ ರೀತಿಯಾಗಿ, **ಅದಾತ್** ಕೊಟ್ಟನು. **ರಾಜ್ಞೀ ಅಪಿ** ಸೀತಾ-ದೇವಿಯೂ ಸಹ, **ಸೌಮಂಗಲ್ಯಾವಶೇಷಿತಾ** ಮಂಗಳಸೂತ್ರ ಉಳಿದವಳಾಗಿ, **ಸ್ವಂ** ತನ್ನ **ಅಲಂಕಾರಂ** ಎಲ್ಲಾ ಆಭರಣಗಳನ್ನು **ಅದಾತ್** ಕೊಟ್ಟಳು.

**ತಾತ್ಪರ್ಯ-** ಶ್ರೀರಾಮಚಂದ್ರನು ಎರಡು ವಸ್ತ್ರಗಳ ವಿನಾ ಉಳಿದ ಎಲ್ಲವನ್ನು ದಾನ ಮಾಡಿದನು. ಸೀತಾದೇವಿಯಾದರೂ ಮಂಗಳಸೂತ್ರದ ವಿನಾ ಎಲ್ಲವನ್ನು ದಾನ ಮಾಡಿದಳು. ॥೪॥

**ತೇ ತು ಬ್ರಾಹ್ಮಣದೇವಸ್ಯ ವಾತ್ಸಲ್ಯಂ ವೀಕ್ಷ್ಯ ಸಜ್ಜನಾಃ ।**
**ಪ್ರೀತಾಃ ಕ್ಲಿನ್ನಧಿಯಸ್ತಸ್ಮೈ ಪ್ರತ್ಯರ್ಪ್ಯೇದಂ ಬಭಾಷಿರೇ** ॥೫॥

**ತೇ** ಆ ದಾನ ತೆಗೆದುಕೊಂಡ ಮಹನೀಯರಾದ, **ಸಜ್ಜನಾಃ ತು** ಸಜ್ಜನರಾದರೂ, **ಬ್ರಾಹ್ಮಣದೇವಸ್ಯ** ಬ್ರಾಹ್ಮಣರ ದೇವನಾದ, ಶ್ರೀರಾಮನ, **ವಾತ್ಸಲ್ಯಂ** ಸ್ನೇಹಪರವಶತೆ-ಯನ್ನು, **ವೀಕ್ಷ್ಯ** ನೋಡಿ, **ಪ್ರೀತಾಃ** ಪ್ರೀತರಾಗಿ, **ಕ್ಲಿನ್ನಧಿಯಃ** ದ್ರವಚ್ಚಿತ್ತ ಉಳ್ಳವರಾಗಿ, **ತಸ್ಮೈ** ಶ್ರೀರಾಮನಿಗೆ, **ಪ್ರತ್ಯರ್ಪ್ಯ** ಪ್ರತಿಯಾಗಿ **ಇದಂ** ಈ ರೀತಿಯಾಗಿ, **ಬಭಾಷಿರೇ** ಮಾತನಾಡಿದರು.

**ತಾತ್ಪರ್ಯ-** ಆ ದಾನ ಸ್ವೀಕರಿಸಿದ ಬ್ರಾಹ್ಮಣರು ಶ್ರೀರಾಮನ ವಾತ್ಸಲ್ಯವನ್ನು ನೋಡಿ ಪ್ರೀತರಾಗಿ ದ್ರವಚ್ಚಿತ್ತರಾಗಿ ಮನಸ್ಸು ಕರಗಿ ಶ್ರೀರಾಮಚಂದ್ರನಿಗೆ ಈ ರೀತಿಯಾಗಿ ಹೇಳಿದರು. ॥೫॥

**ಅಪ್ರತ್ತಂ ನಸ್ತ್ವಯಾ ಕಿಂತು ಭಗವನ್ ಭುವನೇಶ್ವರ ।**
**ಯತೋಽಂತರ್ಹೃದಿ ಸಂವಿಶ್ಯ ತಮೋ ಹಂಸಿ ಸ್ವರೋಚಿಷಾ** ॥೬॥

**ಭಗವನ್** ಪೂರ್ಣನಾದ! **ಭುವನೇಶ್ವರ** ಜಗದೊಡೆಯನೇ, **ತ್ವಯಾ** ನಿನ್ನಿಂದ **ನಃ** ನಮ್ಮಗಳಿಗೆ **ಅಪ್ರತ್ತಂ** ಕೊಡದೇ ಇರುವುದು, **ನ** ಇರುವುದಿಲ್ಲ, **ಕಿಂಚ** ಆದರೆ **ತ್ವಂ** ನೀನು, **ಯತಃ** ಯಾವಕಾರಣದಿಂದ, ನಮ್ಮಗಳ **ಹೃದಿ** ಹೃದಯದಲ್ಲಿ, **ಸಂವಿಶ್ಯ** ಪ್ರವೇಶಿಸಿ, **ಸ್ವರೋಚಿಷಾ** ನಿನ್ನ ಜ್ಞಾನದಿಂದ (ಜ್ಞಾನವನ್ನು ಕೊಟ್ಟು) **ತಮಃ** ನಮ್ಮಲ್ಲಿರುವ ಅಜ್ಞಾನವನ್ನು **ಹಂಸಿ** ಹೋಗಲಾಡಿಸುತ್ತೀಯಾ.

**ತಾತ್ಪರ್ಯ-** ಸ್ವಾಮಿನ್, ಜಗದೀಶನೇ! ನೀನು, ನಮ್ಮ ಅಂತರಂಗದಲ್ಲಿದ್ದು ನಮ್ಮಲ್ಲಿರುವ ಅಜ್ಞಾನವನ್ನು ಕಳೆದು ನಿನ್ನ ಜ್ಞಾನವನ್ನು ಕೊಡುತ್ತೀಯಾ, ಇಂಥಾ ನೀನು ಪುರುಷಾರ್ಥಗಳಲ್ಲಿ ಉತ್ತಮವಾದ ಮೋಕ್ಷವನ್ನು ಕೊಡುತ್ತಿ. ಆದ್ದರಿಂದ ನೀನು ನಮಗೆ ಕೊಡದೇ ಇರುವುದು ಯಾವುದೂ ಇಲ್ಲ. ॥೬॥

**ನಮೋ ಬ್ರಹ್ಮಣ್ಯದೇವಾಯ ರಾಮಾಯಾಕುಂಠಮೇಧಸೇ ।**
**ಉತ್ತಮಶ್ಲೋಕಧುರ್ಯಾಯ ನ್ಯಸ್ತತತ್ವಾರ್ಪಿತಾಂಘ್ರಯೇ ॥೭॥**

**ಬ್ರಹ್ಮಣ್ಯದೇವಾಯ** ಜ್ಞಾನಿಗಳ ದೇವನಾದ, **ಅಕುಂಠಮೇಧಸೇ** ಪೂರ್ಣ ಜ್ಞಾನಿಯಾದ, **ಉತ್ತಮಶ್ಲೋಕಧುರ್ಯಾಯ** ಉತ್ತಮ ಕೀರ್ತಿಶಾಲಿಗಳಲ್ಲಿ ಶ್ರೇಷ್ಠನಾದ, **ನ್ಯಸ್ತತತ್ವಾರ್ಪಿತಾಂಘ್ರಯೇ** ಸ್ವಕೀಯರಾದ ಸನ್ಯಾಸಿಗಳಲ್ಲಿ ಇಡಲ್ಪಟ್ಟ, ಪಾದಕಮಲ ಉಳ್ಳ ನಿನಗೋಸ್ಕರ **ನಮಃ** ನಮಸ್ಕಾರವು.

**ತಾತ್ಪರ್ಯ-** ಸ್ವಾಮಿನ್ ! ನೀನು ನಮಗೆ ಶಾಶ್ವತವಾದ ಧನವನ್ನು ಕೊಟ್ಟಿರುವಿ. ನಿನಗೆ ನಾವು ಪ್ರತಿಯಾಗಿ ಏನೂ ಕೊಡಲಾರೆವು. ನಮಸ್ಕಾರವನ್ನು ಮಾತ್ರ ಅರ್ಪಿಸುತ್ತೇವೆ. ನೀನು ಜ್ಞಾನಿಗಳ ದೇವನಾಗಿರುವಿ. ಜ್ಞಾನ ಪೂರ್ಣನಾಗಿರುವಿ. ಉತ್ತಮ ಕೀರ್ತಿ ಪೂರ್ಣನಾಗಿರುವಿ. ಯತಿಗಳು ನಿನ್ನ ಪಾದಾರವಿಂದವನ್ನು ಸದಾ ಸ್ಮರಿಸುತ್ತಾರೆ. ಇಂಥಾ ನಿನ್ನಲ್ಲಿ ನಮ್ಮ ನಮಸ್ಕಾರವನ್ನು ಅರ್ಪಿಸುತ್ತೇವೆ. ॥೭॥

**ಶ್ರೀಶುಕ ಉವಾಚ-**

**ಕದಾಚಿಲ್ಲೋಕಜಿಜ್ಞಾಸುರ್ಗೂಢೋ ರಾತ್ರ್ಯಾಮಲಕ್ಷಿತಃ ।**
**ಚರನ್ವಚೋಽಶೃಣೋದ್ರಾಮೋ ಭಾರ್ಯಾಮುದ್ದಿಶ್ಯ ಕಸ್ಯಚಿತ್ ॥೮॥**

**ಅಲಕ್ಷಿತಃ** ಯಾರಿಗೂ ತಿಳಿಯದಂತೆ, **ಕದಾಚಿತ್** ಒಮ್ಮೆ **ಲೋಕಜಿಜ್ಞಾಸುಃ** ಜನರ ವಾರ್ತೆಯನ್ನು ತಿಳಿಯಲು ಅಪೇಕ್ಷೆ ಉಳ್ಳ **ರಾಮಃ** ಶ್ರೀರಾಮಚಂದ್ರನು, **ರಾತ್ರ್ಯಾಂ** ರಾತ್ರಿಯಲ್ಲಿ ವೇಷವನ್ನು ಬದಲಾಯಿಸಿ, **ಗೂಢಃ** ಗೂಢಚಾರನಾಗಿ, **ಚರನ್** ಸಂಚರಿಸುತ್ತಾ , **ಕಸ್ಯಚಿತ್** ಒಬ್ಬ ಮನುಷ್ಯನ **ಭಾರ್ಯಾಂ ಉದ್ದಿಶ್ಯ** ತನ್ನ ಹೆಂಡತಿಯ ಉದ್ದಿಶ್ಯವಾದ **ವಚಃ** ಮಾತನ್ನು **ಅಶೃಣೋತ್** ಕೇಳಿದನು.

**ತಾತ್ಪರ್ಯ-** ಒಮ್ಮೆ ಶ್ರೀರಾಮಚಂದ್ರನು ಜನರ ವಾರ್ತೆಯನ್ನು ತಿಳಿಯಲು ರಾತ್ರಿ ಸಂಚರಿಸುತ್ತಿರುವಾಗ ಒಬ್ಬನು ತನ್ನ ಹೆಂಡತಿಗೆ ಹೇಳಿದ ಮಾತನ್ನು ಕೇಳಿದನು.

**ನಾಹಂ ಬಿಭರ್ಮಿ ತ್ವಾಂ ದುಷ್ಟಾಮಸತೀಂ ಪರವೇಶ್ಮಗಾಮ್ ।**
**ಸ್ತ್ರೈಣೋ ಹಿ ಬಿಭೃಯಾತ್ಸೀತಾಂ ರಾಮೋ ನಾಹಂ ಭಜೇ ಪುನಃ ॥೯॥**

**ಅಹಂ** ನಾನು, **ಅಸತೀಂ** ಪತಿವ್ರತೆಯಲ್ಲದ, **ದುಷ್ಟಾಂ** ದುಷ್ಟಳಾದ, **ಪರವೇಶ್ಮಗಾಂ** ಪರರ ಮನೆಯಲ್ಲಿದ್ದ, **ತ್ವಾಂ** ನಿನ್ನನ್ನು **ನ ಬಿಭರ್ಮಿ** ಹೊಂದುವುದಿಲ್ಲ. **ಸ್ತ್ರೈಣಃ** ಸ್ತ್ರೀಲೋಲನಾದ, **ರಾಮಃ** ರಾಮಚಂದ್ರನು, **ಸೀತಾಂ** ಸೀತೆಯನ್ನು (ಪರರ ಮನೆಯಲ್ಲಿರುವ ಸೀತೆಯನ್ನು) **ಬಿಭೃಯಾತ್** ಹೊಂದಲಿ, **ಅಹಂ** ನಾನು **ಪುನಃ** ಮತ್ತೆ , **ನ ಭಜೇ** ನಿನ್ನನ್ನು ಹೊಂದುವುದಿಲ್ಲ.

**ತಾತ್ಪರ್ಯ-** ನಾನು ದುಷ್ಟಳಾದ ಪತಿವ್ರತೆಯಲ್ಲದ ಪರರ ಮನೆಯಲ್ಲಿ ವಾಸಮಾಡಿದ ನಿನ್ನನ್ನು ಸ್ವೀಕರಿಸುವುದಿಲ್ಲ. ಸ್ತ್ರೀಲೋಲನಾದ ಆ ರಾಮನು ಈ ರೀತಿಯಾದ ಸೀತೆಯನ್ನು ಹೊಂದಲಿ. ನಾನು ಮಾತ್ರ ನಿನ್ನನ್ನು ಸ್ವೀಕರಿಸುವುದಿಲ್ಲ.

**ಇತಿ ಲೋಕಾದ್ಬಹುಮುಖಾದ್ದುರಾರಾಧ್ಯಾದಸಂವಿದಃ ।**
**ಶ್ರುತ್ವಾ ಭೀತೇನ ಸಾ ತ್ಯಕ್ತಾ ಪ್ರಾಪ್ತಾ ಪ್ರಾಚೇತಸಾಶ್ರಮಮ್ ॥೧೦॥**

**ಇತಿ** ಈ ರೀತಿಯಾದ, **ಬಹುಮುಖಾತ್** ಅನೇಕ ಭಾಷಣಗಳುಳ್ಳ, **ದುರಾರಾಧ್ಯಾತ್** ದುಷ್ಟರಿಗೆ ಶ್ಲಾಘ್ಯವಾದ, **ಅಸಂವಿದಃ** ಅಜ್ಞಾನಿಗಳಾದ, **ಲೋಕಾತ್** ಜನರ ದೆಸೆಯಿಂದ, **ಶ್ರುತ್ವಾ** ಮಾತನ್ನು ಕೇಳಿ, **ಭೀತೇನ** ಭೀತನಾದ, **ರಾಮೇಣ** ಶ್ರೀರಾಮನಿಂದ, **ತ್ಯಕ್ತಾ** ಬಿಡಲ್ಪಟ್ಟ, **ಸಾ** ಆ **ಸೀತಾ** ಸೀತೆಯು, **ಪ್ರಾಚೇತಸಾಶ್ರಮಂ** ವಾಲ್ಮೀಕಿಗಳ ಆಶ್ರಮವನ್ನು **ಪ್ರಾಪ್ತಾ** ಹೊಂದಿದಳು. ಇದು ವಿಡಂಬನವಾಗಿರುತ್ತೆ .

**ತಾತ್ಪರ್ಯ-** ಈ ರೀತಿಯಾದ ಬಹುಭಾಷಗಳುಳ್ಳ ದುಷ್ಟರಿಗೆ ಶ್ಲಾಘ್ಯವಾದ ಅಜ್ಞಾನಿ ಜನರ ನಿಷ್ಪ್ರಯೋಜಕ ನಿರಾಧಾರವಾದ ಮಾತನ್ನು ಕೇಳಿ ಭೀತನಾದ ಶ್ರೀರಾಮನು ಶ್ರೀಸೀತಾದೇವಿಯನ್ನು ತ್ಯಾಗಮಾಡಿದನು. ಅವಳು ವಾಲ್ಮೀಕಿಗಳ ಆಶ್ರಮವನ್ನು ಸೇರಿದಳು. ಭೀತನಾಗಿ ಸೀತೆಯನ್ನು ಬಿಟ್ಟನೆನ್ನುವದು ಕೇವಲ ವಿಡಂಬನವು. ॥೧೦॥

**ಅಂತರ್ವತ್ನ್ಯಾಗತೇ ಕಾಲೇ ಯಮೌ ಸಾ ಸುಷುವೇ ಸುತೌ ।**
**ಕುಶೋ ಲವ ಇತಿ ಖ್ಯಾತೌ ತಯೋಶ್ಚಕ್ರೇ ಕ್ರಿಯಾಂ ಮುನಿಃ ॥೧೧॥**

**ಅಂತರ್ವತ್ನೀ** ಗರ್ಭಿಣಿಯಾದ, **ಸಾ** ಸೀತೆಯು, **ಆಗತೇ ಕಾಲೇ** ಹತ್ತನೇ ತಿಂಗಳು ಬಂದಾಗ, **ಯಮೌ** ಅವಳಿಯಾದ, **ಸುತೌ** ಮಕ್ಕಳನ್ನು, **ಸುಷುವೇ** ಹೆತ್ತಳು.

**ಮುನಿಃ** ವಾಲ್ಮೀಕಿಯು **ತಯೋಃ** ಆ ಇಬ್ಬರು ಮಕ್ಕಳಿಗೆ, **ಕ್ರಿಯಾ** ಜಾತಕರ್ಮಾದಿ ಕ್ರಿಯೆಯನ್ನು **ಚಕ್ರೇ** ಮಾಡಿದನು. ಅವರು **ಕುಶಃ ಲವಃ ಇತಿ** ಕುಶಲವರೆಂದು, **ಖ್ಯಾತೌ** ಪ್ರಸಿದ್ಧರಾದರು.

**ತಾತ್ಪರ್ಯ-** ಗರ್ಭಿಣಿಯಾದ ಸೀತೆಯು ಹತ್ತನೇ ತಿಂಗಳಲ್ಲಿ ಅವಳಿ ಮಕ್ಕಳನ್ನು ಪಡೆದಳು. ವಾಲ್ಮೀಕಿಯು ಆ ಮಕ್ಕಳಿಗೆ ನಾಮಕರಣಾದಿಗಳನ್ನು ಮಾಡಿದನು. ಆ ಮಕ್ಕಳು ಲವ-ಕುಶರೆಂದು ಪ್ರಸಿದ್ಧರಾದರು. ॥೧೧॥

**ಅಂಗದಶ್ಚಕ್ರಕೇತುಶ್ಚ ಲಕ್ಷ್ಮಣಸ್ಯಾತ್ಮಜೌ ಸುತೌ ।**
**ತಕ್ಷಃ ಪುಷ್ಕಲ ಇತ್ಯಾಸ್ತಾಂ ಭರತಸ್ಯ ಮಹೀಪತೇ ॥೧೨॥**

**ಮಹೀಪತೇ** ಎಲೈ ರಾಜನೇ! **ಲಕ್ಷ್ಮಣಸ್ಯ** ಲಕ್ಷ್ಮಣನಿಗೆ, **ಅಂಗದಃ** ಅಂಗದನೆಂದು, **ಚಕ್ರಕೇತುಃ** ಚಕ್ರಕೇತು ಎಂದು, **ಆತ್ಮಜೌ** ತನ್ನಿಂದ ಜನಿಸಿದ, **ಸುತೌ** ಮಕ್ಕಳಾದರು. **ಭರತಸ್ಯ** ಭರತನಿಗೆ, **ತಕ್ಷಃ** ತಕ್ಷನೆಂದು, **ಪುಷ್ಕಲಃ** ಪುಷ್ಕಲನೆಂದು, **ಇತಿ** ಈ ರೀತಿಯಾಗಿ, **ಸುತೌ** ಇಬ್ಬರು ಮಕ್ಕಳು, **ಆಸ್ತಾಂ** ಆದರು.

**ತಾತ್ಪರ್ಯ-** ಎಲೈ ರಾಜನೇ! ಲಕ್ಷ್ಮಣನಿಗೆ ಅಂಗದ, ಚಕ್ರಕೇತು ಎಂಬ ಇಬ್ಬರು ಮಕ್ಕಳಾದರು. ಭರತನಿಗೆ ತಕ್ಷನೆಂದು ಪುಷ್ಕಲನೆಂದು ಇಬ್ಬರು ಮಕ್ಕಳಾದರು. ॥೧೨॥

**ಸುಬಾಹುಃ ಶ್ರುತಸೇನಶ್ಚ ಶತ್ರುಘ್ನಸ್ಯ ಬಭೂವತುಃ ।**
**ಗಂಧರ್ವಾನ್ಕೋಟಿಶೋ ಜಘ್ನೇ ಭರತೋ ವಿಜಯೇ ದಿಶಾಮ್ ॥೧೩॥**

**ಶತ್ರುಘ್ನಸ್ಯ** ಶತ್ರುಘ್ನನಿಗೆ, **ಸುಬಾಹುಃ** ಸುಬಾಹು ಎಂದು **ಶ್ರುತಸೇನಃ** ಶ್ರುತಸೇನನೆಂದು ಮಕ್ಕಳು, **ಬಭೂವತುಃ** ಅವತರಿಸಿದರು. **ಭರತಃ** ಭರತನು **ದಿಶಾಂ** ದಿಕ್ಕುಗಳ **ವಿಜಯೇ** ವಿಜಯಕ್ಕೆ ಹೊರಟಾಗ **ಕೋಟಿಶಃ** ಮೂರು ಕೋಟಿ ಸಂಖ್ಯಾಕರಾದ ಗಂಧರ್ವರನ್ನು **ಜಘ್ನೇ** ಸಂಹರಿಸಿದನು.

**ತಾತ್ಪರ್ಯ-** ಶತ್ರುಘ್ನನಿಗೆ ಸುಬಾಹು, ಶ್ರುತಸೇನನೆಂದು ಮಕ್ಕಳು ಆದರು. ಭರತನು ದಿಕ್ಕುಗಳ ವಿಜಯಕಾಲದಲ್ಲಿ ಮೂರು ಕೋಟಿಸಂಖ್ಯಾಕರಾದ ಗಂಧರ್ವಜನ್ಮದ ದೈತ್ಯರನ್ನು ಸಂಹರಿಸಿದನು. ॥೧೩॥

**ತದೀಯಂ ಧನಮಾಧಾಯ ಸರ್ವಂ ರಾಜ್ಞೇ ನ್ಯವೇದಯತ್ ।**
**ಶತ್ರುಘ್ನಶ್ಚ ಮಧೋಃ ಪುತ್ರಂ ಲವಣಂ ನಾಮ ರಾಕ್ಷಸಮ್।**
**ಹತ್ವಾ ಮಧುವನಂ ಚಕ್ರೇ ಮಧುರಾಂ ನಾಮ ವೈ ಪುರೀಮ್ ॥೧೪॥**

**ತದೀಯಂ** ಅವರ **ಧನಂ** ಧನವನ್ನು **ಆದಾಯ** ತೆಗೆದುಕೊಂಡು, **ಸರ್ವಂ** ಎಲ್ಲಾ ಹಣವನ್ನು **ರಾಜ್ಞೇ** ರಾಜನಿಗೆ, **ನ್ಯವೇದಯತ್** ಅರ್ಪಿಸಿದನು. **ಶತ್ರುಘ್ನಃ** ಶತ್ರುಘ್ನನಾದರೂ, **ಮಧೋಃ** ಮಧು ಎಂಬ ದೈತ್ಯನ **ಪುತ್ರಂ** ಮಗನಾದ **ಲವಣಂ** ಲವಣನೆಂಬುವನನ್ನು, **ಹತ್ವಾ** ಕೊಂದು, **ಮಧುವನಂ** ಮಧುವನವನ್ನು **ಮಧುರಾಂ** ಮಧುರಾ ಎಂಬ **ಪುರೀಂ** ಪಟ್ಟಣವನ್ನಾಗಿ **ಚಕ್ರೇ** ಮಾಡಿದನು.

**ತಾತ್ಪರ್ಯ-** ಆ ಗಂಧರ್ವರ ಧನವನ್ನು ಶ್ರೀರಾಮಚಂದ್ರನಿಗೆ ಅರ್ಪಿಸಿದನು. ಶತ್ರುಘ್ನನಾದರೂ ಮಧು ಎಂಬ ದೈತ್ಯನ ಮಗನಾದ ಲವಣನನ್ನು ಸಂಹರಿಸಿ, ಮಧುವನವನ್ನು ಮಧುರಾಪುರವನ್ನಾಗಿ ಮಾಡಿದನು. ।।೧೪।।

**ಮುನೌ ನಿಕ್ಷಿಪ್ಯ ತನಯೌ ಸೀತಾ ಭರ್ತ್ರಾ ವಿವಾಸಿತಾ ।**
**ಧ್ಯಾಯಂತೀ ರಾಮಚರಣೌ ವಿವರಂ ಪ್ರವಿವೇಶ ಹ ।।೧೫।।**

**ಭರ್ತ್ರಾ** ಪತಿಯಿಂದ **ವಿವಾಸಿತಾ** ತ್ಯಕ್ತಳಾದ ಸೀತಾದೇವಿಯು, **ತನಯೌ** ಇಬ್ಬರ ಮಕ್ಕಳನ್ನು, **ಮುನೌ** ವಾಲ್ಮೀಕಿಗಳಲ್ಲಿ, **ನಿಕ್ಷಿಪ್ಯ** ಇಟ್ಟು **ರಾಮಚರಣೌ** ರಾಮನ ಪಾದಗಳನ್ನು **ಧ್ಯಾಯಂತೀ** ಧ್ಯಾನಿಸುತ್ತಾ, **ವಿವರಂ** ಭೂಬಿಲವನ್ನು **ಪ್ರವಿವೇಶ ಹ** ಪ್ರವೇಶಿಸಿದಳು.

**ತಾತ್ಪರ್ಯ-** ಪತಿಯಿಂದ ತ್ಯಕ್ತಳಾಗಿ ಸೀತೆಯು ಲೋಕಮೋಹನಾರ್ಥವಾಗಿ ತನ್ನ ಮಕ್ಕಳನ್ನು ವಾಲ್ಮೀಕಿಗಳಲ್ಲಿ ಇಟ್ಟು ಶ್ರೀರಾಮನ ಪಾದಗಳನ್ನು ಧ್ಯಾನಮಾಡುತ್ತಾ ಭೂಬಿಲವನ್ನು ಪ್ರವೇಶಿಸಿದಳು.।।೧೫।।

**ತಚ್ಛ್ರುತ್ವಾ ಭಗವಾನ್ ರಾಮೋ ರುಂಧನ್ನಪಿ ಧಿಯಾ ಶುಚಃ ।**
**ಸ್ಮರಂಸ್ತಸ್ಯಾ ಗುಣಾಂಸ್ತಾಂಸ್ತಾನ್ನಾಶಕ್ನದ್ರೋದ್ಧುಮೀಶ್ವರಃ ।।೧೬।।**

**ತತ್** ಭೂವಿವರ ಪ್ರವೇಶವನ್ನು, **ಶ್ರುತ್ವಾ** ಕೇಳಿ, **ಭಗವಾನ್ ರಾಮಃ** ಷಡ್ಗುಣಸಂಪನ್ನಾದ ರಾಮನು, **ಶುಚಃ** ದುಃಖವನ್ನು, **ಧಿಯಾ** ಬುದ್ಧಿಯಿಂದ, **ರುಂಧನ್ ಅಪಿ** ತಡೆದರೂ, **ತಸ್ಯಾಃ** ಸೀತಾದೇವಿಯ, **ತಾನ್ ತಾನ್ ಗುಣಾನ್** ಆ ಪಾತಿವ್ರತ್ಯ ಮೊದಲಾದ ಗುಣಗಳನ್ನು, **ಸ್ಮರನ್** ಸ್ಮರಿಸುತ್ತಾ **ರೋದ್ಧುಂ** ದುಃಖ-ವನ್ನು ತಡೆಯಲು **ನ ಅಶಕ್ನೋತ್** ಸಮರ್ಥನಾಗಲಿಲ್ಲ.

ಈ ಶ್ಲೋಕದಲ್ಲಿ ರಾಮಃ ಭಗವಾನ್ ಈಶ್ವರಃ ಎಂಬ ಮೂರು ಪದಗಳಿವೆ. ಈ ಪದಗಳಿಂದ ಅವನಿಗೆ ಸ್ವಲ್ಪವೂ ದುಃಖವಿಲ್ಲವೆಂದು ತಿಳಿಯುತ್ತದೆ. ಇದನ್ನೇ

**ತಾತ್ಪರ್ಯ- ನಿತ್ಯಪೂರ್ಣಸುಖಜ್ಞಪ್ತಿಸ್ವರೂಪೋಽಸೌ ಯತೋ ವಿಭುಃ ।**
**ಅತೋಽಸ್ಯ ರಾಮ ಇತ್ಯಾಖ್ಯಾ ತಸ್ಯ ದುಃಖಂ ಕುತೋಽಣ್ವಪಿ ॥**

ಎಂದು ಹೇಳಿರುವರು. ರ ಶಬ್ದಕ್ಕೆ ಆನಂದವೆಂದು, ಮ ಶಬ್ದಕ್ಕೆ ಜ್ಞಾನವೆಂದು ಅರ್ಥವು. ಆ ಉಪಸರ್ಗವು ಸುಖಜ್ಞಾನ ಇವೆರಡಕ್ಕೂ ನಿತ್ಯಪೂರ್ಣತ್ವವನ್ನು ತಿಳಿಸುತ್ತದೆ. ಆದ್ದರಿಂದ ರಾಮಶಬ್ದದಿಂದಲೇ ಪರಮಾತ್ಮನು ನಿತ್ಯದಲ್ಲಿಯೂ ಪೂರ್ಣವಾದ ಆನಂದ ಜ್ಞಾನ ಸ್ವರೂಪನೆಂದು ತಿಳಿಯುತ್ತದೆ. ಆದ್ದರಿಂದ **ತಸ್ಯ** ಅವನಿಗೆ, **ಅಣುರಪಿ** ಅಲ್ಪ ದುಃಖವಾದರೂ, **ಕುತಃ** ಇರಲು ಹೇಗೆ ಸಾಧ್ಯ? ಇಲ್ಲಿ ದುಃಖಶಬ್ದಕ್ಕೆ ಅಜ್ಞಾನವೆಂದೂ ಸಹ ಅರ್ಥವು. (ದುಃ ಅಶೋಭನವಾದ, ಖಂ ಜ್ಞಾನವು ಅಂದರೆ ಅಜ್ಞಾನವೆಂದರ್ಥವು). ಸಂಪೂರ್ಣ ಆನಂದವಿದ್ದದ್ದರಿಂದ ರಾಮಚಂದ್ರನಲ್ಲಿ ದುಃಖಕ್ಕೆ ಅವಕಾಶವಿಲ್ಲ. ಹಾಗೂ ಸಂಪೂರ್ಣ ಜ್ಞಾನರೂಪನಾದ್ದರಿಂದ ಅವನಲ್ಲಿ ಅಜ್ಞಾನ ಲೇಶಕ್ಕೂ ಪ್ರಸಕ್ತಿ ಇಲ್ಲ.

**ತಾತ್ಪರ್ಯ– ತಥಾಪಿ ಲೋಕಶಿಕ್ಷಾರ್ಥಮದುಃಖೋ ದುಃಖವರ್ತಿವತ್ ।**
**ಅಂತರ್ಹಿತಾಂ ಲೋಕದೃಷ್ಟ್ಯಾ ಸೀತಾಮಾಸೀತ್ ಸ್ಮರನ್ನಿವ ॥**

ಹೀಗಿದ್ದರೂ ಲೋಕಕ್ಕೆ ಸ್ತ್ರೀಯರಲ್ಲಿ ವಿಶೇಷ ಆಸಕ್ತಿಯು ವಿಯೋಗದಿಂದ ದುಃಖಕ್ಕೆ ಕಾರಣವಾಗುವದೆಂಬ ವಿಷಯವನ್ನು ತಿಳಿಸಲು ಸ್ವಯಂ ನಿರ್ದುಃಖ-ನಾದರೂ ದುಃಖಿತನಾದವನಂತೆ ತೋರಿಸಿದನು. ಸೀತಾದೇವಿಯು ವಾಸ್ತವಿಕವಾಗಿ ವಿಯೋಗವಿಲ್ಲದವಳಾದ್ದರಿಂದ ಕೇವಲ ಮಂದಜನರ ದೃಷ್ಟಿಯಿಂದ ಅಂತರ್ಹಿತ-ಳಾದಂತೆ ತೋರಿಸಿದಳು. ಶ್ರೀರಾಮನೂ ಸಹ ಅವಳನ್ನು ದುಃಖದಿಂದ ಸ್ಮರಿಸಿದಂತೆ ನಟಿಸಿದನು. ॥೧೬॥

**ಸ್ತ್ರೀಪುಂಪ್ರಸಂಗ ಏತಾದೃಕ್ ಸರ್ವತ್ರ ತ್ರಾಸಮಾವಹಃ ।**
**ಅಪೀಶ್ವರಾಣಾಂ ಕಿಮುತ ಗ್ರಾಮ್ಯಸ್ಯ ಗೃಹಮೇಧಿನಃ ॥೧೭॥**

**ಏತಾದೃಕ್** ಈ ವಿಧವಾದ ಸ್ತ್ರೀಲೋಲುಪತೆಯಿಂದ ಕೂಡಿದ, **ಸ್ತ್ರೀಪುಂಪ್ರಸಂಗಃ ಪುಂ** ಪುರುಷರ, **ಸ್ತ್ರೀ** ಸ್ತ್ರೀಯರೊಡನೆ, **ಪ್ರಸಂಗಃ** ಶಾಸ್ತ್ರಮರ್ಯಾದೆಯನ್ನು ಮೀರಿ ಮಾಡಿದ ಸ್ನೇಹವು, **ಈಶ್ವರಾಣಾಂ ಅಪಿ** ಸಮರ್ಥರಾದ ರುದ್ರಾದಿದೇವತೆಗಳಿಗೂ ಸಹ, **ಸರ್ವತ್ರ** ಎಲ್ಲರ ವಿಷಯದಲ್ಲಿಯೂ **ತ್ರಾಸಂ** ದುಃಖವನ್ನು **ಆವಹಃ** ತಂದುಕೊಡುತ್ತದೆ. (ಪಾಠಾಂತರದಲ್ಲಿ **ಸರ್ವತ್ರಾಪಿ** ಸಮಸ್ತರ ವಿಷಯದಲ್ಲಿಯೂ ಸಹ, **ಭಯಾವಹಃ** ಭಯಕ್ಕೆ ಕಾರಣವು) ಅಥವಾ **ತ್ರಾಸ** ದುಃಖದ **ಮಾ** ಅನುಭವಕ್ಕೆ, **ಆವಹಃ** ಕಾರಣವಾಗಿದೆ. ಹೀಗಿರಲು, **ಗ್ರಾಮ್ಯಸ್ಯ** ಸುರತದಲ್ಲಿ ಅಥವಾ ಅಶ್ಲೀಲದಲ್ಲಿ ನಿರತರಾದ, **ಗೃಹಮೇಧಿನಃ** ಸಾಮಾನ್ಯರಾದ ಗೃಹಸ್ಥರಿಗೆ **ಕಿಮುತ** ಸ್ತ್ರೀಲಂಪಟತನವು ದುಃಖಕಾರಣವೆಂದು ಏನು ಹೇಳುವುದು.

**ತಾತ್ಪರ್ಯ-** ಪುರುಷರು ಸ್ತ್ರೀಯರಲ್ಲಿ ಅತ್ಯಾಸಕ್ತಿಯನ್ನು ಮಾಡಬಾರದು. ಇಂಥ ಅತ್ಯಾಸಕ್ತಿಯು ಸಮರ್ಥರಾದ ರುದ್ರಾದಿದೇವತೆಗಳಿಗೂ ಸಹ ದುಃಖಕ್ಕೂ ಭಯಕ್ಕೂ ಕಾರಣವಾಗುತ್ತದೆ. ಹೀಗಿರಲು ಅಶ್ಲೀಲವಾದ ಸುರತಲಂಪಟರಾದ ಸಾಮಾನ್ಯ ಗೃಹಸ್ಥರಿಗಂತೂ ಇಂಥ ಪ್ರಸಂಗವು ದುಃಖಕಾರಣವಾಗುವುದು. ಇದನ್ನು ಪಾಮರರಿಗೆ ತಿಳಿಸಲು ಶ್ರೀರಾಮನು ಸ್ವಯಂ ನಿತ್ಯನಿರ್ದುಃಖನಾದರೂ ದುಃಖಿತನಾದವನಂತೆ ತೋರಿಸಿದನು.

ಸ್ತ್ರೀಪುಂಪ್ರಸಂಗ ಅನ್ನುವಲ್ಲಿ ವಿಗ್ರಹವನ್ನು ಹೀಗೆ ಮಾಡಬೇಕು. ಪುಂಸಾಂ ಪ್ರಸಂಗಃ ಪುಂಪ್ರಸಂಗಃ, ಸ್ತ್ರೀಭಿಃ ಪುಂಪ್ರಸಂಗಃ ಸ್ತ್ರೀಪುಂಪ್ರಸಂಗಃ । ಇಲ್ಲವಾದರೆ ಸ್ತ್ರೀಶ್ಚ ಪುಮಾಂಶ್ಚ ಸ್ತ್ರೀಪುಮಾಂಸೌ ತಯೋಃ ಪ್ರಸಂಗಃ ಸ್ತ್ರೀಪುಂಸಪ್ರಸಂಗಃ ಎಂದು ಆಗಬೇಕಾಗಿದ್ದಿತು ಎಂಬ ಶಂಕೆಗೆ ಅವಕಾಶವಿಲ್ಲ.

ತ್ರಾಸಂ ಮಾವಹಃ ಎಂಬುವಲ್ಲಿ ಅಲುಕ್ ಸಮಾಸವು ಅರ್ಷವೆಂದು ಹೇಳಬೇಕು. ಇಲ್ಲವಾದರೆ ತ್ರಾಸಸ್ಯ ಮಾ ಜ್ಞಾನಂ ತದಾವಹಃ ಎಂದಾದರೂ ವಿಗ್ರಹವನ್ನು ತಿಳಿಯಬೇಕು. ॥೧೭॥

**ತತ ಊರ್ಧ್ವಂ ಬ್ರಹ್ಮಚರ್ಯಂ ಧಾರಯನ್ನಜುಹೋತ್ಪ್ರಭುಃ ।**
**ತ್ರಯೋದಶಾಬ್ದಸಾಹಸ್ರಮಗ್ನಿಹೋತ್ರಮಖಂಡಿತಮ್ ॥೧೮॥**

**ತತಃ ಊರ್ಧ್ವಂ** ಸೀತಾದೇವಿಯು ಭೂವಿವರ ಪ್ರವೇಶಮಾಡಿದ ನಂತರ **ಪ್ರಭುಃ** ಸ್ವಾಮಿಯಾದ ಶ್ರೀರಾಮಚಂದ್ರನು, **ಬ್ರಹ್ಮಚರ್ಯಂ** ಬ್ರಹ್ಮಚರ್ಯ ವ್ರತವನ್ನು **ಧಾರಯನ್ ಸನ್** ಧರಿಸಿದವನಾಗಿ, **ತ್ರಯೋದಶಾಬ್ದಸಾಹಸ್ರಂ** ಹದಿಮೂರುಸಾವಿರ ವರ್ಷಗಳ ವರೆಗೆ, **ಅಖಂಡಿತಂ** ಅವಿಚ್ಛಿನ್ನವಾಗಿ, **ಅಗ್ನಿಹೋತ್ರಂ** ಅಗ್ನಿಹೋತ್ರವನ್ನು, **ಅಜುಹೋತ್** ಹೋಮ ಮಾಡುತ್ತಾ ಪಾಲಿಸಿದನು.

ಇಲ್ಲಿ ತತಃ ಊರ್ಧ್ವಂ ಎಂದರೆ ವಿವರಪ್ರವೇಶಾನಂತರದಲ್ಲಿಯೇ ಎಂದು ತಾತ್ಪರ್ಯವಲ್ಲ. ಅದಕ್ಕೂ ಪೂರ್ವದಲ್ಲಿಯೂ ಸಹ ರಾಮಚಂದ್ರನು ಅಖಂಡಿತವಾದ ಬ್ರಹ್ಮಚರ್ಯವನ್ನು, ಅಗ್ನಿಹೋತ್ರವನ್ನು, ಆಚರಿಸುತ್ತಲೇ ಇದ್ದನು. ಇಲ್ಲಿ ಬ್ರಹ್ಮಚರ್ಯ ಈ ಶಬ್ದಕ್ಕೆ ಮೂರು ಅರ್ಥಗಳು.

★ ಬ್ರಹ್ಮಚರ್ಯ ಎಂದರೆ ''ಮಮ ಯೋನಿರ್ಮಹದ್ಬ್ರಹ್ಮ'' ಎಂಬ ಪ್ರಮಾಣಾನುಸಾರವಾಗಿ ಲಕ್ಷ್ಮೀಸ್ವರೂಪಳಾದ ಸೀತಾದೇವಿಯು, ಅವಳೊಡನೆ ನಿರಂತರವೂ ವಿಹಾರ ಮಾಡುತ್ತಲೇ ಇದ್ದನು. (ಬ್ರಹ್ಮಣಾ-ಲಕ್ಷ್ಮ್ಯಾ ಸಹ ಚರ್ಯಂ ಚರಣಂ ವರ್ತನಂ)

★ ಲೋಕದೃಷ್ಟಿಯಿಂದ ಗೃಹಸ್ಥಾಶ್ರಮಿಗಳೂ ಸಹ ರಾತ್ರಿಯಲ್ಲಿಯೇ ವಿಹಿತವಾದ ತಿಥಿಕಾಲಗಳಲ್ಲಿ ರತಿಯನ್ನು ಹೊಂದಿದರೂ ಸಹ ಅದು ಬ್ರಹ್ಮಚರ್ಯವೆಂದೇ ಗಣಿಸಲ್ಪಡುತ್ತದೆ. ಎಂಬ ಭಾವವುಳ್ಳ **'ಬ್ರಹ್ಮಚರ್ಯಮೇವ ತತ್ ಯದ್ರಾತ್ರೌ ರತ್ಯಾ ಸಂಯುಜ್ಯಂತೇ'** ಎಂಬ ಷಟ್-ಪ್ರಶ್ನೋಪನಿಷತ್ತಿನ ಅನುಸಾರವಾಗಿ ಅಖಂಡವಾದ ಬ್ರಹ್ಮಚರ್ಯವನ್ನು ಪಾಲಿಸಿದನು.

★ ಸಾಮಾನ್ಯವಾಗಿ ಎಲ್ಲ ದೇವತೆಗಳೂ ಸಹ (ನಿತ್ಯದಲ್ಲಿಯೂ) ನಾಲ್ಕು ಆಶ್ರಮ ಧರ್ಮಗಳನ್ನು ಪಾಲಿಸುವರು. ಹೀಗಿರಲು ದೇವೋತ್ತಮನಾದ ಶ್ರೀರಾಮಚಂದ್ರನು ನಿತ್ಯದಲ್ಲಿಯೂ ಬ್ರಹ್ಮಚರ್ಯವನ್ನು ಆಚರಿಸಿದನೆಂಬುದು ಸ್ಪಷ್ಟವೆಂದು ಅಭಿಪ್ರಾಯವು.

ಇಲ್ಲಿ ಹೇಳಿದ ಹದಿಮೂರುಸಾವಿರ ವರ್ಷಗಳು ಸಮಗ್ರ ರಾಜ್ಯಭಾರ ಮಾಡಿದ ಅವಧಿಯೆಂದು ತಿಳಿಯಬೇಕು. ಸೀತಾದೇವಿಯ ಭೂವಿವರಪ್ರವೇಶಾ-ನಂತರದಲ್ಲಿ ರಾಮಚಂದ್ರನು ಹದಿಮೂರುಸಾವಿರವರ್ಷ ಭೂಮಿಯನ್ನು ಅಲಂಕರಿಸಿದನು ಎಂದು ತಿಳಿಯಬಾರದು. ಏಕೆಂದರೆ ''ನಕ್ಷತ್ರಮಾಸಗಣಿತಂ ತ್ರಯೋದಶಸಹಸ್ರಕಮ್ । ಬ್ರಹ್ಮಲೋಕಸಮಂ ಚಕ್ರೇ ಸಮಸ್ತಂ ಕ್ಷಿತಿಮಂಡಲಮ್'' ಎಂದು ತಾತ್ಪರ್ಯದಲ್ಲಿ ರಾಜ್ಯಪರಿಪಾಲನದ ಅವಧಿಯೇ ಹದಿಮೂರುಸಾವಿರ ವರ್ಷವೆಂದು ಹೇಳಿದೆ. ಇಲ್ಲಿ ನಕ್ಷತ್ರಮಾನದಿಂದ ಹದಿಮೂರು ಸಾವಿರ ಎಂದು ಹೇಳಿದ್ದರಿಂದ ''ಅತೋ ದ್ವಾದಶಸಾಹಸ್ರಂ ರಾಮೋ ರಾಜ್ಯಂ ಚಕಾರ ಹ'' ಎಂಬ ವಿಷ್ಣುಪುರಾಣವಾಕ್ಯವಿರೋಧ ಬರುವದಿಲ್ಲ. ಆ ವಾಕ್ಯವು ಸೌರಮಾನದಿಂದ ಪ್ರವೃತ್ತವಾಗಿದೆ. ಸೀತಾದೇವಿಯ ಭೂಮಿಪ್ರವೇಶಾನಂತರದಲ್ಲಿ ಏಳುನೂರು ವರ್ಷಗಳ ವರೆಗೆ ರಾಮಚಂದ್ರನು ಭೂಮಿಯಲ್ಲಿದ್ದನು. ಸೀತೆಯು ಕೂಡಾ ಅದೃಶ್ಯಳಾಗಿ ಇದ್ದಳೆಂಬುದು,

**ಭೂಮಿಪ್ರವೇಶಾದೂರ್ಧ್ವಂ ಸಾ ರೇಮೇ ಸಪ್ತಶತಂ ಸಮಾಃ ।**
**ರಾಮೇಣ ದೃಶ್ಯಾ ತ್ವನ್ಯೇಷಾಮದೃಶ್ಯಾ ಜನಕಾತ್ಮಜಾ ॥**

ಎಂಬ ಪ್ರಮಾಣದಿಂದ ತಿಳಿದು ಬರುವುದು. ಸೀತಾದೇವಿಯಿಂದ ರಾಮನಿಗೆ ವಿಯೋಗವಿಲ್ಲ. ಇಬ್ಬರಿಗೂ ನಿತ್ಯ ಸಂಬಂಧವು.

**ಜ್ಞಾಪನಾರ್ಥಂ ಪುನರ್ನಿತ್ಯಸಂಬಂಧಂ ಸ್ವಾತ್ಮನಃ ಶ್ರಿಯಾ ।**
**ಅಯೋಧ್ಯಾಯಾ ವಿನಿರ್ಗಚ್ಛನ್ ಸರ್ವಲೋಕಸ್ಯ ಚೇಶ್ವರಃ ।**
**ಪ್ರತ್ಯಕ್ಷಂ ತು ಶ್ರಿಯಾ ಸಾರ್ಧಂ ಜಗಾಮಾನಾದಿರವ್ಯಯಃ ॥**

ಎಂದು ತಾತ್ಪರ್ಯದಲ್ಲಿ ಇದೇ ಮಾತನ್ನು ವಿವರಿಸಿರುವರು. ಅಯೋಧ್ಯೆಯಿಂದ ಪರಂಧಾಮಕ್ಕೆ ತೆರಳುವಾಗ ಎಲ್ಲರಿಗೂ ಕಾಣುವಂತೆ ಸೀತಾಸಮೇತವಾಗಿಯೇ ಪರಮಾತ್ಮನು ಹೋದನು, ಎಂದು ಹೇಳಿರುವರು. ಕಾರಣ ಸೀತಾತ್ಯಾಗವು ಲೋಕವಿಡಂಬನ ಮತ್ತು ದೈತ್ಯಮೋಹಕ್ಕೆಂದು ತಿಳಿಯುತ್ತದೆ. ।।೧೮।।

**ಸ್ಮರತಾಂ ಹೃದಿ ವಿನ್ಯಸ್ಯ ಬುದ್ಧಂ ಪದ್ಮಮಿವಾಂಶುಕೈಃ ।**
**ಸ್ವಪಾದಪಲ್ಲವಂ ರಾಮ ಆತ್ಮಜ್ಯೋತಿರಗಾತ್ತತಃ ।।೧೯।।**

**ಆತ್ಮಜ್ಯೋತಿಃ** ಸ್ವಭಾವಪ್ರಕಾಶನಾದ, **ರಾಮಃ** ಶ್ರೀರಾಮಚಂದ್ರನು, **ಸ್ವಪಾದಪಲ್ಲವಂ** ತನ್ನ ಪಾದಕಮಲವನ್ನು, **ಸ್ಮರತಾಂ** ಸ್ಮರಿಸುವವರ, **ಹೃದಿ** ಮನಸ್ಸಿನಲ್ಲಿ **ಅಂಶುಕೈಃ** ಸೂರ್ಯಕಿರಣಗಳಿಂದ, **ಬುದ್ಧಂ** ಅರಳಿದ, **ಪದ್ಮಂ ಇವ** ಪದ್ಮವನ್ನೋಪಾದಿಯಲ್ಲಿರುವ, **ಪಾದಪಲ್ಲವಂ** ಕೋಮಲವಾದ ಪಾದವನ್ನು, **ವಿನ್ಯಸ್ಯ** ಇಟ್ಟು **ತತಃ** ಈ ಭೂಮಿಯಿಂದ, **ಅಗಾತ್** ವೈಕುಂಠಕ್ಕೆ ಹೋದನು.

**ತಾತ್ಪರ್ಯ-** ಶ್ರೀರಾಮಚಂದ್ರನು ತನ್ನ ಪಾದಪಲ್ಲವವನ್ನು ಸ್ಮರಿಸುವ ಭಕ್ತರ ಮನಸ್ಸಿನಲ್ಲಿ ಪಾದಪಲ್ಲವವನ್ನು ಇಟ್ಟು ಆ ನಿಜ ತೇಜಸ್ಸುಳ್ಳ ವೈಕುಂಠಕ್ಕೆ ಹೋದನು.

ರಾಮರಾಜ್ಯದಲ್ಲಿಯ ಎಲ್ಲ ಪ್ರಜೆಗಳಿಗೆ ರಾಮಚಂದ್ರನಲ್ಲಿದ್ದ ಭಕ್ತ್ಯುದ್ರೇಕವನ್ನು ವರ್ಣಿಸುತ್ತಾರೆ-

**ರಾಮೋ ರಾಮೋ ರಾಮ ಇತಿ ಸರ್ವೇಷಾಮಭವತ್ತದಾ ।**
**ಸರ್ವೋ ರಾಮಮಯೋ ಲೋಕಃ ಯದಾ ರಾಮಸ್ತ್ವಪಾಲಯತ್ ।।**

ಎಲ್ಲ ಜನರ ಮನಸ್ಸು ರಾಮಧ್ಯಾನದಲ್ಲಿ ಆಸಕ್ತವಾಗಿದ್ದಿತು. ಮತ್ತು ಎಲ್ಲರೂ ರಾಮಮಯಃ ರಾಮನೇ ಪ್ರಧಾನನೆಂಬ ಭಾವನೆ ಉಳ್ಳವರಾಗಿದ್ದರು.

ಇಲ್ಲಿ ಸ್ಮರತಾಂ ಎಂಬ ಶಬ್ದಕ್ಕೆ ಸ್ಮರಸ್ಯ ರುದ್ರಸ್ಯ ಭಾವಃ ಸ್ಮರತಾ, ತಾಂ ಸ್ಮರತಾಂ। ಎಂದರೆ ರುದ್ರದೇವರಿಂದ ಅಭಿಮನ್ಯಮಾನವಾದ ಸ್ಥಿರಸ್ಮೃತಿಯನ್ನು ಪ್ರಜೆಗಳ ಹೃದಯದಲ್ಲಿ ಇಟ್ಟು ಎಂದು ಭಾವವು. ಮತ್ತು ಏಕಾಂತೇ ತು ಯದಾ ರಾಮಃ ಚಕ್ರೇ ರುದ್ರೇಣ ಸಂವಿದಮ್ ಎಂಬ ಪ್ರಮಾಣಾನುಸಾರ ತನಗೆ ಪರಂಧಾಮಕ್ಕೆ ಬರಲು ಪ್ರಾರ್ಥಿಸಲು ಬಂದವನು ಸ್ಮರತಾಂ ಹೃದಿ ವಿನ್ಯಸ್ಯ ರುದ್ರದೇವರೆಂಬುದನ್ನು ಮನಸ್ಸಿನಲ್ಲಿ ತಿಳಿದು ಅವರ ವಾಕ್ಯವನ್ನು ಮನ್ನಿಸಿ ತನ್ನ ಲೋಕಕ್ಕೆ ತೆರಳಿದನು ಎಂಬ ಭಾವವು ಧ್ವನಿತವಾಗುತ್ತದೆ.

**ಚಿಂತಯತಾಂ** ಎನ್ನದೇ ಸ್ಮರತಾಂ ಎಂದು ಪ್ರಯೋಗಿಸಿದ್ದರಿಂದಲೇ ವ್ಯಾಸರಿಗೂ ಮೇಲೆ ಹೇಳಿದ ವ್ಯಾಖ್ಯಾನ ಸಮ್ಮತವೆಂದು ತಿಳಿಯುತ್ತದೆ. ।।೧೯।।

ಶುಕಾಚಾರ್ಯರು ರುದ್ರಾಂಶಸಂಭೂತರು. ನಿತ್ಯದಲ್ಲಿಯೂ ರಾಮಜಪವೆಂಬ ಅಮೃತಪಾನದಿಂದ ಸಂತೃಪ್ತರು. ಮತ್ತು ತಮ್ಮ ಮೇಲೆ ಅಂತಃಕರಣವನ್ನು ತೋರಿ ತಮ್ಮ ಸ್ಥಾನಕ್ಕೆ ಮರಳಿಹೋದ ಅನುಗ್ರಹದ ಸ್ಮರಣೆಯಿಂದ ಭಕ್ತಿಪರವಶರಾಗಿ ಎರಡು ಶ್ಲೋಕಗಳಿಂದ ಪರಮಾತ್ಮನ ರಕ್ಷಣೆಯನ್ನು ಪ್ರಾರ್ಥಿಸಿ ಸ್ತುತಿಸುತ್ತಾರೆ.

**ನೇದಂ ಯಶೋ ರಘುಪತೇರಿಹ ವಿಶ್ವಮೂರ್ತೇ-**
**ರ್ಲೀಲಾತನೋರಧಿಕಶಾಂತವಿಮುಕ್ತಧಾಮ್ನಃ ।**
**ರಕ್ಷೋವಧೋಜಲಧಿಬಂಧನಮಸ್ತ್ರಪಾಣೇಃ**
**ಕಿಂ ತಸ್ಯ ಶತ್ರುಹನನೇ ಕಪಯಃ ಸಹಾಯಾಃ ॥೨೦॥**

**ವಿಶ್ವಮೂರ್ತೇಃ** ಜಗತ್ತನ್ನು ಉದರದಲ್ಲಿ ಧರಿಸಿದ, **ಲೀಲಾತನೋಃ** ಲೀಲೆಗಾಗಿ ಅವತರಿಸಿದ, **ಅಧಿಕಶಾಂತವಿಮುಕ್ತಧಾಮ್ನಃ** ನಿತ್ಯಶಾಂತನಾದ ಮುಕ್ತಸ್ವರೂಪನಾದ, **ರಘುಪತೇಃ** ಶ್ರೀರಾಮಚಂದ್ರನಿಗೆ, **ರಕ್ಷೋವಧಃ** ರಾಕ್ಷಸರ ಸಂಹಾರವು, **ಜಲಧಿ ಬಂಧನಂ** ಸಮುದ್ರಸೇತುವೆಯನ್ನು ಕಟ್ಟುವುದು, **ಇದಂ** ಈ ರೀತಿಯಾದ **ಯಶಃ** ಕೀರ್ತಿಯು **ಅದ್ಭುತಂ** ಆಶ್ಚರ್ಯವಾದದ್ದು, **ನ** ಅಲ್ಲವು, **ಅಸ್ತ್ರಪಾಣೇಃ** ಧನುಷ್ ಪಾಣಿಯಾದ, **ತಸ್ಯ** ಆ ಶ್ರೀರಾಮಚಂದ್ರನಿಗೆ, **ಕಪಯಃ** ಕಪಿಗಳು, **ಸಹಾಯಾಃ ಕಿಂ** ಸಹಾಯಕರಾದರೇ? ಸಹಾಯಕರಲ್ಲ ಎಂದು ಭಾವವು.

ಇಲ್ಲಿ ಯಶಃ ಅರಘುಪತೇಃ ಎಂದೂ ಪದಚ್ಛೇದವು, **ಅರಘುವಃ** ಲಘುವಲ್ಲದ ಎಂದರೆ ಮಹಾಂತರಾದ ಬ್ರಹ್ಮಾದಿದೇವತೆಗಳ **ಪತಿಃ** ಒಡೆಯನೆಂದರ್ಥವು. ಇದಂ ಎಂಬುದನ್ನು ಆವೃತ್ತಿ ಮಾಡಬೇಕು. **ಇದಂ** ಇಲ್ಲಿ ಹೇಳಲ್ಪಡುವ ಕೀರ್ತಿಯು ಇದಂ **ಇಂ** ಆಶ್ಚರ್ಯವನ್ನು **ದಂ** ಕೊಡುವಂತಹದು, **ನ** ಅಲ್ಲ ಎಂದೂ ಅಭಿಪ್ರಾಯ.

**ತಾತ್ಪರ್ಯ-** ಜಗಜ್ಜನಕನಾದ ಲೀಲಾವತಾರನಾದ ನಿತ್ಯವೂ ಶಾಂತನಾದ, ಸುಖಸ್ವರೂಪನಾದ ಶ್ರೀರಾಮಚಂದ್ರನಿಗೆ ಈ ಕೀರ್ತಿಯು, ರಾಕ್ಷಸರ ಸಂಹಾರವು, ಸೇತುಬಂಧನವು, ಇವುಗಳೇನು ಆಶ್ಚರ್ಯಗಳಲ್ಲ. ಧನುಷ್ಪಾಣಿಯಾದ ಶ್ರೀರಾಮಚಂದ್ರನಿಗೆ ಕಪಿಗಳ ಸಹಾಯದಿಂದ ಏನಾದೀತು? (ಏನೂ ಇಲ್ಲ) ॥೨೦॥

**ಯಸ್ಯಾಮಲಂ ನೃಪಸದಸ್ಸು ಯಶೋಽಧುನಾಪಿ**
**ಗಾಯಂತ್ಯಘಘ್ನಮೃಷಯೋ ದಿಗಿಭೇಂದ್ರಪಾತೇ ।**
**ತನ್ನಾಕಪಾಲವಸುಪಾಲಕಿರೀಟಜುಷ್ಟಂ**
**ಪಾದಾಂಬುಜಂ ರಘುಪತೇಃ ಶರಣಂ ಪ್ರಪದ್ಯೇ ॥೨೧॥**

**ದಿಗಿಭೇಂದ್ರಪಾತೇ** ದಿಗ್ಗಜಗಳಂತಿರುವ ರಾವಣಾದಿಗಳು ಸಂಹೃತರಾಗಲು, **ನೃಪಸದಸ್ಸು** ಧರ್ಮರಾಜಾದಿಗಳ ಸಭೆಗಳಲ್ಲಿ, **ಋಷಯಃ** ಮಾರ್ಕಾಂಡೇಯರೇ ಮೊದಲಾದ ಋಷಿಗಳು, **ಯಸ್ಯ** ಯಾವ ಶ್ರೀರಾಮಚಂದ್ರನ, **ಅಮಲಂ** ನಿರ್ಮಲವಾದ, **ಅಘಘ್ನಂ** ಪಾಪವನ್ನು ಕಳೆಯುವ, **ಯಶಃ** ಯಶಸ್ಸನ್ನು, ಅಧುನಾ ಅಪಿ ಈಗಲೂ ಸಹ, **ಗಾಯಂತಿ** ಗಾನ ಮಾಡುತ್ತಾರೆ. **ತತ್** ಈ ರೀತಿಯಾದ, **ರಘುಪತೇಃ** ಶ್ರೀರಾಮಚಂದ್ರನ, **ನಾಕಪಾಲವಸುಪಾಲಕಿರೀಟಜುಷ್ಟಂ** ದೇವೇಂದ್ರ ಕುಬೇರಾದಿಗಳ ಕಿರೀಟದಿಂದ ಸೇವಿತವಾದ, **ಪಾದಾಂಬುಜಂ** ಪಾದಕಮಲವನ್ನು **ಶರಣಂ** ಮೊರೆಯನ್ನು, **ಪ್ರಪದ್ಯೇ** ಹೊಂದುತ್ತೇನೆ.

**ಯಶಃ** ಎಂಬ ಶಬ್ದಕ್ಕೆ '**ದಿಕ್ಷು ಯಾನಾದ್ಯಶಃ ಪ್ರೋಕ್ತಮ್**' ಎಂಬ ಛಾಂದೋಗ್ಯ ಭಾಷ್ಯಾನುಸಾರ ದಿಕ್ಕುಗಳಲ್ಲಿ ವ್ಯಾಪ್ತವಾದ ಕೀರ್ತಿಯು ಎಂದರ್ಥವು. ಈ ಅರ್ಥವನ್ನೇ **ದಿಗಿಭೇಂದ್ರಪಾತೇ ಋಷಯಃ ಗಾಯಂತಿ** ಐರಾವತಾದಿ ದಿಗ್ಗಜಗಳು ಭೂಮಿಯನ್ನು ಧಾರಣ ಮಾಡಲು ಇರುವ ದಿಗಂತಗಳಲ್ಲಿಯೂ ಋಷಿಗಳು ಗಾನಮಾಡುತ್ತಾರೆ ಎಂದು ಹೇಳಿ ವಿವರಿಸಿರುವರು.

ಇಲ್ಲಿ ಕಿರೀಟಜುಷ್ಟಪಾದಾಂಬುಜಂ ಎಂಬ ಸಮಸ್ತಪದ ಉಳ್ಳ ಪಾಠಾಂತರವಿದೆ. ಪಾದಾಂಬುಜಂ ಎನ್ನುವಲ್ಲಿ ಆ ಅಂಬುಜ, ಆ ಸಮೀಪದಲ್ಲಿ, ಅಂಬುಜಾ ಸಮುದ್ರ ಜಾತಳಾದ, ಕಮಲಾದೇವಿಯು ಮತ್ತು ಅಂಬುಜಃ 'ಅದ್ಭ್ಯಃ ಸಂಭೂತೋ ಹಿರಣ್ಯಗರ್ಭಃ' ಎಂಬ ಪ್ರಮಾಣಾನುಸಾರ, ಚತುರ್ಮುಖಬ್ರಹ್ಮನು ಇವರಿಬ್ಬರಿಂದ ಕೂಡಿದ ಪದ್ಮಪಾದವನ್ನು ಎಂದರ್ಥವು. ಅಂಬುಜಾ ಚ ಅಂಬುಜಶ್ಚ ಅಂಬುಜೌ ಏಕಶೇಷವು.

ಕಿರೀಟಜುಷ್ಟಶ್ಚಾಸೌ ಪಾದಶ್ಚಾಸೌ ಅಂಬುಜಶ್ಚ ತಂ (ವಿಗ್ರಹ), ಅಂಬುಜ ಎಂಬ ವಿಶೇಷಣಕ್ಕೆ ಪರನಿಪಾತವು. ಇದಕ್ಕೆ ಕಾರಣ, ವಿಶ್ವಮೂರ್ತೇ ಎಂಬುದು, ಸರ್ವತ್ರ ವ್ಯಾಪ್ತವಾದ ದೇಹ ಉಳ್ಳ ಮತ್ತು ಪ್ರಪಂಚವನ್ನೇ ಉದರದಲ್ಲಿ ಧರಿಸಿದ ಲೀಲಾಮಾತ್ರದಿಂದ ಅವತರಿಸಿದ, ರಾಮಚಂದ್ರನ ವಿಷಯದಲ್ಲಿ ರಾಕ್ಷಸವಧೆ ಮುಂತಾದವುಗಳು ಅಷ್ಟು ಆಶ್ಚರ್ಯಕರವಾದವುಗಳಲ್ಲ, ಅವನಿಗೆ ಸ್ವಪ್ರಯೋಜನವಿಲ್ಲವೆನ್ನುವುದನ್ನು ''ಅಧಿಕಶಾಂತವಿಮುಕ್ತಧಾಮ್ನಃ'' ಎಂಬ ವಿಶೇಷಣವು ತಿಳಿಸುತ್ತದೆ.

ಅಧಿಕಶಾಂತನೆಂದರೆ ಸುಖಪೂರ್ಣನೆಂದರ್ಥವು, ವಿಮುಕ್ತ ಎಂದರೆ ವಿಶೇಷವಾಗಿ ಮುಕ್ತನೆಂದರ್ಥವು, ಇದರಿಂದ ನಿತ್ಯಮುಕ್ತಳಾದರೂ ರಮಾದೇವಿಯ ಮುಕ್ತಿಯು ಪರಮಾತ್ಮನ ಅಧೀನವಾದಂತೆ ಇವನ ಮುಕ್ತಿಯು ಇನ್ನೊಬ್ಬರ ಅಧೀನ-

ವಲ್ಲ. ಸ್ವತಂತ್ರವೇ ಆಗಿದೆ ಎಂದು ತಿಳಿಯುತ್ತದೆ. ಮತ್ತು ''ವಿಮುಕ್ತಧಾಮ್ನಃ'' ಎನ್ನುವದರಿಂದ ತನ್ನ ಗೃಹವಾದ ಅಯೋಧ್ಯೆಯನ್ನು ಬಿಟ್ಟು ತನ್ನ ಸ್ಥಾನಕ್ಕೆ ಹೋದನು ಎಂದು ಅರ್ಥವು. ಅಧಿಕಶಾಂತನು ಎಂದು ಹೇಳಿದ್ದರಿಂದ ಸಮುದ್ರದೇವತೆಯಾದ ವರುಣನ ಮೇಲೆ ತೋರಿಸಿದ ಕೋಪಮುದ್ರೆಯು ನಟನೆಮಾತ್ರವೆಂದು ತಿಳಿಯುತ್ತದೆ.

**ನಾಕಪಾಲ** ಸ್ವರ್ಗಾಧಿಪತಿ ಇಂದ್ರನು, **ವಸುಪಾಲ** ಧನಾಧಿಪನಾದ ಕುಬೇರನು, ಇವರಿಬ್ಬರ ಹೆಸರುಗಳನ್ನು ವಿಶೇಷನಿರ್ದೇಶ ಮಾಡಿದ್ದರಿಂದ ರಾಮಚಂದ್ರನು ಇವರಿಬ್ಬರಲ್ಲಿ ಮಾಡಿದ ಮಹೋಪಕಾರವು ಸೂಚಿತವಾಗುತ್ತದೆ. ಇಂದ್ರನನ್ನು ಗೆದ್ದ ಇಂದ್ರಜಿತನನ್ನು ಸಂಹಾರ ಮಾಡಿದ್ದರಿಂದ ಇಂದ್ರನಿಗೆ ಉಪಕಾರವು, ಕುಬೇರನ ಪುಷ್ಪಕ ವಿಮಾನವನ್ನು ಅಪಹರಿಸಿದ ರಾವಣನ ಸಂಹಾರದಿಂದ ಕುಬೇರನಿಗೆ ಆದ ಉಪಕಾರವು ಗೊತ್ತಾಗುತ್ತದೆ. ನಾಕಪಾಲಃ ಎಂಬಲ್ಲಿನ, **ಅಕಪಾಲಃ** ಕಪಾಲವಿಲ್ಲದವನಲ್ಲ ಅಂದರೆ ಕಪಾಲಿಯು ರುದ್ರನೆಂದು ಅರ್ಥವು. ಲಕ್ಷ್ಮೀ, ಬ್ರಹ್ಮ, ರುದ್ರ, ಇಂದ್ರ, ಕುಬೇರ ಇವರಿಂದ ಸೇವಿತ ಪಾದವನ್ನು ಭಜಿಸುವೆನು ಎಂದು ಅಭಿಪ್ರಾಯವು.

ಧರ್ಮರಾಜಾದಿ ರಾಜರ ಸಭೆಗಳಲ್ಲಿ ಮಾರ್ಕಾಂಡೇಯರೇ ಮೊದಲಾದ ಋಷಿಗಳು ಈಗಲೂ ಸಹ ಯಾವ ಭಗವಂತನ ಪಾದಾಂಬುಜವನ್ನು ಗಾನ-ಮಾಡುತ್ತಾರೋ, ಅಂಥಾ ರಾವಣಾದಿಗಳ ಸಂಹಾರಕನಾದ ಶ್ರೀರಾಮಚಂದ್ರನ ನಿರ್ಮಲವಾದ ಪಾದಕಮಲಗಳಿಗೆ ಶರಣಾಗಿದ್ದೇನೆ. ||೨೦||

**ಸ ಯೈಃ ಸ್ಪೃಷ್ಟೋಽಭಿದೃಷ್ಟೋ ವಾ ಸಂವಿಷ್ಟೋಽನುಗತೋಽಪಿ ವಾ |**
**ಕೋಸಲಾಸ್ತೇ ಯಯುಃ ಸ್ಥಾನಂ ಯತ್ರ ಗಚ್ಛಂತಿ ಯೋಗಿನಃ ||೨೧||**

**ಸಃ** ಶ್ರೀರಾಮಚಂದ್ರನು, **ಯೈಃ** ಯಾವ ಭಕ್ತರಿಂದ, **ಸ್ಪೃಷ್ಟಃ** ಭಕ್ತಿಯಿಂದ (ಪಾದನಮನಾದಿಗಳಿಂದ) ಸ್ಪರ್ಶ ಮಾಡಿಸಿಕೊಳ್ಳಲ್ಪಡುತ್ತಾನೋ, **ಅಭಿದೃಷ್ಟಃ** ಸಂದರ್ಶಿಸಲ್ಪಡುತ್ತಾನೋ, **ಸಂವಿಷ್ಟಃ** ಚೆನ್ನಾಗಿ ತಿಳಿಯಲ್ಪಡುತ್ತಾನೋ, **ಅನುಗತಃ** ಅನುಸರಿಸಲ್ಪಡುತ್ತಾನೋ, **ತೇ** ಆ **ಕೋಸಲಾಃ** ಅಯೋಧ್ಯಾವಾಸಿಗಳು (ಭಕ್ತರೆಲ್ಲರೂ) **ಯತ್ರ** ಎಲ್ಲಿ, **ಯೋಗಿನಃ** ಭಕ್ತಿಜ್ಞಾನಯೋಗಿಗಳು, **ಗಚ್ಛಂತಿ** ಹೋಗುತ್ತಾರೋ, **ತತ್** ಆ ಸ್ಥಾನವನ್ನು, **ಯಯುಃ** ಹೊಂದಿದರು.

**ತಾತ್ಪರ್ಯ-** ಶ್ರೀರಾಮಚಂದ್ರನನ್ನು ಭಕ್ತಿಪೂರ್ವಕವಾಗಿ ನಮಸ್ಕರಿಸಿದ ಸಂದರ್ಶನ ಮಾಡಿದ, ಮಹಿಮಾಶ್ರವಣ ಮಾಡಿದವರು ತಿಳಿದವರು ಅನುಸರಿಸಿದ

ಅಯೋಧ್ಯಾವಾಸಿಗಳು (ಎಲ್ಲಾ ಭಕ್ತರು) ಜ್ಞಾನಭಕ್ತಿ ಪೂರ್ಣರಾದ ಯೋಗಿಗಳು ಹೊಂದುವ ಲೋಕವನ್ನು ಹೊಂದಿದರು. ।।೨೨।।

**ಪುರುಷೋ ರಾಮಚರಿತಂ ಶ್ರವಣೈರುಪಧಾರಯನ್ ।**
**ಆನೃಶಂಸ್ಯಪರೋ ರಾಜನ್ ಕರ್ಮಬಂಧೈರ್ವಿಮುಚ್ಯತೇ ।।೨೩।।**

**ರಾಜನ್** ರಾಜನೇ! **ಪುರುಷಃ** ಮಾನವನು, **ಶ್ರವಣೈಃ** ಶ್ರವಣಾದಿ ಇಂದ್ರಿಯಗಳಿಂದ **ಉಪಧಾರಯನ್** ಕಿವಿಯಿಂದ ಶ್ರವಣವು, ಮನಸ್ಸಿನಿಂದ ಧ್ಯಾನವು, ವಾಗಿಂದ್ರಿಯದಿಂದ ಕಥನವು ಇತ್ಯಾದಿ ರೂಪವಾಗಿ ಧಾರಣ ಮಾಡತಕ್ಕವನು, **ಆನೃಶಂಸ್ಯಪರಃ** ಪ್ರಮಾದದಿಂದ ಅಯೋಗ್ಯಕರ್ಮವನ್ನಾಚರಿಸಿದರೂ ಸಹ, **ಕರ್ಮಬಂಧೈಃ** ದುಷ್ಕರ್ಮಲಕ್ಷಣವಾದ ಪ್ರತಿಬಂಧಕಗಳಿಂದ, (ಕರ್ಮದಿಂದ ಉಂಟಾಗುವ ಅನೇಕ ಯೋನಿಬಂಧಗಳಿಂದ) **ವಿಮುಚ್ಯತೇ** ಮುಕ್ತನಾಗುತ್ತಾನೆ.

**ತಾತ್ಪರ್ಯ-** ರಾಜನೇ! ಮಾನವನು ತನ್ನ ಕಿವಿಯಿಂದ ಭಗವಂತನ ಮಹಿಮಾ ಶ್ರವಣನವನ್ನು ಮನಸ್ಸಿನಿಂದ ಧ್ಯಾನವನ್ನು ನಾಲಿಗೆಯಿಂದ ಮಹಿಮಾವರ್ಣನೆಯನ್ನು ಇತ್ಯಾದಿ ಸೇವೆಯನ್ನು ಮಾಡಿ ಅಕಸ್ಮಾತ್ ಹಿಂಸಾದಿಗಳನ್ನು ಮಾಡಿದರೂ ತಾನು ಮಾಡಿದ ಕರ್ಮಬಂಧದಿಂದ ಮುಕ್ತನಾಗುತ್ತಾನೆ. ।।೨೩।।

**ರಾಜೋವಾಚ-**

**ಕಥಂ ಸ ಭಗವಾನ್ ರಾಮೋ ಭ್ರಾತೃಬಂಧುಷ್ವವರ್ತತ ।**
**ಪ್ರಜಾಸ್ವೌರಸವದ್ರಾಮಃ ಕಥಂ ವಾ ರಾಮ ಈಶ್ವರಃ ।।೨೪।।**

ಶ್ರೀರಾಮಕಥಾದಲ್ಲಿ ವಿಶೇಷ ತಿಳಿಯಲು ಅಪೇಕ್ಷೆ ಉಳ್ಳ ರಾಜನು ಕೇಳುತ್ತಾನೆ. ಏನೆಂದರೆ **ಸಃ ಭಗವಾನ್ ಈಶ್ವರಃ** ಸ್ವಾಮಿಯಾದ ಶ್ರೀರಾಮಚಂದ್ರನು, **ಭ್ರಾತೃಬಂಧುಷು** ತನ್ನ ಸಹೋದರರು ಬಂಧುಗಳೊಂದಿಗೆ **ಕಥಂ** ಹೇಗೆ **ಅವರ್ತತ** ಇದ್ದನು? **ಪ್ರಜಾಸು** ಪ್ರಜೆಗಳ ವಿಷಯದಲ್ಲಿ, **ಔರಸವತ್** ತನ್ನಲ್ಲಿ ಜನಿಸಿದ ಮಕ್ಕಳಂತೆ **ಕಥಂ** ಹೇಗೆ **ಆವರ್ತತ** ಇದ್ದನು? ।।೨೩।।

**ಕಥಂ ಸ ಭಗವಾನ್ ರಾಮೋ ಭ್ರಾತ್ನ್ ವಾ ಸ್ವಯಮಾತ್ಮನಃ ।**
**ತಸ್ಮಿನ್ ವಾ ತೇಽನ್ವವರ್ತಂತ ಪ್ರಜಾಃ ಪೌರಾಶ್ಚ ಈಶ್ವರೇ ।।೨೪।।**

ಇದರ ಪ್ರಕಾರ ಮೂರು ಪ್ರಶ್ನೆಗಳು -

**ಸಃ ಭಗವಾನ್ ರಾಮಃ ಕಥಂ (ಸ್ವಯಂ ಸೀತಯಾ ಸಹ) ಅವರ್ತತ** ತಾನು ಸೀತಾದೇವಿಯಿಂದ ಕೂಡಿಕೊಂಡು ಹೇಗೆ ಇದ್ದನು. ।।೧।।

**ಆತ್ಮನಃ** ತನ್ನ **ಭ್ರಾತೄನ್ ಪ್ರತಿ** ತಮ್ಮಂದಿರ ವಿಷಯದಲ್ಲಿ ಮತ್ತು **ತೇ** ಆ ತಮ್ಮಂದಿರು, **ತಸ್ಮಿನ್** ರಾಮಚಂದ್ರನ ವಿಷಯದಲ್ಲಿ, **ಕಥಂ ಆವರ್ತಂತ** ಹೇಗೆ ಇದ್ದರು. ।।೨।।

**ಪ್ರಜಾಪ್ರತಿಃ** ಎಲ್ಲ ಪ್ರಜೆಗಳ ವಿಷಯದಲ್ಲಿ ರಾಮಚಂದ್ರನು ಹೇಗೆ ಇದ್ದನು ಮತ್ತು **ತೇ ಚ ಪೌರಾಃ** ಆ ರಾಮನ ಒಡೆತನಕ್ಕೆ ಒಳಪಟ್ಟು ದೂರ ಗ್ರಾಮಗಳಲ್ಲಿದ್ದು ಪೌರರೆಂದು ಕರೆಸಿಕೊಳ್ಳುವ ಸಮಸ್ತ ಪ್ರಜೆಗಳು ರಾಮನ ವಿಷಯದಲ್ಲಿ ಹೇಗೆ ನಡೆದುಕೊಂಡರು ಎಂಬ ಪ್ರಶ್ನೆಗೆ ಉತ್ತರ ಹೇಳಿರಿ. ಅಥವಾ **ಈಶ್ವರಃ** ಎಂಬುವದಕ್ಕೆ ಶುಕಾಚಾರ್ಯರೆಂದರ್ಥವು. ಪರೀಕ್ಷಿತನ ಅಭಿಪ್ರಾಯವೇನೆಂದರೆ? ನಾನು ಕೇಳಿದ ಮೂರು ಪ್ರಶ್ನೆಗಳಿಗೆ ಪರಿಹಾರ ಹೇಳುವದರಲ್ಲಿ ನೀವು **ಈಶ್ವರಃ** ಸಮರ್ಥರು. ಹಾಗೆಯೇ ನಾನೂ ಸಹ ನಿಮ್ಮಿಂದ ಉಪದೇಶ ಪಡೆಯಲು, **ಔರಸವತ್** ನಿಮ್ಮ ಪುತ್ರನಂತೆಯೇ ಪ್ರಿಯ ಶಿಷ್ಯನಾದ್ದರಿಂದ ಅರ್ಹನು. ಕಾರಣ ಹೇಳಿರಿ.

**ತಾತ್ಪರ್ಯ-** ಜಗದೀಶ್ವರನಾದ ಆ ರಾಮಚಂದ್ರನು ಸೀತೆಯೊಂದಿಗೆ ಹೇಗೆ ವರ್ತಿಸಿದನು? ೧) ತನ್ನ ಸಹೋದರರು ಬಂಧುಗಳಲ್ಲಿ ಹೇಗೆ ವರ್ತಿಸಿದರು? ೨) ಆ ಸಹೋದರರು ಪ್ರಜೆಗಳು ಈಶ್ವರನಾದ ಶ್ರೀರಾಮಚಂದ್ರನ ವಿಷಯದಲ್ಲಿ ಹೇಗೆ ವರ್ತಿಸಿದರು? ೩) ಪೌರಾಃ ಪ್ರಜಾಃ ಈ ಎರಡು ಪದಗಳ ವ್ಯತ್ಯಾಸವೇನೆಂದರೆಃ- ಕ್ರಯ, ವಿಕ್ರಯ ಮಾಡಿಕೊಂಡು ವೈಶ್ಯವೃತ್ತಿಯಿಂದ ಜೀವಿಸುವರು, ಪೌರಾಃ ಎನಿಸಿಕೊಳ್ಳುತ್ತಾರೆ. ಇವರಿಂದ ಅನ್ಯರು ಪ್ರಜಾಃ ಎನಿಸಿಕೊಳ್ಳುತ್ತಾರೆ. ।।೨೪।।

**ಶ್ರೀಶುಕ ಉವಾಚ-**

**ಅಥಾದಿಶದ್ದಿಗ್ವಿಜಯೇ ಭ್ರಾತೄಂಶ್ಚ ತ್ರಿದಶೇಶ್ವರಃ ।**
**ಆತ್ಮಾನಂ ದರ್ಶಯನ್ ಸ್ವಾನಾಂ ಪುರೀಮೈಕ್ಷತ ಸಾನುಗಃ ।।೨೫।।**

**ಅಥ** ರಾಜ್ಯಾಭಿಷೇಕಾನಂತರದಲ್ಲಿ, **ತ್ರಿದಶೇಶ್ವರಃ** ಶ್ರೀರಾಮಚಂದ್ರನು, **ಭ್ರಾತೄನ್** ಸಹೋದರರನ್ನು, **ದಿಗ್ವಿಜಯೇ** ದಿಗ್ವಿಜಯಕ್ಕಾಗಿ, **ಆದಿಶತ್** ಅಪ್ಪಣೆ ಮಾಡಿದನು. **ಸ್ವಾನಾಂ** ತನ್ನ ಭಕ್ತರಿಗೆ, **ಆತ್ಮಾನಂ** ತನ್ನನ್ನು, **ದರ್ಶಯನ್** ತೋರಿಸುತ್ತಾ, **ಸಾನುಗಃ** ಅನುಚರರಿಂದ ಸಹಿತನಾಗಿ, **ಪುರೀಂ** ಪಟ್ಟಣವನ್ನು, **ಐಕ್ಷತ** ನೋಡಿದನು.

**ತಾತ್ಪರ್ಯ-** ಶ್ರೀರಾಮಚಂದ್ರನು ರಾಜ್ಯಾಭಿಷೇಕಾನಂತರದಲ್ಲಿ ತನ್ನ ಸಹೋದರರನ್ನು ದಿಗ್ವಿಜಯಕ್ಕಾಗಿ ಅಪ್ಪಣೆ ಮಾಡಿದನು. ಅನುಚರರಿಂದ ಸಹಿತನಾದ ಶ್ರೀರಾಮನು ತನ್ನ ಭಕ್ತರಿಗೆ ತನ್ನನ್ನು ತೋರಿಸುತ್ತಾ ಅಯೋಧ್ಯಾ ನಗರವನ್ನು ನೋಡಿದನು.

ತ್ರಿದಶೇಶ್ವರಃ ದೇವೇಂದ್ರನು ತನ್ನ ದೇವತೆಗಳಿಗೆ ವಿನೇತಾ ಪ್ರೇರಕನು ಹೇಗೋ? ಹಾಗೆ ಶ್ರೀರಾಮನು ತನ್ನವರಿಗೆ ಪ್ರೇರಿಸಿದನು. ಪ್ರಜೆಗಳಿಗೆ ತನ್ನನ್ನು ಅದರಿಂದ ಪ್ರಜಾರಂಜನೆಯನ್ನು ಮಾಡುತ್ತಾ, ಪ್ರಜೆಗಳು ತನ್ನವರು ಎಂಬುದನ್ನು ಪ್ರದರ್ಶನ ಮಾಡಿದನು. ಯಾವ ಶ್ರೀರಾಮನು ಹಿಂದೆ, ಸಾನುಗಃ ಚಿತ್ರಕೂಟ ಶೃಂಗದಲ್ಲಿ ಸಂಚರಿಸಿದನೋ, ಆ ರಾಮನು ಈಗ **ಸಾನುಗಃ** ತನ್ನ ಅನುಚರರಿಂದ ಸಹಿತನಾಗಿ ಅಯೋಧ್ಯೆಯನ್ನು ಸಂದರ್ಶಿಸಿದನು. ಎಂದು ಭಾವವು. ॥೨೫॥

**ಆಸಿಕ್ತಮಾರ್ಗಾಂ ಗಂಧೋದ್ಧೈಃ ಕರಿಣಾಂ ಮದಸೀಕರೈಃ ।**
**ಸ್ವಾಮಿನಂ ಪ್ರಾಪ್ತಮಾಲೋಕ್ಯ ಮತ್ತಾಂ ವಾ ಸುತರಾಮಿವ ॥೨೬॥**

**ಕರಿಣಾಂ** ಆನೆಗಳ, **ಮದಸೀಕರೈಃ** ಮದಬಿಂದುಗಳಿಂದಲೂ, **ಗಂಧೋದ್ಧೈಃ** ಗಂಧೋದಕಗಳಿಂದಲೂ, **ಆಸಿಕ್ತಮಾರ್ಗಾಂ** ತೋಯಿಸಿದ ಮಾರ್ಗ ಉಳ್ಳ, **ಪ್ರಾಪ್ತಂ** ಬಂದಿರುವ, **ಸ್ವಾಮಿನಂ** ಪತಿಯಾದ ರಾಮಚಂದ್ರನನ್ನು ನೋಡಿ, **ಸುತರಾಂ** ಹರ್ಷವಿಶೇಷವಾಗಿ, **ಮತ್ತಾಂ ಇವ** ಮದಿಸಿದ, ಕಾಮಿನಿಸ್ತ್ರೀಯಂತೆ **ಸ್ಥಿತಾಂ** ಇರುವ ನಗರವನ್ನು ನೋಡಿದನು.

**ತಾತ್ಪರ್ಯ-** ಶ್ರೀರಾಮಚಂದ್ರನು ನಗರವನ್ನು ಪ್ರವೇಶಿಸಿದಾಗ ರಾಜಬೀದಿ-ಗಳೆಲ್ಲವು, ಆನೆಗಳ ಮದೋದಕದಿಂದಲೂ, ಮತ್ತು ಗಂಧೋದಕದಿಂದಲೂ ಥಳಿಸಲ್ಪಟ್ಟಿದ್ದವು. ಅಯೋಧ್ಯಾನಗರವು ತನ್ನೊಳಗೆ ಪ್ರವೇಶಿಸುತ್ತಿರುವ ಶ್ರೀರಾಮಚಂದ್ರನನ್ನು ನೋಡಿ ಹರ್ಷೋದ್ರೇಕದಿಂದ ಮದಿಸಿದವಳಂತೆ ನಗರವು ಶೋಭಿಸಿತು. ॥೨೬॥

**ಪ್ರಾಸಾದಗೋಪುರಸಭಾಚೈತ್ಯದೇವಗೃಹಾದಿಷು ।**
**ವಿನ್ಯಸ್ತಹೇಮಕಲಶೈಃ ಪತಾಕಾಭಿಶ್ಚ ಮಂಡಿತಾಮ್ ॥೨೭॥**

**ಪ್ರಾಸಾದಗೋಪುರಸಭಾಚೈತ್ಯದೇವಗೃಹಾದಿಷು** ಮಹಡಿ, ಉಪ್ಪರಿಗೆ ಸಭಾ-ಮಂದಿರ ಶಿಲಾಮಂಟಪ ದೇವಗೃಹಾದಿಗಳಲ್ಲಿ, **ವಿನ್ಯಸ್ತಹೇಮಕಲಶೈಃ** ಇಡಲ್ಪಟ್ಟ ಸುವರ್ಣಕಲಶಗಳಿಂದಲೂ, **ಪತಾಕಾಭಿಃ** ಪತಾಕಾಗಳಿಂದಲೂ, **ಮಂಡಿತಾಂ** ಅಲಂಕೃತವಾದ ನಗರವನ್ನು ನೋಡಿದನು.

**ತಾತ್ಪರ್ಯ-** ಶ್ರೀರಾಮಚಂದ್ರನು ನಗರಪ್ರವೇಶ ಸಮಯದಲ್ಲಿ, ನಗರದಲ್ಲಿ ಪ್ರಸಾದ ಗೋಪುರ ಸಭಾಮಂದಿರ ದೇವಮಂದಿರಾದಿಗಳಲ್ಲೂ ಸುವರ್ಣಕಲಶ-ಗಳನ್ನು ಇಟ್ಟಿದ್ದರು. ನಗರವೆಲ್ಲವೂ ಪತಾಕಾದಿಗಳಿಂದ ಅಲಂಕೃತವಾಗಿತ್ತು . ॥೨೭॥

**ಪೂಗೈಃ ಸವೃಂತೈಃ ರಂಭಾಭಿಃ ಪಾಲಿಕಾಭಿಃ ಸುವಾಸಸಾಮ್ ।**
**ಆದರ್ಶೈರಂಶುಕೈಃ ಸ್ರಗ್ಭಿಃ ಕೃತಕೌತುಕತೋರಣಾಮ್ ॥೨೮॥**

**ಸವೃಂತೈಃ** ಹಣ್ಣು ಮತ್ತು ಮೊಗ್ಗುಗಳಿಂದ ಕೂಡಿದ **ಪೂಗೈಃ** ಅಡಿಕೆಗಿಡಗಳಿಂದಲೂ, **ರಂಭಾಭಿಃ** ಬಾಳೆಕಂಭಗಳಿಂದಲೂ, **ಪಾಲಿಕಾಭಿಃ** ಅಂಕುರಗಳಿಂದ ಸಹಿತವಾದ ಮಣ್ಣಿನ ಹರಿವಾಣಗಳಿಂದಲೂ, **ಸುವಾಸಸಾಂ** ಶುಭ್ರವಸ್ತ್ರಧಾರಿಗಳಾದ ಸ್ತ್ರೀಯರುಗಳ, ಕೈಯಲ್ಲಿದ್ದ, **ಆದರ್ಶೈಃ** ಕನ್ನಡಿಗಳಿಂದಲೂ, **ಅಂಶುಕೈಃ** ವಸ್ತ್ರಗಳಿಂದ **ಸ್ರಗ್ಭಿಃ** ಮಾಲೆಗಳಿಂದಲೂ, **ಕೃತಕೌತುಕತೋರಣಾಂ** ರಚಿಸಲ್ಪಟ್ಟು ಮಂಗಳಕರವಾದ ತೋರಣಗಳುಳ್ಳ, **ನಗರೀಂ** ಅಯೋಧ್ಯೆಯನ್ನು ನೋಡಿದನು.

**ತಾತ್ಪರ್ಯ-** ನಗರದಲ್ಲಿ ಎಲ್ಲಾ ಬೀದಿಗಳಲ್ಲಿ ಅಡಿಕೆ ಹಿಂಗಾರುಗಳನ್ನು ಕಟ್ಟಿದ್ದರು. ಬಾಳೇಕಂಬಗಳಿಂದ ಅಲಂಕರಿಸಿದ್ದರು. ಅಂಕುರ (ಚಿಕ್ಕ ಮಾಲಿಕೆ) ಗಳನ್ನು ಇಟ್ಟಿದ್ದರು. ಶುಭ್ರವಾದ ವಸ್ತ್ರ ಧರಿಸಿದ ಮಹಿಳೆಯರು ಕನ್ನಡಿಯನ್ನು ತೋರಿಸುತ್ತಿದ್ದರು. ಮಂಗಳಸೂಚಕವಾದ ತೋರಣಗಳನ್ನು ಬಂಧಿಸಿದ್ದರು. ಈ ರೀತಿ ಇರುವ ನಗರವನ್ನು ನೋಡಿದನು. ॥೨೮॥

**ತಮುಪೇಯುಸ್ತತ್ರ ತತ್ರ ಪೌರಾ ಅರ್ಹಣಪಾಣಯಃ ।**
**ಆಶಿಷೋ ಯುಯುಜುರ್ದೇವ ಪಾಹೀಮಾಂ ಪ್ರಾಕ್ತ್ವಯೋದ್ಧೃತಾಮ್॥**

**ಪೌರಾಃ** ಪಟ್ಟಣಿಗರು, **ತತ್ರ ತತ್ರ** ಅಲ್ಲಲ್ಲಿ, **ಅರ್ಹಣಪಾಣಯಃ** ಪೂಜಾದ್ರವ್ಯಸಹಿತ ಹಸ್ತ ಉಳ್ಳವರಾಗಿ, **ತಂ** ಶ್ರೀರಾಮಚಂದ್ರನನ್ನು, **ಉಪೇಯುಃ** ಅನುಸರಿಸಿದರು. **ಆಶಿಷಃ** ಆಶೀರ್ವಾದವನ್ನು (ಮಂಗಳ ವಚನಗಳನ್ನು) **ಯುಯುಜುಃ** ಪ್ರಾರ್ಥಿಸಿದರು. ಏನೆಂದರೆ **ಹೇ ದೇವ! ಪ್ರಾಕ್** ಹಿಂದೆ ವರಾಹಾವತಾರದಲ್ಲಿ, **ತ್ವಯಾ** ನಿನ್ನಿಂದ **ಉದ್ಧೃತಾಂ** ಉದ್ಧರಿಸಲ್ಪಟ್ಟ, **ಇಮಾಂ** ಈ ಭೂರಾಜ್ಯವನ್ನು **ಪಾಹಿ** ಪಾಲನಮಾಡು ಎಂದು ಪ್ರಾರ್ಥಿಸಿದರು.

**ತಾತ್ಪರ್ಯ-** ಪಟ್ಟಣಿಗರು ಅಲ್ಲಲ್ಲಿ ತಮ್ಮ ಕರಗಳಲ್ಲಿ ಪೂಜಾಸಾಮಗ್ರಿಯನ್ನು ಇಟ್ಟುಕೊಂಡವರಾಗಿ, ಶ್ರೀರಾಮಚಂದ್ರನನ್ನು ಅನುಸರಿಸಿದರು. ವೃದ್ಧರು 'ದೇವಾ! ನೀನು ಹಿಂದೆ ವರಾಹಾವತಾರದಲ್ಲಿ ಮೇಲಕ್ಕೆ ಎತ್ತಿದ ಭೂಮಿಯನ್ನು ರಕ್ಷಿಸು ಎಂಬುದಾಗಿ ಮಂಗಳ ವಚನಗಳನ್ನು ನುಡಿದರು. ॥೨೯॥

**ತಂ ತಾಃ ಪ್ರಜಾ ವೀಕ್ಷ್ಯ ಪತಿಂ ಚಿರಾಗತಂ**
**ದಿದೃಕ್ಷಯೋತ್ಸೃಜ್ಯ ಗೃಹಾನ್ ಸ್ತ್ರಿಯೋ ನರಾಃ ।**
**ಆರುಹ್ಯ ಹರ್ಮ್ಯಾಣ್ಯರವಿಂದಲೋಚನಂ**
**ನ ತೃಪ್ತನೇತ್ರಾಃ ಕುಸುಮೈರವಾಕಿರನ್ ॥೩೦॥**

**ತಾಃ ಆ ಪ್ರಜಾಃ** ಪ್ರಜೆಗಳಾದ, **ಸ್ತ್ರಿಯಃ** ನಾರಿಯರು, **ನರಾಃ** ನಾಗರೀಕರು, **ಚಿರಾಗತಂ** ಬಹುಕಾಲದ ಮೇಲೆ ಬಂದ, **ಪತಿಂ** ಸ್ವಾಮಿಯಾದ, **ತಂ** ಆ ರಾಮಚಂದ್ರನನ್ನು, **ದಿದೃಕ್ಷವಃ** ನೋಡಬೇಕೆಂಬ ಅಪೇಕ್ಷೆಯುಳ್ಳವರಾಗಿ, **ಗೃಹಾನ್** ಮನೆಗಳನ್ನು **ಆರುಹ್ಯ** ಹತ್ತಿ, **ಅರವಿಂದಲೋಚನಂ** ಕಮಲನಯನನಾದ ಶ್ರೀರಾಮಚಂದ್ರನನ್ನು **ವೀಕ್ಷ್ಯ** ನೋಡಿ **ನ ತೃಪ್ತನೇತ್ರಾಃ** ಕಣ್ಣುಗಳಿಗೆ ತೃಪ್ತಿಹೊಂದದವರಾಗಿ, **ಕುಸುಮೈಃ** ಪುಷ್ಪಗಳಿಂದ, **ಅವಾಕಿರನ್** ಸುರಿಮಳೆ ಕರೆದರು.

**ತಾತ್ಪರ್ಯ–** ಆ ಪ್ರಜೆಗಳಾದ ನಾಗರೀಕ ಸ್ತ್ರೀ, ಪುರುಷರು ಬಹುಕಾಲದ ಮೇಲೆ ಬಂದ ತಮ್ಮ ಸ್ವಾಮಿಯನ್ನು ದರ್ಶನ ಮಾಡಲು ಅಪೇಕ್ಷೆ ಉಳ್ಳವರಾಗಿ ಉಪ್ಪರಿಗೆಯ ಮೇಲೆ ಹತ್ತಿ ಕಮಲದಳದಂತೆ ವಿಸ್ತಾರವಾದ ಕಣ್ಣುಗಳುಳ್ಳ ರಾಮನನ್ನು ನೋಡುತ್ತಾ ಕಣ್ಣಿನ ತೃಪ್ತಿಯನ್ನು ಹೊಂದಲಿಲ್ಲ. ಪುಷ್ಪಗಳ ಮಳೆ ಕರೆದರು.।।೩೦।।

**ಅಥ ಪ್ರವಿಷ್ಟಃ ಸ್ವಗೃಹಂ ಜುಷ್ಟಂ ಸ್ವೈಃ ಪೂರ್ವರಾಜಭಿಃ ।**
**ಅನಂತಗೃಹಕೋಶಾಢ್ಯಮನರ್ಘ್ಯೋರುಪರಿಚ್ಛದಮ್ ।।೩೧।।**

**ಪೂರ್ವರಾಜಭಿಃ** ಪೂರ್ವಿಕರಾದ ರಘುರಾಜರೇ ಮೊದಲಾದವರಿಂದ, **ಜುಷ್ಟಂ** ಸೇವಿತವಾದ, **ಅನಂತಗೃಹಕೋಶಾಢ್ಯಂ** ಅನೇಕ ಮಂದಿರ ಕೋಶಗಳಿಂದ ಕೂಡಿದ **ಅನರ್ಘ್ಯೋರುಪರಿಚ್ಛದಂ** ಅಮೂಲ್ಯವಾದ ಶ್ರೇಷ್ಠಮೇಲ್ಹಾವಣಿಯಿಂದ ಆವೃತವಾದ, **ಸ್ವಗೃಹಂ** ತನ್ನ ಮಂದಿರವನ್ನು, **ಪ್ರವಿಷ್ಟಃ** ಪ್ರವೇಶಿಸಿದವನಾಗಿ, ಕ್ರೀಡಿಸಿದನು.

**ತಾತ್ಪರ್ಯ–** ಅನಂತರ ಶ್ರೀರಾಮಚಂದ್ರನು ತನ್ನ ಪೂರ್ವಿಕರಿಂದ ಸೇವಿತವಾದ ಅನರ್ಘ್ಯ ಮೇಲ್ಹಾವಣಿಯಿಂದ ಸಹಿತವಾದ, ಅನೇಕ ಕೊಠಡಿ ಕೋಶಗೃಹಗಳಿಂದ ಸಹಿತವಾದ ತನ್ನ ಮನೆಯನ್ನು ಪ್ರವೇಶಿಸಿ ಕ್ರೀಡಿಸಿದನು. ।।೩೧।।

**ವಿದ್ರುಮೋದುಂಬರದ್ವಾರೈರ್ವೈಡೂರ್ಯಸ್ತಂಭಪಂಕ್ತಿಭಿಃ ।**
**ಸ್ಥಲೈರ್ಮರಕತೈಃ ಸ್ವಚ್ಛೈಃ ಭ್ರಾಜತ್‌ಸ್ಫಟಿಕಭಿತ್ತಿಭಿಃ ।।೩೨।।**

**ವಿದ್ರುಮ** ಹವಳಮಯವಾದ, **ಉದುಂಬರ** ಹೊಸ್ತಲಿನಿಂದ ಕೂಡಿದ **ದ್ವಾರೈಃ** ದ್ವಾರಗಳಿಂದ **ವೈಡೂರ್ಯಸ್ತಂಭಪಂಕ್ತಿಭಿಃ** ವೈಡೂರ್ಯಖಚಿತವಾದ ಕಂಭಗಳ ಪಂಕ್ತಿಗಳಿಂದಲೂ, **ಮರಕತೈಃ** ಮರಕತಮಣಿಗಳಿಂದ ಖಚಿತವಾದ **ಸ್ಥಲೈಃ** ಸ್ಥಲಗಳಿಂದಲೂ, **ಸ್ವಚ್ಛೈಃ** ನಿರ್ಮಲವಾದ, **ಭ್ರಾಜತ್** ಹೊಳೆಯುತ್ತಿರುವ, **ಸ್ಫಟಿಕಭಿತ್ತಿಭಿಃ** ಸ್ಫಟಿಕಮಣಿಮಯ ಗೋಡೆಗಳಿಂದಲೂ ವಿರಾಜಿಸುವ ಮಂದಿರವನ್ನು ಪ್ರವೇಶಿಸಿದನು.

**ತಾತ್ಪರ್ಯ-** ಶ್ರೀರಾಮಚಂದ್ರನು ಹವಳದಿಂದ ಖಚಿತವಾದ ಹೊಸ್ತಲು ಉಳ್ಳ, ದ್ವಾರಗಳಿಂದ ಕೂಡಿದ ವೈಡೂರ್ಯಖಚಿತ ಸ್ತಂಭಗಳಿಂದ ವಿರಾಜಿಸುತ್ತಿರುವ ಸ್ಫಟಿಕಮಣಿಯ ಭಿತ್ತಿಗಳಿಂದ ಶೋಭಿಸುವ ಅರಮನೆಯನ್ನು ಪ್ರವೇಶಿಸಿದನು.

**ಚಿತ್ರಸ್ರಗ್ಭಿಃ ಪಟ್ಟಿಕಾಭಿರ್ವಾಸೋಮಣಿಗಣಾಂಶುಭಿಃ ।**
**ಮುಕ್ತಾಫಲೈಶ್ಚಿದುಲ್ಲಾಸೈಃ ಕಾಂತಂ ಕಾಮೋಪಪತ್ತಿಭಿಃ ॥೩೩॥**

**ಚಿತ್ರಸ್ರಗ್ಭಿಃ** ವಿಚಿತ್ರವಾದ ಮಾಲೆಗಳಿಂದಲೂ, **ಪಟ್ಟಿಕಾಭಿಃ** ವಿತಾನಗಳಿಂದಲೂ **ವಾಸೋಮಣಿಗಣಾಂಶುಭಿಃ** ಕಾಂತಿಯುಕ್ತವಾದ ಸುವರ್ಣವಸ್ತ್ರಗಳ ಮತ್ತು ಮಣಿಗಣಾಗಳ (ಛತ್ತು) ಕಿರಣಗಳಿಂದಲೂ, **ಚಿದುಲ್ಲಾಸೈಃ** ಶುದ್ಧಚೈತನ್ಯದಂತೆ ಪ್ರಕಾಶಿಸುತ್ತಿರುವ, ನೋಡುವ ಮಾತ್ರದಿಂದ ಆನಂದವೆನಿಸುವ, **ಮುಕ್ತಾಫಲೈಃ** ಮುಕ್ತಾಮಣಿಗಳಿಂದ, **ಕಾಮೋಪಪತ್ತಿಭಿಃ** ಕಾಮೋಪಭೋಗ ಸಾಧನಗಳಿಂದಲೂ, **ಕಾಂತಂ** ಅಲಂಕೃತವಾದ, ಅರಮನೆಯನ್ನು ಪ್ರವೇಶಿಸಿದನು.

**ತಾತ್ಪರ್ಯ-** ಶ್ರೀರಾಮಚಂದ್ರನು ವಿಚಿತ್ರಮಾಲೆಗಳಿಂದಲೂ, ವಿತಾನಗಳಿಂದಲೂ, ಕಾಂತಿಪೂರ್ಣ ವಸ್ತುಗಳಿಂದಲೂ, ಮಣಿಗಳಿಂದಲೂ, ಪ್ರಕಾಶಿಸುತ್ತಿರುವ ವಿವಿಧ ಕಾಮೋಪಭೋಗಸಾಧನಗಳಿಂದ ತುಂಬಿದ ಅರಮನೆಯನ್ನು ಪ್ರವೇಶಿಸಿದನು. ॥೩೩॥

**ಧೂಪದೀಪೈಃ ಸುರಭಿಭಿರ್ಮಂಡಿತೈಃ ಪುಷ್ಪಮಂಡಕೈಃ ।**
**ಸ್ತ್ರೀಪುಂಭಿಃ ಸುರಸಂಕಾಶೈರ್ಜುಷ್ಟಂ ಭೂಷಣಭೂಷಣೈಃ ॥೩೪॥**

**ಸುರಭಿಭಿಃ** ಸುಗಂಧಯುಕ್ತವಾದ, **ಧೂಪದೀಪೈಃ** ಧೂಪದೀಪಗಳಿಂದಲೂ **ಪುಷ್ಪಮಂಡಕೈಃ** ಪುಷ್ಪಗುಚ್ಛಗಳಿಂದ ಶೋಭಿಸುವ, **ಮಂಡಿತೈಃ** ಅಲಂಕೃತವಾದ, **ಸುರಸಂಕಾಶೈಃ** ದೇವತೆಗಳಂತೆ ಶೋಭಿಸುವ, **ಭೂಷಣಭೂಷಣೈಃ** ಭೂಷಣಗಳಿಂದ ಅಲಂಕೃತರಾದ, **ಸ್ತ್ರೀಪುಂಭಿಃ** ಸ್ತ್ರೀಪುರುಷರುಗಳಿಂದ, **ಜುಷ್ಟಂ** ಸೇವಿತವಾದ, ಮನೆಯನ್ನು ಪ್ರವೇಶಿಸಿದನು.

ಇಲ್ಲಿ ಮಂಡಿತೈಃ ಎನ್ನುವಲ್ಲಿ ಮಂಡಿತಂ ಎಂದು ಪಾಠಾಂತರವಿದೆ. ಆಗ ಚಿತ್ರಸ್ರಗ್ಭಿಃ ಆರಂಭಮಾಡಿ ಪುಷ್ಪಮಂಡಕೈಃ ಎನ್ನುವವರೆಗೆ ತೃತಿಯಾಂತ ಎಲ್ಲ ಪದಗಳನ್ನು ಮಂಡಿತ ಎಂಬ ಪದದೊಡನೆ ಅನ್ವಯಮಾಡಬೇಕು.

**ತಾತ್ಪರ್ಯ-** ಶ್ರೀರಾಮಚಂದ್ರನು ಸುಗಂಧವಾದ, ಧೂಪದೀಪಗಳಿಂದಲೂ ಅಲಂಕೃತರಾದ ದೇವತೆಗಳಿಗೆ ಸಮಾನರಾದ ಸ್ತ್ರೀಪುರುಷಗಳಿಂದ ಪೂರ್ಣವಾದ ಮನೆಯನ್ನು ಪ್ರವೇಶಿಸಿದನು. ॥೩೪॥

**ತಸ್ಮಿನ್ಸ ಭಗವಾನ್ ರಾಮಃ ಸ್ನಿಗ್ಧಯಾ ಪ್ರಿಯಯೇಚ್ಛಯಾ ।**
**ರೇಮೇ ಸ್ವಾರಾಮಚಾರಾಣಾಮೃಷಭಃ ಸೀತಯಾ ಸಹ ॥೩೫॥**

**ತಸ್ಮಿನ್** ಆ ಅರಮನೆಯಲ್ಲಿ **ಸಃ** ಆ **ಭಗವಾನ್** ಷಡ್ಗುಣಸಂಪನ್ನನಾದ, **ರಾಮಃ** ಶ್ರೀರಾಮಚಂದ್ರನು, **ಸ್ನಿಗ್ಧಯಾ** ತನ್ನಲ್ಲಿ (ರಾಮನಲ್ಲಿ) ಭಕ್ತಿಯುಳ್ಳ, **ಇಚ್ಛಯಾ (ಇಷ್ಟಯಾ)** ತನ್ನ ಇಚ್ಛೆಯಂತೆಯೇ ನಡೆದುಕೊಳ್ಳುವ, **ಪ್ರಿಯಯಾ** ಹೆಂಡತಿಯಾದ, **ಸೀತಯಾ ಸಹ** ಸೀತಾದೇವಿಯಿಂದ ಕೂಡಿಕೊಂಡು, **ಸ್ವಾರಾಮಚಾರಾಣಾಂ ಸು** ಅತ್ಯಂತ ಸುಂದರವಾದ **ಆರಾಮ** ಉದ್ಯಾನಗಳಲ್ಲಿ, **ಚಾರಾಣಾಂ** ಸಂಚರಿಸುವವರಲ್ಲಿ, **ಋಷಭಃ ಸನ್** ಪ್ರಧಾನನಾಗಿ ಅಥವಾ **ಸ್ವಾರಾಮಚಾರಾಣಾಂ** ವಿಷಯಸಂಗರಹಿತರಾಗಿ, **ಸ್ವ** ಸ್ವತಂತ್ರನಾದ ಪರಮಾತ್ಮನಲ್ಲಿ, **ಆರಾಮ** ರತಿ ಉಳ್ಳವರಾಗಿ, **ಚಾರಾಣಾಂ** ಸಂಚರಿಸುವ ತಪಸ್ವಿಗಳಿಗೆ, **ಋಷಭಃ ಸನ್** ಅಧಿಪತಿಯಾಗಿ **ರೇಮೇ** ಕ್ರೀಡಿಸಿದನು.

**ತಾತ್ಪರ್ಯ-** ತನ್ನ ಅರಮನೆಯಲ್ಲಿ ಪೂಜ್ಯನಾದ ರಾಮಚಂದ್ರನು ತನ್ನಲ್ಲಿ ಅತ್ಯಂತ ಭಕ್ತಿ ಶಾಲಿನಿಯಾದ, ಆದ್ದರಿಂದಲೇ ತನ್ನ ಪರಮಾನುಗ್ರಹಪಾತ್ರಳಾದ, ಸೀತಾದೇವಿಯಿಂದ ಕೂಡಿಕೊಂಡು, ಸುಂದರವಾದ ಉಪವನಗಳಲ್ಲಿ ವಿಹಾರಮಾಡುವ ಮುಕ್ತಜನರಿಗೂ ಅಧಿಪತಿಯೆನಿಸಿಕೊಂಡು ಕ್ರೀಡಿಸಿದನು.

**ವಿಶೇಷ-** ಸೀತೆಯಿಂದ ಕ್ರೀಡಿಸಿದನು, ಎಂದಮಾತ್ರಕ್ಕೆ, ಅವಳ ಅಪೇಕ್ಷೆ ಇತ್ತೆಂದಲ್ಲ. ''ಅಸಂಗೋ ಹ್ಯಯಂ ಪುರುಷಃ'' ಎಂಬ ಶ್ರುತಿಯಿಂದ ತನ್ನ ಸುಖಕ್ಕಾಗಿ ಇನ್ನೊಬ್ಬರನ್ನು ಅಪೇಕ್ಷಿಸದ ಕಾರಣ ಅಸಂಗನೆಂದು ಪ್ರಮಿತನಾದ ಶ್ರೀರಾಮಚಂದ್ರನಿಗೆ ಈ ಉಪವನಗಳಿಂದಾಗಲೀ, ಸೀತಾದೇವಿಯಿಂದಾಗಲೀ ಸ್ವಪ್ರಯೋಜನವಿದ್ದಿಲ್ಲವೆಂಬುವ ಪ್ರಮೇಯವು ರಾಮ ಎಂಬ ಹೆಸರಿನಿಂದಲೇ ಸ್ಪಷ್ಟವಾಗುತ್ತದೆ. ಸ್ವಯಂ ಸುಖರೂಪನಾದ್ದರಿಂದಲೂ, ಸೀತಾದೇವಿಗೆ ನಿತ್ಯದಲ್ಲಿ ರಮಣನಾದ್ದರಿಂದಲೂ, ಪ್ರಜೆಗಳಿಗೆ ಸುಖಪ್ರದನಾದ್ದರಿಂದಲೂ, ಎಲ್ಲ ಜನರ ಮನಸ್ಸು ಇವನಲ್ಲಿಯೇ ರಮಿಸುತ್ತಿದ್ದುದರಿಂದಲೂ ಇವನಿಗೆ ರಾಮನೆಂಬ ಹೆಸರು ಅನ್ವರ್ಥಕ. ಇದರಿಂದ ಭಕ್ತಿಯು ತದನುಸಾರ ಅನುಗ್ರಹವು ಇವೆರಡೂ ಅನ್ಯೋನ್ಯ ನಿಯತವೆಂದು ತಿಳಿಯುವುದು. ॥೩೫॥

**ಬುಭುಜೇ ಚ ಯಥಾಕಾಲಂ ಕಾಮಾನ್ ಧರ್ಮಮಪೀಡಯನ್ ।**
**ವರ್ಷಪೂಗಾನ್ ವಹನ್ನೃಣಾಮಭಿಧ್ಯೇಯಾಂಘ್ರಿಪಲ್ಲವಃ ॥೩೬॥**

ಶ್ರೀರಾಮಚಂದ್ರನು, **ನೃಣಾಂ** ಮಾನವರಿಂದಲೂ **ಅಭಿಧ್ಯೇಯಾಂಘ್ರಿಪಲ್ಲವಃ** ಧ್ಯಾನಿಸಲ್ಪಟ್ಟ ಪಾದಪಲ್ಲವ ಉಳ್ಳವನಾಗಿ, **ಯಥಾಕಾಲಂ** ಕಾಲಕ್ಕೆ ಅನುಸರಿಸಿ, **ಧರ್ಮಂ** ಧರ್ಮವನ್ನು, **ಅಪೀಡಯನ್** ಲೋಪಬಾರದಂತೆ, **ವರ್ಷಪೂಗಾನ್** ಕೆಲವು ವರ್ಷಗಳ ವರೆಗೆ **ವಹನ್** ಮುಂದುವರೆಸುತ್ತಾ , **ಕಾಮಾನ್** ಸುಖಗಳನ್ನು, **ಬುಭುಜೇ** ಅನುಭವಿಸಿದನು.

**ತಾತ್ಪರ್ಯ-** ಪ್ರಜೆಗಳೆಲ್ಲರೂ ಶ್ರೀರಾಮಚಂದ್ರನ ಪಾದಪದ್ಮಗಳನ್ನು ಭಕ್ತಿಪೂರ್ವಕವಾಗಿ ಧ್ಯಾನಿಸುತ್ತಿದ್ದರು. ಶ್ರೀರಾಮಚಂದ್ರನು ವಿಹಿತಕಾಲದಲ್ಲಿ ಧರ್ಮಕ್ಕೆ ವಿರೋಧ ಬಾರದಂತೆ ಬಹಳ ವರ್ಷಗಳ ವರೆಗೆ ಯಥೇಷ್ಟವಾಗಿ ಭೋಗಗಳನ್ನು ಅನುಭವಿಸಿದನು. ।।೩೫।।

**।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ನವಮೋಽಧ್ಯಾಯಃ ।।**

★★★

## ಅಥ ದಶಮೋಽಧ್ಯಾಯಃ

**ಕುಶಸ್ಯ ಚಾತಿಥಿಸ್ತಸ್ಮಾನ್ನಿಷಧಸ್ತತ್ಸುತೋ ನಭಃ ।**
**ಪುಂಡರೀಕೋಽಥ ತತ್ಪುತ್ರಃ ಕ್ಷೇಮಧನ್ವಾಽಭವತ್ತತಃ ॥೧॥**

**ಕುಶಸ್ಯ** ಶ್ರೀರಾಮಚಂದ್ರನ ಮಗನಾದ ಕುಶನಿಗೆ, **ಅತಿಥಿಃ** ಅತಿಥಿ ಎಂಬುವನು, **ತಸ್ಮಾತ್,** ಈ ಅತಿಥಿಯ ದೆಸೆಯಿಂದ, **ನಿಷಧಃ** ನಿಷಧನೆಂಬುವನು, **ತತ್ಪುತ್ರಃ** ಈತನ ಮಗನು, **ನಭಃ** ನಭ ಎಂಬುವವನು. **ಅಥ** ಅನಂತರದಲ್ಲಿ **ಪುಂಡರೀಕಃ** ಪುಂಡರೀಕ ಎಂಬುವವನು, **ತತ್ಪುತ್ರಃ** ಈತನ ಮಗನು, **ಕ್ಷೇಮಧನ್ವಾ** ಕ್ಷೇಮಧನ್ವಾ ಎಂಬುವನು **ತತಃ** ಈತನಿಂದ, **ದೇವಾನಿಕಃ** ದೇವಾನೀಕನು, **ಅಭವತ್** ಆದನು.

**ತಾತ್ಪರ್ಯ-** ಈ ಶ್ರೀರಾಮಚಂದ್ರನ ಮಗನಾದ ಕುಶನಲ್ಲಿ ಅತಿಥಿ, ಈತನಿಗೆ ನಿಷಧ ಎಂಬುವನು, ಈತನಿಗೆ ನಭ ಎಂಬುವನು, ಈ ನಭನಿಗೆ ಕ್ಷೇಮಧನ್ವಾ ಎಂಬ ಪುತ್ರರು ಆದರು. ॥೧॥

**ದೇವಾನೀಕಸ್ತತೋ ಹೀನಃ ಪಾರಿಪಾತ್ರಶ್ಚ ತತ್ಸುತಃ ।**
**ತತೋ ಬಲಸ್ಥಲಸ್ತಸ್ಮಾದ್ವಜ್ರನಾಭೋಽರ್ಕಸಂಭವಃ ॥೨॥**

**ತತಃ** ದೇವಾನೀಕನಿಂದ **ಹೀನಃ** ಹೀನನು, **ತತ್ಸುತಃ** ಹೀನನ ಮಗನು, **ಪಾರಿಪಾತ್ರಃ** ಪಾರಿಪಾತ್ರ ಎಂಬುವನು, **ತತಃ** ಅವನಿಂದ, **ಬಲಸ್ಥಲಃ** ಬಲಸ್ಥಲ ಎಂಬುವನು, **ತಸ್ಮಾತ್** ಈತನ ದೆಸೆಯಿಂದ **ವಜ್ರನಾಭಃ** ವಜ್ರನಾಭನು ಈತನಲ್ಲಿ **ಅರ್ಕಸಂಭವಃ** ಅರ್ಕಸಂಭವ ಎಂಬುವನು ಜನಿಸಿದನು.

**ತಾತ್ಪರ್ಯ-** ಕ್ಷೇಮಧನ್ವನಿಂದ ದೇವಾನೀಕನು, ಇವನಿಗೆ ಹೀನನು, ಈತನಿಗೆ ಪಾರಿಪಾತ್ರ ಎಂಬುವನು, ಅವನಲ್ಲಿ ಬಲಸ್ಥಲ ಎಂಬುವನು, ಈತನಿಂದ ವಜ್ರನಾಭನು ಇವನಿಂದ ಅರ್ಕಸಂಭವನು ಜನಿಸಿದನು. ॥೨॥

**ಸ್ವಗಣಸ್ತತ್ಸುತಸ್ತಸ್ಮಾದ್ವಿಧೃತಶ್ಚಾಭವತ್ಸುತಃ ।**
**ತತೋ ಹಿರಣ್ಯನಾಭೋಽಭೂದ್ಯೋಗಾಚಾರ್ಯಸ್ತು ಜೈಮಿನೇಃ ॥೩॥**

**ತತ್ಸುತಃ** ಆತನ ಮಗನು, **ಸ್ವಗಣಃ** ಸ್ವಗಣ ಎಂಬುವನು, **ತಸ್ಮಾತ್** ಅವನ ದೆಸೆಯಿಂದ, **ವಿಧೃತಃ** ವಿಧೃತ ಎಂಬುವ **ಸುತಃ** ಮಗನು, **ಅಭವತ್** ಆದನು. **ತತಃ** ಆತನ ದೆಸೆಯಿಂದ **ಹಿರಣ್ಯನಾಭಃ** ಹಿರಣ್ಯನಾಭ ಎಂಬುವನು **ಅಭೂತ್** ಆದನು. ಈ ಹಿರಣ್ಯನಾಭನು ಎಂಥವನು ಎಂದರೆ **ಜೈಮಿನೇಃ** ಜೈಮಿನಿಯ **ಶಿಷ್ಯಃ** ಶಿಷ್ಯನಾಗಿರುತ್ತಾನೆ. ಮತ್ತು **ಯೋಗಾಚಾರ್ಯಃ** ಯೋಗಶಾಸ್ತ್ರಪ್ರವರ್ತಕನಾಗಿರುತ್ತಾನೆ.

**ತಾತ್ಪರ್ಯ-** ಈ ಅರ್ಕಸಂಭವನಲ್ಲಿ ಸ್ವಗಣ ಎಂಬುವನು, ಈ ಸ್ವಗಣನಲ್ಲಿ ವಿಧೃತ ಎಂಬುವನು, ಇವನಿಂದ ಹಿರಣ್ಯನಾಭ ಎಂಬುವನು ಜನಿಸಿದನು. ಈತನು ಜೈಮಿನಿಯ ಶಿಷ್ಯನಾಗಿ ಯೋಗಶಾಸ್ತ್ರ ಪ್ರವರ್ತಕನಾಗಿದ್ದನು. ॥೩॥

**ಶಿಷ್ಯಃ ಸಕಲಮಧ್ಯಾತ್ಮಂ ಯಾಜ್ಞವಲ್ಕ್ಯೋಽಧ್ಯಗಾದ್ಯತಃ ।**
**ಯೋಗಂ ಮಹೋದಯಮೃಷಿರ್ಹೃದಯಗ್ರಂಥಿಭೇದನಮ್ ॥೪॥**

**ಯತಃ** ಯಾವ ಹಿರಣ್ಯನಾಭನಿಂದ **ಯಾಜ್ಞವಲ್ಕ್ಯಃ ಋಷಿಃ** ಯಾಜ್ಞವಲ್ಕ್ಯ ಋಷಿಯು **ಶಿಷ್ಯಃ** ಶಿಷ್ಯನಾಗಿ **ಸಕಲಂ** ಸಮಸ್ತವಾದ, **ಅಧ್ಯಾತ್ಮಂ** ಪರಮಾತ್ಮ ವಿಷಯಕವಾದ ಯೋಗವನ್ನು, **ಅಧ್ಯಗಾತ್** ಅಭ್ಯಾಸ ಮಾಡಿದನು. ಈ ಯೋಗ ಎಂಥಾದ್ದು ಎಂದರೆ **ಹೃದಯಗ್ರಂಥಿಭೇದನಂ** ಅಜ್ಞಾನವನ್ನು ಕಳೆಯ ತಕ್ಕದ್ದು ಮತ್ತು **ಮಹೋದಯಂ** ಮಹತ್ತರವಾದ ಸಿದ್ಧಿಯನ್ನು ಕೊಡತಕ್ಕದ್ದಾಗಿದೆ.

**ತಾತ್ಪರ್ಯ-** ಯಾಜ್ಞವಲ್ಕ್ಯರು ಈತನ ಶಿಷ್ಯರಾಗಿ ಮೋಕ್ಷಕ್ಕೆ ಸಾಧನವಾದ, ಅಜ್ಞಾನವನ್ನು ನಾಶಮಾಡುವ ಪರಮಾತ್ಮನ ತತ್ತ್ವವನ್ನು ಅಭ್ಯಾಸ ಮಾಡಿದರು.

**ಪುಷ್ಯೋ ಹಿರಣ್ಯನಾಭಸ್ಯ ಧ್ರುವಸಂಧಿಸ್ತತೋಽಭವತ್ ।**
**ಸುದರ್ಶನೋಽಥಾಗ್ನಿವರ್ಣಃ ಶೀಘ್ರಸ್ತಸ್ಯ ಮರುತ್ಸುತಃ ॥೫॥**

**ಹಿರಣ್ಯನಾಭಸ್ಯ** ಹಿರಣ್ಯನಾಭನಿಗೆ **ಪುಷ್ಯಃ** ಪುಷ್ಯ ಎಂಬುವನು, **ತತಃ** ಪುಷ್ಯನಿಂದ, **ಧ್ರುವಸಂಧಿಃ** ಧ್ರುವಸಂಧಿ ಎಂಬುವನು ಅವನಿಂದ, **ಅಥ** ಅನಂತರ, **ಸುದರ್ಶನಃ** ಸುದರ್ಶನನು ಈತನಿಂದ **ಅಗ್ನಿವರ್ಣಃ** ಅಗ್ನಿವರ್ಣನು **ತಸ್ಯ** ಅಗ್ನಿವರ್ಣನಿಗೆ **ಶೀಘ್ರಃ** ಶೀಘ್ರನು, ಈ ಶೀಘ್ರನಿಗೆ **ಮರುತ್** ಮರುತ್ತನು **ಸುತಃ** ಮಗನು **ಅಭೂತ್** ಆದನು.

**ತಾತ್ಪರ್ಯ-** ಹಿರಣ್ಯನಾಭನಿಗೆ ಪುಷ್ಯ ಎಂಬುವನು, ಇವನಿಗೆ ಧ್ರುವಸಂಧಿ ಎಂಬುವನು, ಈತನಿಗೆ ಸುದರ್ಶನನು, ಈತನಿಗೆ ಅಗ್ನಿವರ್ಣನು, ಇವನಿಗೆ ಶೀಘ್ರನು, ಈ ಶೀಘ್ರನಿಗೆ ಮರುತ್ತನು ಜನಿಸಿದರು. ॥೫॥

**ಯೋಽಸಾವಾಸ್ತೇ ಯೋಗಸಿದ್ಧಃ ಕಲಾಪಗ್ರಾಮಮಾಸ್ಥಿತಃ ।**
**ಕಲೇರಂತೇ ಸೂರ್ಯವಂಶಂ ನಷ್ಟಂ ಭಾವಯಿತಾ ಪುನಃ ॥೬॥**

**ಯಃ** ಯಾವ **ಅಸೌ** ಈ ಮರುತ್ತನು, **ಯೋಗಸಿದ್ಧಃ** ಯೋಗಿಯಾಗಿ, **ಕಲೇಃ** ಕಲಿಯುಗದ, **ಅಂತೇ** ಕೊನೆಯಲ್ಲಿ, **ಕಲಾಪಗ್ರಾಮಂ** ಕಲಾಪಗ್ರಾಮವನ್ನು **ಆಸ್ಥಿತಃ** ಹೊಂದಿದವನಾಗಿ, **ನಷ್ಟಂ** ನಷ್ಟವಾದ **ಸೂರ್ಯವಂಶಂ** ಸೂರ್ಯವಂಶವನ್ನು, **ಪುನಃ** ಮತ್ತೆ **ಭಾವಯಿತಾ** ಮುಂದುವರಿಸುವವನು ಆಗುತ್ತಾನೆ.

**ತಾತ್ಪರ್ಯ-** ಯೋಗಸಿದ್ಧಿಯನ್ನು ಹೊಂದಿದ ಈ ಮರುತ್ತನು ಕಲಿಯುಗದ ಕೊನೆಗೆ ಕಲಾಪಗ್ರಾಮದಲ್ಲಿದ್ದು ನಷ್ಟವಾದ ಸೂರ್ಯವಂಶವನ್ನು ಪುನಃ ಮುಂದುವರಿಸುವವನು ಆಗುತ್ತಾನೆ. ।।೬।।

**ತಸ್ಮಾತ್ತು ಸುಶ್ರುತಸ್ತಸ್ಯ ಸಂಧಿಸ್ತಸ್ಯಾಪಿ ಮರ್ಷಣಃ ।**
**ಮಹಸ್ವಾಂಸ್ತತ್ಸುತಸ್ತಸ್ಮಾದ್ವಿಶ್ವಸಾಹ್ವೋ ವ್ಯಜಾಯತ ।।೭।।**

**ತಸ್ಮಾತ್** ಈ ಮರುತ್ತನಿಂದ **ಸುಶ್ರುತಃ** ಸುಶ್ರುತ ಎಂಬುವನು, **ತಸ್ಯ** ಈತನಿಗೆ **ಸಂಧಿಃ** ಸಂಧಿ ಎಂಬುವನು **ತಸ್ಯ** ಆ ಸಂಧಿಗೆ **ಮರ್ಷಣಃ** ಮರ್ಷಣ ಎಂಬುವನು, **ತತ್ಸುತಃ** ಈತನ ಮಗನು, **ಮಹಸ್ವಾನ್** ಮಹಸ್ವಾನ್ ಎಂಬುವನು, **ತಸ್ಮಾತ್** ಈತನಿಂದ, **ವಿಶ್ವಸಾಹ್ವಃ** ವಿಶ್ವಸಾಹ್ವ ಎಂಬುವನು, **ವ್ಯಜಾಯತ** ಜನಿಸಿದರು.

**ತಾತ್ಪರ್ಯ-** ಈ ಮರುತ್ತನಿಂದ ಸುಶ್ರುತನು, ಈತನಿಗೆ ಸಂಧಿಯು, ಈತನಿಗೆ ಮರ್ಷಣನು, ಮರ್ಷಣನಿಗೆ ಮಹಸ್ವಾನನು, ಈತನಿಗೆ ವಿಶ್ವಸಾಹ್ವ ಎಂಬುವನು, ಜನಿಸಿದರು. ।।೭।।

**ತತೋ ಬೃಹದ್ಬಲೋ ಯಸ್ತು ಪಿತ್ರಾ ತೇ ಸಮರೇ ಹತಃ ।**
**ಏತೇ ಹೀಕ್ಷ್ವಾಕುಭೂಪಾಲಾ ಅತೀತಾಃ ಶೃಣ್ವನಾಗತಾನ್ ।।೮।।**

**ತತಃ** ಈ ವಿಶ್ವಸಾಹ್ವನಿಂದ **ಯಃ** ಯಾವನು, **ತೇ** ನಿನ್ನ **ಪಿತ್ರಾ**, ತಂದೆಯಾದ, ಅಭಿಮನ್ಯುವಿನಿಂದ **ಸಮರೇ** ಯುದ್ಧದಲ್ಲಿ, **ಹತಃ** ಕೊಲ್ಲಲ್ಪಟ್ಟನೋ, ಆ **ಬೃಹದ್ಬಲಃ** ಬೃಹದ್ಬಲನು ಜನಿಸಿದನು. **ಏತೇ** ಇವರುಗಳು, **ಇಕ್ಷ್ವಾಕುಭೂಪಾಲಾಃ** ಇಕ್ಷ್ವಾಕು-ವಂಶದ ರಾಜರುಗಳು, **ಅತೀತಾಃ** ಆಗಿ ಹೋದರು. **ಅನಾಗತಾನ್** ಮುಂದೆ ಬರುವವರನ್ನು, **ಶೃಣು** ಕೇಳು.

**ತಾತ್ಪರ್ಯ-** ರಾಜನೇ! ನಿಮ್ಮ ತಂದೆಯಾದ ಅಭಿಮನ್ಯುವಿನಿಂದ ಯುದ್ಧದಲ್ಲಿ ಹತನಾದ ಬೃಹದ್ಬಲನು ವಿಶ್ವಸಾಹ್ವನೆಂಬುವನಿಂದ ಜನಿಸಿದನು. ಈ ರೀತಿಯಾಗಿ ಇಕ್ಷ್ವಾಕು ರಾಜರ ವಂಶ ಹಿಂದೆ ನಡೆದಿದ್ದನ್ನು ಹೇಳಿದ್ದೇನೆ. ಮುಂದೆ ಬರುವುದನ್ನು ಹೇಳುತ್ತೇನೆ, ಕೇಳು. ।।೮।।

**ಬೃಹದ್ಬಲಸ್ಯ ಭವಿತಾ ಪುತ್ರೋ ನಾಮ್ನಾ ಬೃಹದ್ರಣಃ ।**
**ಉರುಕ್ಷಯಃ ಸುತಸ್ತಸ್ಯ ವತ್ಸಪ್ರೀತೋ ಭವಿಷ್ಯತಿ ।।೯।।**

**ಬೃಹದ್ಬಲಸ್ಯ** ಬೃಹದ್ಬಲನಿಗೆ, **ನಾಮ್ನಾ** ಹೆಸರಿನಿಂದ, **ಬೃಹದ್ರಣಃ** ಬೃಹದ್ರಣ ಎಂಬುವನು **ಪುತ್ರಃ** ಮಗನು, **ಭವಿತಾ** ಆಗುತ್ತಾನೆ. **ತಸ್ಯ** ಅವನಿಗೆ, **ಉರುಕ್ಷಯಃ**

ಉರುಕ್ಷಯ ಎಂಬುವನು, **ತಸ್ಯ** ಆ ಉರುಕ್ಷಯನಿಗೆ **ವತ್ಸಪ್ರೀತಃ** ವತ್ಸಪ್ರೀತನೆಂಬು-ವನು, **ಭವಿಷ್ಯತಿ** ಆಗುತ್ತಾನೆ.

**ತಾತ್ಪರ್ಯ-** ಆ ಬೃಹದ್ಬಲನಿಗೆ ಬೃಹದ್ರಣ ಎಂಬುವನು, ಆತನಿಗೆ ಉರುಕ್ಷಯ ಎಂಬುವನು, ಅವನಿಗೆ ವತ್ಸಪ್ರೀತನು ಸುತರಾಗುತ್ತಾರೆ. ||೯||

**ಪ್ರತಿವ್ಯೋಮಸ್ತತೋ ಭಾನುರ್ದಿವಾಕೋ ವಾಹಿನೀಪತಿಃ |**
**ಸಹದೇವಸ್ತತೋ ಭಾವೀ ಬೃಹದಶ್ವೋಽಥ ಭಾನುಮಾನ್ ||೧೦||**

**ತಸ್ಯ** ವತ್ಸಪ್ರೀತನಿಗೆ **ಪ್ರತಿವ್ಯೋಮಃ** ಪ್ರತಿವ್ಯೋಮನು, **ತತಃ** ಆತನಿಗೆ **ಭಾನುಃ** ಭಾನುವು **ತತಃ** ಅವನಿಗೆ **ದಿವಾಕಃ** ದಿವಾಕನು, ಅವನಿಂದ **ವಾಹಿನೀಪತಿಃ** ವಾಹಿನೀಪತಿಯು **ತತಃ** ಅವನಿಂದ, **ಸಹದೇವಃ** ಸಹದೇವನೆಂಬುವನು, **ತತಃ** ಅನಂತರ ಆತನಿಂದ **ಬೃಹದಶ್ವಃ** ಬೃಹದಶ್ವನು, **ಅಥ** ನಂತರ, **ಭಾನುಮಾನ್** ಭಾನುಮಾನ್ ಎಂಬುವವನು, **ಭಾವೀ** ಆಗುತ್ತಾರೆ.

**ತಾತ್ಪರ್ಯ-** ವತ್ಸಪ್ರೀತನಿಗೆ ಪ್ರತಿವ್ಯೋಮನು, ಆತನಿಗೆ ಭಾನುವು, ಆತನಿಗೆ ದಿವಾಕನು, ಆತನಿಗೆ ವಾಹಿನೀಪತಿಯು, ಅವನಿಗೆ ಸಹದೇವನು, ಅವನಲ್ಲಿ ಬೃಹದಶ್ವನು, ನಂತರ ಭಾನುಮಾನನೂ ಆಗುತ್ತಾರೆ. ||೧೦||

**ಪ್ರತೀಕಾಶ್ವೋ ಭಾನುಮತಃ ಸುಪ್ರತೀಕೋಽಥ ತತ್ಸುತಃ |**
**ಭವಿತಾ ಮರುದೇವೋಽಥ ಸುನಕ್ಷತ್ರೋಽಥ ರೂಕ್ಷಕಃ ||೧೧||**

**ಭಾನುಮತಃ** ಭಾನುಮಂತನಿಂದ, **ಪ್ರತೀಕಾಶ್ವಃ** ಪ್ರತೀಕಾಶ್ವನು, **ಅಥ** ಅನಂತರದಲ್ಲಿ, **ಸುಪ್ರತೀಕಃ** ಸುಪ್ರತೀಕನು, **ತತ್ಸುತಃ** ಆತನ ಮಗನಾಗುತ್ತಾನೆ, **ಅಥ** ನಂತರದಲ್ಲಿ, **ಮರುದೇವಃ** ಮರುದೇವನು, **ಭವಿತಾ** ಆಗುತ್ತಾನೆ. **ಅಥ** ನಂತರ, **ಸುನಕ್ಷತ್ರಃ** ಸುನಕ್ಷತ್ರನು **ರೂಕ್ಷಕಃ** ರೂಕ್ಷಕನು, **ಭವಿತಾ** ಆಗುತ್ತಾರೆ.

**ತಾತ್ಪರ್ಯ-** ಭಾನುಮಂತನಿಂದ ಪ್ರತೀಕಾಶ್ವನು, ಅವನಲ್ಲಿ ಸುಪ್ರತೀಕನು, ಅನಂತರದಲ್ಲಿ ಮರುದೇವನು ಆಗುತ್ತಾನೆ. ಅನಂತರ ಸುನಕ್ಷತ್ರನು ನಂತರ ಆ ಸುನಕ್ಷತ್ರನಿಗೆ ರೂಕ್ಷಕನು ಮಗನಾಗುತ್ತಾನೆ. ||೧೧||

**ತಸ್ಯಾಂತರಿಕ್ಷಸ್ತತ್ಪುತ್ರಃ ಸುತಪಾಸ್ತದಮಿತ್ರಜಿತ್ |**
**ಬೃಹದ್ಭ್ರೋಜಸ್ತು ತಸ್ಯಾಪಿ ಬರ್ಹಿಸ್ತಸ್ಮಾತ್ಕೃತಂಜಯಃ ||೧೨||**

**ತಸ್ಯ** ಆ ರೂಕ್ಷಕನಿಗೆ, **ಪುತ್ರಃ** ಮಗನು, **ಅಂತರಿಕ್ಷಃ** ಅಂತರಿಕ್ಷನು, **ತತ್ಪುತ್ರಃ** ಆತನ ಮಗನು, **ಅಮಿತ್ರಜಿತ್** ಅಮಿತ್ರಜಿತ್ ಎಂಬುವನು. **ತಸ್ಯಾಪಿ** ಅವನಿಗೆ,

**ಬೃಹದ್ಭೋಜಃ** ಬೃಹದ್ಭೋಜನು, **ತಸ್ಯ** ಆತನಿಗೆ, **ಬರ್ಹಿಃ** ಬರ್ಹಿ ಎಂಬುವನು, **ತಸ್ಮಾತ್** ಅವನಿಂದ, **ಕೃತಂಜಯಃ** ಕೃತಂಜಯನು, ಜನಿಸುತ್ತಾರೆ.

**ತಾತ್ಪರ್ಯ-** ಅವನಿಗೆ ಅಂತರಿಕ್ಷ ಎಂಬುವನು, ಅವನಿಗೆ ಅಮಿತ್ರನು, ಅವನಿಗೆ ಬೃಹದ್ಭೋಜನು ಅವನಿಗೆ ಕೃತಂಜಯನು ಹೀಗೆ ಜನ್ಮ ತಾಳಿದರು. ।।೧೨।।

**ರಣಂಜಯಸ್ತಸ್ಯ ಸುತಃ ಸಂಜಯೋ ಭವಿತಾ ತತಃ ।**
**ತಸ್ಮಾಚ್ಛಕ್ಯೋಽಥ ಶುದ್ಧೋದೋ ಲಾಂಗಲಸ್ತತ್ಸುತಃ ಸ್ಮೃತಃ ।।೧೨।।**

**ತಸ್ಯ** ಆತನಿಗೆ, **ರಣಂಜಯಃ** ರಣಂಜಯನು, **ತತಃ** ಈತನಿಗೆ **ಸಂಜಯಃ** ಸಂಜಯನು, **ಭವಿತಾ** ಆಗುತ್ತಾರೆ. **ತಸ್ಮಾತ್** ಈ ಸಂಜಯನಿಂದ, **ಶಕ್ಯಃ** ಶಕ್ಯ ಎಂಬುವನು, **ಅಥ** ನಂತರದಲ್ಲಿ, **ಶುದ್ಧೋದಃ** ಶುದ್ಧೋದ ಎಂಬುವನು, **ತತ್ಸುತಃ** ಈತನ ಮಗನು, **ಲಾಂಗಲಃ** ಲಾಂಗಲ ಎಂಬುವನು **ಸ್ಮೃತಃ** ಪ್ರಸಿದ್ಧನು.

**ತಾತ್ಪರ್ಯ-** ಕೃತಂಜಯನಿಗೆ ರಣಂಜಯನು, ಈತನಿಗೆ ಸಂಜಯನು, ಈತನಿಗೆ ಶಕ್ಯನು ಈತನಿಗೆ ಶುದ್ಧೋದನು ಈತನ ಮಗನು ಲಾಂಗಲನು ಆಗುತ್ತಾನೆ. ।।೧೩।।

**ತತಃ ಪ್ರಸೇನಜಿತ್ತಸ್ಮಾತ್ ಕ್ಷುದ್ರಕೋ ಭವಿತಾ ತತಃ ।**
**ಕುಣಕೋ ಭವಿತಾ ತಸ್ಮಾತ್ಸುರಥಸ್ತನಯಸ್ತತಃ ।।೧೪।।**

**ಸುಮಿತ್ರೋ ನಾಮ ನಿಷ್ಠಾಂತಸ್ತೇ ತೇ ಬಾರ್ಹದ್ಬಲಾ ನೃಪಾಃ ।**

**ತತಃ** ಆತನಿಂದ **ಪ್ರಸೇನಜಿತ್** ಪ್ರಸೇನಜಿತ್ ಎಂಬುವನು, **ತಸ್ಮಾತ್,** ಅವನಿಂದ, **ಕ್ಷುದ್ರಕಃ** ಕ್ಷುದ್ರಕನು, **ಭವಿತಾ** ಆಗುತ್ತಾರೆ, **ತಸ್ಮಾತ್** ಅವನಿಂದ, **ಕುಣಕಃ** ಕುಣಕನು, **ಭವಿತಾ** ಆಗುತ್ತಾನೆ. **ತಸ್ಮಾತ್** ಕುಣಕನಿಂದ, **ಸುರಥಃ** ಸುರಥನೆಂಬ **ತನಯಃ** ಮಗನು **ಭವಿತಾ** ಆಗುತ್ತಾನೆ. **ಸುಮಿತ್ರೋ ನಾಮ** ಸುಮಿತ್ರ ಎಂಬುವನು, **ನಿಷ್ಠಾಂತಃ** ನಿಷ್ಠಾ ವಂಶಸ್ಥಿತಿಯ **ಅಂತಃ** ಕೊನೆಯ ಅವಧಿಯು (ವಂಶಾವಳಿಯ ಅಂತ್ಯನು) ಆಗುತ್ತಾನೆ. **ಏತೇ** ಇವರುಗಳು, **ಬಾರ್ಹದ್ಬಲಾಃ** ಬೃಹದ್ಬಲ ಎಂಬ ರಾಜನ ವಂಶಜರಾದ **ನೃಪಾಃ** ರಾಜರುಗಳಾಗಿರುತ್ತಾರೆ.

**ತಾತ್ಪರ್ಯ-** ಆತನಿಂದ ಪ್ರಸೇನಜಿತ್ ಎಂಬುವನು, ಅವನಲ್ಲಿ ಕ್ಷುದ್ರಕನು ಆಗುತ್ತಾರೆ. ಅವನಿಂದ ಕುಣಕನು ಅವನಿಂದ ಸುರಥನೆಂಬುವನು ಜನಿಸುತ್ತಾರೆ. ಈತನಿಂದ ಪ್ರಸೇನನು ಇವನಲ್ಲಿ ಕ್ಷುದ್ರಕನು ಅವನಿಂದ ಕುಣಕನು ಅವನಿಂದ ಸುರಥನು ಎಂಬುವರಾಗುತ್ತಾರೆ. ಇವನಲ್ಲಿ ಸುಮಿತ್ರ ಎಂಬುವನು ವಂಶಾವಳಿಯ ಅಂತ್ಯನಾಗುತ್ತಾನೆ. ।।೧೪।।

**ಇಕ್ಷ್ವಾಕೂಣಾಮಯಂ ವಂಶಃ ಸುಮಿತ್ರಾಂತೋ ಭವಿಷ್ಯತಿ ।**
**ಯತಸ್ತಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ॥೧೫॥**

**ಅಯಂ** ಈ **ಇಕ್ಷ್ವಾಕೂಣಾಂ** ಇಕ್ಷ್ವಾಕುರಾಜರ, **ವಂಶಃ** ವಂಶವು, **ಸುಮಿತ್ರಾಂತಃ** ಸುಮಿತ್ರನೇ ಕೊನೆಯಾಗಿ, **ಭವಿಷ್ಯತಿ** ಆಗುತ್ತದೆ. **ಯತಃ** ಏಕೆಂದರೆ **ತಂ** ಆ **ರಾಜಾನಂ** ರಾಜನನ್ನು, **ಪ್ರಾಪ್ಯ** ಹೊಂದಿ **ಕಲೌ** ಕಲಿಯುಗದಲ್ಲಿ, **ಸಂಸ್ಥಾಂ** ಕೊನೆಯನ್ನು **ಪ್ರಾಪ್ಸ್ಯತಿ** ಹೊಂದುತ್ತದೆ.

**ತಾತ್ಪರ್ಯ**-ಈಇಕ್ಷ್ವಾಕುರಾಜರವಂಶವುಸುಮಿತ್ರನೇಕೊನೆಯುಳ್ಳದ್ದಾಗುತ್ತದೆ. ಈ ರಾಜನೇ ಕಲಿಯುಗದಲ್ಲಿ ಈ ವಂಶಕ್ಕೆ ಕೊನೆಯಾಗುತ್ತಾನೆ. ॥೧೫॥

**॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ದಶಮೋಽಧ್ಯಾಯಃ ॥**

★★★

## ಅಥ ಏಕಾದಶೋಽಧ್ಯಾಯಃ

ಇಕ್ಷ್ವಾಕುವಿನ ಜ್ಯೇಷ್ಠಪುತ್ರನಾದ ವಿಕುಕ್ಷಿಯ ವಂಶವನ್ನು ನಿರೂಪಿಸಿ ದ್ವಿತೀಯಪುತ್ರನಾದ ನಿಮಿರಾಜನಿಗೆ ಔರಸಪುತ್ರನು ಇರಲಿಲ್ಲ, ಎಂಬುದನ್ನು ತಿಳಿಸುತ್ತಾ ಆಖ್ಯಾಯಿಕೆಯನ್ನು ಹೇಳುತ್ತಾರೆ.

**ಶ್ರೀಶುಕ ಉವಾಚ–**

**ನಿಮಿರಿಕ್ಷ್ವಾಕುತನಯೋ ವಸಿಷ್ಠಮವೃತರ್ತ್ವಿಜಮ್ ।**
**ಆರಭ್ಯ ಸತ್ರಂ ಸೋಽಪ್ಯಾಹ ಶಕ್ರೇಣ ಪ್ರಾಗ್ವೃತೋಽಸ್ಮಿ ಭೋ ॥೧॥**

**ಇಕ್ಷ್ವಾಕುತನಯಃ** ಇಕ್ಷ್ವಾಕುವಿನ ಮಗನಾದ, **ನಿಮಿಃ** ನಿಮಿರಾಜನು, **ಸತ್ರಂ** ಯಾಗವನ್ನು, **ಆರಭ್ಯ** ಆರಂಭಿಸಿ, **ವಸಿಷ್ಠಂ** ವಸಿಷ್ಠರನ್ನು, **ಋತ್ವಿಜಂ** ಋತ್ವಿಜರನ್ನಾಗಿ, **ಅವೃತ** ಅಂಗೀಕರಿಸಿದನು. **ಸಃ** ವಸಿಷ್ಠರಾದರೂ, **ಭೋ** ರಾಜನೇ! **ಪ್ರಾಕ್** ಹಿಂದೆಯೇ **ಶಕ್ರೇಣ** ಇಂದ್ರನಿಂದ, **ವೃತಃ** ಸ್ವೀಕೃತನು, **ಅಸ್ಮಿ** ಆಗಿದ್ದೇನೆ. ಎಂದು **ಆಹ** ಹೇಳಿದನು. (ಇಲ್ಲಿ ಆರಭ್ಯ ಎಂದರೆ ಸಂಭಾರಗಳನ್ನು ಸಂಗ್ರಹಿಸಿ ಎಂದರ್ಥ)

**ತಾತ್ಪರ್ಯ–** ಇಕ್ಷ್ವಾಕುವಿನ ಮಗನಾದ ನಿಮಿರಾಜನು ಯಾಗವನ್ನು ಆರಂಭಿಸಿ ವಸಿಷ್ಠರನ್ನು ಋತ್ವಿಜರನ್ನಾಗಿ ಅಂಗೀಕರಿಸಿದನು. ವಸಿಷ್ಠರು ತಾವು ಪೂರ್ವದಲ್ಲಿ ಇಂದ್ರನಿಂದ ಯಾಗಕ್ಕಾಗಿ ಸ್ವೀಕೃತನಾಗಿದ್ದೇನೆಂದು ಹೇಳಿದರು. (ಆರಂಭಿಸಿ ಎಂದರೆ ಯಾಗ ಸಂಭಾರವನ್ನು ಸಂಗ್ರಹಿಸಿ ಎಂದು ಅಭಿಪ್ರಾಯವು)

**ತಂ ನಿರ್ವರ್ತ್ಯಾಗಮಿಷ್ಯಾಮಿ ತಾವನ್ಮಾಂ ಪ್ರತಿಪಾಲಯ ।**
**ತೂಷ್ಣೀಮಾಸೀದ್ಗೃಹಪತಿಃ ಸೋಽಪೀಂದ್ರಸ್ಯಾಕರೋನ್ಮಖಮ್ ॥೨॥**

**ಭೋ** ರಾಜನೇ, **ತಂ** ಆ ಇಂದ್ರನ ಯಾಗವನ್ನು, **ನಿರ್ವರ್ತ್ಯ** ಪೂರ್ಣಮಾಡಿ, **ಆಗಮಿಷ್ಯಾಮಿ** ಬರುತ್ತೇನೆ, **ತಾವತ್** ಅಲ್ಲಿಯ ಪರ್ಯಂತ, **ಮಾಂ** ನನ್ನನ್ನು **ಪ್ರತಿಪಾಲಯ** ನಿರೀಕ್ಷಿಸು, **ಇತಿ** ಈ ರೀತಿಯಾಗಿ, **ಅಬ್ರವೀತ್** ಹೇಳಿದರು. **ಗೃಹಪತಿಃ** ನಿಮಿರಾಜನು, **ತೂಷ್ಣೀಂ** ಸುಮ್ಮನೇ, **ಆಸೀತ್** ಆದನು. **ಸಃ** ಆ ವಸಿಷ್ಠರು, **ಇಂದ್ರಸ್ಯ** ಇಂದ್ರನ **ಮಖಂ** ಯಾಗವನ್ನು, **ಅಕರೋತ್** ಮಾಡಿಸಿದರು.

**ತಾತ್ಪರ್ಯ–** ಎಲೋ ರಾಜನೇ! ಆ ಇಂದ್ರನ ಯಾಗವನ್ನು ಪೂರ್ಣ ಮಾಡಿಸಿ ಬರುತ್ತೇನೆ. ಅಲ್ಲಿಯ ಪರ್ಯಂತ ನನ್ನನ್ನು ನಿರೀಕ್ಷಿಸುತ್ತಿರು ಎಂದು ಹೇಳಿದರು. ನಿಮಿರಾಜರು ಏನೂ ಮಾತಾಡಲಿಲ್ಲ. ವಸಿಷ್ಠರು ಇಂದ್ರನ ಯಾಗವನ್ನು ಮುಗಿಸಿದರು. ॥೨॥

**ನಿಮಿಃ ಸತ್ರವಿದಾಂ ವಿದ್ವಾನ್ ಸತ್ರಮಾರಭತಾತ್ಮವಾನ್ ।**
**ಋತ್ವಿಗ್ಭಿರಪರೈಸ್ತಾವದ್ಯಾವತ್ತನ್ನಾಗಮದ್ಗುರುಃ ॥೩॥**

**ಆತ್ಮವಾನ್** ಪರಮಾತ್ಮಜ್ಞಾನಿಯಾದ, **ಸತ್ರವಿದಾಂ** ಸತ್ರ (ಯಜ್ಞವನ್ನು) ತಿಳಿದವರ ಮಧ್ಯದಲ್ಲಿ, **ವಿದ್ವಾನ್** ಪಂಡಿತನಾದ, **ನಿಮಿಃ** ನಿಮಿರಾಜನು, **ಅಪರೈಃ** ಬೇರೆಯವರಾದ, **ಋತ್ವಿಗ್ಭಿಃ** ಋತ್ವಿಜರುಗಳಿಂದ, **ಸತ್ರಂ** ಯಾಗವನ್ನು, **ಯಾವತ್** ಎಲ್ಲಿವರೆಗೂ, **ಗುರುಃ** ವಸಿಷ್ಠರು, **ನ ಆಗಮತ್** ಬರಲಿಲ್ಲವೋ, **ತಾವತ್** ಅಷ್ಟರಲ್ಲಿಯೇ, **ಆರಭತ** ಆರಂಭಿಸಿದನು.

**ತಾತ್ಪರ್ಯ-** ನಿಮಿರಾಜನು ಈ ದೇಹವು ಅಸ್ಥಿರವೆಂದು ತಿಳಿದು ಪ್ರಯತ್ನಶೀಲನಾಗಿ ವಸಿಷ್ಠರು ಬರುವವರೆಗೆ ಬೇರೆ ಋತ್ವಿಜರುಗಳಿಂದ ಯಾಗವನ್ನು ಆರಂಭಿಸಿದನು. ॥೩॥

**ಶಿಷ್ಯವ್ಯತಿಕ್ರಮಂ ವೀಕ್ಷ್ಯ ನಿರ್ವರ್ತ್ಯ ಗುರುರಾಗತಃ ।**
**ಅಶಪತ್ಪತತಾಂ ದೇಹೋ ನಿಮೇಃ ಪಂಡಿತಮಾನಿನಃ ॥೪॥**

**ನಿರ್ವರ್ತ್ಯ** ಇಂದ್ರನ ಯಾಗವನ್ನು ಮುಗಿಸಿ, **ಆಗತಃ** ತಿರುಗಿಬಂದ, **ಗುರುಃ** ವಸಿಷ್ಠರು, **ಶಿಷ್ಯವ್ಯತಿಕ್ರಮಂ** ಶಿಷ್ಯನಾದ ನಿಮಿಯ ಅತಿಕ್ರಮವನ್ನು, **ವೀಕ್ಷ್ಯ** ನೋಡಿ, **ಪಂಡಿತಮಾನಿನಃ** ಪಂಡಿತನೆಂದು ಅಭಿಮಾನಿಯಾದ, **ನಿಮೇಃ** ನಿಮಿರಾಜನ, **ದೇಹಃ** ದೇಹವು **ಪತತಾಂ** ಬೀಳಲಿ ಎಂದು, **ಅಶಪತ್** ಶಾಪಕೊಟ್ಟರು.

**ತಾತ್ಪರ್ಯ-** ವಸಿಷ್ಠರು ಇಂದ್ರನ ಯಾಗವನ್ನು ಮುಗಿಸಿ ಬಂದರು. ನಿಮಿರಾಜನು ಬೇರೆಯವರಿಂದ ಯಾಗ ಪ್ರಾರಂಭಿಸಿದ್ದನು. ಈ ಅತಿಕ್ರಮವನ್ನು ನೋಡಿ ನಿನ್ನ ದೇಹವು ಬಿದ್ದು ಹೋಗಲಿ ಎಂದು ಶಪಿಸಿದರು. ॥೪॥

**ನಿಮಿಃ ಪ್ರತಿದದೌ ಶಾಪಂ ಗುರವೇಽಧರ್ಮವರ್ತಿನೇ ।**
**ತವಾಪಿ ಪತತಾಂ ದೇಹೋ ಲೋಭಾದ್ಧರ್ಮಮಜಾನತಃ ॥೫॥**

**ನಿಮಿಃ** ನಿಮಿರಾಜನು, **ಅಧರ್ಮವರ್ತಿನೇ** ಅಪರಾಧವಿಲ್ಲದೇ ಶಾಪಕೊಟ್ಟ ಅಧರ್ಮದಲ್ಲಿ ತೊಡಗಿರುವ, **ಗುರವೇ** ಗುರುಗಳಾದ ವಸಿಷ್ಠರಿಗೆ, **ಶಾಪಂ** ಶಾಪವನ್ನು, **ಪ್ರತಿದದೌ** ಪ್ರತಿಯಾಗಿ ಕೊಟ್ಟನು. ಏನೆಂದರೆ? **ಲೋಭಾತ್** ಲೋಭದಿಂದ, **ಧರ್ಮಂ** ಧರ್ಮವನ್ನು, **ಅಜಾನತಃ** ತಿಳಿಯದಿರುವ, **ತವ ಅಪಿ** ನಿನಗೂ ಸಹ, **ದೇಹಃ** ದೇಹವು **ಪತತಾಂ** ಬೀಳಲಿ ಎಂದು ಶಾಪಪ್ರದಾನ ಮಾಡಿದನು.

**ತಾತ್ಪರ್ಯ-** ನಿಮಿರಾಜನೂ ಸಹ ತನಗೆ ನಿಷ್ಕಾರಣವಾಗಿ ಶಾಪಕೊಟ್ಟ ವಸಿಷ್ಠರಿಗೆ ಶಾಪವನ್ನು ಕೊಟ್ಟನು. ಈ ಶಾಪವೇನೆಂದರೆ? ವಸಿಷ್ಠರೇ! ನೀವೂ ಸಹ ಈ ದೇಹವನ್ನು ಬಿಟ್ಟು ಮರಣ ಹೊಂದಿರಿ ಎಂದು ಶಪಿಸಿದನು. ।।೫।।

**ಇತ್ಯುತ್ಸಸರ್ಜ ತಂ ದೇಹಂ ನಿಮಿರಾಧ್ಯಾತ್ಮಕೋವಿದಃ ।**
**ಮಿತ್ರಾವರುಣಯೋರ್ಜಜ್ಞೆ ಊರ್ವಶ್ಯಾಂ ಪ್ರಪಿತಾಮಹಃ ।**
**ಗಂಧವಸ್ತುಷು ತದ್ದೇಹಂ ನಿಧಾಯ ಮುನಿಸತ್ತಮಾಃ ।।೬।।**

**ನಿಮಿಃ** ನಿಮಿರಾಜನು, **ಇತಿ** ಈ ರೀತಿಯಾಗಿ, **ಉಕ್ತ್ವಾ** ಹೇಳಿ, **ತಂ** ಆ ತನ್ನ **ದೇಹಂ** ದೇಹವನ್ನು, **ಉತ್ಸಸರ್ಜ** ಬಿಟ್ಟನು. **ಆಧ್ಯಾತ್ಮಕೋವಿದಃ** ತತ್ವಜ್ಞಾನಿಯಾದ ವಸಿಷ್ಠನು ನಿಮಿಶಾಪದಿಂದ, **ದೇಹಂ** ತನ್ನ ಶರೀರವನ್ನು **ವಿಸಸರ್ಜ** ಬಿಟ್ಟನು. **ಪ್ರಪಿತಾಮಹಃ** ನನ್ನ ಪ್ರಪಿತಾಮಹನಾದ ವಸಿಷ್ಠನು (ಶುಕಾಚಾರ್ಯರ ತಂದೆ ವೇದವ್ಯಾಸರು, ಇವರ ತಂದೆ ಪರಾಶರರು, ಇವರ ತಂದೆ ಶಕ್ತಿ ಋಷಿಗಳು ಅವರ ತಂದೆಗಳಾದ ವಸಿಷ್ಠರು) **ಮಿತ್ರಾವರುಣಯೋಃ** ಮಿತ್ರಾವರುಣರಿಂದ **ಊರ್ವಶ್ಯಾಂ** ಊರ್ವಶಿಯಲ್ಲಿ, **ಜಜ್ಞೇ** ಅವತರಿಸಿದರು. **ತದ್ದೇಹಂ** ಆ ದೇಹವನ್ನು **ಮುನಿಸತ್ತಮಾಃ** ಮುನಿಶ್ರೇಷ್ಠರು, **ಗಂಧವಸ್ತುಷು** ಗಂಧವಸ್ತುಗಳಲ್ಲಿ **ನಿಧಾಯ** ಇಟ್ಟುಕೊಂಡರು.

**ತಾತ್ಪರ್ಯ-** ನಿಮಿರಾಜನು ವಸಿಷ್ಠರಿಗೆ ಈ ರೀತಿ ಹೇಳಿ ತನ್ನ ದೇಹವನ್ನು ತ್ಯಜಿಸಿದನು. ವಸಿಷ್ಠರೂ ಸಹ ತಮ್ಮ ದೇಹವನ್ನು ಬಿಟ್ಟು ಮಿತ್ರಾವರುಣರಿಂದ ಊರ್ವಶಿಯಲ್ಲಿ ಅವತರಿಸಿದರು. ಮುನಿಶ್ರೇಷ್ಠರು, ಆ ನಿಮಿದೇಹವನ್ನು ಗಂಧ ಉಳ್ಳ ವಸ್ತುಗಳಲ್ಲಿಟ್ಟರು. ಇಲ್ಲಿ ವಸಿಷ್ಠರು ಶುಕಾಚಾರ್ಯರಿಗೆ ಪ್ರಪಿತಾಮಹರಾಗಿದ್ದಾರೆ. ಹೇಗೆಂದರೆ (ಶುಕಾಚಾರ್ಯರ ತಂದೆ ವೇದವ್ಯಾಸರು, ಅವರ ತಂದೆ ಪರಾಶರರು ಇವರ ತಂದೆ ಶಕ್ತಿ ಋಷಿಗಳು, ಇವರ ತಂದೆಗಳು ವಸಿಷ್ಠರು. ಹೀಗೆ ವಸಿಷ್ಠರು ಶುಕಾಚಾರ್ಯರಿಗೆ ಪ್ರಪಿತಾಮಹರಾಗಬೇಕು)

ವಸಿಷ್ಠರ ಎರಡನೇ ಜನ್ಮ ವಿಷಯದಲ್ಲಿ ರಾಮಾಯಣದಲ್ಲಿ ಮತ್ತು ಉಪನಿಷತ್ತಿನಲ್ಲಿ ಈ ಆಖ್ಯಾಯಿಕೆ ಇದೆ. ವಸಿಷ್ಠರು ದೇಹವನ್ನು ಬಿಟ್ಟಮೇಲೆ ಬ್ರಹ್ಮದೇವರಿಗೆ ಪ್ರಾರ್ಥಿಸಿದರು. ಬ್ರಹ್ಮದೇವರು ವಸಿಷ್ಠರಿಗೆ ನೀನು ಮಿತ್ರಾವರುಣರ ಬೀಜವನ್ನು ಪ್ರವೇಶಿಸು ಎಂದು ಆಜ್ಞಾಪಿಸಿದರು. ಅದೇ ಸಂದರ್ಭದಲ್ಲಿ ಊರ್ವಶಿಯು ಅಲ್ಲಿ ದೈವೇಚ್ಛೆಯಿಂದ ಬಂದಿದ್ದಳು. ಆಗ ಅವಳನ್ನು ನೋಡಿದ ಮಿತ್ರಾವರುಣರ ಬೀಜವು ಸ್ಖಲನ ಹೊಂದಿತು. ಆ ಬೀಜದಿಂದ ಮೊದಲು ಅಗಸ್ತ್ಯರು, ಅನಂತರ ವಸಿಷ್ಠ ಋಷಿಗಳು ಜನಿಸಿದರು. ವಸಿಷ್ಠರು ಶುಕಾಚಾರ್ಯರಿಗೆ ವಾಸ್ತವಿಕವಾಗಿ ವೃದ್ಧಪ್ರಪಿತಾಮಹರು. ಇಲ್ಲಿ ಪ್ರಪಿತಾಮಹರೆಂದೂ ವರ್ಣಿಸಿದ್ದೂ

ಉಂಟು. ಏಕೆಂದರೆ? ವಸಿಷ್ಠ ಋಷಿಗಳ ಶಕ್ತಿ ಮುಂತಾದ ಎಲ್ಲಾ ಮಕ್ಕಳನ್ನು ಕಲ್ಮಾಷಪಾದನೆಂಬ ರಾಕ್ಷಸನು ಸಂಹಾರ ಮಾಡಿದನು. ಆಗ ಶಕ್ತಿ ಋಷಿಗಳ ಪತ್ನಿಯು ಗರ್ಭವತಿಯಾಗಿದ್ದಳು. ಆ ಗರ್ಭವನ್ನೂ ಸಹ ರಾಕ್ಷಸನು ನಾಶಪಡಿಸಲು ಯತ್ನಿಸಿದಾಗ, ವಸಿಷ್ಠರು ಮಾಧವಸ್ತವರಾಜ ಸ್ತೋತ್ರದಿಂದ ರಕ್ಷಣೆಮಾಡಿ, ಮುಂದೆ ಹುಟ್ಟಿದ ಶಕ್ತಿಯ ಮಗನನ್ನು ತನಗೆ ಮಕ್ಕಳು ಇಲ್ಲದೇ ಇರುವುದರಿಂದ ಆ ಮಗುವಿಗೆ ಜಾತಕರ್ಮವನ್ನು ಮಾಡಿ ಪರಾಶರ ಎಂದು ನಾಮಕರಣವನ್ನು ಮಾಡಿ, ಮಗನನ್ನಾಗಿ ಸ್ವೀಕರಿಸಿದರು. ಆದ್ದರಿಂದ ಶುಕಾಚಾರ್ಯರಿಗೆ ವೇದವ್ಯಾಸದೇವರು ತಂದೆಯು ಪರಾಶರರು ಪಿತಾಮಹರು, ವಸಿಷ್ಠರು ಪ್ರಪಿತಾಮಹರು ಎಂದು ಹೇಳಿರುವುದು ಯುಕ್ತವೇ ಆಗಿರುತ್ತದೆ. ಈ ವಿಷಯದಲ್ಲಿ ವಿಶೇಷವಾಗಿ ಶ್ರೀಸತ್ಯಧರ್ಮರು ತಮ್ಮ ವ್ಯಾಖ್ಯಾನದಲ್ಲಿ ಹೇಳಿರುವರು. ।।೬।।

**ಸಮಾಪ್ತೇ ಸತ್ರಯಾಗೇಽಥ ದೇವಾನೂಚುಃ ಸಮಾಗತಾನ್ ।**
**ರಾಜ್ಞೋ ಜೀವತು ದೇಹೋಽಯಂ ಪ್ರಸನ್ನಾ ಪ್ರಭವೋ ಯದಿ ।।೭।।**

ಆ ಮುನಿಶ್ರೇಷ್ಠರು, **ಸತ್ರಯಾಗೇ** ಸತ್ರ ಎಂಬುವ **ಯಾಗೇ** ಯಾಗವು **ಸಮಾಪ್ತೇ** ಪೂರ್ಣವಾಗಲು, **ಸಮಾಗತಾನ್** ಯಾಗಕ್ಕೆ ಬಂದಿರುವ **ದೇವಾನ್** ದೇವತೆಗಳನ್ನು **ಊಚುಃ** ಕೇಳಿದರು. ಏನೆಂದರೆ? **ಪ್ರಭವಃ** ಸಮರ್ಥರಾದ ತಾವುಗಳು **ಯದಿ ಪ್ರಸನ್ನಾಃ** ಪ್ರಸನ್ನರಾಗಿದ್ದರೆ, **ರಾಜ್ಞಃ** ಈ ನಿಮಿರಾಜನ, **ಅಯಂ** ಈ **ದೇಹಃ** ದೇಹವು, **ಜೀವತು** ಜೀವಿಸಲಿ ಎಂದು ಕೇಳಿಕೊಂಡರು.

**ತಾತ್ಪರ್ಯ-** ಸತ್ರ ಎಂಬ ಆ ಯಾಗವು ಮುಗಿದ ಮೇಲೆ ಮುನಿಶ್ರೇಷ್ಠರೆಲ್ಲರೂ, ಯಾಗಕ್ಕೆ ಆಗಮಿಸಿದ್ದ ದೇವತೆಗಳನ್ನು ಆ ನಿಮಿರಾಜನ ದೇಹವು (ಗಂಧದ ಎಣ್ಣೆಯಲ್ಲಿದ್ದ) ಪುನಃ ಜೀವಿಸಲಿ ಎಂದು ಕೇಳಿಕೊಂಡರು. ।।೭।।

**ತಥೇತ್ಯುಕ್ತೇ ನಿಮಿಃ ಪ್ರಾಹ ಮಾ ಭೂನ್ಮೇ ದೇಹಬಂಧನಮ್ ।**
**ಯಸ್ಯ ಯೋಗಂ ನ ವಾಂಛಂತಿ ವಿಯೋಗಭಯಕಾತರಾಃ ।।೮।।**

**ತಥಾ** ಆ ದೇವತೆಗಳು ಹಾಗೇ ಆಗಲೆಂದು, **ಉಕ್ತೇ** ಹೇಳಲು, **ನಿಮಿಃ** ನಿಮಿರಾಜನು, **ಮೇ** ನನಗೆ, **ದೇಹಬಂಧನಂ** ದೇಹಸಂಬಂಧವು **ಮಾ ಭೂತ್** ಆಗಬಾರದು, **ವಿಯೋಗಭಯಕಾತರಾಃ** ದೇಹವಿಯೋಗದ ಭಯದಿಂದ, ವ್ಯಗ್ರಚಿತ್ತರಾದವರು, **ಯಸ್ಯ** ಯಾವ ದೇಹದ **ಯೋಗಂ** ಸಂಬಂಧವನ್ನು **ನ ವಾಂಛಂತಿ** ಅಪೇಕ್ಷಿಸುವುದಿಲ್ಲ.

**ತಾತ್ಪರ್ಯ-** ದೇವತೆಗಳು ಹಾಗೇ ಆಗಲಿ ಎಂದರು. ಆದರೆ ನಿಮಿರಾಜನು ಈ ದೇಹಸಂಬಂಧವನ್ನು ಒಪ್ಪಲಿಲ್ಲ. ಏಕೆಂದರೆ ಜ್ಞಾನಿಗಳು ದೇಹವಿಯೋಗದ ಭಯದಿಂದ ಕಾತರರಾಗಿ ಈ ದೇಹಸಂಬಂಧವನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದ, ನಾನೂ ದೇಹಸಂಬಂಧವನ್ನು ಅಪೇಕ್ಷಿಸುವುದಿಲ್ಲ ಎಂದನು. ||೮||

**ಭಜಂತಿ ಚರಣಾಂಭೋಜಂ ಮುನಯೋ ಹರಿಮೇಧಸಃ |**
**ದೇಹಂ ನಾವರುರುತ್ಸೇऽಹಂ ದುಃಖಶೋಕಭಯಾಶ್ರಯಮ್ ||೯||**

**ಹರಿಮೇಧಸಃ** ಭಕ್ತಜನರ ಪಾಪಹರಣಶೀಲವಾದ ಬುದ್ಧಿ ಉಳ್ಳ **ಮುನಯಃ** ಮುನಿಗಳು, **ಚರಣಾಂಭೋಜಂ** ಶ್ರೀಹರಿಚರಣಕಮಲವನ್ನು **ಭಜಂತಿ** ಸ್ಮರಿಸುತ್ತಾರೆ. (**ಹರಿವತ್** ಸೂರ್ಯನಂತೆ ಪ್ರಕಾಶಮಾನವಾದ **ಮೇಧಾಃ** ಬುದ್ಧಿಯುಳ್ಳ ಶ್ರೀವಿಷ್ಣುವಿನ **ಚರಣಾಂಭೋಜಂ** ಚರಣಕಮಲವನ್ನು ಮನೋನಿಗ್ರಹ ಉಳ್ಳ ಮುನಿಗಳು ಸ್ಮರಿಸುತ್ತಾರೆ) **ಅಹಂ** ನಾನು, **ದುಃಖಶೋಕಭಯಾಶ್ರಯಂ** ದುಃಖಕ್ಕೆ ಭಯಕ್ಕೂ ಆಶ್ರಯವಾದ, **ದೇಹಂ** ದೇಹವನ್ನು **ನ ಅವರುರುತ್ಸೇ** ಹೊಂದಲು ಅಪೇಕ್ಷಿಸುವುದಿಲ್ಲ ಎಂದು ಹೇಳಿದನು.

**ಹರಿಮೇಧಸಃ ಚರಣಾಂಭೋಜಂ ಭಜಂತಿ** ಎಂಬುವುದಕ್ಕೆ ಈ ರೀತಿಯಾಗಿ ಅರ್ಥ ಮಾಡಬೇಕು.

**ಮೇಧಸಾ** ಜ್ಞಾನಾತ್ಮಕನಾದ ಪರಮಾತ್ಮನ **ಹರಿ** ಪಾಪವನ್ನು ನಾಶಮಾಡುವ, **ಚರಣಾಂಭೋಜಂ** ಚರಣಕಮಲವನ್ನು, **ಭಜಂತಿ** ಭಜಿಸುತ್ತಾರೆ. ಅಥವಾ **ಚರಣಾಂಭೋಜಂ ಚರಣಯೋಃ ಅಂಭೋಜಾ ರಮಾ ಅಂಭೋಜಃ ವಿಧಿಶ್ಚ ಯಸ್ಯ** ಎಂದರೆ ಯಾವನ ಪಾದಗಳಿಗೆ ರಮಾದೇವಿಯರು ಮತ್ತು ಚತುರ್ಮುಖರು, ನಮಸ್ಕರಿಸುತ್ತಾರೆಯೋ, ಅಂಥ **ಹರಿಂ** ವಿಷ್ಣುವನ್ನು, **ಏಧಸಃ** ಅರಣಿಯಿಂದ ಮಥನ ಮಾಡಿ ಹೊರಟ, **ಹರಿಂ** ಅಗ್ನಿಯನ್ನು, ಹೇಗೆ ಭಜಿಸಬೇಕೋ ಅದರಂತೆ, ಎಂದರೆ ಗುರುಶಿಷ್ಯರು ಶಾಸ್ತ್ರವನ್ನು ಮಥನ ಮಾಡಿ ವಿದ್ಯೆ ಎಂಬ ಅಗ್ನಿಯನ್ನು ಹೊಂದಿ, ಅದರಿಂದ ಪ್ರತಿಪಾದ್ಯನಾದ ಶ್ರೀವಿಷ್ಣು ಪರಮಾತ್ಮನನ್ನು ಸೇವಿಸುವಂತೆ.

**ದುಃಖಶೋಕಭಯಾಶ್ರಯಂ** ಎಂದು ದೇಹಕ್ಕೆ ವಿಶೇಷಣವನ್ನು ಕೊಟ್ಟಿರುವರು. ಇಲ್ಲಿ ದುಃಖವೆಂದರೆ ಬಾಹ್ಯದುಃಖವು, ಶೋಕವೆಂದರೆ ಹೃದಯವೇದನೆಯು ಅಥವಾ ದುಃಖವೆಂದರೆ ಸುಖ ಮತ್ತು ದುಃಖವೆಂದು ಎರಡೂ ಅರ್ಥವೂ. **ದುಃ** ಶಬ್ದಕ್ಕೆ ದುಃಖ ಎಂದು ಅರ್ಥ. **ಖಂ** ಎಂದರೆ ಸುಖ ಎಂದು ಅರ್ಥ. ದುಃಖ-ಸುಖಗಳಲ್ಲಿ ದುಃಖವೇ ಸಂಸಾರಿಗೆ ಬಹಳವಾಗಿದ್ದರಿಂದ ದುಃಖ ಎಂದು ಮೊದಲು

ಪ್ರಯೋಗಿಸಿರುವರು. ದುಃಖಸಹಿತವಾದ ಸುಖವು ಹೇಯವೇ ಆಗಿರುತ್ತದೆ. ಶೋಕವೆಂದರೆ ಕೇವಲ ದುಃಖವೆಂದು ತಿಳಿಯಬೇಕು. ।।೯।।

**ಸರ್ವತ್ರಾಸ್ಯ ಯತೋ ಮೃತ್ಯುರ್ಮತ್ಸ್ಯಾನಾಮುದಕೇ ಯಥಾ । ।।೧೦।।**

**ಅಸ್ಯ** ಈ ದೇಹಕ್ಕೆ, **ಉದಕೇ** ಸಮುದ್ರದಲ್ಲಿ, **ಮತ್ಸ್ಯಾನಾಂ** ಮೀನುಗಳಿಗೆ, **ಯಥಾ** ಹೇಗೋ ಹಾಗೆ, **ಮೃತ್ಯುಃ** ಮರಣವು, **ಸರ್ವತ್ರ** ಎಲ್ಲಾ ದೇಹದಲ್ಲೂ ಉಂಟಾಗುತ್ತದೆ. ಆದ್ದರಿಂದ ದೇಹ ಬೇಡ ಎಂದನು.

ತತ್ವಜ್ಞಾನಿಗಳಾದ ಮುನಿಗಳು ದೇಹಸಂಬಂಧ ಬೇಡ ಎಂದು ಶ್ರೀಹರಿಯ ಚರಣಾಂಭೋಜವನ್ನು ಸ್ಮರಿಸುತ್ತಾರೆ. ಮುನಿಗಳೂ ಸಹ ಈ ದೇಹಕ್ಕೆ ಸರ್ವತ್ರ ಮೃತ್ಯು ಸಂಭವಿಸುತ್ತದೆಂದು (ಸಮುದ್ರದಲ್ಲಿ ಮೀನುಗಳಿಗೆ ಹೇಗೆ ಮರಣವು ತಪ್ಪದೇ ಸಂಭವಿಸುತ್ತದೆಯೋ ಹಾಗೆ ಈ ದೇಹಕ್ಕೂ ಮರಣವು ಅನಿವಾರ್ಯವಾಗಿದೆ) ದೇಹಸಂಬಂಧವನ್ನು ಬಯಸುವುದಿಲ್ಲ. ಅದರಂತೆ ನಾನೂ ಬಯಸುವುದಿಲ್ಲ.

ಇಲ್ಲಿ ಮೀನಿನ ಉದಾಹರಣೆಯನ್ನು ಕೊಟ್ಟಿರುವುದು ಏಕೆಂದರೆ, **ನಿಮಿರಾಜನು** ಮುಂದೆ ಪ್ರಾಣಿಗಳ ಕಣ್ಣುಗಳಲ್ಲಿದ್ದು, ಉನ್ಮೇಷ, ನಿಮೇಷ ವ್ಯಾಪಾರ ಉಳ್ಳವನಾಗುತ್ತಾನೆ. ಮೀನುಗಳು ಅನಿಮಿಷವಾದ್ದರಿಂದ, ತನಗೆ ವ್ಯಾಪಾರಕ್ಕೆ ಅನುಕೂಲವಾಗದೇ ಇದ್ದದ್ದರಿಂದ ಅವುಗಳ ಮೇಲೆ ಕೋಪ ಉಳ್ಳವನಂತೆ ಮೀನಿನ ದೃಷ್ಟಾಂತವನ್ನು ಕೊಟ್ಟಿರುವರು. ।।೧೦।।

**ದೇವಾ ಊಚುಃ –**

**ವಿದೇಹ ಉಷ್ಯತಾಂ ಕಾಮಂ ಲೋಚನೇಷು ಶರೀರಿಣಾಮ್ ।**
**ಉನ್ಮೇಷಣನಿಮೇಷಾಭ್ಯಾಂ ಲಕ್ಷಿತೋऽಧ್ಯಾತ್ಮಸಂಸ್ಥಿತಃ ।।೧೧।।**

**ವಿದೇಹಃ** ದೇಹವಿಲ್ಲದವನಾಗಿ, **ಶರೀರಿಣಾಂ** ಎಲ್ಲಾ ಪ್ರಾಣಿಗಳ, **ಲೋಚನೇಷು** ಕಣ್ಣುಗಳಲ್ಲಿ, **ಕಾಮಂ** ಯಥೇಚ್ಛವಾಗಿ, **ಉಷ್ಯತಾಂ** ವಾಸಮಾಡಲಿ, **ಅಧ್ಯಾತ್ಮಸಂಸ್ಥಿತಃ** ಭಗವಂತನ ಧ್ಯಾನಮಾಡುತ್ತಾ , **ಉನ್ಮೇಷಣನಿಮೇಷಾಭ್ಯಾಂ** ರೆಪ್ಪೆಗಳನ್ನು ಬಿಡುವುದು, ಮುಚ್ಚುವುದು ಇವುಗಳಿಂದ, **ಲಕ್ಷಿತಃ** ತಿಳಿಯಲ್ಪಡುವವನಾಗಲಿ.

**ತಾತ್ಪರ್ಯ–** ಈತನು ದೇಹರಹಿತನಾಗಿ ಎಲ್ಲಾ ಪ್ರಾಣಿಗಳ ಕಣ್ಣುಗಳಲ್ಲಿ ಭಗವಂತನ ಧ್ಯಾನ ಮಾಡುತ್ತಾ ವಾಸಮಾಡಲಿ. ರೆಪ್ಪೆ ಬಿಡುವುದು ಮುಚ್ಚುವುದು ಇವುಗಳಿಂದ ತಿಳಿಯಲ್ಪಡಲಿ.

ಇಲ್ಲಿ **ಅಧ್ಯಾತ್ಮಸಂಸ್ಥಿತಃ** ಎಂಬುವ ಶಬ್ದಕ್ಕೆ ಹೀಗೂ ಅರ್ಥವನ್ನು ಹೇಳಬೇಕು. **ಅಧಿ** ಅಧಿಕವಾಗಿ, **ಆತ್ಮ** ಬಂಧಕವಾದ, ವಿಲಕ್ಷಣಶರೀರದಲ್ಲಿ ಇದ್ದಂಥವನಾಗಿ

ಎಂದರ್ಥವು? ಏಕೆಂದರೆ ಯಾವ ದೇಹವು ಇಲ್ಲದಿದ್ದಲ್ಲಿ ಕಣ್ಣುಗಳಲ್ಲಿ ಇದ್ದುಕೊಂಡು ವ್ಯಾಪಾರ ಮಾಡುವುದು ಅಸಂಭವವು, ಮತ್ತು ಇದೇ ವಾಕ್ಯದಿಂದಲೇ, ವಸಿಷ್ಠರ ಮುಂದಿನ ದೇಹವನ್ನು ವರ್ಣಿಸಿರುವರು, **ಕಾಮಂ** ಊರ್ವಶಿಯ ಇಚ್ಛೆಯನ್ನು ನಿಮಿತ್ತ ಮಾಡಿ, **ವಿದೇಹಃ** ವಿಲಕ್ಷಣದೇಹವುಳ್ಳವರಾಗಿ, **ಉಷ್ಯತಾಂ** ವಸಿಷ್ಠರು ಇರಲಿ ಎಂದು ದೇವತೆಗಳು ವಸಿಷ್ಠರಿಗೂ, ನಿಮಿಗೂ ಅಭಯಪ್ರದಾನ ಮಾಡಿದರು. ॥೧೧॥

**ಅರಾಜಕಭಯಂ ನೃಣಾಂ ಮನ್ಯಮಾನಾ ಮಹರ್ಷಯಃ ।**
**ದೇಹಂ ಮಮಂಥುಶ್ಚ ನಿಮೇಃ ಕುಮಾರಃ ಸಮಜಾಯತ ॥೧೨॥**

**ಮಹರ್ಷಯಃ** ಮಹರ್ಷಿಗಳು, **ನೃಣಾಂ** ಮಾನವರ, **ಅರಾಜಕಭಯಂ** ರಾಜರಿಲ್ಲದ ಭಯವನ್ನು, **ಮನ್ಯಮಾನಾಃ** ತಿಳಿದವರಾಗಿ, **ನಿಮೇಃ** ನಿಮಿರಾಜನ, **ದೇಹಂ** ದೇಹವನ್ನು, **ಮಮಂಥುಃ** ಕಡೆದರು, **ಕುಮಾರಃ** ಮಗನು **ಸಮಜಾಯತ** ಜನಿಸಿದನು.

**ತಾತ್ಪರ್ಯ-** ಆಗ ಮಹರ್ಷಿಗಳು ರಾಜ್ಯದಲ್ಲಿ ಅರಾಜಕ ಭಯದಿಂದ ನಿಮಿರಾಜನ ದೇಹವನ್ನು ಮಥನ ಮಾಡಿದರು. ಆ ದೇಹದಿಂದ ಕುಮಾರನು ಜನಿಸಿದನು. ॥೧೨॥

**ಜನನಾಜ್ಜನಕಃ ಸೋಽಭೂದ್ವೈದೇಹಸ್ತು ವಿದೇಹಜಃ ।**
**ಮಿಥಿಲೋ ಮಥನಾಜ್ಜಾತೋ ಮಿಥಿಲಾ ಯೇನ ನಿರ್ಮಿತಾ ॥೧೩॥**

**ಸಃ** ಈ ಮಥನದಿಂದ ಜನಿಸಿದ ಬಾಲಕನು, **ಜನನಾತ್** ಜನಿಸಿದ್ದರಿಂದ, **ಜನಕಃ** ಜನಕನೆಂದು **ವಿದೇಹಜಃ** ವಿದೇಹನಿಂದ ಜನಿಸಿದ್ದರಿಂದ, **ವೈದೇಹಃ** ವೈದೇಹನೆಂದು **ಮಥನಾತ್** ಮಥನದಿಂದ ಜನಿಸಿದ್ದರಿಂದ **ಮಿಥಿಲಃ** ಮಿಥಿಲನೆಂದು ಹೇಳಿಸಿಕೊಂಡನು, **ಯೇನ** ಯಾವ ಈ ಮಿಥಿಲನಿಂದಲೇ, **ಮಿಥಿಲಾ** ಮಿಥಿಲಾ ನಗರವು, **ನಿರ್ಮಿತಾ** ನಿರ್ಮಿಸಲ್ಪಟ್ಟಿತು.

**ತಾತ್ಪರ್ಯ-** ಈ ಮಥನದಿಂದ ಜನಿಸಿದ ಮಗುವು ಜನಕನೆಂದು, ವಿದೇಹನಿಂದ ಜನಿಸಿದ್ದರಿಂದ ವೈದೇಹನೆಂದೂ, ಮಥನದಿಂದ ಜನಿಸಿದ್ದರಿಂದ ಮಿಥಿಲನೆಂದು ಕರೆಸಿಕೊಂಡನು. ಈತನೇ ಮಿಥಿಲಾ ನಗರವನ್ನು ನಿರ್ಮಿಸಿದನು. ॥೧೩॥

**ತಸ್ಮಾದುದಾವಸುಸ್ತಸ್ಯ ಪುತ್ರೋಽಭೂನ್ನಂದಿವರ್ಧನಃ ।**
**ತತಃ ಸುಕೇತುಸ್ತಸ್ಯಾಪಿ ದೇವರಾತೋ ಮಹೀಪತಿಃ ॥೧೪॥**

**ತಸ್ಮಾತ್** ಈ ಜನಕನಿಂದ, **ಉದಾವಸುಃ** ಉದಾವಸು ಎಂಬುವನು, **ತಸ್ಯ** ಆತನಿಗೆ **ನಂದಿವರ್ಧನಃ** ನಂದಿವರ್ಧನ ಎಂಬುವನು, **ತತಃ** ಅವನಿಂದ, **ಸುಕೇತುಃ** ಸುಕೇತು ಎಂಬುವನು, **ತಸ್ಯ** ಅವನಿಗೆ **ದೇವರಾತಃ** ದೇವರಾತನೆಂಬ, **ಮಹೀಪತಿಃ** ರಾಜನು **ಅಭೂತ್** ಜನಿಸಿದನು.

**ತಾತ್ಪರ್ಯ-** ಆ ಜನಕನಿಂದ ಉದಾವಸುವು ಆತನಿಗೆ ನಂದಿವರ್ಧನನು ಆತನಿಗೆ ಸುಕೇತುವು ಆತನಿಗೆ ದೇವರಾತನೆಂಬ ರಾಜನು ಜನಿಸಿದನು. ||೧೪||

**ತಸ್ಮಾದ್ ಬೃಹದ್ರಥಸ್ತಸ್ಯ ಮಹಾವೀರ್ಯಃ ಸುಧೃತ್ಪಿತಾ |**
**ಸುಧೃತೋ ಧೃಷ್ಟಕೇತುರ್ವೈ ಹರ್ಯಶ್ವೋಽಥ ಮರುಸ್ತತಃ ||೧೫||**

**ತಸ್ಮಾತ್** ಆ ದೇವರಾತನಿಂದ, **ಬೃಹದ್ರಥಃ** ಬೃಹದ್ರಥನು, **ತಸ್ಯ** ಅವನಿಗೆ, **ಮಹಾವೀರ್ಯಃ** ಮಹಾಪರಾಕ್ರಮಿಯಾದ, **ಸುಧೃತ್ಪಿತಾ** ಸುಧೃತನ ತಂದೆಯು, **ಮಹಾವೀರ್ಯಃ** ಮಹಾವೀರ್ಯ ಎಂಬ ನಾಮದಿಂದ ಜನಿಸಿದನು. ನಂತರ ಸುಧೃತ್, ಈತನಿಗೆ **ಧೃಷ್ಟಕೇತುಃ** ಧೃಷ್ಟಕೇತುವು, ಈತನಿಗೆ **ಹರ್ಯಶ್ವಃ** ಹರ್ಯಶ್ವನು, **ಹರ್ಯಶ್ವಾತ್** ಈತನಿಂದ, **ಮರುಃ** ಮರುವು ಜನಿಸಿದನು.

**ತಾತ್ಪರ್ಯ-** ಆ ದೇವರಾತನಿಂದ ಬೃಹದ್ರಥನು, ಬೃಹದ್ರಥನಿಂದ ಮಹಾವೀರ್ಯನು ಜನಿಸಿದರು. ಈ ಮಹಾವೀರ್ಯನಿಂದ ಸುಧೃತನು, ಈತನಿಂದ ದೃಷ್ಟಕೇತುವು ಈತನಲ್ಲಿ ಹರ್ಯಶ್ವನು ಈತನಲ್ಲಿ ಮರು ಈ ರೀತಿ ಅವತರಿಸಿದರು. ||೧೫||

**ಮರೋಃ ಪ್ರತೀಂಧಕಸ್ತಸ್ಮಾಜ್ಜಾತಃ ಕೃತರಥೋ ಯತಃ |**
**ದೇವಮೀಢಸ್ತಸ್ಯ ಸುತೋ ವಿಧೃತೋಽಥ ಮಹಾಧೃತಿಃ ||೧೬||**

**ಮರೋಃ** ಈ ಮರುವಿನ ದೆಸೆಯಿಂದ, **ಪ್ರತೀಂಧಕಃ** ಪ್ರತೀಂಧಕನು, **ತಸ್ಮಾತ್** ಈತನ ದೆಶೆಯಿಂದ, **ಕೃತರಥಃ** ಕೃತರಥ ಎಂಬುವನು, **ಜಾತಃ** ಜನಿಸಿದನು, **ತಸ್ಯ** ಇವನ, **ಸುತಃ** ಮಗನು, **ದೇವಮೀಢಃ** ದೇವಮೀಢ ಎಂಬುವನು, **ಅಥ** ಅನಂತರ ಇವನಿಂದ, **ವಿಧೃತಃ** ವಿಧೃತ ಎಂಬುವನು ಈತನಿಗೆ, **ಮಹಾಧೃತಿಃ** ಮಹಾಧೃತಿ ಎಂಬುವನು ಜನಿಸಿದರು.

**ತಾತ್ಪರ್ಯ-** ಈ ಮರುವಿನಿಂದ ಪ್ರತೀಂಧಕನು, ಈತನಿಂದ ಕೃತರಥನು, ಈತನಿಂದ ದೇವಮೀಢನು, ಈತನಿಂದ ವಿಧೃತನು ಈತನಲ್ಲಿ ಮಹಾಧೃತಿಯು ಜನಿಸಿದನು. ||೧೬||

**ಕೃತಿರಾತಸ್ತತಸ್ತಸ್ಮಾನ್ಮಹಾರೋಮಾಽಥ ತತ್ಸುತಃ ।**
**ಸ್ವರ್ಣರೋಮಾ ಸುತಸ್ತಸ್ಯ ಹ್ರಸ್ವರೋಮಾ ವ್ಯಜಾಯತ ॥೧೭॥**

**ತತಃ** ಅನಂತರದಲ್ಲಿ, **ತಸ್ಮಾತ್** ಮಹಾಧೃತಿಯಿಂದ **ಕೃತಿರಾತಃ** ಕೃತಿರಾತನು, **ತಸ್ಮಾತ್** ಆತನ ದೆಶೆಯಿಂದ, **ಮಹಾರೋಮಾ** ಮಹಾರೋಮನು, **ಅಥ** ಅನಂತರ, **ತತ್ಸುತಃ** ಆತನ ಮಗನು, **ಸ್ವರ್ಣರೋಮಾ** ಸ್ವರ್ಣರೋಮಾ ಎಂಬುವನು, **ತಸ್ಯ** ಈತನಿಗೆ, **ಹ್ರಸ್ವರೋಮಾ** ಹ್ರಸ್ವರೋಮನು, **ವ್ಯಜಾಯತ** ಜನಿಸಿದನು.

**ತಾತ್ಪರ್ಯ-** ಆತನ ದೆಶೆಯಿಂದ ಕೃತಿರಾತನು, ಆತನ ದೆಶೆಯಿಂದ ಮಹಾರೋಮನು ಅನಂತರ ಆತನ ಮಗನು ಸ್ವರ್ಣರೋಮನು ಈತನಿಗೆ ಹ್ರಸ್ವರೋಮನು ಜನಿಸಿದರು. ॥೧೭॥

**ತತಃ ಸೀರಧ್ವಜೋ ಜಜ್ಞೇ ಯಜ್ಞಾರ್ಥಂ ಕರ್ಷತೋ ಮಹೀಮ್ ।**
**ಸೀತಾ ಸೀರಾಗ್ರತೋ ಜಾತಾ ತಸ್ಮಾತ್ಸೀರಧ್ವಜಃ ಸ್ಮೃತಃ ॥೧೮॥**

**ತತಃ** ಅನಂತರದಲ್ಲಿ, **ಸೀರಧ್ವಜಃ** ಸೀರಧ್ವಜನು, **ಜಜ್ಞೇ** ಜನಿಸಿದನು, **ಯಜ್ಞಾರ್ಥಂ** ಯಜ್ಞಕ್ಕಾಗಿ, **ಮಹೀಂ** ಭೂಮಿಯನ್ನು, **ಕರ್ಷತಃ** ಊಳುತ್ತಿರುವ, **ಸೀರಾಗ್ರತಃ** ನೇಗಿಲಿನ ತುದಿಯಿಂದ, **ಸೀತಾ** ಸೀತೆಯು, **ಜಾತಾ** ಅವತರಿಸಿದಳು, **ತಸ್ಮಾತ್** ನೇಗಿಲನ್ನು ಧ್ವಜವಾಗಿಟ್ಟುಕೊಂಡಿದ್ದರಿಂದ ಇವನು, **ಸೀರಧ್ವಜಃ** ಸೀರಧ್ವಜನೆಂದು **ಸ್ಮೃತಃ** ಕರೆಯಲ್ಪಟ್ಟನು.

**ತಾತ್ಪರ್ಯ-** ಇವನ ಅನಂತರದಲ್ಲಿ ಸೀರಧ್ವಜನು ಜನಿಸಿದನು. ಯಜ್ಞಕ್ಕಾಗಿ ಭೂಮಿಯನ್ನು ಅಗಿದಾಗ ಭೂಮಿಯಲ್ಲಿ ಸೀತೆಯು ಅವತರಿಸಿದಳು. ಈತನು ನೇಗಿಲನ್ನು ಧ್ವಜದಲ್ಲಿ ಇಟ್ಟುಕೊಂಡಿದ್ದರಿಂದ ಈತನಿಗೆ ಸೀರಧ್ವಜನೆಂದು ಹೆಸರು ಬರುತ್ತದೆ. ॥೧೮॥

**ಕುಶಧ್ವಜಸ್ತಸ್ಯ ಪುತ್ರಸ್ತತೋ ಧರ್ಮಧ್ವಜೋ ನೃಪ ।**
**ಧರ್ಮಧ್ವಜಸ್ಯ ದ್ವೌ ಪುತ್ರೌ ಕೃತಧ್ವಜಮಿತಧ್ವಜೌ ॥೧೯॥**

**ತಸ್ಯ** ಆ ಸೀರಧ್ವಜನಿಗೆ **ಪುತ್ರಃ** ಮಗನು, **ಕುಶಧ್ವಜಃ** ಕುಶಧ್ವಜನು, **ತತಃ** ಅನಂತರದಲ್ಲಿ **ಧರ್ಮಧ್ವಜಃ** ಧರ್ಮಧ್ವಜನು, **ನೃಪಃ** ರಾಜನು, **ಧರ್ಮಧ್ವಜಸ್ಯ** ಆ ಧರ್ಮಧ್ವಜನಿಗೆ, **ದ್ವೌ** ಇಬ್ಬರು, **ಪುತ್ರೌ** ಮಕ್ಕಳು, ಯಾರೆಂದರೆ **ಕೃತಧ್ವಜಃ** ಕೃತಧ್ವಜನೆಂದು **ಮಿತಧ್ವಜಃ** ಮಿತಧ್ವಜನೆಂದು ಆದರು.

**ತಾತ್ಪರ್ಯ-** ಆ ಸೀರಧ್ವಜನಿಗೆ ಕುಶಧ್ವಜನೆಂಬ ಮಗನಾದನು. ಈತನಿಗೆ ಧರ್ಮಧ್ವಜನೆಂಬ ಪುತ್ರನು. ರಾಜನೇ! ಈತನಿಗೆ ಕೃತಧ್ವಜನೆಂದು ಮಿತಧ್ವಜನೆಂದು ಇಬ್ಬರು ಮಕ್ಕಳಿದ್ದರು. ।।೧೯।।

**ಕೃತಧ್ವಜಾತ್ಕೇಶಿಧ್ವಜಃ ಖಾಂಡಿಕ್ಯಸ್ತು ಮಿತಧ್ವಜಾತ್ ।**
**ಕೃತಧ್ವಜಸುತೋ ರಾಜನ್ನಾತ್ಮವಿದ್ಯಾವಿಶಾರದಃ ।।೨೦।।**

**ಕೃತಧ್ವಜಾತ್** ಕೃತಧ್ವಜನ ದೆಶೆಯಿಂದ, **ಕೇಶಿಧ್ವಜಃ** ಕೇಶಿಧ್ವಜನೆಂದು, **ಮಿತಧ್ವಜಾತ್** ಮಿತಧ್ವಜನ ದೆಶೆಯಿಂದ, **ಖಾಂಡಿಕ್ಯಃ** ಖಾಂಡಿಕ್ಯ ಎಂಬುವರು ಜನಿಸಿದರು. **ರಾಜನ್** ರಾಜನೇ! **ಕೃತಧ್ವಜಸುತಃ** ಕೇಶಿಧ್ವಜನು, **ಆತ್ಮವಿದ್ಯಾ ವಿಶಾರದಃ** ಬ್ರಹ್ಮವಿದ್ಯಾಪಾರಂಗತನು.

**ತಾತ್ಪರ್ಯ-** ಕೃತಧ್ವಜನ ದೆಶೆಯಿಂದ ಕೇಶಿಧ್ವಜನು, ಮಿತಧ್ವಜನ ದೆಶೆಯಿಂದ ಖಾಂಡಿಕ್ಯ ಎಂಬುವನೂ ಜನಿಸಿದರು. ಕೃತಧ್ವಜನ ಮಗನಾದ ಕೇಶಿಧ್ವಜನು ಬ್ರಹ್ಮವಿದ್ಯೆಯಲ್ಲಿ ನಿಪುಣನಾಗಿದ್ದನು. ।।೨೦।।

**ಖಾಂಡಿಕ್ಯಃ ಕರ್ಮತತ್ತ್ವಜ್ಞೋ ಭೀತಃ ಕೇಶಿಧ್ವಜಾದ್ಗತಃ ।**
**ಭಾನುಮಾಂಸ್ತಸ್ಯ ಪುತ್ರೋಽಭೂಚ್ಛತದ್ಯುಮ್ನಸ್ತು ತತ್ಸುತಃ ।।೨೧।।**

**ಕರ್ಮತತ್ತ್ವಜ್ಞಃ** ಕರ್ಮತತ್ತ್ವವನ್ನು ತಿಳಿದ **ಖಾಂಡಿಕ್ಯಃ** ಆ ಖಾಂಡಿಕ್ಯನು, **ಕೇಶಿಧ್ವಜಾತ್** ಕೇಶಿಧ್ವಜನ ದೆಶೆಯಿಂದ, **ಭೀತಃ** ಭೀತನಾಗಿ, **ಗತಃ** ವನಕ್ಕೆ ಹೋದನು. **ತಸ್ಯ** ಕೇಶಿಧ್ವಜನಿಗೆ **ಭಾನುಮಾನ್** ಭಾನುಮಂತನು, **ಪುತ್ರಃ** ಮಗನು **ಅಭೂತ್** ಆದನು. **ತತ್ಸುತಃ** ಈತನ ಮಗನು, **ಶತದ್ಯುಮ್ನಃ** ಶತದ್ಯುಮ್ನನು **ಅಭೂತ್** ಆದನು.

**ತಾತ್ಪರ್ಯ-** ಕರ್ಮತತ್ತ್ವವನ್ನು ತಿಳಿದ ಖಾಂಡಿಕ್ಯನು ಕೇಶಿಧ್ವಜನಿಂದ ಭೀತನಾಗಿ ತಪಸ್ಸು ಮಾಡಲು ವನಕ್ಕೆ ಹೋದನು. ಕೇಶಿಧ್ವಜನಿಗೆ ಭಾನುಮಂತ ಎಂಬುವನು ಈತನಿಗೆ ಶತದ್ಯುಮ್ನ ಎಂಬ ಮಕ್ಕಳಾದರು. ।।೨೧।।

**ಶುಚಿಸ್ತತ್ತನಯಸ್ತಸ್ಮಾತ್ಸನದ್ವಾಜಸ್ತತೋಽಭವತ್ ।**
**ಊರ್ಜಕೇತುಃ ಸನದ್ವಾಜಾದಜೋಽಥ ಕುರುಜಿತ್ಸುತಃ ।।೨೨।।**

**ತಸ್ಮಾತ್** ಶತದ್ಯುಮ್ನನಿಂದ, **ಶುಚಿಃ** ಶುಚಿ ಎಂಬುವ, **ತನಯಃ** ಮಗನು, **ತತಃ** ಈತನ ದೆಶೆಯಿಂದ, **ಸನದ್ವಾಜಃ** ಸನದ್ವಾಜ ಎಂಬುವನು, **ಅಭವತ್** ಆದನು. **ಸನದ್ವಾಜಾತ್** ಈ ಸನದ್ವಾಜನ ದೆಶೆಯಿಂದ, **ಊರ್ಜಕೇತುಃ** ಊರ್ಜಕೇತು ಎಂಬುವನು, **ಅಥ** ಅನಂತರ, **ಅಜಃ** ಅಜನು ಮಗನು. ನಂತರ **ಅಜಸ್ಯ** ಈ ಅಜನಿಗೆ **ಕುರುಜಿತ್** ಕುರುಜಿತ್ ಎಂಬುವ, **ಸುತಃ** ಮಗನು ಜನಿಸಿದನು.

**ತಾತ್ಪರ್ಯ-** ಈ ಶತದ್ಯುಮ್ನನ ದೆಶೆಯಿಂದ ಶುಚಿ ಎಂಬುವನು ಜನಿಸಿದನು. ಈತನ ದೆಶೆಯಿಂದ ಸನದ್ವಾಜನು, ಈತನ ದೆಶೆಯಿಂದ ಊರ್ಜಕೇತುವು, ಈತನ ದೆಶೆಯಿಂದ ಅಜನು, ಈ ಅಜನಿಗೆ ಕುರುಜಿತ್ ಎಂಬುವನು ಜನಿಸಿದನು. ।।೨೨।।

**ಅರಿಷ್ಟನೇಮಿಸ್ತಸ್ಯಾಪಿ ಶ್ರುತಾಯುಸ್ತತ್ಸುಪಾರ್ಶ್ವಕಃ ।**
**ತತಶ್ಚಿತ್ರರಥೋ ಯಸ್ಯ ಕ್ಷೇಮಾಪಿರ್ಮಿಥಿಲಾಧಿಪಃ ।।೨೩।।**

**ತಸ್ಯಾಪಿ** ಕುರುಜಿತ್ ಎಂಬುವನಿಗೆ, **ಅರಿಷ್ಟನೇಮಿಃ** ಅರಿಷ್ಟನೇಮಿ ಎಂಬುವನು, **ತಸ್ಯ** ಈತನಿಗೆ, **ಶ್ರುತಾಯುಃ** ಶ್ರುತಾಯು ಎಂಬುವನು, **ತತ್** ಅನಂತರದಲ್ಲಿ, **ಸುಪಾರ್ಶ್ವಕಃ** ಸುಪಾರ್ಶ್ವಕನು, **ತತಃ** ಅನಂತರ, **ಚಿತ್ರರಥಃ** ಚಿತ್ರರಥನು, **ಯಸ್ಯ** ಯಾವ ಈತನಿಗೆ, **ಮಿಥಿಲಾಧಿಪಃ** ಮಿಥಿಲಾಧಿಪನಾದ **ಕ್ಷೇಮಾಪಿ** ಕ್ಷೇಮಾಪಿ ಎಂಬುವನು, ಜನಿಸಿದನು.

**ತಾತ್ಪರ್ಯ-** ಕುರುಜಿತ್‌ನಿಗೆ ಅರಿಷ್ಟನೇಮಿಯು ಜನಿಸಿದನು. ಈ ಅರಿಷ್ಟನೇಮಿಯ ದೆಶೆಯಿಂದ ಶ್ರುತಾಯು ಎಂಬುವನು, ಈತನಿಗೆ, ಸುಪಾರ್ಶ್ವಕನು, ಈತನಿಂದ ಚಿತ್ರರಥನು, ಈತನಲ್ಲಿ ಕ್ಷೇಮಾಪಿಯು ಜನಿಸಿದನು. ಈ ಕ್ಷೇಮಾಪಿಯು ಮಿಥಿಲಾಧಿಪನು. ।।೨೩।।

**ತಸ್ಮಾದ್ಧೇಮರಥಸ್ತಸ್ಯ ಸುತಃ ಸತ್ಯರಥಸ್ತತಃ ।**
**ಆಸೀದುಪಗುರುಸ್ತಸ್ಮಾದುಪಗುಪ್ತೋಽಗ್ನಿಸಂಭವಃ ।।೨೪।।**

**ತಸ್ಮಾತ್** ಕ್ಷೇಮಾಪಿಯಿಂದ, **ಹೇಮರಥಃ** ಹೇಮರಥನು, **ತಸ್ಯ** ಈತನಿಗೆ, **ಸತ್ಯರಥಃ** ಸತ್ಯರಥನು, **ಆಸೀತ್** ಆದನು. **ತತಃ** ಸತ್ಯರಥನಿಂದ **ಉಪಗುರುಃ** ಉಪಗುರುವು **ತಸ್ಮಾತ್** ಅವನ ದೆಶೆಯಿಂದ **ಉಪಗುಪ್ತಃ** ಉಪಗುಪ್ತನು, **ತಸ್ಮಾತ್** ಈತನ ದೆಶೆಯಿಂದ **ಅಗ್ನಿಸಂಭವಃ** ಅಗ್ನಿಸಂಭವನು ಜನಿಸಿದರು.

**ತಾತ್ಪರ್ಯ-** ಕ್ಷೇಮಾಪಿಯಿಂದ ಹೇಮರಥನು, ಈತನಿಗೆ ಸತ್ಯರಥನು ಆದರು. ಈತನ ದೆಶೆಯಿಂದ ಉಪಗುರುವು ಅವನಿಂದ ಉಪಗುಪ್ತನು ಈತನಿಂದ ಅಗ್ನಿಸಂಭವನು ಜನಿಸಿದರು. ।।೨೪।।

**ವೈವಸ್ವತೋಽಥ ತತ್ಪುತ್ರೋ ಯುಯುಧಾ ಯತ್ಸುಭಾಷಣಃ ।**
**ಶ್ರುತಸ್ತತೋ ಜಯಸ್ತಸ್ಮಾದ್ವಿಜಯೋಽಸ್ಮಾದೃತಃ ಸುತಃ ।।೨೫।।**

**ಅಥ** ಅನಂತರದಲ್ಲಿ ಅಗ್ನಿಸಂಭವನಿಂದ, **ವೈವಸ್ವತಃ** ವೈವಸ್ವತನು, **ತತ್ಪುತ್ರಃ** ಆತನ ಮಗನು, **ಯುಯುಧಾಃ** ಯುಯುಧಾನ ಎಂಬುವನು, **ಯತ್** ಯಾವಾತನಿಂದ **ಸುಭಾಷಣಃ** ಸುಭಾಷಣ ಎಂಬುವನು, **ಶ್ರುತಃ** ಸುಪ್ರಸಿದ್ಧನು. ಸುಭಾಷಣನಿಂದ

**ಜಯಃ** ಜಯ ಎಂಬುವನು, **ತಸ್ಮಾತ್** ಈ ಜಯನ ದೆಶೆಯಿಂದ **ವಿಜಯಃ** ವಿಜಯನು, **ಅಸ್ಮಾತ್** ವಿಜಯನಿಂದ, **ಋತಃ** ಋತ ಎಂಬುವನು **ಸುತಃ** ಮಗನಾದರು.

**ತಾತ್ಪರ್ಯ-** ಅಗ್ನಿಸಂಭವನ ನಂತರ ವೈವಸ್ವತನು. ಈತನ ಮಗ ಯುಯುಧಾನನು ನಂತರ ಸುಭಾಷಣ ಎಂಬುವನು, ಅವನ ದೆಶೆಯಿಂದ ಜಯನು, ಜಯನಿಂದ, ವಿಜಯ ಎಂಬುವನು, ಈತನ ದೆಶೆಯಿಂದ ಋತ ಎಂಬುವನು ಜನಿಸಿದರು. ।।೨೫।।

**ಶುನಕಸ್ತತ್ಸುತೋ ಜಜ್ಞೇ ವೀರಹವ್ಯೋ ಧೃತಿಸ್ತತಃ ।**
**ಬಹುಲಾಶ್ವೋ ಧೃತಸ್ತಸ್ಯ ಕೃತಿರಸ್ಯ ಮಹಾವಶೀ ।।೨೬।।**

**ತತ್ಸುತಃ** ಈ ಋತುವಿನ ಮಗನು, **ಶುನಕಃ** ಶುನಕನು, **ಜಜ್ಞೇ** ಜನಿಸಿದನು. **ತತಃ** ಅನಂತರ, **ವೀರಹವ್ಯಃ** ವೀರಹವ್ಯನು, **ತತಃ** ಈ ವೀರಹವ್ಯನ ದೆಶೆಯಿಂದ, **ಧೃತಿಃ** ಧೃತಿಯು **ತತಃ** ಆ ಧೃತಿಯ ದೆಶೆಯಿಂದ **ಬಹುಲಾಶ್ವಃ** ಬಹುಲಾಶ್ವನು, **ತತಃ** ಬಹುಲಾಶ್ವನಿಂದ **ಧೃತಃ** ಧೃತಃ ಎಂಬುವನು ಜನಿಸಿದನು. **ತಸ್ಯ** ಈತನಿಗೆ, **ಕೃತಿಃ** ಕೃತಿ ಎಂಬುವನು, **ಅಸ್ಯ** ಕೃತಿಗೆ **ಮಹಾವಶೀ** ಮಹಾವಶೀ ಎಂಬುವನು ಜನಿಸಿದನು.

**ತಾತ್ಪರ್ಯ-** ಈ ಋತುವಿನ ಮಗನು ಶುನಕನು. ಈತನ ಮಗನು ವೀರಹವ್ಯನು. ಇವನಿಗೆ ಧೃತಿಯು ಈತನಿಗೆ ಬಹುಲಾಶ್ವನು. ಈತನಿಗೆ ಧೃತನು. ಆ ಧೃತನಿಗೆ ಕೃತಿ. ಕೃತಿಗೆ ಮಹಾವಶೀ ಎಂಬುವನು ಅವತರಿಸಿದನು. ।।೨೬।।

**ಏತೇ ವೈ ಮಿಥಿಲಾ ರಾಜನ್ನಾತ್ಮವಿದ್ಯಾವಿಶಾರದಾಃ ।**
**ಯೋಗೇಶ್ವರಪ್ರಸಾದೇನ ದ್ವಂದ್ವೈರ್ಮುಕ್ತಾ ಗೃಹೇಷ್ವಪಿ ।।೨೭।।**

**ರಾಜನ್** ರಾಜನೇ! **ಏತೇ** ಇವರು ನಿಮಿವಂಶದಲ್ಲಿ ಉತ್ಪನ್ನರಾದವರು. **ಮಿಥಿಲಾಃ** ಮಿಥಿಲಾಧಿಪತಿಗಳು. ಇವರು **ಆತ್ಮವಿದ್ಯಾವಿಶಾರದಾಃ** ಬ್ರಹ್ಮವಿದ್ಯಾ- ಪಾರಂಗತರು, **ಗೃಹೇಷು** ಮನೆಗಳಲ್ಲಿ, **ಸ್ಥಿತಾ ಅಪಿ** ಇದ್ದರೂ ಸಹ, **ಯೋಗೇಶ್ವರಪ್ರಸಾದೇನ** ಯಾಜ್ಞವಲ್ಕ್ಯರ ದಯದಿಂದ **ದ್ವಂದ್ವೈಃ** ಶೀತೋಷ್ಣಾದಿ ಭಾವದಿಂದ **ಮುಕ್ತಾಃ** ಬಿಡಲ್ಪಟ್ಟವರಾಗಿದ್ದಾರೆ.

**ತಾತ್ಪರ್ಯ-** ರಾಜನೇ! ಇವರೆಲ್ಲರೂ ನಿಮಿರಾಜನ ವಂಶದಲ್ಲಿ ಜನಿಸಿದವರು. ಬ್ರಹ್ಮವಿದ್ಯಾವಿಶಾರದರಾಗಿದ್ದಾರೆ. ಮಿಥಿಲಾಧಿಪತಿಗಳಾಗಿದ್ದಾರೆ. ಮನೆಯಲ್ಲಿ ಇದ್ದರೂ ಸಹ ಯಾಜ್ಞವಲ್ಕ್ಯರ ದಯದಿಂದ ಶೀತೋಷ್ಣಾದಿಗಳಿಂದ ದೂರರಾಗಿರುತ್ತಾರೆ. ಇವರ ಕೀರ್ತನೆಯು ಅತ್ಯಂತ ಫಲಪ್ರದವಾಗಿರುತ್ತದೆ. ।।೨೭।।

**★ ।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಏಕಾದಶೋಽಧ್ಯಾಯಃ ।। ★**

## ಅಥ ದ್ವಾದಶೋಽಧ್ಯಾಯಃ

**ಶ್ರೀಶುಕ ಉವಾಚ-**

**ಅಥಾತಃ ಶ್ರೂಯತಾಂ ರಾಜನ್ವಂಶಃ ಸೋಮಸ್ಯ ಪಾವನಃ ।**
**ಯಸ್ಮಿನ್ನೈಲಾದಯೋ ಭೂಪಾಃ ಕೀರ್ತ್ಯಂತೇ ಪುಣ್ಯಕೀರ್ತಯಃ ॥೧॥**

**ಅಥ** ಸೂರ್ಯವಂಶಕಥನಾನಂತರದಲ್ಲಿ **ರಾಜನ್** ರಾಜನೇ! **ಸೋಮಸ್ಯ** ಚಂದ್ರನ, **ಪಾವನಃ** ಪವಿತ್ರವಾದ, **ವಂಶಃ** ವಂಶವು **ಶ್ರೂಯತಾಂ** ಕೇಳಲ್ಪಡಲಿ, **ಯಸ್ಮಿನ್** ಯಾವ ವಂಶದಲ್ಲಿ, **ಐಲಾದಯಃ** ಐಲನೇ ಮೊದಲಾದ **ಪುಣ್ಯಕೀರ್ತಯಃ** ಪುಣ್ಯಕೀರ್ತಿಗಳಾದ **ಭೂಪಾಃ** ರಾಜರು, **ಕೀರ್ತ್ಯಂತೇ** ಸ್ತುತಿಸಲ್ಪಡುತ್ತಾರೆ, ಈ ವಂಶವನ್ನು ಕೇಳು.

**ತಾತ್ಪರ್ಯ-** ರಾಜನೇ ! ಸೂರ್ಯವಂಶದ ರಾಜರ ಚರಿತ್ರೆಯನ್ನು ಕೇಳಿದ್ದಾಯಿತು. ಭಗವದ್ಭಕ್ತರು ಚಂದ್ರವಂಶದಲ್ಲೂ ಅವತರಿಸಿರುತ್ತಾರೆ. ಇವರ ಚರಿತ್ರೆಯನ್ನು ಕೇಳುವುದೂ ಸಹ ಪುರುಷಾರ್ಥಪ್ರದವಾಗಿರುತ್ತದೆ. ಚಂದ್ರವಂಶವು ಪವಿತ್ರವಾದ ಕೀರ್ತಿಯನ್ನು ಹೊಂದಿರುತ್ತದೆ. ಇದನ್ನು ಕೇಳು. ಈ ವಂಶದಲ್ಲಿ ಐಲನೇ ಮೊದಲಾದ ರಾಜರು ಕೀರ್ತಿವಂತರಾದರು. ॥೧॥

**ಸಹಸ್ರಶಿರಸಃ ಪುಂಸೋ ನಾಭಿಹ್ರದಸರೋರುಹಾತ್ ।**
**ಜಾತಸ್ಯಾಸೀತ್ಸುತೋ ಧಾತುರತ್ರಿಃ ಪಿತೃಸಮೋ ಗುಣೈಃ ॥೨॥**

**ಪುಂಸಃ ಸಹಸ್ರಶಿರಸಃ** ಪುರುಷರೂಪಿಯಾದ ಶ್ರೀಭಗವಂತನ, **ನಾಭಿಹ್ರದ-ಸರೋರುಹಾತ್** ನಾಭಿಹ್ರದ ಎಂಬ ಸರೋವರದ ದೆಶೆಯಿಂದ, **ರುಹಾತ್** ಉತ್ಪನ್ನವಾದ ಕಮಲದಿಂದ, **ಜಾತಸ್ಯ** ಉತ್ಪನ್ನನಾದ, **ಧಾತುಃ** ಬ್ರಹ್ಮನಿಂದ **ಗುಣೈಃ** ಗುಣಗಳಿಂದ **ಪಿತೃಸಮಃ** ಪಿತೃವಿಗೆ ಸಮಾನನಾದ, **ಅತ್ರಿಃ** ಅತ್ರಿ ಎಂಬುವ, **ಸುತಃ** ಮಗನು **ಆಸೀತ್** ಆದನು.

**ತಾತ್ಪರ್ಯ-** ಸಹಸ್ರಶಿರಸ್ಸುಳ್ಳ ಪುರುಷರೂಪಿಯಾದ ಶ್ರೀಭಗವಂತನ ನಾಭಿ ಎಂಬ ಸರೋವರದ ದೆಶೆಯಿಂದ ಉತ್ಪನ್ನವಾದ ಕಮಲದಲ್ಲಿ ಜನಿಸಿದ ಬ್ರಹ್ಮನ ದೆಶೆಯಿಂದ ಗುಣಗಳಲ್ಲಿ ತಂದೆಗೆ ಸಮಾನನಾದ ಅತ್ರಿಯೆಂಬ ಋಷಿಯು ಅವತರಿಸಿದನು. ॥೨॥

**ತಸ್ಯ ದೃಗ್ಭ್ಯೋಽಭವತ್ಪುತ್ರಃ ಸೋಮೋಽಮೃತಮಯಃ ಕಿಲ ।**
**ವಿಪ್ರೌಷಧ್ಯುಡುಗಣಾನಾಂ ಬ್ರಹ್ಮಣಾ ಕಲ್ಪಿತಃ ಪತಿಃ ॥೩॥**

**ತಸ್ಯ** ಆ ಅತ್ರಿ ಋಷಿಗಳ **ದೃಗ್ಭ್ಯಃ** ಆನಂದಾಶ್ರುವಿನಿಂದ, **ಅಮೃತಮಯಃ** ಅಮೃತವನ್ನು ಕಿರಣಗಳ ಮೂಲಕ ಹೊರಗೆ ಸೂಸುವ, **ಸೋಮಃ** ಚಂದ್ರನು, **ಅಭವತ್** ಆದನು. **ಬ್ರಹ್ಮಣಾ** ಬ್ರಹ್ಮನಿಂದ, **ವಿಪ್ರೌಷಧ್ಯಂಬುಗರ್ಭಾಣಾಂ** ಬ್ರಾಹ್ಮಣರು, ಔಷಧ, ಕೌಮುದಿ ಇವುಗಳ **ಪತಿಃ** ಪೋಷಕನಾಗಿ ಸ್ವಾಮಿಯಾಗಿ **ಕಲ್ಪಿತಃ** ಕಲ್ಪಿತನಾದನು.

**ವಿಪ್ರೌಷಧ್ಯುಡುಗರ್ಭಾಣಾಂ** ಎಂದು ಪಾಠಾಂತರ. **ಉಡವಃ** ನಕ್ಷತ್ರಗಳು, **ಗರ್ಭಾಃ** ಅವುಗಳ ಗರ್ಭೋದಕಗಳು, ಇವುಗಳಿಗೆ **ಪತಿಃ** ಅಧಿಪತಿಯೆಂದರ್ಥವು.

**ತಾತ್ಪರ್ಯ-** ಆ ಅತ್ರಿಋಷಿಗಳ ಆನಂದಾಶ್ರುವಿನಿಂದ ಅಮೃತವನ್ನು ತನ್ನ ಕಿರಣಗಳಿಂದ ಹೊರಸೂಸುವ ಚಂದ್ರನು ಜನಿಸಿದನು. ಈತನು (ಚಂದ್ರನು) ಬ್ರಹ್ಮನಿಂದ, ಬ್ರಾಹ್ಮಣ, ಔಷಧಿ (ಗಿಡ, ಮರ, ಬಳ್ಳಿ) ಕುಮುದ ಇವುಗಳಿಗೆ ಪೋಷಕನಾಗಿ ಮಾಡಲ್ಪಟ್ಟನು. ॥೩॥

**ಸೋಽಯಜದ್ರಾಜಸೂಯೇನ ವಿಜಿತ್ಯ ಭುವನತ್ರಯಮ್ ।**
**ಪತ್ನೀಂ ಬೃಹಸ್ಪತೇರ್ದರ್ಪಾತ್ತಾರಾಂ ನಾಮಾಹರದ್ಬಲಾತ್ ॥೪॥**

**ಸಃ** ಈ ಚಂದ್ರನು **ಭುವನತ್ರಯಂ** ಮೂರು ಲೋಕವನ್ನು, **ವಿಜಿತ್ಯ** ಜಯಿಸಿ, **ರಾಜಸೂಯೇನ** ರಾಜಸೂಯ ಯಾಗದಿಂದ, **ಅಯಜತ್** ಯಾಗ ಮಾಡಿದನು. **ದರ್ಪಾತ್** ದರ್ಪದಿಂದ **ಬಲಾತ್** ಬಲಾತ್ಕಾರವಾಗಿ, **ಬೃಹಸ್ಪತೇಃ** ಬೃಹಸ್ಪತಿಯ, **ಪತ್ನೀಂ** ಪತ್ನಿಯಾದ **ತಾರಾಂ ನಾಮ** ತಾರೆಯೆಂಬ ಹೆಸರಿನವಳನ್ನು **ಅಹರತ್** ಅಪಹರಿಸಿದನು.

**ತಾತ್ಪರ್ಯ-** ಈ ಚಂದ್ರನು ಮೂರು ಲೋಕವನ್ನು ಜಯಿಸಿ ರಾಜಸೂಯ ಯಾಗವನ್ನು ಮಾಡಿದನು. ಬೃಹಸ್ಪತಿಯ ಹೆಂಡತಿಯಾದ ತಾರೆಯನ್ನು ಬಲಾತ್ಕಾರವಾಗಿ ಅಪಹರಿಸಿದನು. ॥೪॥

**ಯದಾಸ ದೇವಗುರುಣಾ ಯಾಚಿತೋಽಭೀಕ್ಷ್ಣಶೋ ಮದಾತ್ ।**
**ನಾತ್ಯಜತ್ತತ್ಕೃತೇ ಜಜ್ಞೇ ಸುರದಾನವವಿಗ್ರಹಃ ॥೫॥**

**ಯದಾ** ಯಾವಾಗ, **ಅಭೀಕ್ಷ್ಣಶಃ** ಪದೇ ಪದೇ **ದೇವಗುರುಣಾ** ಬೃಹಸ್ಪತ್ಯಾಚಾರ್ಯರಿಂದ **ಯಾಚಿತಃ** ಯಾಚಿಸಲ್ಪಟ್ಟರೂ ಸಹ, **ಮದಾತ್** ಮದದಿಂದ, **ನ ಅತ್ಯಜತ್** ಬಿಡಲಿಲ್ಲ. **ತತ್ಕೃತೇ** ಅವಳಿಗಾಗಿ, **ಸುರದಾನವವಿಗ್ರಹಃ** ದೇವದಾನವರ ಜಗಳವು **ಜಜ್ಞೇ** ಉಂಟಾಯಿತು.

**ತಾತ್ಪರ್ಯ-** ಬೃಹಸ್ಪತ್ಯಾಚಾರ್ಯರು ತಾರೆಗೋಸ್ಕರ (ಬಿಟ್ಟುಕೊಡಲು) ಪದೇ ಪದೇ ಚಂದ್ರನನ್ನು ಯಾಚಿಸಿದರು. ಚಂದ್ರನು ಮದದಿಂದ ಅವಳನ್ನು ಬಿಡಲಿಲ್ಲ. ಇದರಿಂದಾಗಿ ದೇವದಾನವರ ಯುದ್ಧವು ಪ್ರಾರಂಭವಾಯಿತು. ।।೫।।

**ಶುಕ್ರೋ ಬೃಹಸ್ಪತೇರ್ದ್ವೇಷಾದಗ್ರಹೀತ್ಸಾಸುರೋಡುಪಮ್ ।**
**ಹರೋ ಗುರುಸುತಸ್ನೇಹಾತ್ಸರ್ವಭೂತಗಣಾವೃತಃ ।।೬।।**

**ಶುಕ್ರಃ** ಶುಕ್ರಾಚಾರ್ಯರು **ಬೃಹಸ್ಪತೇಃ** ಬೃಹಸ್ಪತಿಯ, **ದ್ವೇಷಾತ್** ದ್ವೇಷದಿಂದ, **ಸಾಸುರೋಡುಪಂ** ಅಸುರರಿಂದ ಸಹಿತನಾಗಿ ಚಂದ್ರನನ್ನು, **ಅಗ್ರಹೀತ್** ರಕ್ಷಿಸಲು ಅವನ ಪಕ್ಷವನ್ನು ಹಿಡಿದನು, **ಹರಃ** ಈಶ್ವರನು, **ಗುರುಸುತಸ್ನೇಹಾತ್** ಬೃಹಸ್ಪತ್ಯಾಚಾರ್ಯರ ಸ್ನೇಹದಿಂದ (ತನ್ನ ಗುರುಗಳೆಂದು ಪ್ರಸಿದ್ಧರಾದ ಅಂಗೀರಸರ ಮಗನೆಂಬ ಕಾರಣಕ್ಕಾಗಿ) **ಸರ್ವಭೂತಗಣಾವೃತಃ** ಸರ್ವಭೂತಗಣ ಸಹಿತರಾಗಿ, **ಜಗ್ರಹೇ** ಬೃಹಸ್ಪತಿಯ ಪಕ್ಷವನ್ನು ರಕ್ಷಿಸಲು ಅಂಗೀಕರಿಸಿದನು.

**ತಾತ್ಪರ್ಯ-** ದೈತ್ಯಸಹಿತರಾದ ಶುಕ್ರಾಚಾರ್ಯರು ಬೃಹಸ್ಪತ್ಯಾಚಾರ್ಯರಲ್ಲಿ-ರುವ ದ್ವೇಷದಿಂದ ಶರಣಾಗತನಾದ ಚಂದ್ರನನ್ನು ರಕ್ಷಿಸಲು ಚಂದ್ರನ ಪಕ್ಷವನ್ನು ಹಿಡಿದರು. ಸರ್ವಭೂತಗಣಗಳಿಂದ ಸಹಿತನಾದ ಈಶ್ವರನು ತನ್ನ ಗುರುಗಳಾದ ಅಂಗೀರಸರ ಮಕ್ಕಳಾದ್ದರಿಂದ ಬೃಹಸ್ಪತ್ಯಾಚಾರ್ಯರನ್ನು ರಕ್ಷಿಸಲು ಅಂಗೀಕರಿಸಿದನು. ।।೬।।

**ಸರ್ವದೇವಗಣೋಪೇತೋ ಮಹೇಂದ್ರೋ ಗುರುಮನ್ವಯಾತ್ ।**
**ಸುರಾಸುರವಿನಾಶೋಽಭೂತ್ಸಮರಸ್ತಾರಕಾಮಯಃ ।।೭।।**

**ಸರ್ವದೇವಗಣೋಪೇತಃ** ಸಕಲ ದೇವತೆಗಳಿಂದ ಸಹಿತನಾದ, **ಮಹೇಂದ್ರಃ** ದೇವೇಂದ್ರನು, **ಗುರುಂ** ಬೃಹಸ್ಪತಿಗಳನ್ನು **ಅನ್ವಯಾತ್** ಅನುಸರಿಸಿದನು. **ತಾರಕಾಮಯಃ** ತಾರಾಕಾರಣವಾದ, **ಸುರಾಸುರವಿನಾಶಃ** ದೇವಾಸುರರ ವಿನಾಶ ಕಾರಣವಾದ, **ಸಮರಃ** ಯುದ್ಧವು **ಅಭೂತ್** ಉಂಟಾಯಿತು.

**ತಾತ್ಪರ್ಯ-** ಸಕಲ ದೇವತಾಗಣಗಳಿಂದ ಸಹಿತನಾದ ದೇವೇಂದ್ರನು ಬೃಹಸ್ಪತ್ಯಾಚಾರ್ಯರನ್ನು ಅನುಸರಿಸಿದನು. ತಾರಾದೇವಿಯ ಕಾರಣವಾಗಿ ದೇವಾಸುರರ ವಿನಾಶಕಾರಣವಾದ ಯುದ್ಧವು ಉಂಟಾಯಿತು. ।।೭।।

**ನಿವೇದಿತೋಽಥಾಂಗಿರಸಾ ಸೋಮಂ ನಿರ್ಭರ್ತ್ಸ್ಯ ವಿಶ್ವಕೃತ್ ।**
**ತಾರಾಂ ಸ್ವಭರ್ತ್ರೇ ಪ್ರಾಯಚ್ಛದಂತರ್ವತ್ನೀಂ ಬೃಹಸ್ಪತಿಃ ।।೮।।**

**ವಿಶ್ವಕೃತ್** ಸೃಷ್ಟಿಕರ್ತೃನಾದ, **ಅಜಃ** ಬ್ರಹ್ಮನು, **ಅಂಗಿರಸಾ** ಅಂಗೀರಸರಿಂದ, **ನಿವೇದಿತಃ** ಪ್ರಾರ್ಥಿತನಾಗಿ, **ಸೋಮಂ** ಚಂದ್ರನನ್ನು **ನಿರ್ಭರ್ತ್ಸ್ಯ** ಭೀತಿಗೊಳಿಸಿ **ಅಂತರ್ವತ್ನೀಂ** ಗರ್ಭಿಣಿಯಾದ **ತಾರಾಂ** ತಾರೆಯನ್ನು, **ಸ್ವಭರ್ತ್ರೇ** ತನ್ನ ಪತಿಯಾದ ಬೃಹಸ್ಪತಿಗಾಗಿ **ಪ್ರಾಯಚ್ಛತ್** ಕೊಡಿಸಿದನು. **ಬೃಹಸ್ಪತಿಃ** ಬೃಹಸ್ಪತಿಯು **(ತಾರಾಂ)** ತಾರೆಯನ್ನು ಕುರಿತು **(ಪ್ರಾಹ)** ಹೇಳಿದನು.

**ತಾತ್ಪರ್ಯ-** ಸೃಷ್ಟಿಕರ್ತನಾದ ಬ್ರಹ್ಮನನ್ನು ಅಂಗೀರಸರು ಪ್ರಾರ್ಥಿಸಿದರು. ಬ್ರಹ್ಮನು ಚಂದ್ರನನ್ನು ಭಯಪಡಿಸಿ, ಗರ್ಭಿಣಿಯಾದ ತಾರೆಯನ್ನು ಅವಳ ಪತಿಯಾದ ಬೃಹಸ್ಪತ್ಯಾಚಾರ್ಯರಿಗೆ ಕೊಡಿಸಿದನು. ||೮||

**ತ್ಯಜ ತ್ಯಜಾಶು ದುಃಪ್ರಜ್ಞೇ ಮತ್ಕ್ಷೇತ್ರಾದಾಹಿತಂ ಪರೈಃ |**
**ನಾಹಂ ತ್ವಂ ಭಸ್ಮಸಾತ್ಕುರ್ಯಾಂ ಸ್ತ್ರಿಯಂ ಸಾಂತಾನಿಕೇಽಸತಿ ||೯||**

**ಹೇ ದುಃಪ್ರಜ್ಞೇ!** ದುಷ್ಟಮತಿಯೇ! **ಹೇ ಸಾಂತಾನಿಕೇ** ದುಷ್ಟಸಂತಾನ ಉಳ್ಳವಳೇ! **ಅಸತಿ** ಸ್ವೈರಿಣಿಯೇ! **ಪರೈಃ** ಬೇರೆಯವರಿಂದ **ಆಹಿತಂ** ಇಡಲ್ಪಟ್ಟ ಗರ್ಭವನ್ನು, **ಮತ್ಕ್ಷೇತ್ರಾತ್** ಈ ನಿನ್ನ ಉದರದಿಂದ, **ಆಶು** ಜಾಗ್ರತೆಯಾಗಿ **ತ್ಯಜ ತ್ಯಜ** ತ್ಯಜಿಸು. **ಅಹಂ** ನಾನು **ಸ್ತ್ರಿಯಂ** ಸ್ತ್ರೀಯಾಗಿರುವ **ತ್ವಾಂ** ನಿನ್ನನ್ನು **ಭಸ್ಮಸಾತ್** ಬೂದಿಯನ್ನಾಗಿ, **ನ ಕುರ್ಯಾಂ** ಮಾಡುವುದಿಲ್ಲ ಎಂದು ಆಕ್ರೋಶದಿಂದ ಹೇಳಿದರು.

**ತಾತ್ಪರ್ಯ-** ದುರ್ಮತಿಯೇ ದುಷ್ಟಸಂತಾನ ಉಳ್ಳವಳೇ ಸ್ವೈರಿಣಿಯೇ, ಬೇರೆಯವರಿಂದ ಇಡಲ್ಪಟ್ಟ ಗರ್ಭವನ್ನು ನಿನ್ನ ಉದರದಿಂದ ಜಾಗ್ರತೆಯಾಗಿ ತ್ಯಾಗಮಾಡು ಎಂದು ಆಕ್ರೋಶದಿಂದ ಹೇಳಿದರು. ನೀನು ಸ್ತ್ರೀಯಾದ್ದರಿಂದ ನಾನು ನಿನ್ನನ್ನು ಭಸ್ಮ ಮಾಡುವುದಿಲ್ಲ. ||೯||

ಚಂದ್ರನು ಒಬ್ಬನಾದ್ದರಿಂದ ಪರೇಣ ಆಹೃತಂ ಎನ್ನುವಲ್ಲಿ ಪರೈಃ ಎಂದದ್ದು ಸ್ತ್ರೀಯರಲ್ಲಿ ವಿಶ್ವಾಸ ಹೋದಾಗ ಅನೇಕ ಸಂಶಯ ಬರುವದೆಂಬ ಲೋಕನೀತಿಯನ್ನು ಸೂಚಿಸಲು ಎಂದು ತಿಳಿಯಬೇಕು. **ಗರ್ಭಂ ತ್ಯಜ** ಎಂದು ಪಾಠಾಂತರವಿದೆ. ತ್ಯಜ ತ್ಯಜ ಎಂಬ ಪಾಠದಲ್ಲಿ ಆಕ್ರೋಶದಿಂದ ಎರಡು ಸಲ ಹೇಳಿದ್ದೆಂದು ತಿಳಿಯಬೇಕು ಗರ್ಭ ಇರುವುದರಿಂದ ಬಿಟ್ಟಿರುವೆನು. ಗರ್ಭವನ್ನು ತ್ಯಾಗಮಾಡಿದರೆ ಕೊಲ್ಲುವೆನೆಂಬ ಭಯಬೇಡ ಎಂದು ಸ್ತ್ರಿಯಂ ನ ಭಸ್ಮಸಾತ್ ಕುರ್ಯಾಮ್ ಎಂದು ಬೃಹಸ್ಪತಿಗಳು ಹೇಳಿದರು. ||೯||

**ತತ್ಯಾಜ ವ್ರೀಡಿತಾ ತಾರಾ ಕುಮಾರಂ ಕನಕಪ್ರಭಮ್ |**
**ತಸ್ಯಾಂ ಜಜ್ಞೇ ದಸ್ಯುಹಂತಾ ಕುಮಾರಃ ಕನಕಪ್ರಭಃ ||೧೦||**

**ವ್ರೀಡಿತಾ** ನಾಚಿಕೆಗೊಂಡ, **ತಾರಾ** ತಾರೆಯು **ಕನಕಪ್ರಭಂ** ಸುವರ್ಣಕಾಂತಿಯುಳ್ಳ, **ಕುಮಾರಂ** ಮಗನನ್ನು **ತತ್ಯಾಜ** ಪ್ರಸವಿಸಿದಳು. (ಪಾರ್ವತಿಯು, **ಕನಕಪ್ರಭಂ** ಸುವರ್ಣದ ಕಾಂತಿಯುಳ್ಳ, **ಕುಮಾರಂ ಇವ** ಷಣ್ಮುಖನನ್ನು ಪಡೆದಂತೆ) **ತಸ್ಯಾಂ** ಆ ತಾರೆಯಲ್ಲಿ **ದಸ್ಯುಹಂತಾ** ಕಳ್ಳರನ್ನು ನಾಶಮಾಡುವ **ಕುಮಾರಃ** ಪುತ್ರನು **ಜಜ್ಞೇ** ಜನಿಸಿದನು.

**ತಾತ್ಪರ್ಯ-** ನಾಚಿಕೆಗೊಂಡ ಆ ತಾರೆಯು ಪಾರ್ವತಿಯು ಷಣ್ಮುಖನನ್ನು ಪಡೆದಂತೆ ಸುವರ್ಣದಂತೆ ವರ್ಣಉಳ್ಳ ಶತ್ರುಸಂಹಾರಕನಾದ ಕುಮಾರನನ್ನು ಹೆತ್ತಳು. ॥೧೦॥

**ಸ್ಪೃಹಾಮಾಂಗಿರಸಶ್ಚಕ್ರೇ ಕುಮಾರೇ ಸೋಮ ಏವ ಚ ।**
**ಮಮಾಯಂ ನ ತವೇತ್ಯುಚ್ಚೈಸ್ತಸ್ಮಿನ್ವಿವದಮಾನಯೋಃ ॥೧೧॥**

**ಆಂಗಿರಸಃ** ಬೃಹಸ್ಪತಿಗಳು ಮತ್ತು **ಸೋಮ ಏವ** ಚಂದ್ರನೂ ಸಹ, **ಕುಮಾರೇ** ಮಗನಲ್ಲಿ, **ಸ್ಪೃಹಾಂ** ಅಪೇಕ್ಷೆಯನ್ನು **ಚಕ್ರೇ** ಮಾಡಿದರು. **ಅಯಂ** ಈ ಮಗುವು **ಮಮ** ನನ್ನದು, **ತವ** ನಿನ್ನದು **ನ** ಅಲ್ಲವು, **ಇತಿ** ಈ ರೀತಿಯಾಗಿ **ತಸ್ಮಿನ್** ಆ ಮಗುವಿನ ವಿಷಯದಲ್ಲಿ **ಉಚ್ಚೈಃ** ಪ್ರಬಲವಾಗಿ **ವಿವದಮಾನಯೋಃ** ವಿವಾದ ಮಾಡುತ್ತಿರಲು

**ಪಪ್ರಚ್ಛುರ್ಋಷಯೋ ದೇವಾ ನೈವೋಚೇ ವ್ರೀಡಿತಾ ಚ ಸಾ ।**
**ಕುಮಾರೋ ಮಾತರಂ ಪ್ರಾಹ ಕುಪಿತೋऽಲೀಕಲಜ್ಜಯಾ ॥೧೨॥**

**ಋಷಯಃ** ಋಷಿಗಳು **ದೇವಾಃ** ದೇವತೆಗಳು, **ಪಪ್ರಚ್ಛುಃ** ತಾರೆಯನ್ನು (ಇವನು ಯಾರ ಮಗನೆಂದು) ಕೇಳಿದರು. **ಸಾ** ಆ ತಾರೆಯು, **ವ್ರೀಡಿತಾ** ಲಜ್ಜಿತಳಾಗಿ, **ನೈವ ಊಚೇ** ಏನೂ ಹೇಳಲಿಲ್ಲ. **ಕುಪಿತಃ** ಕುಪಿತನಾದ **ಕುಮಾರಃ** ಆ ಮಗನು, **ಅಲೀಕಲಜ್ಜಯಾ** ನಿಜವನ್ನು ಹೇಳಿದರೆ ರಹಸ್ಯವಾದ ಅಕಾರ್ಯವು ಬಯಲಾಗಿ ತಾನು ಅಪ್ರಿಯಳಾಗುವೆನೆಂಬ ಲಜ್ಜೆಯಿಂದ, **ಮಾತರಂ** ತಾಯಿಯನ್ನು ಕುರಿತು **ಪ್ರಾಹ** ಹೇಳಿದನು.

**ತಾತ್ಪರ್ಯ-** ಋಷಿಗಳು ದೇವತೆಗಳು ತಾರೆಯನ್ನು ಇವನು ಯಾರ ಮಗನು? ಎಂದು ಕೇಳಿದರು. ಆ ತಾರೆಯು ಲಜ್ಜಿತಳಾಗಿ ಏನೂ ಹೇಳಲಿಲ್ಲ. ಕುಪಿತನಾದ ಆ ಮಗನು ತಾಯಿಯನ್ನು ಕುರಿತು ಹೇಳಿದನು. ॥೧೨॥

**ಕಿಂ ನ ವೋಚಸ್ಯಸದ್ವೃತ್ತೇ ಪಿತರಂ ಮೇ ವದಾಶು ವೈ ।**
**ನ ತ್ವಾಂ ತು ಭಸ್ಮಸಾತ್ಕುರ್ಯಾಮಾತ್ಮಾವದ್ಯವಿಗೂಹಿನೀಮ್ ॥೧೩॥**

**ಅಸದ್ವೃತ್ತೇ** ದುರಾಚಾರಿಣಿಯೇ! **ಕಿಂ** ಏನು ಕಾರಣ, **ನ ವೋಚಸಿ** ಮಾತನಾಡುವುದಿಲ್ಲ. **ಆತ್ಮಾವದ್ಯವಿಗೂಹಿನೀಂ** ನಿನ್ನ ದೋಷವನ್ನು ಮರೆ ಮಾಡುತ್ತಿರುವ, **ತ್ವಾಂ** ನಿನ್ನನ್ನು **ಭಸ್ಮಸಾತ್** ಬೂದಿಯಾಗಿ, **ಯಾವತ್** ಯಾವಾಗ, **ನ ಕುರ್ಯಾಂ** ಮಾಡುವುದಿಲ್ಲವೋ, **ತಾವತ್** ಅಷ್ಟರೊಳಗೆ **ಆಶು** ಜಾಗ್ರತೆಯಾಗಿ, **ಮೇ** ನನಗೆ **ಪಿತರಂ** ತಂದೆಯನ್ನು, **ವದ** ಹೇಳು ಎಂದು ಕೇಳಿದನು.

**ತಾತ್ಪರ್ಯ-** ಕುಮಾರನು ಕೇಳುತ್ತಾನೆ. ಹೇ! ದುರಾಚಾರಿಣಿಯೇ! ಏನು ಕಾರಣ ಮಾತನಾಡುವುದಿಲ್ಲ. ಜಾಗ್ರತೆಯಾಗಿ ನನಗೆ ತಂದೆ ಯಾರು? ಎನ್ನುವುದನ್ನು ಹೇಳು. ನಿನ್ನ ದೋಷವನ್ನು ಮರೆ ಮಾಡಿಕೊಳ್ಳುತ್ತಿರುವ ನಿನ್ನನ್ನು ನಾನು ಭಸ್ಮ ಮಾಡುವುದರೊಳಗೇ ನನಗೆ ಈ ವೃತ್ತಾಂತವನ್ನು ಹೇಳು ಎಂದನು.

**ಬ್ರಹ್ಮಾ ತಂ ತು ವಿನಿರ್ಭರ್ತ್ಸ್ಯ ಕ್ಷೇಪ್ತಾರಂ ಮಾತುರಂತಿಕೇ ।**
**ತಾಮಾಹೂಯ ಸಮಪ್ರಾಕ್ಷೀದ್ರಹ ಏವ ತು ಸಾಂತ್ವಯಾ ॥೧೪॥**

**ಬ್ರಹ್ಮಾ** ಬ್ರಹ್ಮನು **ಮಾತುಃ** ತಾಯಿಯ, **ಅಂತಿಕೇ** ಸಮೀಪದಲ್ಲಿ, **ಕ್ಷೇಪ್ತಾರಂ** ಆಕ್ಷೇಪಿಸುತ್ತಿರುವ, **ತಂ ತು** ಆ ಮಗನನ್ನು **ವಿನಿರ್ಭರ್ತ್ಸ್ಯ** ನಿಂದಿಸಿ, **ತಾಂ** ಆ ತಾರೆಯನ್ನು, **ಆಹೂಯ** ಕರೆದು, **ರಹಃ ಏವ** ರಹಸ್ಯದಲ್ಲಿಯೇ **ಸಾಂತ್ವಯಾ ತು** ಸಮಾಧಾನ ಮಾತಿನಿಂದಲೇ, **ಸಮಪ್ರಾಕ್ಷೀತ್** ಕೇಳಿದನು.

**ತಾತ್ಪರ್ಯ-** ಬ್ರಹ್ಮನು ತಾಯಿಯ ಹತ್ತಿರ ಆಕ್ಷೇಪಿಸುತ್ತಿರುವ ಆ ಮಗನನ್ನು ನಿಂದಿಸಿ ಆ ತಾರೆಯನ್ನು ರಹಸ್ಯದಲ್ಲಿ ಕರೆದು ಸಮಾಧಾನ ಮಾತಿನಿಂದ ಕೇಳಿದನು.

**ಸೋಮಸ್ಯೇತ್ಯಾಹ ಶನಕೈಃ ಸೋಮಸ್ತಂ ತಾವದಗ್ರಹೀತ್ ।**
**ತಸ್ಯಾತ್ಮಯೋನಿರಕೃತ ಬುಧ ಇತ್ಯಭಿಧಾಂ ನೃಪ ॥೧೫॥**

**ನೃಪ** ರಾಜನೇ ! **ಸಾ** ಆ ತಾರೆಯು, **ಶನಕೈಃ** ಮೆಲ್ಲಗೆ, **ಸೋಮಸ್ಯ** ಚಂದ್ರನ ಮಗನು ಇವನು, **ಇತಿ** ಹೀಗೆಂದು **ಆಹ** ಹೇಳಿದಳು. **ಸೋಮಃ** ಚಂದ್ರನು, **ತಾವತ್** ಆಗ **ತಂ** ಅವನನ್ನು **ಅಗ್ರಹೀತ್** ಕರೆದುಕೊಂಡನು. **ಆತ್ಮಯೋನಿಃ** ಬ್ರಹ್ಮನು, **ತಸ್ಯ** ಆ ಮಗುವಿಗೆ **ಗಂಭೀರಯಾ** ಗಂಭೀರವಾದ, **ಬುದ್ಧ್ಯಾ** ಬುದ್ಧಿಯಿಂದ **ಬುಧ ಇತಿ** ಬುಧನೆಂದು **ಅಭಿಧಾಂ** ಹೆಸರನ್ನು **ಅಕೃತ** ಇಟ್ಟನು.

**ತಾತ್ಪರ್ಯ-** ರಾಜನೇ ! ಆ ತಾರೆಯು ಮೆಲ್ಲಗೆ ಈ ಮಗುವು ಚಂದ್ರನಿಗೆ ಸಂಬಂಧಿಸಿದ್ದೆಂದು ಹೇಳಿದಳು. ಆಗ್ಗೆ ಚಂದ್ರನು ಆ ಕುಮಾರನನ್ನು ಸ್ವೀಕರಿಸಿದನು. ಬ್ರಹ್ಮನು ಗಂಭೀರ ಬುದ್ಧಿಯನ್ನು ಅನುಸರಿಸಿ, ಈ ಮಗುವಿಗೆ ಬುಧನೆಂದು ನಾಮಕರಣವನ್ನು ಮಾಡಿದನು. ॥೧೫॥

**ಬುದ್ಧ್ಯಾ ಗಂಭೀರಯಾ ಯೇನ ಪುತ್ರೇಣಾಪೋಡುರಾಣ್ಮುದಾ ।**
**ತತಃ ಪುರೂರವಾ ಜಜ್ಞೇ ಇಲಾಯಾಂ ಯ ಉದಾಹೃತಃ ॥೧೬॥**

**ಉಡುರಾಟ್** ಚಂದ್ರನು, **ಯೇನ** ಯಾವ ಈ ಕುಮಾರನಿಂದ **ಗಂಭೀರಯಾ** ಗಂಭೀರವಾದ, **ಬುದ್ಧ್ಯಾ** ಬುದ್ಧಿಯಿಂದ, **ಮುದಂ** ಸಂತೋಷವನ್ನು **ಆಪ** ಹೊಂದಿದನೋ, ಈ ಕಾರಣದಿಂದ, ಬುಧ ಎಂದು ನಾಮಕರಣ ಮಾಡಿದನು. **ತತಃ** ಈ ಬುಧನ ದೆಶೆಯಿಂದ **ಉದಾಹೃತಃ** ಹಿಂದೆ ಹೇಳಲ್ಪಟ್ಟ **ಪುರೂರವಾಃ** ಪುರೂರವ ಎಂಬುವನು **ಇಲಾಯಾಂ** ಇಲಾ ಎಂಬುವಳಲ್ಲಿ, **ಜಜ್ಞೇ** ಜನಿಸಿದನು.

**ತಾತ್ಪರ್ಯ-** ಚಂದ್ರನು ಗಂಭೀರವಾದ ಬುದ್ಧಿ ಇರುವ ಈ ಬಾಲಕನಿಂದ ಸಂತೋಷವನ್ನು ಹೊಂದಿದನು. ಈ ಕಾರಣದಿಂದಾಗಿ ಜನಿಸಿದ ಈ ಮಗುವಿಗೆ ಬುಧ ಎಂದು ನಾಮಕರಣ ಮಾಡಿದರು. ಈ ಬುಧನಿಂದ ಹಿಂದೆ ಹೇಳಲ್ಪಟ್ಟ ಪುರೂರವ ಎಂಬುವನು ಇಲೆಯಲ್ಲಿ ಜನಿಸಿದನು. ॥೧೬॥

**ತಸ್ಯ ರೂಪಗುಣೌದಾರ್ಯಶೀಲದ್ರವಿಣವಿಕ್ರಮಾನ್ ।**
**ಶ್ರುತ್ವೋರ್ವಶೀಂದ್ರಭವನೇ ಗೀಯಮಾನಾನ್ಸುರರ್ಷಿಣಾ ॥೧೭॥**

**ಊರ್ವಶೀ** ಊರ್ವಶಿಯು **ತಸ್ಯ** ಈ ಪುರೂರವಸನ, **ರೂಪಗುಣೌದಾರ್ಯ-ಶೀಲದ್ರವಿಣವಿಕ್ರಮಾನ್** ರೂಪ, ಗುಣ, ಔದಾರ್ಯ, ನಡತೆ ಸಂಪತ್ತು, ಪರಾಕ್ರಮಗಳನ್ನು **ಇಂದ್ರಭವನೇ** ಇಂದ್ರನ ಮನೆಯಲ್ಲಿ, **ಸುರರ್ಷಿಣಾ** ನಾರದರಿಂದ, **ಗೀಯಮಾನಾನ್** ಗಾನ ಮಾಡುತ್ತಿರುವುದನ್ನು, **ಶ್ರುತ್ವಾ** ಕೇಳಿ,

**ತಾತ್ಪರ್ಯ-** ಊರ್ವಶಿಯು ಈ ಪುರೂರವಸನ ರೂಪ, ಗುಣ, ಔದಾರ್ಯ, ನಡತೆ, ಸಂಪತ್ತು ಪರಾಕ್ರಮಗಳನ್ನು ಇಂದ್ರಭವನದಲ್ಲಿ ನಾರದರು ಗಾನ ಮಾಡುತ್ತಿರುವುದನ್ನು ಕೇಳಿ. ॥೧೭॥

**ತದಂತಿಕಮುಪೇಯಾಯ ದೇವೀ ಸ್ಮರಶರಾರ್ದಿತಾ ।**
**ಮಿತ್ರಾವರುಣಯೋಃ ಶಾಪಾದಾಪನ್ನಾ ನರಲೋಕತಾಮ್ ॥೧೮॥**

**ಸ್ಮರಶರಾರ್ದಿತಾ** ಮನ್ಮಥನ ಬಾಣಪೀಡಿತಳಾದ, **ದೇವೀ** ಊರ್ವಶಿಯು, **ತದಂತಿಕಂ** ಪೂರೂರವಸನ ಹತ್ತಿರ, **ಉಪೇಯಾಯ** ಬಂದು ಸೇರಿದಳು, ಕಾರಣ-ವೇನೆಂದರೆ **ಮಿತ್ರಾವರುಣಯೋಃ** ಮಿತ್ರಾವರುಣರುಗಳ, **ಶಾಪಾತ್** ಶಾಪದ ದೆಶೆಯಿಂದ, **ನರಲೋಕತಾಂ** ಮನುಷ್ಯಸಂಗಯೋಗ್ಯ ಶರೀರವನ್ನು **ಆಪನ್ನಾ** ಹೊಂದಿದಳು.

**ತಾತ್ಪರ್ಯ-** ಮನ್ಮಥನ ಬಾಣದಿಂದ ಪೀಡಿತಳಾದ ಆ ಊರ್ವಶಿಯು

ಮಿತ್ರಾವರುಣರ ಶಾಪದಿಂದ ಮಾನವ ಲೋಕಕ್ಕೆ ಬಂದು ಈ ಪುರೂರವಸನ ಸಮೀಪಕ್ಕೆ ಬಂದಳು.

ಇಲ್ಲಿ ಊರ್ವಶಿಗೆ ಮಿತ್ರಾವರುಣರಿಬ್ಬರೂ ಶಾಪ ಕೊಡಲಿಲ್ಲ. ಕಿಂತು ಇವರಿಬ್ಬರಲ್ಲಿ ಮಿತ್ರರೆಂಬುವರೇ ಶಾಪಕೊಟ್ಟರು. ಈ ವಿಷಯಕ್ಕೆ ರಾಮಾಯಣ ಪ್ರಮಾಣವೇನೆಂದರೆಃ-

ತಾಂ ತು ಮಿತ್ರಃ ಸುಸಂಕ್ರುದ್ಧ ಊರ್ವಶೀಮಿದಮಬ್ರವೀತ್ ।
ಮಯಾಽಭಿಮಂತ್ರಿತಾ ಪೂರ್ವಂ ಕಸ್ಮಾತ್ ತ್ವಮವಸರ್ಜಿತಾ

ಪತಿಮನ್ಯಂ ವೃತವತೀ ಕಿಮರ್ಥಂ ದುಷ್ಟಚಾರಿಣೀ ।
ಅನೇನ ದುಷ್ಕೃತೇನ ತ್ವಂ ಮತ್ಕ್ರೋಧಕಲುಷೀಕೃತಾ ॥

ಮನುಷ್ಯಲೋಕಮಾಸ್ಥಾಯ ಕಂಚಿತ್ಕಾಲಂ ನಿವತ್ಸ್ಯಸಿ
ಬುಧಸ್ಯ ಪುತ್ರೋ ರಾಜರ್ಷಿಃ ಕಾಶಿರಾಜಃ ಪುರೂರವಾಃ

ತಮಭ್ಯಾಗಚ್ಛ ದುರ್ಬುದ್ಧೇ ಸ ತೇ ಭರ್ತಾ ಭವಿಷ್ಯತಿ ॥ ಇತಿ ತಥಾಪಿ

ತಮೇವ ಕಾಲಂ ಮಿತ್ರೋಽಪಿ ವರುಣತ್ವಮಕಾರಯತ್ ।
ಕ್ಷೀರೋದೇನ ಸಹೋಪೇತಃ ಪೂಜ್ಯಮಾನಃ ಸುರೇಶ್ವರೈಃ ॥ ಇತಿ ತತ್ರೈವೋಕ್ತೇಃ ।

ಮಿತ್ರನು ಕೋಪಗೊಂಡು, ಊರ್ವಶಿಯನ್ನು ಕುರಿತು ಹೇಳಿದನು. ಹೇ! ದುರಾಚಾರಿಣಿಯೇ! ಪೂರ್ವದಲ್ಲಿ ನನ್ನನ್ನು ಹೊಂದದೇ ನೀನು ಈಗ ಬೇರೆಯವರನ್ನು ಹೊಂದಲು ಕಾರಣವೇನು? ಈ ದುಷ್ಕರ್ಮದಿಂದ, ನೀನು ನನ್ನ ಕ್ರೋಧಕ್ಕೆ ಪಾತ್ರಳಾಗಿದ್ದೀಯೇ. ನೀನು ಕೆಲವು ಕಾಲ ಮಾನವ ಲೋಕದಲ್ಲಿ ಜನಿಸಿ, ಬುಧಪುತ್ರನಾದ ರಾಜಋಷಿಯಾದ ಪುರೂರವನೆಂಬ ಕಾಶೀರಾಜನನ್ನು ಹೊಂದು. ಅವನು ನಿನಗೆ ಪತಿಯಾಗುತ್ತಾನೆ, ಎಂದು ಇರುತ್ತದೆ. ಆದರೂ ಅದೇ ಕಾಲ ಮಿತ್ರನು ವರುಣತ್ವವನ್ನು ಹೊಂದಿದನು. ಆದ್ದರಿಂದ ಇವರಿಬ್ಬರೂ ಶಾಪಕೊಟ್ಟರು ಎನ್ನುವುದೂ ಕೂಡುತ್ತದೆ.

ಇಲ್ಲಿ ಪುರಾಣಾಂತರ ವಾಕ್ಯವು ಈ ರೀತಿ ಇದೆ.

ಮಿತ್ರಶ್ಚ ವರುಣಶ್ಚೈವ ದೀಕ್ಷಿತೌ ಪ್ರೇಕ್ಷ್ಯ ಚೋರ್ವಶೀಮ್ ।
ರೇತಃ ಸಿಷಿಚತುಃ ಸದ್ಯಸ್ತತ್ಕುಂಭೇ ನ್ಯಧದುಸ್ತದಾ
ತಾಂ ಶಪ್ತವಂತೌ ಮನುಜಭೋಗ್ಯಾ ಭೂಮ್ಯಾಂ ಭವೇತಿ ತೌ ॥ ಇತಿ ।

ಮಿತ್ರ ಮತ್ತು ವರುಣರು ದೀಕ್ಷಿತರಾಗಿದ್ದಾಗ ಊರ್ವಶಿಯನ್ನು ನೋಡಿ ರೇತಸ್ಸನ್ನು ವಿಸರ್ಜಿಸಿದರು. ಮತ್ತು ಆ ವೀರ್ಯವನ್ನು ಕುಂಭದಲ್ಲಿ ಇಟ್ಟು ಅವಳನ್ನು ನೀನು ಭೂಮಿಯಲ್ಲಿ ಹುಟ್ಟು. ಮತ್ತೆ ಮನುಷ್ಯಭೋಗ್ಯಳಾಗು. ಎಂದು ಶಪಿಸಿದರು. ಕಾರಣ ಇಬ್ಬರ ಶಾಪದಿಂದ ಎಂದದ್ದು ಯುಕ್ತವು. ಇದೇ ವಿಷಯದಲ್ಲಿ ಹರಿವಂಶದಲ್ಲಿ ಬ್ರಹ್ಮದೇವರು ಊರ್ವಶಿಗೆ ಕೊಟ್ಟ ಶಾಪವೂ ಸಹ ಅವಳು ಮನುಷ್ಯದೇಹ ಪಡೆಯಲು ಕಾರಣವಾಯಿತೆಂದು ಹೇಳಿದೆ.

ದೇವಾನುತ್ಸೃಜ್ಯ ಸಂಪ್ರಾಪ್ತಾ ತನ್ಮೇ ಬ್ರೂಹಿ ಬಹುಶ್ರುತ ।
ಬ್ರಹ್ಮಶಾಪಾಭಿಭೂತಾ ಸಾ ಮಾನುಷಂ ಸಮುಪಸ್ಥಿತಾ ॥ ಇತಿಹರಿವಂಶೇ

**ನಿಶಮ್ಯ ಪುರುಷಶ್ರೇಷ್ಠಂ ಕಂದರ್ಪಮಿವ ರೂಪಿಣಮ್ ।**
**ಧೃತಿಂ ವಿಹಾಯ ಲಲನಾ ಉಪತಸ್ಥೇ ತದಂತಿಕಮ್ ॥೧೯॥**

**ಲಲನಾ** ಊರ್ವಶಿಯು **ಕಂದರ್ಪಂ ಇವ** ಮನ್ಮಥನಂತೆ, **ರೂಪಿಣಂ** ರೂಪವಂತನಾದ, **ಪುರುಷಶ್ರೇಷ್ಠಂ** ರಾಜನನ್ನು, **ನಿಶಮ್ಯ** ನೋಡಿ, **ಧೃತಿಂ** ಸ್ಥೈರ್ಯವನ್ನು, **ವಿಹಾಯ** ಬಿಟ್ಟು **ತದಂತಿಕಂ** ಆ ಪುರೂರವಸನ ಸಮೀಪವನ್ನು **ಉಪತಸ್ಥೇ** ಹೊಂದಿದಳು.

**ತಾತ್ಪರ್ಯ–** ಆ ಊರ್ವಶಿಯು ಮನ್ಮಥನಂತೆ ರೂಪವಂತನಾದ ಪುರೂರವಸನನ್ನು ನೋಡಿ ಸ್ಥೈರ್ಯವನ್ನು ಬಿಟ್ಟು ಆ ರಾಜನ ಸಮೀಪಕ್ಕೆ ಬಂದು ಸೇರಿದಳು.

**ಸ ತಾಂ ವಿಲೋಕ್ಯ ನೃಪತಿರ್ಹರ್ಷೇಣೋತ್ಫುಲ್ಲಲೋಚನಃ ।**
**ಉವಾಚ ಶ್ಲಕ್ಷ್ಣಯಾ ವಾಚಾ ದೇವೀಂ ಹೃಷ್ಟತನೂರುಹಃ ॥೨೦॥**

**ಸಃ** ಆ **ನೃಪತಿಃ** ರಾಜನು, **ತಾಂ** ಆ ಊರ್ವಶಿಯನ್ನು, **ವಿಲೋಕ್ಯ** ನೋಡಿ, **ಹರ್ಷೇಣ** ಸಂತೋಷದಿಂದ, **ಉತ್ಫುಲ್ಲಲೋಚನಃ** ವಿಕಸಿತವಾದ ಕಣ್ಣುಗಳುಳ್ಳವನಾಗಿ, **ಹೃಷ್ಟತನೂರುಹಃ** ರೋಮಾಂಚಿತನಾಗಿ, **ಶ್ಲಕ್ಷ್ಣಯಾ** ಮೃದುವಾದ, **ವಾಚಾ** ಮಾತಿನಿಂದ **ದೇವೀಂ** ಊರ್ವಶಿಯನ್ನು ಕುರಿತು **ಉವಾಚ** ಹೇಳಿದನು.

**ತಾತ್ಪರ್ಯ–** ಆ ಪುರೂರವರಾಜನು ಊರ್ವಶಿಯನ್ನು ನೋಡಿ ಸಂತೋಷದಿಂದ ಅರಳಿದ ಕಣ್ಣುಗಳುಳ್ಳವನಾಗಿ ರೋಮಾಂಚಿತನಾಗಿ ಮಧುರವಾಣಿಯಿಂದ ಊರ್ವಶಿಯನ್ನು ಕುರಿತು ಹೇಳಿದನು. ॥೨೦॥

**ರಾಜೋವಾಚ–**

**ಸ್ವಾಗತಂ ತೇ ವರಾರೋಹೇ ಆಸ್ಯತಾಂ ಕರವಾಮ ಕಿಮ್ ।**
**ಸಂರಮಸ್ವ ಮಯಾ ಸಾಕಂ ರತಿರ್ನೌ ಶಾಶ್ವತೀಃ ಸಮಾಃ ॥೨೧॥**

**ವರಾರೋಹೇ!** ಹೇ ಮಂಗಳಕರಳೇ!, **ತೇ** ನಿನಗೆ, **ಸ್ವಾಗತಂ** ಸ್ವಾಗತವು, **ಆಸ್ಯತಾಂ** ಕುಳಿತುಕೋ, ನಿನಗೆ, **ಕಿಂ** ಏನನ್ನು **ಕರವಾಮ** ಮಾಡೋಣ, **ಮಯಾ** ನನ್ನಿಂದ **ಸಾಕಂ** ಸಹಿತವಾಗಿ **ಸಂರಮಸ್ವ** ರಮಿಸು, **ನೌ** ನಮ್ಮಿಬ್ಬರಿಗೆ **ಶಾಶ್ವತೀಃ** ಶಾಶ್ವತವಾದ, **ಸಮಾಃ** ವರ್ಷವು, **ರತಿಃ** ಸುರತಕ್ರೀಡೆಯು, **ಅಸ್ತು** ಆಗಲಿ.

**ತಾತ್ಪರ್ಯ-** ಹೇ ! ಮಂಗಳಕರೇ! ಇಲ್ಲಿ ಬಾ, ಕುಳಿತುಕೋ, ನಿನಗೆ ಸ್ವಾಗತವಿರಲಿ, ನಿನಗೆ ನನ್ನಿಂದ ಏನು ಆಗಬೇಕು? ನೀನು ನನ್ನೊಂದಿಗೆ ಶಾಶ್ವತ ಕಾಲದವರೆಗೂ ಗ್ರಾಮ್ಯವಿಷಯಸುಖವನ್ನು ಅನುಭವಿಸು. ॥೨೧॥

**ಕಸ್ಯಾಸ್ತ್ವಯಿ ನ ಸಜ್ಜೇತ ಮನೋದೃಷ್ಟಿಶ್ಚ ಸುಂದರ ।**
**ಯದಂಗಾನ್ನ ರಮಾ ಯಾತಿ ಸದೃಷ್ಟೋ ಹರಿರಾಶ್ರಯಃ ॥೨೨॥**

ರಾಜನೇ! **ಸುಂದರ** ಸುಂದರನೇ! **ಕಸ್ಯಾಃ** ಯಾವಳ **ಮನೋದೃಷ್ಟಿಃ** ದೃಷ್ಟಿಯು, ಮನಸ್ಸು, **ತ್ವಯಿ** ನಿನ್ನಲ್ಲಿ **ನ ಸಜ್ಜೇತ** ಹೊಂದದೇ ಇರುತ್ತದೇ (ಹೊಂದುತ್ತದೆ). ಏಕೆಂದರೆಃ- **ರಮಾ** ಲಕ್ಷ್ಮೀದೇವಿಯು, **ಯದಂಗಾತ್** ಯಾರ ಅಂಗದಿಂದ, **ನ ಯಾತಿ** ಬಿಡುವುದಿಲ್ಲವೋ ಅಂಥಾ, **ಹರಿಃ** ಶ್ರೀಹರಿಯು **ತ್ವಯಿ** ನಿನ್ನಲ್ಲಿ **ಆಶ್ರಯಃ** ಸನ್ನಿಹಿತನಾಗಿರುತ್ತಾನೆ.

ನಾನು ಯಾರ ಆಶ್ರಯವಿಲ್ಲವೆಂದು **ನಿರಾಶ್ರಯಾ ನ ಶೋಭಂತೇ ಪಂಡಿತಾ ವನಿತಾ ಲತಾಃ** ಎಂಬ ಉಕ್ತಿಗನುಸಾರ ನಿನ್ನಲ್ಲಿ ಬಂದವಳಲ್ಲ. ಏಕೆಂದರೆ, **ಸಃ ಹರಿಃ** ದೇವೇಂದ್ರನು, **ಆಶ್ರಯೋ ದೃಷ್ಟಃ** ನನಗೆ ಆಶ್ರಯನೆಂದು ಎಲ್ಲರಿಗೂ ತಿಳಿದ ವಿಷಯ ಆದರೂ ಸಹ ತಾತ್ಕಾಲಿಕವಾಗಿ ಪರಮಾತ್ಮನ ಸನ್ನಿಧಾನ ವಿಶೇಷದಿಂದ ಬಂದ ಸೌಂದರ್ಯವಿಶೇಷವು ನಿನ್ನಲ್ಲಿದ್ದ ಪ್ರಯುಕ್ತ ನಾನು ನಿನ್ನೆಡೆಗೆ ಬಂದಿರುವೆನು. **ಹೇ ನರ** ಮನುಷ್ಯೋತ್ತಮನೇ, ನಿನ್ನಲ್ಲಿ **ಮಯಾ** ನನ್ನನ್ನು ಆಕರ್ಷಣ ಮಾಡುವ ಶಕ್ತಿಯು, **ಅತಿ** ವಿಪುಲವಾಗಿ ಇರುತ್ತದೆ. ಆದ್ದರಿಂದ, **ಅಹರಿಃ** ಇಂದ್ರನಿಂದ ಭಿನ್ನನಾಗಿ ಇಂದ್ರನಿಗೆ ಸದೃಶನಾಗಿ ಇರುವ ನೀನು, **ದೃಷ್ಟಃ** ದರ್ಶಿತಃ ನಾರದರಿಂದ ವರ್ಣಿಸಲ್ಪಟ್ಟಿದ್ದರಿಂದ ನೀನೇ ನನ್ನಿಂದ, **ಆಶ್ರಯಃ ದೃಷ್ಟಃ** ಆಶ್ರಯನೆಂದು ನೋಡಲ್ಪಟ್ಟಿರುವೆ.

ಈ ಶ್ಲೋಕದಲ್ಲಿ ಉತ್ತರಾರ್ಧಕ್ಕೆ ಈ ಕೆಳಗಿನಂತೆ ಪಾಠಾಂತರವಿದೆ.

**ಯದಂಗಾಂತರಮಾಸಾದ್ಯ ಚ್ಯವತೇ ಹರಿರಂಸಯಾ ॥೨೨॥**

**ಯತ್** ಯಾವ ಕಾರಣದಿಂದ, **ಅಂಗಾಂತರಂ** ವಕ್ಷಸ್ಥಲವನ್ನು, **ಅಸಾದ್ಯ** ಹೊಂದಿ, **ರಿರಂಸಯಾ** ರಮಿಸಬೇಕೆಂಬ ಅಪೇಕ್ಷೆಯಿಂದ **ಕಸ್ಯಾಃ ಮನಃ** ಯಾವ ಸ್ತ್ರೀಯ

ಮನಸ್ಸು, **ಚ್ಯವತೇ** ಬೇರೆ ಕಡೆಗೆ ಚಲಿಸೀತು? ಚಲಿಸಲಾರದು, **ಹ** ನಿಶ್ಚಯವು. ಇಲ್ಲಿ ಆವೃತ್ತಿಯಿಂದ ಯೋಜಿಸಬೇಕು ಹೇಗೆಂದರೆ,

**ಯತ್** ಯಾವ ಕಾರಣ **ಅಂಗಾಂತರಂ** ನಿನ್ನ ಅಂಗಗಳನ್ನು ಬಿಟ್ಟು ದೇವೇಂದ್ರನ ಅವಯವಾದಿಗಳನ್ನೂ ಸಹ **ರಿರಂಸಯಾ** ರಮಣದ ಇಚ್ಛೆಯಿಂದ, **ಮನಃ** ನನ್ನ ಮನಸ್ಸು **ನ ಚ್ಯವತೇ** ಚಲಿಸುವುದಿಲ್ಲ. ಹೀಗಿರಲು **ಕಸ್ಯಾಃ** ಬೇರೆ ಯಾವ ಸ್ತ್ರೀಯಳ, **ಮನೋದೃಷ್ಟಿಶ್ಚ** ಮನಸ್ಸು ಮತ್ತು ದೃಷ್ಟಿಯು, **ತ್ವಯಿ** ನಿನ್ನಲ್ಲಿ **ನ ಸಜ್ಜೇತ** ಆಸಕ್ತವಾಗರಲಿಕ್ಕಿಲ್ಲ, ಆಗೇ ಆಗುವುದು.

**ತಾತ್ಪರ್ಯ-** ಸುಂದರನೇ! ಯಾವ ಸ್ತ್ರೀಯ ಮನಸ್ಸು ನಿನ್ನಲ್ಲಿ ಹೊಂದದೇ ಇರುತ್ತದೆ? ಏಕೆಂದರೆ ಲಕ್ಷ್ಮೀದೇವಿಯು ಯಾವ ಅಂಗದಿಂದ ಯಾವಾಗಲೂ ಬಿಡುವುದಿಲ್ಲವೋ ಅಂಥಾ ಶ್ರೀಹರಿಯು ನಿನ್ನಲ್ಲಿ ಸನ್ನಿಹಿತನಾಗಿರುತ್ತಾನೆ. ॥೨೨॥

**ಏತಾವುರಣಕೌ ರಾಜನ್ ನ್ಯಸ್ತೌ ರಕ್ಷಸ್ವ ಮಾನದ ।**
**ಸಂರಂಸ್ಯೇ ಭವತಾ ಸಾಕಂ ಶ್ಲಾಘ್ಯಃ ಸ್ತ್ರೀಣಾಂ ವರಃ ಸ್ಮೃತಃ ॥೨೩॥**

**ರಾಜನ್!** ರಾಜನೇ! **ಮಾನದ** ಮಾನ್ಯನೇ, **ಏತೌ** ಈ **ಉರಣಕೌ** ಮೇಷಗಳೆರಡು, **ನ್ಯಸ್ತೌ** ನಿಕ್ಷೇಪವಾಗಿ ನಿನ್ನಲ್ಲಿ ಇಡಲ್ಪಟ್ಟಿವೆ. **ರಕ್ಷಸ್ವ** ರಕ್ಷಿಸು, **ಭವತಾ** ನಿನ್ನಿಂದ, **ಸಾಕಂ** ಕೂಡಿಕೊಂಡು, **ಸಂರಂಸ್ಯೇ** ರತಿಯನ್ನು ಮಾಡುತ್ತೇನೆ. **ಯಃ** ಯಾವಾತನು, **ಶ್ಲಾಘ್ಯಃ** ಮನೋಹರನೋ, **ಸ ಏವ** ಅವನೇ **ಸ್ತ್ರೀಣಾಂ** ಸ್ತ್ರೀಯರಿಗೆ **ವರಃ** ಪತಿ ಎಂದು, **ಸ್ಮೃತಃ** ಹೇಳಲ್ಪಟ್ಟಿರುತ್ತದೆ.

**ತಾತ್ಪರ್ಯ-** ರಾಜನೇ! ಮಾನ್ಯರೇ! ಈ ಎರಡು ಮೇಷ (ಮೇಕೆ)ಗಳನ್ನು ನಿಕ್ಷೇಪವಾಗಿ ನಿನ್ನಲ್ಲಿಟ್ಟಿರುತ್ತೇನೆ. ಇವುಗಳನ್ನು ರಕ್ಷಿಸು. ನಿನ್ನೊಂದಿಗೆ ನಾನು ಬಹುಕಾಲ ರತಿಯನ್ನು ಮಾಡುತ್ತೇನೆ. ಯಾವನು ಮನೋಹರನೋ ಅವನೇ ಸ್ತ್ರೀಯರಿಗೆ ಪತಿ ಎಂದು ಹೇಳಲ್ಪಟ್ಟಿರುತ್ತೆ. ಕಾರಣ ದೇವಸ್ತ್ರೀಯಾದರೂ ನಾನು ನಿನ್ನಲ್ಲಿ ಬಂದಿರುವದು ದೋಷವಲ್ಲ. ॥೨೩॥

**ಘೃತಂ ಮೇ ವೀರ ಭಕ್ಷ್ಯಂ ಸ್ಯಾನ್ನೇಕ್ಷೇ ತ್ವಾನ್ಯತ್ರ ಮೈಥುನಾತ್ ।**
**ವಿವಾಸಸಂ ತತ್ತಥೇತಿ ಪ್ರತಿಪೇದೇ ಮಹಾಮನಾಃ ॥೨೪॥**

**ವೀರ** ವೀರನೇ! **ಮೇ** ನನಗೋಸ್ಕರ, **ಘೃತಂ** ಆಗಲೇ ಸಿದ್ಧವಾದ ತುಪ್ಪವು, **ಭಕ್ಷ್ಯಂ** ಭಕ್ಷ್ಯವು, **ಮೈಥುನಾತ್** ರತಿಯ ದೆಶೆಯಿಂದ ಹೊರತಾಗಿ, **ತ್ವಾ** ನಿನ್ನನ್ನು, **ಅನ್ಯತ್ರ** ಬೇರೆ ಕಡೆ, **ವಿವಾಸಸಂ** ನಗ್ನವಾಗಿರುವುದನ್ನು, **ನ ಈಕ್ಷೇ** ನಾನು ನೋಡುವುದಿಲ್ಲ. **ಮಹಾಮನಾಃ** ಮಹಾಬುದ್ಧಿವಂತನಾದ ರಾಜನು, **ತತ್** ನೀನು ಹೇಳಿದ್ದೆಲ್ಲವು **ತಥಾ ಸ್ಯಾತ್ ಇತಿ** ಹಾಗೆಯೇ ಆಗಲೆಂದು **ಪ್ರತಿಪೇದೇ** ಸಮ್ಮತಿಸಿದನು.

**ತಾತ್ಪರ್ಯ-** ವೀರನೇ! ನನಗೆ ಕೂಡಲೇ ಸಿದ್ಧವಾದ ತುಪ್ಪವು ಆಹಾರವಾಗಬೇಕು. ರತಿಕಾಲದ ಹೊರತಾಗಿ ನೀನು ನಗ್ನನಾಗಿರುವುದನ್ನು ನಾನು ನೋಡುವುದಿಲ್ಲ. ಹಾಗೆ ನೋಡಿದರೆ ನಾನು ನಿನ್ನನ್ನು ಬಿಟ್ಟು ಹೋಗುತ್ತೇನೆಂದು ಹೇಳಿದಳು. ಇದಕ್ಕೆ ರಾಜನು ಹಾಗೆಯೇ ಆಗಲೆಂದು ಒಪ್ಪಿದನು. ।।೨೪।।

**ಅಹೋ ರೂಪಮಹೋ ಭಾವಂ ನರಲೋಕವಿಮೋಹನಮ್ ।**
**ಕೋ ನ ಸೇವೇತ ಮನುಜೋ ದೇವೀಂ ತ್ವಾಂ ಸ್ವಯಮಾಗತಾಮ್ ।।೨೫।।**

ರಾಜನು ಹೇಳುತ್ತಾನೆ - ಊರ್ವಶಿಯೇ ನಿನ್ನ **ರೂಪಂ** ರೂಪವು, **ಅಹೋ** ಆಶ್ಚರ್ಯವು **ಭಾವಂ** ಶೃಂಗಾರಾದಿಭಾವವು **ಅಹೋ** ಆಶ್ಚರ್ಯಕರವಾಗಿದೆ.ಇದು **ನರಲೋಕವಿಮೋಹನಂ** ಮಾನವರಿಗೆ ಮೋಹವನ್ನುಂಟು ಮಾಡುತ್ತದೆ. **ಸ್ವಯಂ** ತಾನಾಗೆ, **ಆಗತಾಂ** ಬಂದಿರುವ **ದೇವೀಂ** ದೇವಿಯಾದ, **ತ್ವಾಂ** ನಿನ್ನನ್ನು **ಕೋ ನ ಸೇವೇತ** ಯಾರು ಸೇವಿಸದೇ ಇದ್ದಾರು.

★ **ಸು** ಅತ್ಯಂತವಾಗಿ **ಅಯಮಾ** ಇನ್ನೊಬ್ಬರು ಜೊತೆಯಿಲ್ಲದಲೇ ಏಕಾಂಗಿಯಾಗಿ **ಆಗತಾಂ** ಬಂದಿರುವ ಎಂದೂ ಅರ್ಥವನ್ನು ತಿಳಿಯಬೇಕು.

**ತಾತ್ಪರ್ಯ-** ರಾಜನು ಹೇಳುತ್ತಾನೆ ಊರ್ವಶಿಯೇ ನಿನ್ನ ರೂಪವು, ಮತ್ತು ಭಾವವು ಆಶ್ಚರ್ಯವಾಗಿರುತ್ತೆ. ಮಾನವಲೋಕವನ್ನು ಮೋಹಗೊಳಿಸುತ್ತಿರುವ ರೂಪ ನಿನ್ನದಾಗಿದೆ. ಯಾರ ಸಹಾಯವೂ ಇಲ್ಲದೇ ಒಬ್ಬಂಟಿಯಾಗಿ ಬಂದಿರುವ ನಿನ್ನನ್ನು ಯಾರು ತಾನೇ ಹೊಂದೇ ಇರುತ್ತಾರೆ. ನಾನು ನಿನ್ನ ಜೊತೆಗೆ ಇರುತ್ತೇನೆಂದು ಅಭಿಪ್ರಾಯ. ।।೨೫।।

**ತಯಾ ಸ ಪುರುಷಶ್ರೇಷ್ಠೋ ರಮಯಂತ್ಯಾ ಯಥಾರ್ಹತಃ ।**
**ರೇಮೇ ಸುರವಿಹಾರೇಷು ಕಾಮಂ ಚೈತ್ರರಥಾದಿಷು ।।೨೬।।**

**ಪುರುಷಶ್ರೇಷ್ಠಃ** ಪುರುಷಶ್ರೇಷ್ಠನಾದ, **ಸಃ** ಆ ರಾಜನು **ಯಥಾರ್ಹತಃ** ರಾಜಯೋಗ್ಯ ಭೋಗಸಾಧನ ದ್ರವ್ಯಗಳಿಂದ, ಕಾಲದೇಶಗಳಿಗೆ ಉಚಿತವಾಗಿ, **ರಮಯಂತ್ಯಾಃ** ರಮಿಸುತ್ತಿರುವ, **ತಯಾ** ಅವಳಿಂದ ಸಹಿತನಾಗಿ **ಕಾಮಂ** ಸ್ವೇಚ್ಛಾನುಸಾರ, **ಸುರವಿಹಾರೇಷು** ದೇವತೆಗಳ ವಿಹಾರಸ್ಥಾನವಾದ, **ಚೈತ್ರರಥಾದಿಷು** ಚೈತ್ರರಥ ಮೊದಲಾದ ಉದ್ಯಾನಗಳಲ್ಲಿ, **ರೇಮೇ** ವಿಹರಿಸಿದನು.

**ತಾತ್ಪರ್ಯ-** ಪುರುಷಶ್ರೇಷ್ಠನಾದ ಆ ರಾಜನು ಅನುಕೂಲಾನುಸಾರ ರಮಿಸುತ್ತಿರುವ ಅವಳೊಂದಿಗೆ ದೇವತೆಗಳ ವಿಹಾರಸ್ಥಾನವಾದ ಚೈತ್ರರಥ ಮೊದಲಾದ ಉದ್ಯಾನಗಳಲ್ಲಿ ವಿಹರಿಸಿದನು.

★ **ಚೈತ್ರರಥಾದಿಷು** ಚೈತ್ರರಥ ಚಿತ್ರರಥನಿಂದ ನಿರ್ಮಿತವಾದ್ದರಿಂದ ಚೈತ್ರರಥ-ವೆಂದು ಪ್ರಸಿದ್ಧವಾದ ಕುಬೇರನ ವನವೇ **ಆದಿ** ಮೊದಲಾಗಿ ಉಳ್ಳ ನಂದನ, ವನಾದಿಗಳಲ್ಲಿ ವಿಹರಿಸಿದರು.

★ ಅಥವಾ **ಸುರವಿಹಾರೇಷು ನಂದನಾದಿಷು** ಶೇಷ ಮಾಡಬೇಕು. **ನಂದನ** ಮೊದಲಾದ ವನಗಳಲ್ಲಿ ಚಿತ್ರಾಃ ಏವ ಚೈತ್ರಾಃ ರಥಾಃ ಯಸ್ಯ ತತ್ ಚೈತ್ರರಥಂ ಗಮನಂ ಆದಿ ಏಷಾಂ ತೇಷು ಚೈತ್ರರಥಾದಿಷು ಅಶ್ವತರೀಯುಕ್ತವಾದ ರಥ ಮತ್ತು ಗಜ ಮುಂತಾದವುಗಳಿಂದ ಗಮನ ಉಳ್ಳ ವನಗಳಲ್ಲಿ **ರೇಮೇ** ಕ್ರೀಡಿಸಿದನು ನಂದನಾದಿಷು ಎನ್ನದೆ ಚೈತ್ರರಥಾದಿಷು ಎಂದಿದ್ದರಿಂದ ಈ ಅರ್ಥ ವಿಶೇಷವು ತಿಳಿಯುತ್ತದೆ. ಅಶ್ವತರೀ ಎಂದರೆ ಹೇಸರಗತ್ತೆ, **ವಾಡವ್ಯಾಂ ಗರ್ದಭಾಜ್ಜಾತಃ** ಹೆಣ್ಣು ಕುದುರೆಯಲ್ಲಿ ಕತ್ತೆಯಿಂದ ಜನಿಸಿದ್ದು ಅಶ್ವತರಿ. ಈ ಚಿತ್ರರಥವು ಕ್ಷತ್ರಿಯರಿಗೆ ಚಿಹ್ನವು. ।।೨೬।।

**ರಮಮಾಣಸ್ತಯಾ ದೇವ್ಯಾ ಪದ್ಮಕಿಂಜಲ್ಕಗಂಧಯಾ ।**
**ತನ್ಮುಖಾಮೋದಮುಷಿತೋ ಮುಮುದೇಽಬ್ದಗಣಾನ್ ಬಹೂನ್।।೨೭।।**

**ಪದ್ಮಕಿಂಜಲ್ಕಗಂಧಯಾ** ಪದ್ಮಪರಾಗದಂತೆ ಸುಗಂಧವುಳ್ಳ, **ದೇವ್ಯಾ** ದೇವಿಯಾದ ಊರ್ವಶಿಯಿಂದ, **ರಮಮಾಣಃ** ಕ್ರೀಡಿಸುತ್ತಾ ಆ ರಾಜನು, **ತನ್ಮುಖಾಮೋದ-ಮುಷಿತಃ** ಅವಳ ಮುಖದ ಸುಗಂಧದಿಂದ ಆಕರ್ಷಿತನಾಗಿ **ಬಹೂನ್** ಅನೇಕವಾದ, **ಅಬ್ದಗಣಾನ್** ವರ್ಷಗಳ ಸಮೂಹದ ವರೆಗೆ, **ಮುಮುದೇ** ಆನಂದಪಟ್ಟನು.

ಪದ್ಮಕಿಂಜಲ್ಕಗಂಧಯಾ ಎನ್ನುವಲ್ಲಿ ಈ ರೀತಿ ವಿಗ್ರಹ ಮಾಡಬೇಕು. ಕಿಂಜಲ್ಕಸ್ಯ ಗಂಧಃ ಕಿಂಜಲ್ಕಗಂಧಃ ಪದ್ಮಾನಾಂ ಕಿಂಜಲ್ಕಗಂಧಃ ಯಸ್ಯಾಃ ಸಾ ಪದ್ಮಕಿಂಜಲ್ಕಗಂಧಾ ತಯಾ, ಪದ್ಮಪದಾರ್ಥಕ್ಕೆ ಕಿಂಜಲ್ಕ ಪದಾರ್ಥದೊಡನೆ ಯೋಗ್ಯತೆ ಇದ್ದುದರಿಂದ ಅನ್ವಯವು. ಇಲ್ಲವಾದರೆ **ಉಪಮಾನಾಚ್ಚ** ೫-೪-೧೩೭ ಎಂಬ ಸೂತ್ರದಿಂದ ಈತ್ವವು ಬಂದು ಕಿಂಜಲ್ಕಗಂಧ್ಯಾ ಎಂದಾಗಬೇಕಾಗುವುದು. ಈಗ ಕೇವಲ ಗಂಧ ಪದದೊಡನೆ ಸಮಾಸವಿಲ್ಲದ್ದರಿಂದ ಈತ್ವಕ್ಕೆ ಅವಕಾಶವಿಲ್ಲ.

**ತಾತ್ಪರ್ಯ-** ಪದ್ಮಪರಾಗದಂತೆ ಸುಗಂಧವುಳ್ಳ ದೇವಿಯಾದ ಆ ಊರ್ವಶಿಯಿಂದ ಕ್ರೀಡಿಸುತ್ತಾ ಆ ರಾಜನು ಅವಳ ಮುಖದ ಗಂಧದಿಂದ ಆಕರ್ಷಿತನಾಗಿ ಅನೇಕ ವರ್ಷಗಳನ್ನು ಆನಂದದಿಂದ ಕಳೆದನು. ।।೨೭।।

**ಅಪಶ್ಯನ್ನುರ್ವಶೀಮಿಂದ್ರೋ ಗಂಧರ್ವಾನ್ಸಮಚೋದಯತ್ ।**
**ಊರ್ವಶೀರಹಿತಂ ಮಹ್ಯಮಾಸ್ಥಾನಂ ನಾತಿಶೋಭತೇ ।।೨೮।।**

**ಇಂದ್ರಃ** ಇಂದ್ರನು, **ಊರ್ವಶೀಂ** ಊರ್ವಶಿಯನ್ನು **ಅಪಶ್ಯನ್** ಕಾಣದೇ, **ಗಂಧರ್ವಾನ್** ಗಂಧರ್ವರನ್ನು, **ಸಮಚೋದಯತ್** ಪ್ರೇರಿಸಿದನು. **ಊರ್ವಶೀರಹಿತಂ** ಊರ್ವಶೀ ಇಲ್ಲದ **ಆಸ್ಥಾನಂ** ಈ ನನ್ನ ಸಭೆಯು, **ಮಹ್ಯಂ** ನನಗೆ **ನ ಅತಿ ಶೋಭತೇ** ಬಹಳ ಶೋಭಿಸುವುದಿಲ್ಲ.

**ತಾತ್ಪರ್ಯ-** ದೇವೇಂದ್ರನು ತನ್ನ ಆಸ್ಥಾನದಲ್ಲಿ ಊರ್ವಶಿಯನ್ನು ಕಾಣದೆ, ಗಂಧರ್ವರನ್ನು ಕುರಿತು ಊರ್ವಶಿ ಇಲ್ಲದ ಈ ನನ್ನ ಸಭೆಯು ಶೋಭಿಸುವುದಿಲ್ಲ ಎಂದು ಹೇಳಿ ಊರ್ವಶಿಯನ್ನು ಕರೆತರಲು ಪ್ರೇರಿಸಿದನು. ।।೨೮।।

**ತ ಉಪೇತ್ಯ ಮಹಾರಾತ್ರೌ ತಮಸಿ ಪ್ರತ್ಯುಪಸ್ಥಿತೇ ।**
**ಊರ್ವಶ್ಯಾ ಉರಣೌ ಜಹ್ರುರ್ನ್ಯಸ್ತೌ ರಾಜನಿ ಜಾಯಯಾ ।।೨೯।।**

**ತೇ** ಆ ಗಂಧರ್ವರು, **ಮಹಾರಾತ್ರೌ** ಮಧ್ಯರಾತ್ರಿಯಲ್ಲಿ **ತಮಸಿ** ಕತ್ತಲೆಯು, **ಉಪಸ್ಥಿತೇ** ಆವರಿಸಿರಲು, **ಜಾಯಯಾ** ಪತ್ನಿಯಂತಿರುವ, **ಊರ್ವಶ್ಯಾ** ಊರ್ವಶಿ-ಯಿಂದ **ರಾಜನಿ** ರಾಜನಲ್ಲಿ, **ನ್ಯಸ್ತೌ** ಇಡಲ್ಪಟ್ಟ, **ಉರಣೌ** ಎರಡು ಮೇಕೆಗಳನ್ನು **ಜಹ್ರುಃ** ಅಪಹರಿಸಿದರು.

**ತಾತ್ಪರ್ಯ-** ಆ ಗಂಧರ್ವರು ಮಹಾರಾತ್ರಿಯಲ್ಲಿ ಕತ್ತಲೆಯು ಕವಿದಿರಲು ಪತ್ನಿಯಂತಿರುವ ಊರ್ವಶಿಯಿಂದ ರಾಜನಲ್ಲಿ ಇಡಲ್ಪಟ್ಟ ಆ ಎರಡು ಮೇಕೆಗಳನ್ನು ಅಪಹರಿಸಿದರು.

**ನಿಶಮ್ಯ ಕ್ರಂದಿತಂ ದೇವೀ ಪುತ್ರಯೋರ್ನೀಯಮಾನಯೋಃ ।**
**ಹತಾಸ್ಮ್ಯಹಂ ಕುನಾಥೇನ ನಪುಂಸಾ ವೀರಮಾನಿನಾ ।।೩೦।।**

**ದೇವೀ** ಆ ಊರ್ವಶಿಯು, **ನೀಯಮಾನಯೋಃ** ಅಪಹರಿಸಿ ಒಯ್ಯಲ್ಪಡುತ್ತಿರುವ, **ಪುತ್ರಯೋಃ** ಆ ಮಕ್ಕಳ, **ಕ್ರಂದಿತಂ** ರೋದನವನ್ನು **ನಿಶಮ್ಯ** ಕೇಳಿ, **ಅಹಂ** ನಾನು **ವೀರಮಾನಿನಾ** ವೀರನೆಂದು ಅಭಿಮಾನವುಳ್ಳ, **ನಪುಂಸಾ** ನಿರ್ವೀರ್ಯನಾದ, **ಕುನಾಥೇನ** ಕುತ್ಸಿತನಾದ, ಈ ಪತಿಯಿಂದ, **ಅಹಂ** ನಾನು, **ಹತಾ** ನಾಶಹೊಂದಿದವಳು **ಅಸ್ಮಿ** ಆಗಿರುತ್ತೇನೆ ಎಂದಳು.

**ತಾತ್ಪರ್ಯ-** ಊರ್ವಶಿಯು ಈ ರೀತಿ ಅಪಹರಿಸಲ್ಪಡುತ್ತಿರುವ ತನ್ನ ಮಕ್ಕಳಂತಿರುವ ಈ ಎರಡು ಮೇಕೆಗಳ ಆಕ್ರಂದನ ಧ್ವನಿಯನ್ನು ಕೇಳಿದಳು. ಅಲ್ಪನಾದ, ತಾನೇ ವೀರನೆಂದು ತಿಳಿದಿರುವ ಅಸಮರ್ಥನಾದ ಈ ಪತಿಯಿಂದ ನಾನು ನಾಶಹೊಂದಿದೆನು, ಎಂದು ದುಃಖಪಟ್ಟಳು. ।।೩೦।।

**ಯದ್ವಿಸ್ರಂಭಾದಹಂ ನಷ್ಟಾ ಹೃತಾಪತ್ಯಾ ಚ ದಸ್ಯುಭಿಃ ।**
**ಯಃ ಶೇತೇ ನಿಶಿ ಸಂತ್ರಸ್ತೋ ಯಥಾ ನಾರೀ ದಿವಾ ಪುಮಾನ್ ॥೩೦॥**

**ಅಹಂ** ನಾನು, **ಯದ್ವಿಸ್ರಂಭಾತ್** ಯಾವಾತನಲ್ಲಿ ವಿಶ್ವಾಸದಿಂದ, **ದಸ್ಯುಭಿಃ** ಕಳ್ಳರಿಂದ, **ಹೃತಪತ್ಯಾ** ಅಪಹರಿಸಲ್ಪಟ್ಟ, ಮಕ್ಕಳಂತಿರುವ ಮೇಕೆ ಉಳ್ಳವಳಾಗಿ, **ನಷ್ಟಾ** ದುಃಖಿತಳಾದೆನು. **ಯಃ** ಯಾವ ಈತನು, **ದಿವಾ** ಹಗಲು ಮಾತ್ರ **ಪುಮಾನ್** ಪುರುಷನಾಗಿ, **ನಿಶಿ** ರಾತ್ರಿಯಲ್ಲಿ, **ನಾರೀ** ಸ್ತ್ರೀಯು, **ಯಥಾ** ಹೇಗೋ, ಹಾಗೆ, **ಸಂತ್ರಸ್ತಃ** ಭೀತನಾಗಿ, **ಶೇತೇ** ಮಲಗಿರುತ್ತಾನೆ.

**ತಾತ್ಪರ್ಯ-** ಈತನಲ್ಲಿ ವಿಶ್ವಾಸವಿಟ್ಟ ನಾನು ನನ್ನ ಮಕ್ಕಳಂತಿರುವ ಕುರಿಗಳನ್ನು ಕಳೆದುಕೊಂಡು ದುಃಖಿತಳಾದೆನು. ಈತನು ಹಗಲಿನಲ್ಲಿ ಪುರುಷನು, ರಾತ್ರಿಯಲ್ಲಿ ಸ್ತ್ರೀಯು ಮಲಗಿದಂತೆ ಭಯಹೊಂದಿ ಮಲಗಿರುತ್ತಾನೆ. ॥೩೦॥

**ಇತಿ ವಾಕ್‌ಸಾಯಕೈರ್ವಿದ್ಧಃ ಪ್ರತೋದೈರಿವ ಕುಂಜರಃ ।**
**ನಿಶಿ ನಿಸ್ತ್ರಿಂಶಮಾದಾಯ ವಿವಸ್ತ್ರೋಽಭ್ಯದ್ರವದ್ರುಷಾ ॥೩೨॥**

**ಇತಿ** ಈ ರೀತಿಯಾಗಿ, **ವಾಕ್‌ಸಾಯಕೈಃ** ವಾಗ್ಬಾಣಗಳಿಂದ, **ಪ್ರತೋದೈಃ** ಅಂಕುಶಗಳಿಂದ, **ವಿದ್ಧಃ** ಹೊಡೆಯಲ್ಪಟ್ಟ, **ಕುಂಜರ ಇವ** ಆನೆಯಂತೆ, **ವಿದ್ಧಃ** ತಾಡಿತನಾದ ಈ ರಾಜನು, **ನಿಶಿ** ರಾತ್ರಿಯಲ್ಲಿ, **ನಿಸ್ತ್ರಿಂಶಂ** ಖಡ್ಗವನ್ನು, **ಆದಾಯ** ತೆಗೆದುಕೊಂಡು, **ವಿವಸ್ತ್ರ** ವಸ್ತ್ರರಹಿತನಾಗಿ, **ರುಷಾ** ಕೋಪದಿಂದ, **ಅಭ್ಯದ್ರವತ್** ಎದುರಿಸಿ ಬಂದನು.

**ತಾತ್ಪರ್ಯ-** ಈ ರೀತಿಯಾದ ವಾಗ್ಬಾಣಗಳಿಂದ ತಾಡಿತನಾದ ರಾಜನು ಅಂಕುಶದ ಹೊಡೆತದಿಂದ ಆನೆಯಂತೆ ತಾಡಿತನಾಗಿ ರಾತ್ರಿಯಲ್ಲಿ ಖಡ್ಗಧಾರಿಯಾಗಿ ನಗ್ನನಾಗಿ ಎದುರಿಸಿ ಬಂದನು. ॥೩೨॥

**ತೇ ವಿಸೃಜ್ಯೋರಣೌ ತತ್ರ ಪ್ರದ್ಯೋತಂತ ಸ್ವವಿದ್ಯುತಾ ।**
**ಆದಾಯ ಮೇಷಾವಾಯಾಂತಂ ನಗ್ನಮೈಕ್ಷತ ಸಾ ಪತಿಮ್ ॥೩೩॥**

**ತೇ** ಆ ಗಂಧರ್ವರು, **ತತ್ರ** ಅಲ್ಲಿ, **ಉರಣೌ** ಆ ಮೇಕೆಗಳನ್ನು, **ವಿಸೃಜ್ಯ** ಬಿಟ್ಟು **ಸ್ವವಿದ್ಯುತಾ** ತಮ್ಮ ಕಾಂತಿಯಿಂದ **ಪ್ರದ್ಯೋತಂತ** ಪ್ರಕಾಶಿಸಿದರು, **ಸಾ** ಆ ಊರ್ವಶಿಯು **ಮೇಷೌ** ಮೇಕೆಗಳನ್ನು, **ಆದಾಯ** ತೆಗೆದುಕೊಂಡು, **ಆಯಾಂತಂ** ಬರುತ್ತಿರುವ, **ನಗ್ನಂ** ವಸ್ತ್ರರಹಿತನಾದ, **ಪತಿಂ** ತನ್ನ ಪತಿಯನ್ನು, **ಐಕ್ಷತ** ನೋಡಿದಳು.

**ತಾತ್ಪರ್ಯ-** ಗಂಧರ್ವರು ಒಂದು ಮೇಕೆಯನ್ನು ಅಪಹರಿಸಿದರು. ಆ ವಿಷಯವನ್ನು ಊರ್ವಶಿಯು ರಾಜನಿಗೆ ಹೇಳಿದಳು. ಆದರೂ ರಾಜನು

ನಗ್ನನಿದ್ದದ್ದರಿಂದ ಏಳಲಿಲ್ಲ. ಆ ಸಂದರ್ಭದಲ್ಲಿ ಇನ್ನೊಂದು ಮೇಕೆಯನ್ನು ಅಪಹರಿಸಿದರು. ಊರ್ವಶಿಯ ಚುಚ್ಚು ಮಾತುಗಳಿಂದ ನಗ್ನಾವಸ್ಥೆಯಲ್ಲಿಯೇ ಮೇಷಗಳ ರಕ್ಷಣೆಗಾಗಿ ಓಡಿದನು. ಈ ವಿಷಯವು ಹರಿವಂಶದಲ್ಲಿ ಉಕ್ತವಾಗಿದೆ. ಪುರಾಣಾಂತರದಲ್ಲಿ ಈ ಅವಧಿಯು ನಾಲ್ಕು ವರ್ಷವೆಂದು ಹೇಳಿದೆ. ಇದು ಇಂದ್ರಸಭೆಯಲ್ಲಿ ಅವಳನ್ನು ಕಾಣದ ದಿನದಿಂದ ಆರಂಭಿಸಿ ಎಂಬುದಾಗಿ ಹೇಳಬೇಕು. ಅಥವಾ ಹರಿವಂಶವು ಮನುಷ್ಯಮಾನದಿಂದ ಎಂದಾದರೂ ತಿಳಿಯಬೇಕು.

**ತಾತ್ಪರ್ಯ-** ಆ ಗಂಧರ್ವರು ಅಲ್ಲಿ ಆ ಮೇಕೆಗಳನ್ನು ಬಿಟ್ಟು ತಮ್ಮ ಕಾಂತಿಯಿಂದ ಪ್ರಕಾಶಿಸಿದರು. ಮೇಕೆಗಳನ್ನು ತೆಗೆದು ಬರುತ್ತಿರುವ ದಿಗಂಬರನಾದ ರಾಜನನ್ನು ಪ್ರಕಾಶಗೊಳಿಸಿದರು. ವಸ್ತ್ರರಹಿತನಾದ ತನ್ನ ಪತಿಯನ್ನು ಕಂಡಳು. ।।೩೩।।

**ಐಲೋಽಪಿ ಶಯನೇ ಜಾಯಾಮಪಶ್ಯನ್ವಿಮನಾ ಅಭೂತ್ ।**
**ತಚ್ಚಿತ್ತೋ ವಿಕ್ಲವಃ ಶೋಚನ್ ಬಭ್ರಾಮೋನ್ಮತ್ತವನ್ಮಹೀಮ್ ।।೩೪।।**

**ಐಲಃ ಅಪಿ** ಇಲಾಪುತ್ರನಾದ ಪುರೂರವನಾದರೂ **ಶಯನೇ** ಹಾಸಿಗೆಯಲ್ಲಿ **ಜಾಯಾಂ** ಹೆಂಡತಿಯನ್ನು, **ಅಪಶ್ಯನ್** ಕಾಣದೇ, **ವಿಮನಾಃ** ಉದ್ವಿಗ್ನ ಮನಸ್ಸಿನವನು, **ಅಭೂತ್** ಆದನು. **ತಚ್ಚಿತ್ತಃ** ಅವಳನ್ನು ಮನದಲ್ಲಿ ಹಂಬಲಿಸುತ್ತಾ, **ವಿಕ್ಲವಃ** ಚಂಚಲನಾಗಿ, **ಶೋಚನ್** ದುಃಖಪಡುತ್ತಾ, **ಮಹೀಂ** ಭೂಮಿಯನ್ನು **ಉನ್ಮತ್ತವತ್** ಹುಚ್ಚನಂತೆ, **ಬಭ್ರಾಮ** ಅಲೆದನು.

ಆ ಪುರೂರವನು ತನ್ನ ಹಾಸಿಗೆಯಲ್ಲಿ ಹೆಂಡತಿಯನ್ನು ಕಾಣದೇ ಉದ್ವಿಗ್ನನಾಗಿ ಅವಳನ್ನೇ ನೆನೆಯುತ್ತಾ ಚಂಚಲನಾಗಿ ಭೂಮಿಯಲ್ಲಿ ಭ್ರಾಂತನಂತೆ ಅಲೆದಾಡಿದನು.

**ಸ ತಾಂ ವೀಕ್ಷ್ಯ ಕುರುಕ್ಷೇತ್ರೇ ಸರಸ್ವತ್ಯಾಂ ಚ ತತ್ಸಖೀಃ ।**
**ಪಂಚ ಪ್ರಹೃಷ್ಟವದನಃ ಪ್ರಾಹ ಸೂಕ್ತಂ ಪುರೂರವಾಃ ।।೩೫।।**

**ಸಃ ಪುರೂರವಾಃ** ಆ ಪುರೂರವ ರಾಜನು, **ತಾಂ** ಅವಳನ್ನು **ಕುರುಕ್ಷೇತ್ರೇ** ಕುರುಕ್ಷೇತ್ರದಲ್ಲಿ **ತತ್ಸಖೀಃ ಪಂಚ** ಅವಳ ಐದು ಜನ ಸಖಿಯರನ್ನು, **ಸರಸ್ವತ್ಯಾಂ** ಸರಸ್ವತೀ ತೀರದಲ್ಲಿ, **ವೀಕ್ಷ್ಯ** ನೋಡಿ, **ಪ್ರಹೃಷ್ಟವದನಃ** ಸಂತೋಷಮುಖ ಉಳ್ಳವನಾಗಿ, **ಸೂಕ್ತಂ** ಸೂಕ್ತಾನುಸಾರ **ಪ್ರಾಹ** ಹೇಳಿದನು.

**ತಾತ್ಪರ್ಯ-** ಆ ಪುರೂರವರಾಜನು ಕುರುಕ್ಷೇತ್ರದಲ್ಲಿ ಊರ್ವಶಿಯನ್ನು ನೋಡಿದನು. ಅವಳ ಐದು ಜನ ಸಖಿಯರನ್ನು ಸರಸ್ವತೀ ತೀರದಲ್ಲಿ ನೋಡಿ ಸಂತೋಷಮನಸ್ಸಿನಿಂದ ಈ ಸೂಕ್ತವನ್ನು ಹೇಳಿದನು. ।।೩೫।।

**ಅಹೋ ಜಾಯೇ ತಿಷ್ಠ ತಿಷ್ಠ ಘೋರೇ ನ ತ್ಯಕ್ತುಮರ್ಹಸಿ ।**
**ಮಂತ್ರಾ ಅದ್ಯಾಪ್ಯನಿರ್ವೃತ್ತಾ ವಚಾಂಸಿ ಕೃಣವಾವಹೈ ॥೩೬॥**

**ಅಹೋ!** ಆಶ್ಚರ್ಯವು! **ಜಾಯೇ!** ಹೆಂಡತಿಯೇ, **ತಿಷ್ಠ ತಿಷ್ಠ** ನಿಲ್ಲು ನಿಲ್ಲು **ಘೋರೇ** ನನಗೆ ಖೇದ ಕಾರಣಳಾಗಿ ನನ್ನ ಪ್ರಾಣಸಂಕಟ ಉಂಟುಮಾಡಿದವಳೇ (ಸುರತನಿಪುಣಳೇ), **ತ್ಯಕ್ತುಂ** ನನ್ನನ್ನು ಬಿಡುವುದಕ್ಕೆ, **ನ ಅರ್ಹಸಿ** ಅರ್ಹಳಲ್ಲ **ಅದ್ಯಾಪಿ** ಈಗಲೂ ಸಹ, **ಮಂತ್ರಾಃ** ಕರುಣೋಕ್ತಿಪೂರ್ವಗುಪ್ತಸಂಭಾಷಣಗಳು, **ಅನಿವೃತ್ತಾಃ** ಪರಿಸಮಾಪ್ತಿ ಹೊಂದಿರುವುದಿಲ್ಲ. **ವಚಾಂಸಿ** ಮಿಶ್ರಸಲ್ಲಾಪವನ್ನು, **ಕೃಣವಾವಹೈ** ಮಾಡೋಣ.

**ತಾತ್ಪರ್ಯ-** ಆಶ್ಚರ್ಯವು ! ಪ್ರಿಯಳೇ ! (ಸುರತಶೌಂಡಳೇ), ನಿಲ್ಲು ನಿಲ್ಲು ನನ್ನನ್ನು ಬಿಡುವುದಕ್ಕೆ ಅರ್ಹಳಲ್ಲ. ಈಗಲೂ ಸಹ ಕರುಣೋಕ್ತಿಪೂರ್ವಕವಾದ ಸರಸಸಲ್ಲಾಪಗಳು ಪೂರ್ಣಗೊಂಡಿಲ್ಲ. ಸಂಭಾಷಣೆಯನ್ನು ಮಾಡೋಣ. ॥೩೬॥

**ಸುದೇವೋಽಯಂ ಪತತ್ಯತ್ರ ದೇವಿ ದೂರಂ ಹೃತಸ್ತ್ವಯಾ ।**
**ಖಾದಂತ್ಯೇನಂ ವೃಕಾ ಗೃಧ್ರಾ ತ್ವತ್ಪ್ರಸಾದಸ್ಯ ನಾಸ್ಪದಮ್ ॥೩೭॥**

**ದೇವೀ!** ಪ್ರಿಯಳೇ! **ಅಯಂ** ಈ **ಸುದೇವಃ** ಕ್ರೀಡಾಸಾಧನವಾದ ನನ್ನ ದೇಹವು **ಅತ್ರ** ಕುರುಕ್ಷೇತ್ರದಲ್ಲಿ **ಪತತಿ** ಬೀಳುತ್ತದೆ. **ತ್ವಯಾ** ನಿನ್ನಿಂದ, **ದೂರಂ** ದೂರದಲ್ಲಿ, **ಅಯಂ** ಈ ದೇಹವು, **ಹೃತಃ** ಅಪಹರಿಸಲ್ಪಟ್ಟಿತು. **ತ್ವತ್ಪ್ರಸಾದಸ್ಯ** ನಿನ್ನ ದಯೆಗೆ, **ನಾಸ್ಪದಂ** ಆಸ್ಪದವಾಗದ, **ಏನಂ** ಈ ದೇಹವನ್ನು, **ವೃಕಾಃ** ತೋಳಗಳು, **ಗೃಧ್ರಾಃ** ಹದ್ದುಗಳು, **ಖಾದಂತಿ** ತಿನ್ನುತ್ತವೆ.

**ತಾತ್ಪರ್ಯ-** ಪ್ರಿಯಳೇ ಕ್ರೀಡಾದಿಗಳಿಗೆ ಸಾಧನವಾದ ಈ ದೇಹವು ಕುರುಕ್ಷೇತ್ರದಲ್ಲಿ ಬೀಳುತ್ತದೆ. ನಿನ್ನಿಂದ ದೂರೀಕರಿಸಲ್ಪಟ್ಟ ಈ ದೇಹವನ್ನು ತೋಳ ಹದ್ದುಗಳು ತಿನ್ನುತ್ತವೆ. ॥೩೭॥

**ಊರ್ವಶ್ಯುವಾಚ-**

**ಮಾ ಮೃಥಾಃ ಪುರುಷೋಽಸಿ ತ್ವಂ ಮಾ ಸ್ಮ ತ್ವಾಽದ್ಯುರ್ವೃಕಾ ಇಮೇ ।**
**ಕ್ವಾಪಿ ಸಖ್ಯಂ ನ ವೈ ಸ್ತ್ರೀಣಾಂ ವೃಕಾಣಾಂ ಹೃದಯಂ ಯಥಾ ॥೩೮॥**

ರಾಜನೇ! **ತ್ವಂ** ನೀನು, **ಪುರುಷಃ** ಪುರುಷನು, **ಅಸಿ** ಆಗಿದ್ದೀಯಾ, **ಮಾ ಮೃಥಾಃ** ಮರಣಹೊಂದಬೇಡ, **ಇಮೇ** ಈ **ವೃಕಾಃ** ತೋಳಗಳು, **ತ್ವಾಂ** ನಿನ್ನನ್ನು **ಮಾ ಸ್ಮ ಅದ್ಯುಃ** ತಿನ್ನುವ ಪ್ರಸಂಗ ಬೇಡ. **ಸ್ತ್ರೀಣಾಂ** ಸ್ತ್ರೀಯರೊಂದಿಗೆ, **ಕ್ವಾಪಿ** ಯಾವಾಗಲೂ **ಸಖ್ಯಂ** ಸ್ನೇಹವನ್ನು, **ನ ವೈ** ಮಾಡಬಾರದು. ಅವರ ಮನಸ್ಸು ಹೇಗೆಂದರೆ **ವೃಕಾಣಾಂ** ತೋಳಗಳ, **ಹೃದಯಂ** ಮನಸ್ಸು, **ಯಥಾ** ಹೇಗೋ ಹಾಗೆ ಕಠಿಣವಾಗಿರುತ್ತದೆ.

**ತಾತ್ಪರ್ಯ-** ರಾಜನೇ! ನೀನು ಪುರುಷನಾಗಿರುವಿ. ಮರಣ ಹೊಂದಬೇಡ. ಈ ತೋಳಗಳು ನಿನ್ನನ್ನು ತಿನ್ನುವುದು ಬೇಡ. ಸ್ತ್ರೀಯ ಮನಸ್ಸು ತೋಳಗಳ ಮನಸ್ಸಿನಂತೆ ಕಠಿಣವಾಗಿರುವುದರಿಂದ ಅವರೊಂದಿಗೆ ಯಾವಾಗಲೂ ಸಖ್ಯಮಾಡಬಾರದು.

**ಸ್ತ್ರಿಯೋ ಹ್ಯಕರುಣಾಃ ಕ್ರೂರಾ ದುರ್ಮರ್ಷಾಃ ಪ್ರಿಯಸಾಹಸಾಃ ।**
**ಘ್ನಂತ್ಯಲ್ಪಾರ್ಥೇऽಪಿ ವಿಸ್ರಬ್ಧಂ ಪತಿಂ ಭ್ರಾತರಮಪ್ಯುತ ॥೩೯॥**

**ಸ್ತ್ರಿಯಃ** ಸ್ತ್ರೀಯರು, **ಅಕರುಣಾಃ** ಕರುಣೆ ಇಲ್ಲದವರು, **ಕ್ರೂರಾಃ** ಕ್ರೂರರು, **ದುರ್ಮರ್ಷಾಃ** ಸಹನೆ ಇಲ್ಲದವರು, **ಪ್ರಿಯಸಾಹಸಾಃ** ಪ್ರೇಷ್ಠರಾಗಿದ್ದರೂ ಮಹಾ ಸಾಹಸಿಗಳು, **ವಿಸ್ರಬ್ಧಂ** ವಿಶ್ವಾಸಪಾತ್ರನಾದ, **ಪತಿಂ** ಪತಿಯನ್ನು, **ಉತ** ಮತ್ತು **ಭ್ರಾತರಂ ಅಪಿ** ಸಹೋದರನನ್ನೂ ಸಹ, **ಅಲ್ಪಾರ್ಥೇ** ಅಲ್ಪ ಪ್ರಯೋಜನಕ್ಕಾಗಿ **ಘ್ನಂತಿ** ನಾಶ ಮಾಡುತ್ತಾರೆ.

**ತಾತ್ಪರ್ಯ-** ಸ್ತ್ರೀಯರು ನಿಷ್ಕರುಣೆಗಳು, ಕ್ರೂರಿಗಳು ಸಹನೆ ಇಲ್ಲದವರು, ಆಗಿರುತ್ತಾರೆ. ವಿಶ್ವಾಸಪಾತ್ರನಾಗಿದ್ದರೂ ಪತಿಯನ್ನು, ಸಹೋದರನನ್ನೂ ಸಹ ಅಲ್ಪ ಪ್ರಯೋಜನಕ್ಕಾಗಿ ನಾಶಮಾಡುತ್ತಾರೆ. ಪ್ರೇಷ್ಠರಾಗಿದ್ದರೂ ಮಹಾಸಾಹಸಿ-ಗಳಾಗಿರುತ್ತಾರೆ. ॥೩೯॥

**ವಿಧಾಯಾಲೀಕವಿಸ್ರಂಭಮಜ್ಞೇಷ್ವತ್ಯಂತಸೌಖ್ಯದಾಃ ।**
**ನವಂ ನವಮಭೀಪ್ಸಂತ್ಯಃ ಪುಂಶ್ಚಲ್ಯಃ ಸ್ವೈರವೃತ್ತಯಃ ॥೪೦॥**

**ಅಜ್ಞೇಷು** ಅಜ್ಞಾನಿಗಳಲ್ಲಿ **ಅಲೀಕವಿಸ್ರಂಭಂ** ಕಪಟವಿಶ್ವಾಸವನ್ನು, **ವಿಧಾಯ** ಉಂಟುಮಾಡಿ, **ಅತ್ಯಂತಸೌಖ್ಯದಾಃ** ಇವ ವಿಶೇಷ ಸೌಖ್ಯವನ್ನು ಕೊಡುತ್ತಾರೆಯೋ ಎಂಬಂತೆ ತೋರಿಸುತ್ತಾ , **ನವಂ ನವಂ** ಹೊಸ ಹೊಸ, ಪುರುಷರನ್ನು **ಅಭೀಪ್ಸಂತ್ಯಃ** ಇಚ್ಛಿಸುತ್ತಾ , **ಪುಂಶ್ಚಲ್ಯಃ** ಕುಟಿಲರಾಗಿ, **ಸ್ವೈರವೃತ್ತಯಃ** ಸ್ವೇಚ್ಛಾವರ್ತನೆ ಉಳ್ಳವರಾಗಿ **ಘ್ನಂತಿ** ನಾಶ ಮಾಡುತ್ತಾರೆ.

**ತಾತ್ಪರ್ಯ-** ರಾಜನೇ! ಕುಟಿಲಸ್ತ್ರೀಯರು ಅಜ್ಞಾನಿಗಳಲ್ಲಿ ಕಪಟವಿಶ್ವಾಸವನ್ನು ಇಟ್ಟು ವಿಶೇಷ ಸೌಖ್ಯವನ್ನು ಕೊಡುತ್ತಾರೆಯೋ ಎಂಬಂತೆ ತೋರಿಸುತ್ತಾರೆ. ಹೊಸ, ಹೊಸ ಪುರುಷರನ್ನು ಇಚ್ಛಿಸುತ್ತಾ ಸ್ವೇಚ್ಛಾವೃತ್ತಿಯುಳ್ಳವರಾಗಿ ಪುರುಷರನ್ನು ನಾಶಮಾಡುತ್ತಾರೆ. ॥೪೦॥

**ಸಂವತ್ಸರಾಂತೇऽಪಿ ಭವಾನೇಕರಾತ್ರಂ ಮಯೀಶ್ವರ ।**
**ವತ್ಸ್ಯತ್ಯಪತ್ಯಾನಿ ಚ ತೇ ಭವಿಷ್ಯಂತ್ಯಪರಾಣಿ ಭೋಃ ।**
**ಅಂತರ್ವತ್ನೀಮುಪಾಲಕ್ಷ್ಯ ದೇವೀಂ ಸ ಪ್ರಯಯೌ ಪುರೀಮ್ ॥೪೧॥**

**ಭೋ ಈಶ್ವರ** ಎಲೋ ಸ್ವಾಮಿಯೇ, **ಭವಾನ್** ನೀನು, **ಸಂವತ್ಸರಾಂತೇ** ವರ್ಷದ ಕೊನೆಯಲ್ಲಿ **ಏಕರಾತ್ರಂ** ಒಂದುರಾತ್ರಿ, **ಮಯಾ** ನನ್ನಿಂದ, **ವತ್ಸ್ಯತಿ** ಸುರತಸುಖವನ್ನು ಹೊಂದುತ್ತೀಯೇ. **ತೇ** ನಿನಗೆ, **ಅಪರಾಣಿ** ಬೇರೆಯಾದ, **ಅಪತ್ಯಾನಿ** ಮಕ್ಕಳುಗಳು, **ಭವಿಷ್ಯಂತಿ** ಆಗುತ್ತಾರೆ. **ಸಃ** ಆ ರಾಜನು, **ದೇವೀಂ** ಊರ್ವಶಿಯನ್ನು, **ಅಂತರ್ವತ್ನೀಂ** ಗರ್ಭಿಣಿಯನ್ನಾಗಿ **ಉಪಾಲಕ್ಷ್ಯ** ತಿಳಿದು, **ಪುರೀಂ** ತನ್ನ ನಗರವನ್ನು ಕುರಿತು, **ಯಯೌ** ಹೋದನು.

**ತಾತ್ಪರ್ಯ-** ಭೋ ರಾಜನೇ! ನೀನು ವರ್ಷದ ಕೊನೆಯಲ್ಲಿ ಒಂದು ರಾತ್ರಿಯಲ್ಲಿ ನನ್ನೊಡನೆ ಸುರತಸುಖವನ್ನು ಹೊಂದುತ್ತೀಯೇ. ನಿನಗೆ ಬೇರೆ ಮಕ್ಕಳುಗಳು ಜನಿಸುತ್ತಾರೆ. ಎಂದು ಹೇಳಿದಳು. ರಾಜನು ಅವಳ ಮಾತಿನಂತೆ ನಡೆದು ಅವಳು ಗರ್ಭಿಣಿಯಾದದ್ದನ್ನು ತಿಳಿದು ತನ್ನ ನಗರಕ್ಕೆ ಹೋದನು. ।।೪೧।।

**ಪುನಸ್ತತ್ರ ಗತೋಽಬ್ದಾಂತೇ ಊರ್ವಶೀಂ ವೀರಮಾತರಮ್ ।**
**ಉಪಲಭ್ಯ ಮುದಾ ಯುಕ್ತಃ ಸಮುವಾಸ ತಯಾಽನಿಶಮ್ ।।೪೨।।**

**ಪುನಃ** ಮತ್ತೆ, **ಅಬ್ದಾಂತೇ** ವರ್ಷದ ಕೊನೆಯಲ್ಲಿ **ತತ್ರ** ಅಲ್ಲಿ, **ಗತಃ** ಹೋಗಿದ್ದ ಆ ರಾಜನು, **ವೀರಮಾತರಂ** ವೀರರಿಗೆ ಮಾತೆಯಾದ **ಊರ್ವಶೀಂ** ಊರ್ವಶಿಯನ್ನು **ಉಪಲಭ್ಯ** ಹೊಂದಿ, **ಮುದಾ ಯುಕ್ತಃ** ಸಂತೋಷಯುಕ್ತನಾಗಿ, **ತಯಾ** ಅವಳಿಂದ, **ಅನಿಶಂ** ಯಾವಾಗಲೂ, **ಸಮುವಾಸ** ಸುಖವಾಸ ಮಾಡಿದನು.

**ತಾತ್ಪರ್ಯ-** ಆ ರಾಜನು ವರ್ಷದ ಕೊನೆಯಲ್ಲಿ ಪುನಃ ವೀರಮಾತೆಯಾದ ಊರ್ವಶಿಯನ್ನು ಹೊಂದಿ ಅವಳೊಂದಿಗೆ ಸಂತೋಷದಿಂದ ಯಾವಾಗಲೂ ಕಾಲಕಳೆದನು. ।।೪೨।।

**ಅಥೈನಮೂರ್ವಶೀ ಪ್ರಾಹ ಕೃಪಣಂ ವಿರಹಾತುರಮ್ ।**
**ಗಂಧರ್ವಾನುಪಧಾವೇಮಾನ್ ತುಭ್ಯಂ ದಾಸ್ಯಂತಿ ಮಾಮಿತಿ ।।೪೩।।**

**ಅಥ** ಅನಂತರದಲ್ಲಿ, **ಊರ್ವಶೀ** ಊರ್ವಶಿಯು, **ವಿರಹಾತುರಂ** ವಿರಹದಿಂದ ದುಃಖಿತನಾದ, **ಕೃಪಣಂ** ದೀನನಾದ ರಾಜನನ್ನು ಕುರಿತು, **ಪ್ರಾಹ** ಹೇಳಿದಳು, ಏನೆಂದರೆ **ಇಮಾನ್ ಗಂಧರ್ವಾನ್** ಈ ಗಂಧರ್ವರನ್ನು, **ಉಪಧಾವ** ಶರಣು ಹೋಗು, ಅವರು **ತುಭ್ಯಂ** ನಿನಗೆ **ಮಾಂ** ನನ್ನ ಸಾಲೋಕ್ಯವನ್ನು, **ದಾಸ್ಯಂತಿ** ಕೊಡುತ್ತಾರೆ. **ಇತಿ** ಹೀಗೆಂದು ಹೇಳಿದಳು.

**ತಾತ್ಪರ್ಯ-** ಅನಂತರದಲ್ಲಿ ಊರ್ವಶಿಯು ವಿರಹಾತುರನಾದ ದೀನನಾದ ರಾಜನನ್ನು ಕುರಿತು ಹೇಳಿದಳು. ರಾಜನೇ! ನೀನು ಈ ಗಂಧರ್ವರಿಗೆ ಶರಣಾಗು. ನೀನು ನನ್ನ ಲೋಕದಲ್ಲಿ ಇರುವಂತೆ ಇವರು ಮಾಡುತ್ತಾರೆ. ಎಂದು ಹೇಳಿದಳು.

**ತಸ್ಯ ಸಂಸ್ತುವತಸ್ತುಷ್ಟಾ ಅಗ್ನಿಸ್ಥಾಲೀಂ ದದುರ್ನೃಪ ।**
**ಊರ್ವಶೀಂ ಮನ್ಯಮಾನಸ್ತಾಂ ನಾಬುಧ್ಯತ ಚರನ್ವನೇ ॥೪೪॥**

**ನೃಪ!** ರಾಜನೇ! **ಸಂಸ್ತುವತಃ** ಸ್ತೋತ್ರಮಾಡಿದ, **ತಸ್ಯ** ಆ ರಾಜನಿಗೆ, **ತುಷ್ಟಾಃ** ಸಂತುಷ್ಟರಾದ, ಗಂಧರ್ವರು, **ಅಗ್ನಿಸ್ಥಾಲೀಂ** ಅಗ್ನಿಪಾತ್ರೆಯನ್ನು **ದದುಃ** ಕೊಟ್ಟರು, ಆ ಪಾತ್ರವನ್ನು **ಊರ್ವಶೀಂ** ಊರ್ವಶೀ ಎಂದು **ಮನ್ಯಮಾನಃ** ಚಿಂತಿಸುತ್ತಿರುವ ಅವನು, **ವನೇ** ಕಾಡಿನಲ್ಲಿ, **ಚರನ್** ಸಂಚರಿಸುತ್ತಾ , **ತಾಂ** ಆ ಪಾತ್ರೆಯನ್ನು, **ನ** ಇದು ಊರ್ವಶೀ ಅಲ್ಲ ಯಜ್ಞಪಾತ್ರೆ ಎಂದು **ಅಬುಧ್ಯತ** ತಿಳಿದನು.

**ತಾತ್ಪರ್ಯ-** ಸ್ತೋತ್ರಮಾಡಿದ ಆ ರಾಜನಿಗೆ ಸಂತುಷ್ಟರಾದ ಗಂಧರ್ವರು ಆತನಿಗೆ ಈ ಅಗ್ನಿಯಲ್ಲಿ ಯಜ್ಞಮಾಡಿ ಊರ್ವಶಿಯನ್ನು ಹೊಂದು ಎಂದು ಹೇಳಿ ಅಗ್ನಿಪಾತ್ರೆಯನ್ನು ಕೊಟ್ಟರು. ಅವನು ವನದಲ್ಲಿ ತಿರುಗುತ್ತಾ ಈ ಸ್ಥಾಲಿಯನ್ನೇ ಊರ್ವಶೀ ಎಂದು ತಿಳಿದನು. ಕೊನೆಯಲ್ಲಿ ಇದು ಊರ್ವಶೀಯಲ್ಲ ಅಗ್ನಿಸ್ಥಾಲಿ ಎಂದು ತಿಳಿದನು. ॥೪೪॥

**ಸ್ಥಾಲೀಂ ನ್ಯಸ್ಯ ವನೇ ಗತ್ವಾ ಗೃಹಾನಧ್ಯುಷಿತೋ ನಿಶಿ ।**
**ತ್ರೇತಾಯಾಂ ಸಂಪ್ರವೃತ್ತಾಯಾಂ ಮನಸಿ ತ್ರಯ್ಯವರ್ತತ ॥೪೫॥**

**ಸಃ** ಆ ರಾಜನು, **ಸ್ಥಾಲೀಂ** ಅಗ್ನಿಸ್ಥಾಲಿಯನ್ನು, **ವನೇ** ಕಾಡಿನಲ್ಲಿ, **ನ್ಯಸ್ಯ** ಇಟ್ಟು, **ನಿಶಿ** ರಾತ್ರಿಯಲ್ಲಿ, **ಗೃಹಾನ್** ಮನೆಯನ್ನು ಕುರಿತು, **ಗತ್ವಾ** ಹೋಗಿ, **ನಿಶಿ** ಆ ರಾತ್ರಿಯಲ್ಲಿ, **ಅಧ್ಯುಷಿತಃ** ವಾಸಮಾಡಿದನು. **ತ್ರೇತಾಯಾಂ** ತ್ರೇತಾಯುಗವು, **ಸಂಪ್ರವೃತ್ತಾಯಾಂ** ಆರಂಭವಾಗುತ್ತಿರಲು, ಆತನ **ಮನಸಿ** ಮನಸ್ಸಿನಲ್ಲಿ, **ತ್ರಯೀ** ವೇದಗಳು **ಅವರ್ತತ** ಪ್ರಕಾಶಿತವಾದುವು.

**ತಾತ್ಪರ್ಯ-** ರಾಜನು ಆ ಸ್ಥಾಲಿಯನ್ನು ವನದಲ್ಲಿ ಇಟ್ಟು ರಾತ್ರಿಯಲ್ಲಿ ಮನೆಗೆ ಹೋಗಿ ಅವಳನ್ನು ಧ್ಯಾನಿಸುತ್ತಾ ಆ ರಾತ್ರಿಯನ್ನು ಕಳೆದನು. ತ್ರೇತಾಯುಗವು ಆರಂಭವಾಗುತ್ತಿರಲು ಆತನ ಮನಸ್ಸಿನಲ್ಲಿ ವೇದಗಳು ಪ್ರಕಾಶಿತವಾದವು. ॥೪೫॥

**ಸ್ಥಾಲೀಸ್ಥಾನಂ ಗತೋಽಶ್ವತ್ಥಂ ಶಮೀಗರ್ಭಂ ವಿಲಕ್ಷ್ಯ ಸಃ ।**
**ತೇನ ದ್ವೇ ಅರಣೀ ಕೃತ್ವಾ ಊರ್ವಶೀಲೋಕಕಾಮ್ಯಯಾ ॥೪೬॥**

**ಸಃ** ಆ ರಾಜನು, **ಸ್ಥಾಲೀಸ್ಥಾನಂ** ಸ್ಥಾಲಿ ಇಟ್ಟ ಸ್ಥಳವನ್ನು ಕುರಿತು, **ಗತಃ** ಹೋದನು. ಅಲ್ಲಿ **ಶಮೀಗರ್ಭಂ** ಬನ್ನೀ ಮರದ ಮಧ್ಯದಲ್ಲಿ, **ಅಶ್ವತ್ಥಂ** ಅಶ್ವತ್ಥ ವೃಕ್ಷವನ್ನು **ವಿಲಕ್ಷ್ಯ** ನೋಡಿ, **ತೇನ** ಅದರಿಂದ, **ದ್ವೇ** ಎರಡು **ಅರಣೀ** ಯಜ್ಞ ಕಾಷ್ಠಗಳನ್ನು **ಕೃತ್ವಾ** ಮಾಡಿ, **ಊರ್ವಶೀಲೋಕಕಾಮ್ಯಯಾ** ಊರ್ವಶಿಯ ಲೋಕ ಪಡೆಯುವ ಅಪೇಕ್ಷೆಯಿಂದ **ಮಮಂಥ** ಅರಣೀಮಥನ ಮಾಡಿದನು.

**ತಾತ್ಪರ್ಯ-** ಆ ರಾಜನು ತಾನು ಇಟ್ಟ ಸ್ಥಾಲೀಸ್ಥಾನವನ್ನು ಕುರಿತು ಬಂದನು. ಅಲ್ಲಿ ಶಮೀವೃಕ್ಷವನ್ನು ಅದರಲ್ಲಿರುವ ಅಶ್ವತ್ಥವೃಕ್ಷವನ್ನು ಕಂಡನು. ಸ್ಥಾಲಿಯು ಶಮಿಯಾಗಿದೆ ಅಗ್ನಿಯು ಅಶ್ವತ್ಥವಾಗಿದೆ ಎಂದು ತಿಳಿದು ಶಮಿಯನ್ನು ಅಶ್ವತ್ಥವನ್ನು ಕತ್ತರಿಸಿ ಅವುಗಳಿಂದ ಎರಡು ಅರಣಿಯನ್ನು ಮಾಡಿದನು. ಈ ಅರಣಿಗಳನ್ನು ಮೇಲೆ ಮತ್ತು ಕೆಳಗೆ ಮಾಡಿ ಅರಣಿಯನ್ನು ಮಥನ ಮಾಡಿದನು (ತಿಕ್ಕಿದನು). ।।೪೬।।

**ಊರ್ವಶೀಂ ಮಂತ್ರತೋ ಧ್ಯಾಯನ್ನಧರಾರಣಿಮುತ್ತರಾಮ್ ।**
**ಆತ್ಮಾನಮುಭಯೋರ್ಮಧ್ಯೇ ಯತ್ತತ್ಪ್ರಜನನಂ ಪ್ರಭುಃ ।।೪೭।।**

**ಪ್ರಭುಃ** ಸಮರ್ಥನಾದ, ರಾಜನು, **ಊರ್ವಶೀಂ** ಊರ್ವಶೀಯನ್ನು, **ಅಧರಾರಣಿಂ** ಕೆಳಗಿನ ಅರಣಿಯನ್ನಾಗಿ, **ಆತ್ಮಾನಂ** ತನ್ನನ್ನು, **ಉತ್ತರಾರಣಿಂ** ಮೇಲಿನ ಅರಣಿಯನ್ನಾಗಿ, **ಮಂತ್ರತಃ** ಮಂತ್ರದಿಂದ, **ಧ್ಯಾಯನ್** ಚಿಂತಿಸುತ್ತಾ, **ಉಭಯೋಃ ಮಧ್ಯೇ** ಎರಡು ಅರಣಿಗಳ ಮಧ್ಯದಲ್ಲಿ **ಯತ್** ಯಾವ, **ಪ್ರಜನನಂ** ಉತ್ಪತ್ತಿ ಸಾಧನಸಂಬಂಧವಿಶೇಷವನ್ನು ಚಿಂತಿಸುತ್ತಾ **ಅರಣಿಂ** ಅರಣಿಯನ್ನು (ಮಮಂಥ ಮಥನ ಮಾಡಿದನು).

**ತಾತ್ಪರ್ಯ-** ಸಮರ್ಥನಾದ ರಾಜನು ಊರ್ವಶೀಯನ್ನು ಕೆಳಗಿನ ಅರಣಿಯನ್ನಾಗಿಯೂ ತನ್ನನ್ನು ಮೇಲಿನ ಅರಣಿಯನ್ನಾಗಿಯೂ ಮಂತ್ರದಿಂದ ಧ್ಯಾನ ಮಾಡುತ್ತಾ ಎರಡರ ಮಧ್ಯೆ ಪ್ರಜನನ ಸಂಬಂಧವನ್ನು ಚಿಂತಿಸುತ್ತ ಮಥನ ಮಾಡಿದನು. ।।೪೭।।

**ತಸ್ಯ ನಿರ್ಮಥನಾಜ್ಜಾತೋ ಜಾತವೇದಾ ವಿಭಾವಸುಃ ।**
**ತ್ರಯ್ಯಾ ಸ ವಿದ್ಯಯಾ ರಾಜ್ಞಾ ಪುತ್ರತ್ವೇ ಕಲ್ಪಿತಸ್ತ್ರಿವೃತ್ ।।೪೮।।**

**ತಸ್ಯ** ಆ ರಾಜನ, **ನಿರ್ಮಥನಾತ್** ಮಥನದ ದೆಶೆಯಿಂದ, **ಜಾತವೇದಾಃ** ಅಗ್ನಿಯು, ಜಾತಃ ಹುಟ್ಟಿದನು, **ಸಃ** ಆ **ವಿಭಾವಸುಃ** ಅಗ್ನಿಯು **ತ್ರಯ್ಯಾ** ಮೂರಾದ, **ವಿದ್ಯಯಾ** ವೇದವಿದ್ಯೆಯಿಂದ ಪ್ರತಿಪಾದ್ಯನಾಗಿ, **ತ್ರಿವೃತ್** ಆಹವನೀಯಾದಿ ಮೂರು ರೂಪಗಳಿಂದ ಇದ್ದವನಾಗಿ, **ರಾಜ್ಞಾ** ರಾಜನಿಂದ, **ಪುತ್ರತ್ವೇ** ಪುತ್ರನೆಂದು, **ಕಲ್ಪಿತಃ** ಎಣಿಸಲ್ಪಟ್ಟಿರುತ್ತಾನೆ.

**ತಾತ್ಪರ್ಯ-** ಆ ರಾಜನ ಮಥನದಿಂದ ಅಗ್ನಿಯು ಹುಟ್ಟಿದನು. ಈ ಅಗ್ನಿಯು ವೇದಪ್ರತಿಪಾದ್ಯನಾಗಿರುತ್ತಾ ಈತನಿಗೆ ಆಹವನೀಯಾದಿ ಮೂರು ನಾಮಗಳಿರುತ್ತವೆ. ಈತನನ್ನು ರಾಜನು ಪುತ್ರನನ್ನಾಗಿ ತಿಳಿದನು. ।।೪೮।।

**ತೇನಾಯಜತ ಯಜ್ಞೇಶಂ ಭಗವಂತಮಧೋಕ್ಷಜಮ್ ।**
**ಊರ್ವಶೀಲೋಕಮನ್ವಿಚ್ಛನ್ ಸರ್ವದೇವಮಯಂ ಹರಿಮ್ ॥೪೯॥**

**ತೇನ** ಈ ಅಗ್ನಿಯಿಂದ **ಯಜ್ಞೇಶಂ** ಯಜ್ಞೇಶನಾದ, **ಅಧೋಕ್ಷಜಂ** ಅಧೋಕ್ಷಜನಾದ **ಸರ್ವದೇವಮಯಂ** ದೇವೋತ್ತಮನಾದ, **ಭಗವಂತಂ ಹರಿಂ** ಭಗವಂತನಾದ ಹರಿಯನ್ನು, **ಊರ್ವಶೀಲೋಕಂ** ಊರ್ವಶಿಯ ಲೋಕವನ್ನು **ಅನ್ವಿಚ್ಛನ್** ಅಪೇಕ್ಷಿಸುತ್ತಾ, **ಅಯಜತ** ಯಾಗ ಮಾಡಿದನು.

**ತಾತ್ಪರ್ಯ–** ರಾಜನು ಈ ಅಗ್ನಿಯಿಂದ ಸರ್ವೋತ್ತಮನಾದ ಅಧೋಕ್ಷಜನಾದ ಭಗವಂತನಾದ ಶ್ರೀಹರಿಯನ್ನು ಊರ್ವಶೀ ಲೋಕವನ್ನು ಅಪೇಕ್ಷಿಸಿ ಯಾಗ ಮಾಡಿದನು. ॥೪೯॥

**ಏಕ ಏವ ಪುರಾ ವೇದಃ ಪ್ರಣವಃ ಸರ್ವವಾಙ್ಮಯಃ ।**
**ದೇವೋ ನಾರಾಯಣೋ ನಾನ್ಯ ಏಕೋಽಗ್ನಿರ್ವರ್ಣ ಏವ ಚ ॥೫೦॥**

**ಪುರಾ** ಹಿಂದೆ, **ಸರ್ವವಾಙ್ಮಯಃ** ಸರ್ವ ವಾಙ್ಮಯವಾದ ಎಲ್ಲಾ ವೇದಗಳಿಗೂ ಪ್ರಧಾನಭೂತವಾದ **ಪ್ರಣವಃ** ಪ್ರಣವವೂ ಸಹ, **ಏಕಃ ಏವ** ಒಂದೇ (ಇದು ಮೂರುಮಾತ್ರಾತ್ಮಕವಾಗಿತ್ತು). **ದೇವಃ** ದೇವನಾದರು, **ನಾರಾಯಣಃ ಏಕ ಏವ** ನಾರಾಯಣನೊಬ್ಬನೇ, **ದೇವಃ** ದೇವನೆಂಬುದಾಗಿ, ಪೂಜ್ಯನಾಗಿದ್ದನು, **ಅಗ್ನಿಃ** ಅಗ್ನಿಯೂಸರ್ವಯಜ್ಞದಲ್ಲಿ, **ಏಕಏವ** ಭಗವಂತನೇ, ಬ್ರಹ್ಮರುದ್ರಾದಿನಾಮಗಳಿಂದ, **ಇಜ್ಯಃ** ಪೂಜಿಸಲ್ಪಡುವವನು, **ವರ್ಣಃ** ಬ್ರಾಹ್ಮಣಾದಿ ವರ್ಣಗಳು ಸಹ, **ಏಕ ಏವ** ಒಂದೇ ರೀತಿಯಾಗಿ ಅಂದರೆ ಭಗವದ್ಭಕ್ತಿಭರಿತರಾಗಿದ್ದರು.

**ತಾತ್ಪರ್ಯ–** ಕೃತಯುಗದಲ್ಲಿ ಮಿಶ್ರವಾಗಿ ಒಂದೇ ವೇದವು ಇದ್ದಿತು. ಇದಕ್ಕೆ ಮೂಲವೇದವೆಂದು ಹೆಸರು. ಋಗ್, ಯಜುಸ್ ಮುಂತಾದ ಹೆಸರು ಇರಲಿಲ್ಲ, ಆ ವೇದವು ತ್ರೇತಾಯುಗದ ಪ್ರಾರಂಭದಲ್ಲಿ ಋಗ್, ನಿಗದ, ಸಾಮವೆಂಬ ಮೂರು ವಿಭಾಗ ಉಳ್ಳದ್ದು ಅನಂತರ ನಾಲ್ಕು ಭಾಗವಾಯಿತು. ಇವುಗಳಿಗೆ ಉಪವೇದವೆಂದು ಹೆಸರು. ದ್ವಾಪರಯುಗದಲ್ಲಿವೇದವ್ಯಾಸದೇವರು ಭಾರತವೆಂಬ ಐದನೇ ವೇದವನ್ನು ರಚಿಸಿದರು. ಅವರು ವಿಭಾಗ ಮಾಡಿದ ವೇದಗಳಿಗೆ ಅವಾಂತರವೇದಗಳೆಂಬ ಹೆಸರು. ಈ ವಿಷಯವು ಅಥರ್ವಣಭಾಷ್ಯದಲ್ಲಿಯೂ ತತ್ತ್ವಪ್ರಕಾಶಿಕೆಯಲ್ಲಿಯೂ ವಿದಿತವಾಗಿದೆ.

ಮತ್ತು ಕೃತಯುಗದಲ್ಲಿ ಸರ್ವವೇದಗಳಿಗೆ ಪ್ರಧಾನವಾದ ಪ್ರಣವವೂ ಸಹ ಮೂರುಮಾತ್ರಾಗಳಿಂದ ಕೂಡಿದ್ದು ಒಂದೇ ಇದ್ದಿತು. ನಾಲ್ಕು ಮಾತ್ರೆ ಮೊದಲಾದ

ಪ್ರಭೇದವಿರಲಿಲ್ಲ. ಮುಂದೆ ತ್ರಿಮಾತ್ರಾವನ್ನು ಪ್ರಾರಂಭಿಸಿ ಅನಂತಮಾತ್ರಾತ್ಮಕವಾಗಿ ಪ್ರಣವಗಳು ಅನಂತವೆಂದು ಕೀರ್ತಿತವಾದವು.

ಅದರಂತೆ ಆಗ್ಗೆ ನಾರಾಯಣನೊಬ್ಬನೇ ದೇವತಾತ್ವೇನ ಪೂಜ್ಯನಾಗಿದ್ದನು. ಮನುನಾಮಕರಾದ ಬ್ರಹ್ಮಾದಿದೇವತೆಗಳು ವೇದೋಪದೇಶಕರು ಮೊದಲಾಗಿ ಪೂಜಿತರಾಗಿದ್ದರು, ಹೊರತು ದೇವತೆಯೆಂದು ಪೂಜಿತರಾಗಿರಲಿಲ್ಲ. ಆದ್ದರಿಂದಲೇ ಕೃತಯುಗದಲ್ಲಿ ಜನರೆಲ್ಲರೂ ಅನ್ಯಪೂಜಕರಲ್ಲರೆಂದು ಪ್ರಸಿದ್ಧರಾಗಿರುವ ಮತ್ತು ಆ ಕಾಲದಲ್ಲಿ ಅಗ್ನಿಷ್ಟೋಮಾದಿ ಎಲ್ಲ ಯಜ್ಞದಲ್ಲಿಯೂ ಹರಿಯೊಬ್ಬನೇ ಬ್ರಹ್ಮ ರುದ್ರ ಮೊದಲಾದ ನಾಮಗಳಿಂದ ಯಾಗಕ್ಕೆ ವಿಷಯನಾಗಿದ್ದನು. ಕೃತಯುಗದಲ್ಲಿಯ ಜನರೆಲ್ಲರೂ ಧ್ಯಾನನಿಷ್ಠರಷ್ಟೇ ಅಲ್ಲದೆ ಯಜ್ಞಾದಿ ಕರ್ಮಗಳನ್ನು ಮಾಡುತ್ತಿದ್ದರೆಂಬ ವಿಷಯವು ಅಥರ್ವಣ ಭಾಷ್ಯದಲ್ಲಿ ಸ್ಪಷ್ಟವಾಗಿದೆ. ಎಲ್ಲಾ ವರ್ಣಗಳ ಜನರು ಒಂದೇ ವಿಧವಾದ ಭಗವಂತನಲ್ಲಿ ಭಕ್ತಿ ಉಳ್ಳವರಾಗಿದ್ದರು. ರಾಮರಾಜ್ಯದಲ್ಲಿಯೂ ಸಹ ಇದರಂತೆ ಸರ್ವ ಪ್ರಜೆಗಳು ರಾಮಭಕ್ತರಾಗಿದ್ದರು. ಕಾಲವು ಕೃತಯುಗ ಸಮಾನವಾಗಿದ್ದಿತು. ॥೫೦॥

**ಪುರೂರವಸ ಏವಾಸೀತ್ತ್ರಯೀ ತ್ರೇತಾಮುಖೇ ನೃಪ ।**
**ಅಗ್ನಿನಾ ಪ್ರಜಯಾ ರಾಜಾ ಗಾಂಧರ್ವಂ ಲೋಕಮೇಯಿವಾನ್ ॥೫೧॥**

**ಹೇ ನೃಪ** ರಾಜನೇ, **ತ್ರೇತಾಮುಖೇ** ತ್ರೇತಾಯುಗದ ಆರಂಭದಲ್ಲಿ, **ಪುರೂರವಸಃ ಏವ** ಪುರೂರವ ರಾಜನಿಂದಲೇ, ವೇದವು, **ತ್ರಯೀ** ತ್ರಿವಿಧವಾಗಿ, **ಆಸೀತ್** ಆಯಿತು. **ರಾಜಾ** ರಾಜನು, **ಪ್ರಜಯಾ** ಪುತ್ರನೆಂದು ಗೃಹೀತನಾದ, **ಅಗ್ನಿನಾ** ಅಗ್ನಿಯಿಂದ, **ಗಾಂಧರ್ವಂ ಲೋಕಂ** ಗಂಧರ್ವಲೋಕವನ್ನು (ಗಂಧರ್ವರ ಅನುಗ್ರಹದಿಂದ ಊರ್ವಶೀಲೋಕವನ್ನು) **ಏಯಿವಾನ್** ಹೊಂದಿದನು.

**ತಾತ್ಪರ್ಯ-** ಪುರೂರವ ರಾಜನು ಯಜ್ಞ ಮಾಡಿ ಮೊದಲು **ಲೋಕಂ** ಎಂದರೆ ತತ್ತ್ವಜ್ಞಾನವನ್ನು ಅನಂತರ ಗಂಧರ್ವಲೋಕವನ್ನು ಮತ್ತು ಕೊನೆಗೆ ಗಂಧರ್ವ ಎಂದರೆ ಗಾಂ ಧಾರಯನ್ ವರ್ತತೇ ಎಂಬ ವ್ಯುತ್ಪತ್ತಿಯಿಂದ ಅಖಿಲ ಲೋಕೋದ್ಧಾರಕನಾದ ಪರಮಾತ್ಮನ ಲೋಕವನ್ನು ಮುಕ್ತಿಯನ್ನು ಹೊಂದಿದನು.

**॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ದ್ವಾದಶೋಽಧ್ಯಾಯಃ ॥**

★★★

# ಅಥ ತ್ರಯೋದಶೋಽಧ್ಯಾಯಃ

**ಐಲಸ್ಯ ಚೋರ್ವಶೀಗರ್ಭಾತ್ ಷಡಾಸನ್ನಾತ್ಮಜಾ ನೃಪ**
**ಆಯುಃ ಶ್ರುತಾಯುಃ ಸತ್ಯಾಯೂ ರಯೋಽಥ ವಿಜಯೋ ಜಯಃ ॥೧॥**

**ಐಲಸ್ಯ** ಇಲಾಪುತ್ರನಾದ ಪುರೂರವನಿಗೆ, **ಊರ್ವಶೀಗರ್ಭಾತ್** ಊರ್ವಶಿಯ ಗರ್ಭದ ದೆಶೆಯಿಂದ **ಆತ್ಮಜಾಃ** ಮಕ್ಕಳು, **ಷಟ್** ಆರು, **ಆಸನ್** ಆದರು. ಅವರು ಯಾರು? ಎಂದರೆ ೧)ಆಯು, ೨)ಶ್ರುತಾಯು, ೩) ಸತ್ಯಾಯು, ೪) ರಯ, ೫) ವಿಜಯ, ೬) ಜಯ ಎಂಬುದಾಗಿ ಆದರು.

''ದಿಷಡಾಸನ್ನಾತ್ಮಜಾಃ'' ಎನ್ನುವಲ್ಲಿ ಸಮಸ್ತಪದವೆಂದು ಇಟ್ಟುಕೊಂಡು 'ಷಟ್ ಚ ಆಸನ್ನಾಶ್ಚ ಷಡಾಸನ್ನಾಃ ಷಡಾಸನ್ನಾಶ್ಚ ತೇ ಆತ್ಮಜಾಶ್ಚ ಷಡಾಸನ್ನಾತ್ಮಜಾಃ' ಇಲ್ಲಿ ಆಸನ್ನನೆಂದರೆ ಪೂರ್ವದಲ್ಲಿ ಊರ್ವಶಿಯಿಂದ ತನ್ನ ಸಮೀಪದಲ್ಲಿ ಇರುವುದಾಗಿ ನಿವೇದಿತನಾದ ಆಯುರ್ಧಾಮನೆಂಬ ವಸುವು. ಇತರರು ಆರು. ಅಂತೂ ಏಳು ಜನ ಮಕ್ಕಳು ಈ ರೀತಿ ಮಾಡಿದ್ದರಿಂದ ಭಾರತವಿರೋಧವು ಪರಿಹೃತವಾಯಿತು. ಅಲ್ಲಿ ''ಐಲಪುತ್ರಾ ಬಭೂವುಸ್ತೇ ಸಪ್ತ ದೇವಸುತೋಪಮಾಃ'' ಎಂಬುದಾಗಿ ಪುರೂರವನಿಗೆ ಏಳು ಜನ ಮಕ್ಕಳೆಂದು ಹೇಳಿದೆ. ಹರಿವಂಶದಲ್ಲಿಯ ನಾಮಗಳಿಗೂ ಇಲ್ಲಿಯ ನಾಮಗಳಿಗೂ ವ್ಯತ್ಯಾಸವಿದ್ದರೂ ಆ ಏಳು ಎಂಬ ಸಂಖ್ಯೆಗೆ ವಿರೋಧವಿಲ್ಲ (ವಿಶ್ವಾಯುಶ್ಚೈವ ಧರ್ಮತ್ಮಾ ಶ್ರುತಾಯುಶ್ಚ ತಥಾಪರಃ ದೃಢಾಯುಶ್ಚ ವನಾಯುಶ್ಚ ಶತಾಯುಶ್ಚೋರ್ವಶೀಸುತಾಃ ಹರಿವಂಶ)

**ತಾತ್ಪರ್ಯ-** ಈ ಐಲನಿಂದ ಊರ್ವಶೀಯಲ್ಲಿ ಆರು ಮಕ್ಕಳಾದರು. ಅವರು ಯಾರು? ಎಂದರೆ ಆಯು, ಶ್ರುತಾಯು, ಸತ್ಯಾಯು, ರಯ, ವಿಜಯ, ಜಯ ಎಂದು ಆದರು. ॥೧॥

**ಶ್ರುತಾಯೋರ್ವಸುಮಾನ್ಪುತ್ರಃ ಸತ್ಯಾಯೋಶ್ಚ ಶ್ರುತಂಜಯಃ ।**
**ರಯಸ್ಯಾದ್ಭುತ ಏಕಸ್ತು ಜಯಸ್ಯ ತನಯೋಽಮಿತಃ ॥೨॥**

**ಶ್ರುತಾಯೋಃ** ಶ್ರುತಾಯುವಿಗೆ, **ವಸುಮಾನ್** ವಸುಮಾನ್ ಎಂಬುವನು, **ಪುತ್ರಃ** ಮಗನು ಆದನು, **ಸತ್ಯಾಯೋಃ** ಸತ್ಯಾಯುವಿಗೆ, **ಶ್ರುತಂಜಯಃ** ಶ್ರುತಂಜಯ ಎಂಬುವನು ಮಗನಾದನು. **ರಯಸ್ಯ** ರಯನಿಗೆ, **ಅದ್ಭುತಃ** ಅದ್ಭುತ ಎಂಬುವನು, **ಏಕಃ** ಒಬ್ಬ ಮಗನಾದನು. **ಜಯಸ್ಯ** ಜಯನ, **ತನಯಃ** ಮಗನು **ಅಮಿತಃ** ಅಮಿತ ಎಂಬುವನು.

**ತಾತ್ಪರ್ಯ-** ಶ್ರುತಾಯುವಿಗೆ ವಸುಮಾನ್ ಎಂಬುವನು, ಸತ್ಯಾಯುವಿಗೆ ಶ್ರುತಂಜಯ ಎಂಬುವನು ರಯನಿಗೆ ಅದ್ಭುತ ಎಂದು ಜಯನಿಗೆ ಅಮಿತ ಎಂಬುವ ಮಕ್ಕಳಾದರು. ॥೨॥

**ಭೀಮಸ್ತು ವಿಜಯಸ್ಯಾಥ ಕಾಂಚನೋ ಹೋತ್ರಕಸ್ತತಃ ।**
**ತಸ್ಯ ಜಹ್ನುಃ ಸುತೋ ಗಂಗಾಂ ಗಂಡೂಷೀಕೃತ್ಯ ಯೋಽಪಿಬತ್ ॥೩॥**

**ವಿಜಯಸ್ಯ** ವಿಜಯನಿಗೆ, **ಭೀಮಃ ತು** ಭೀಮನೆಂಬುವನು, **ಸ್ಯಾತ್** ಆದನು. **ಅಥ** ನಂತರದಲ್ಲಿ, **ಕಾಂಚನಃ** ಕಾಂಚನನು, **ತತಃ** ಅನಂತರದಲ್ಲಿ, **ಹೋತ್ರಕಃ** ಹೋತ್ರಕನು, **ತಸ್ಯ** ಈತನಿಗೆ, **ಯಃ** ಯಾವಾತನು, **ಗಂಗಾಂ** ಗಂಗೆಯನ್ನು, **ಗಂಡುಷೀಕೃತ್ಯ** ಆಚಮನ ಮಾಡಿ, **ಅಪಿಬತ್** ಪಾನಮಾಡಿದನೋ, **ಸಃ ಜಹ್ನುಃ** ಅಂಥ ಜಹ್ನುಋಷಿಯು **ಸುತಃ** ಮಗನು ಆದನು.

**ತಾತ್ಪರ್ಯ-** ವಿಜಯನ ಮಗನು ಭೀಮನು. ಈತನಿಗೆ ಕಾಂಚನನು, ಕಾಂಚನನಿಗೆ ಹೋತ್ರಕನು ಆದನು. ಈತನಿಗೆ ಗಂಗೆಯನ್ನು ಆಚಮನ ಮಾಡಿದ, ಜಹ್ನುವು ಮಗನಾದನು. ಈತನು ಪಾನಮಾಡಿ ಹೊರಗೆ ಬಿಟ್ಟಿದ್ದರಿಂದ ಗಂಗೆ ಜಾಹ್ನವೀ ಎಂಬ ಹೆಸರು ಬಂದಿದೆ.

ಈ ವಿಷಯವು ಹರಿವಂಶದಲ್ಲಿ ಉಕ್ತವಾಗಿದೆ. ಜಹ್ನುಋಷಿಗಳು ದೊಡ್ಡ ಸತ್ರ ಮಾಡುತ್ತಿದ್ದರು. ಆಗ ಗಂಗಾನದಿಯು ಇವರ ಇಚ್ಛೆಗೆ ವಿರುದ್ಧವಾಗಿ ಯಜ್ಞವಾಟವನ್ನು ಮುಳುಗಿಸಿದಳು. ಸಿಟ್ಟಿನಿಂದ ಋಷಿಗಳು ಪಾನ ಮಾಡಿದರು. ಆಗ ಮಹರ್ಷಿಗಳು ಅವರಿಗೆ ಗಂಗಾನದಿಯನ್ನು ಮಗಳೆಂದು ನಿವೇದಿಸಿದ್ದರಿಂದ ಜಹ್ನುಕನ್ಯಾ ಎಂದು ಪ್ರಸಿದ್ಧಿ ಬಂದಿತು. ॥೩॥

**ಜಹ್ನೋಃ ಪುರುಸ್ತಸ್ಯ ಪುತ್ರೋ ಬಲಾಕಶ್ಚಾತ್ಮಜೋಽಜಕಃ ।**
**ತತಃ ಕುಶಃ ಕುಶಸ್ಯಾಪಿ ಕುಶಾಂಬುಸ್ತನಯೋ ವಸುಃ ॥೪॥**

**ಕುಶನಾಭಶ್ಚ ಚತ್ವಾರೋ ಗಾಧಿರಾಸೀತ್ಕುಶಾಂಬುಜಃ ।**
**ತಸ್ಯ ಸತ್ಯವತೀಂ ಕನ್ಯಾಮೃಚೀಕೋಽಯಾಚತ ದ್ವಿಜಃ ॥೫॥**

**ಜಹ್ನೋಃ** ಜಹ್ನುವಿನ ದೆಸೆಯಿಂದ, **ಪುರುಃ** ಪುರು ಎಂಬುವನು, **ತಸ್ಯ** ಆತನಿಗೆ, **ಬಲಾಕಃ** ಬಲಾಕ ಎಂಬುವನು, **ಪುತ್ರಃ** ಮಗನು ಈತನಿಗೆ, **ಅಜಕಃ** ಅಜಕ ಎಂಬುವನು, **ಆತ್ಮಜಃ** ಮಗನು, **ತತಃ** ಈತನಿಂದ, **ಕುಶಃ** ಕುಶನೆಂಬ ಪುತ್ರನು, **ಕುಶಸ್ಯ** ಈ ಕುಶನಿಗೆ, **ಕುಶಾಂಬುಃ** ಕುಶಾಂಬುನೆಂಬುವನು, **ತನಯಃ** ತನಯನೆಂಬುವನು, **ವಸುಃ** ವಸು ಎಂಬುವನು, **ಕುಶನಾಭಃ** ಕುಶನಾಭ ಎಂಬುವನು, ಹೀಗೆ **ಚತ್ವಾರಃ**

ನಾಲ್ಕು ಜನರಾಗಿದ್ದಾರೆ. **ತಸ್ಯ** ಕುಶಾಂಬುವಿಗೆ, **ಕುಶಾಂಬುಜಃ** ಕುಶಾಂಬುಜನೆಂದು ಹೆಸರಿನ ಮಗನು ಆದನು, ಈತನೇ **ಗಾಧಿಃ** ಗಾಧಿ ಎಂದು **ಆಸೀತ್** ಆದನು. **ತಸ್ಯ** ಗಾಧಿಯ **ಕನ್ಯಾಂ** ಮಗಳಾದ, **ಸತ್ಯವತೀಂ** ಸತ್ಯವತಿಯನ್ನು **ಋಚೀಕಃ** ಋಚೀಕನೆಂಬ **ದ್ವಿಜಃ** ಬ್ರಾಹ್ಮಣನು **ಅಯಾಚತ** ಯಾಚನೆ ಮಾಡಿದನು.

**ತಾತ್ಪರ್ಯ-** ಈ ಜಹ್ನುವಿಗೆ ಪುರು ಎಂಬುವನು ಈತನಿಗೆ ಬಲಾಕನು, ಈತನಿಗೆ ಅಜಕನು, ಈತನಿಗೆ ಕುಶನೆಂಬುವನು, ಈ ಕುಶನಿಗೆ ಕುಶಾಂಬು, ತನಯ, ಕುಶನಾಭ, ವಸು ಎಂಬುವ ನಾಲ್ಕು ಮಕ್ಕಳಾಗಿದ್ದಾರೆ. ಕುಶಾಂಬುವಿಗೆ ಕುಶಾಂಬುಜ (ಗಾಧಿ) ಎಂಬ ಹೆಸರುಳ್ಳ ಮಗನು ಇದ್ದನು. ಗಾಧಿಯ ಮಗಳಾದ ಸತ್ಯವತಿಯನ್ನು ಋಚೀಕನೆಂಬ ಬ್ರಾಹ್ಮಣನು ಯಾಚನೆ ಮಾಡಿದನು ।।೪-೫।।

**ವರಂ ವಿಸದೃಶಂ ಮತ್ವಾ ಗಾಧಿರ್ಭಾರ್ಗವಮಬ್ರವೀತ್ ।**
**ಏಕತಃ ಶ್ಯಾಮಕರ್ಣಾನಾಂ ಹಯಾನಾಂ ಚಂದ್ರವರ್ಚಸಾಮ್ ।।೬।।**

**ಸಹಸ್ರಂ ದೀಯತಾಂ ಶುಲ್ಕಂ ಕನ್ಯಾಯಾಃ ಕುಶಿಕಾನ್ವಯಃ ।**
**ಇತ್ಯುಕ್ತಸ್ತನ್ಮತಂ ಜ್ಞಾತ್ವಾ ಗತಃ ಸ ವರುಣಾಂತಿಕಮ್ ।।೭।।**

**ಗಾಧಿಃ** ಗಾಧಿರಾಜನು, **ವಿಸದೃಶಂ** ಅನನುರೂಪನಾದ **ವರಂ** ವರನನ್ನು **ಮತ್ವಾ** ತಿಳಿದು, **ಭಾರ್ಗವಂ** ಋಚೀಕನನ್ನು ಕುರಿತು, **ಅಬ್ರವೀತ್** ಹೇಳಿದನು. ಏನೆಂದರೆ, **ಏಕತಃ ಶ್ಯಾಮಕರ್ಣಾನಾಂ** ಒಂದು ಕಿವಿ ಕಪ್ಪು ಉಳ್ಳ **ಚಂದ್ರವರ್ಚಸಾಂ** ಬಿಳಿ ಬಣ್ಣವುಳ್ಳ, **ಹಯಾನಾಂ** ಕುದುರೆಗಳ, **ಸಹಸ್ರಂ** ಸಾವಿರವು, **ಕನ್ಯಾಯಾಃ** ಕನ್ಯೆಯ **ಶುಲ್ಕಂ** ಶುಲ್ಕರೂಪನಾಗಿ, **ದೀಯತಾಂ** ಕೊಡಲ್ಪಡಲಿ ಎಂದು ಕೇಳಿದನು. **ಇತಿ** ಈ ರೀತಿಯಾಗಿ, **ಉಕ್ತಃ ಕುಶಿಕಾನ್ವಯಃ** ಹೇಳಿಸಿಕೊಳ್ಳಲ್ಪಟ್ಟ ಋಚೀಕನು **ತನ್ಮತಂ** ಅವನ ಅಭಿಪ್ರಾಯವನ್ನೂ, **ಮತ್ವಾ** ತಿಳಿದು, **ವರುಣಾಂತಿಕಂ** ವರುಣನ ಹತ್ತಿರ **ಗತಃ** ಹೋದನು.

**ತಾತ್ಪರ್ಯ-** ಗಾಧಿರಾಜನು ಈ ರೀತಿಯಾದ ತನ್ನ ಮಗಳಿಗೆ ಅನುರೂಪವಲ್ಲದ ಋಚೀಕನ ಅಪೇಕ್ಷೆಯನ್ನು ತಿಳಿದು ಆತನನ್ನು ಕೇಳಿದನು. ಏನೆಂದರೆ ''ನಮಗೆ ಈ ಕನ್ಯಾಮೌಲ್ಯರೂಪವಾಗಿ ಎರಡು ಕಿವಿಯಲ್ಲಿ, ಒಂದು ಕಪ್ಪಾಗಿಯೂ, ದೇಹವೆಲ್ಲಾ ಚಂದ್ರವರ್ಣದ್ದಾಗಿಯೂ ಇರುವ ಒಂದು ಸಾವಿರ ಅಶ್ವಗಳನ್ನು ಕೊಡಬೇಕು'' ಎಂದು ಕೇಳಿದನು. ಗಾಧಿಯ ಅಭಿಪ್ರಾಯವನ್ನು ತಿಳಿದ ಋಚೀಕನು ವರುಣನ ಹತ್ತಿರ ಹೋದನು. ।।೬-೭।।

**ಆನೀಯ ದತ್ವಾ ತಾನಶ್ವಾನುಪಯೇಮೇ ವರಾಂಗನಾಮ್ ।**
**ಸ ಋಷಿಃ ಪ್ರಾರ್ಥಿತಃ ಪತ್ನ್ಯಾ ಶ್ವಶ್ರ್ವಾ ಚಾಪತ್ಯಕಾಮ್ಯಯಾ ।**
**ಶ್ರಪಯಿತ್ವೋಭಯೈರ್ಮಂತ್ರೈಶ್ಚರುಂ ಸ್ನಾತುಂ ಗತೋ ಮುನಿಃ ॥೮॥**

**ಸಃ** ಆ **ಋಚೀಕಃ** ಋಚೀಕ ಋಷಿಯು, **ತಾನ್** ಆ ರೀತಿಯಾದ **ಅಶ್ವಾನ್** ಕುದುರೆಗಳನ್ನು, **ಆನೀಯ** ಕರೆತಂದು, **ದತ್ವಾ** ಕೊಟ್ಟು, **ವರಾಂಗನಾಂ** ಸುಂದರ ತರುಣಿಯನ್ನು, **ಉಪಯೇಮೇ** ವಿವಾಹ ಮಾಡಿಕೊಂಡನು. **ಅಪತ್ಯಕಾಮ್ಯಯಾ** ಸಂತಾನಾಪೇಕ್ಷೆಯುಳ್ಳ **ಪತ್ನ್ಯಾ** ಹೆಂಡತಿಯಿಂದ, **ಶ್ವಶ್ರ್ವಾ ಚ** ಅತ್ತೆಯಿಂದಲೂ, **ಪ್ರಾರ್ಥಿತಃ** ಪ್ರಾರ್ಥಿತನಾದ, ಋಚೀಕನು, **ಉಭಯೈಃ** ಎರಡು (ಸಾತ್ವಿಕ ರಾಜಸವಾದ) **ಮಂತ್ರೈಃ** ಮಂತ್ರಗಳಿಂದ, **ಚರುಂ** ಚರುವನ್ನು, **ಶ್ರಪಯಿತ್ವಾ** ಬೇಯಿಸಿ (ಈ ಭಾಗವು ತಾಯಿಗೆ, ಈ ಭಾಗವು ನಿನಗೆ ಹೀಗೆಂದು ಹೇಳಿ) **ಸ್ನಾತುಂ** ಸ್ನಾನ ಮಾಡಲು **ಗತಃ** ಹೋದನು.

**ತಾತ್ಪರ್ಯ-** ಆ ಋಚೀಕನು ಅದೇ ರೀತಿಯಾದ ಕುದುರೆಗಳನ್ನು ತಂದುಕೊಟ್ಟು ಆ ಕನ್ಯೆಯನ್ನು ವಿವಾಹ ಮಾಡಿಕೊಂಡನು. ಆ ಹೆಂಡತಿಯು ಮತ್ತು ಅತ್ತೆಯು ಸಂತತಿಯನ್ನು ಯಾಚಿಸಿದರು. ಮುನಿಯಾದರೂ ಚರುವನ್ನು ಸಾತ್ವಿಕ ರಾಜಸ ಎರಡು ಮಂತ್ರಗಳಿಂದ ಬೇಯಿಸಿ ಒಂದು ಭಾಗ ತಾಯಿಗೂ ಇನ್ನೊಂದು ಭಾಗ ಹೆಂಡತಿಗೂ ತೆಗೆದುಕೊಳ್ಳಲು ಹೇಳಿ ಸ್ನಾನಕ್ಕೆ ಹೋದನು. ॥೮॥

**ತಾವತ್ಸತ್ಯವತೀ ಮಾತ್ರಾ ಸ್ವಚರುಂ ಯಾಚಿತಾ ಸತೀ ।**
**ಶ್ರೇಷ್ಠಂ ಮತ್ವಾ ತಯಾಽಯಚ್ಛನ್ಮಾತ್ರೇ ಮಾತುರದಾತ್ಸ್ವಯಮ್ ॥೯॥**

**ತಾವತ್** ಆಗ, **ತಯಾ** ಆ **ಮಾತ್ರಾ** ತನ್ನ ತಾಯಿಯಿಂದ, **ಸತ್ಯವತೀ** ಸತ್ಯವತಿಯು, **ಸ್ವಚರುಂ** ತನ್ನ ಚರುವನ್ನು, **ಶ್ರೇಷ್ಠಂ** ಉತ್ತಮ ಎಂದು, **ಮತ್ವಾ** ತಿಳಿದು, **ಯಾಚಿತಾ ಸತೀ** ಯಾಚಿತಳಾಗಿ, **ಮಾತ್ರೇ** ಆ ತಾಯಿಗೆ, **ಸ್ವಚರುಂ** ತನ್ನ ಚರುವನ್ನು, **ಅಯಚ್ಛತ್** ಕೊಟ್ಟಳು. **ಸ್ವಯಂ** ತಾನು **ಮಾತುಃ** ತಾಯಿಯ ಚರುವನ್ನು **ಅದಾತ್** ಸ್ವೀಕರಿಸಿದಳು.

**ತಾತ್ಪರ್ಯ-** ಆಗ ಸತ್ಯವತಿಯ ಚರುವನ್ನು ಉತ್ತಮವೆಂದು ತಿಳಿದು ಅವಳ ತಾಯಿಯು ಆ ಚರುವನ್ನು ಯಾಚಿಸಿದಳು. ಸತ್ಯವತಿ ತನ್ನ ಚರುವನ್ನು ತಾಯಿಗೆ ಕೊಟ್ಟು ತಾಯಿಯ ಚರುವನ್ನು ತಾನು ಸ್ವೀಕರಿಸಿದಳು. ॥೯॥

**ತದ್ವಿಜ್ಞಾಯ ಮುನಿಃ ಪ್ರಾಹ ಪತ್ನೀಂ ಕಷ್ಟಮಕಾರ್ಷೀ ನಃ ।**
**ಘೋರೋ ದಂಡಧರಃ ಪುತ್ರೋ ಭ್ರಾತಾ ತೇ ಬ್ರಹ್ಮವಿತ್ತಮಃ ॥೧೦॥**

**ಮುನಿಃ** ಋಚೀಕಮುನಿಯು, **ತತ್** ಈ ರೀತಿ ತಾಯಿ ಮಗಳ ನಿಯಮಾತಿಕ್ರಮ-ವನ್ನು, **ವಿಜ್ಞಾಯ** ತಪಃಶಕ್ತಿಯಿಂದ ತಿಳಿದು, **ನಃ** ನಮಗೆ ನಿನ್ನಿಂದ **ಕಷ್ಟಂ** ಜುಗುಪ್ಸಿತವಾದದ್ದು, **ಅಕಾರ್ಷಿ** ಮಾಡಲ್ಪಟ್ಟಿತು. ಎಂದು **ಪತ್ನೀಂ** ಹೆಂಡತಿಯನ್ನು ಕುರಿತು **ಪ್ರಾಹ** ಹೇಳಿದನು. **ಪುತ್ರಃ** ನಿನ್ನ ಮಗನು, **ಘೋರಃ** ಕ್ರೂರಿಯಾಗಿಯೂ, **ದಂಡಧರಃ** ದಂಡಧಾರಿಯಾಗಿಯೂ ಆಗುತ್ತಾನೆ, **ತೇ** ನಿನ್ನ **ಭ್ರಾತಾ** ಸಹೋದರನು, **ಬ್ರಹ್ಮವಿತ್ತಮಃ** ಬ್ರಹ್ಮಜ್ಞಾನಿಯು, ಆಗುತ್ತಾನೆ ಎಂದು ಹೇಳಿದರು.

**ತಾತ್ಪರ್ಯ-** ಋಚೀಕಮುನಿಯು ಸ್ನಾನದಿಂದ ಮನೆಗೆ ಬಂದನು. ಈ ತಾಯಿ ಮಗಳು ಮಾಡಿಕೊಂಡ, ವ್ಯತ್ಯಾಸವನ್ನು ತನ್ನ ಜ್ಞಾನದೃಷ್ಟಿಯಿಂದ ತಿಳಿದನು. ತನ್ನ ಹೆಂಡತಿಗೆ ಹೇಳಿದನು. ಏನೆಂದರೆ ನಿನ್ನಲ್ಲಿ ಕ್ರೂರಿಯಾದ ಮಗನು ಜನಿಸುತ್ತಾನೆ. ನಿನ್ನ ತಾಯಿಯಲ್ಲಿ ಬ್ರಹ್ಮಜ್ಞಾನಿಯು ಜನಿಸುತ್ತಾನೆಂದು ಹೇಳಿದನು. ||೧೦||

**ಪ್ರಸಾದಿತಃ ಸತ್ಯವತ್ಯಾ ಮೈವಂ ಭೂದಿತಿ ಭಾರ್ಗವಃ |**
**ಅಥ ತರ್ಹಿ ಭವೇತ್ಪೌತ್ರೋ ಜಮದಗ್ನಿಸ್ತತೋಽಭವತ್ ||೧೧||**

**ಭಾರ್ಗವಃ** ಋಚೀಕರು, **ಸತ್ಯವತ್ಯಾ** ಸತ್ಯವತಿಯಿಂದ, **ಏವಂ** ಈ ರೀತಿಯಾಗಿ, **ಮಾ ಭೂತ್** ಆಗಬಾರದು ಎಂದು **ಪ್ರಸಾದಿತಃ** ಪ್ರಾರ್ಥಿತರಾಗಿ, **ಅಥ** ನಂತರ, **ತರ್ಹಿ** ಹಾಗಾದರೆ, **ಪೌತ್ರಃ** ನಿನ್ನ ಮೊಮ್ಮಗನು, ಕ್ರೂರಿಯೂ, ದಂಡಧಾರಿಯು **ಭವೇತ್** ಆಗುತ್ತಾನೆ ಎಂದನು. **ತತಃ** ಅನಂತರ, **ಜಮದಗ್ನಿಃ** ಜಮದಗ್ನಿಯು **ಅಭವತ್** ಜನಿಸಿದನು.

**ತಾತ್ಪರ್ಯ-** ಸತ್ಯವತಿಯು ಋಚೀಕ ಋಷಿಗಳನ್ನು ಹಾಗೆ ಆಗಬಾರದೆಂದು ಪ್ರಾರ್ಥಿಸಿದಳು. ಈ ಪ್ರಾರ್ಥನೆಯನ್ನು ಮನ್ನಿಸಿ ಋಚೀಕರು ನಿನ್ನ ಮೊಮ್ಮಗ ಕ್ರೂರಿಯು ದಂಡಧರನು ಆಗುತ್ತಾನೆಂದು ಹೇಳಿದರು. ಇವಳಲ್ಲಿ ''ಜಮದಗ್ನಿ'' ಋಷಿಗಳು ಜನಿಸಿದರು. ||೧೧||

**ಸಾ ಚಾಭೂತ್ಸುಮಹಾಪುಣ್ಯಾ ಕೌಶಿಕೀ ಲೋಕಪಾವನೀ |**
**ರೇಣೋಃ ಸುತಾಂ ರೇಣುಕಾಂ ವೈ ಜಮದಗ್ನಿರುವಾಹ ಯಾಮ್ ||೧೨||**

**ಸಾ** ಆ ಸತ್ಯವತಿಯು, **ಮಹಾಪುಣ್ಯಾ** ಮಹಾಪುಣ್ಯತಮಳಾದ, **ಲೋಕಪಾವನೀ** ಲೋಕಪಾವನಳಾದ, **ಕೌಶಿಕೀ** ಕೌಶಿಕೀ ಎಂಬ ನದಿಯು, **ಅಭೂತ್** ಆದಳು. **ರೇಣೋಃ** ರೇಣುವಿನ, **ಸುತಾಂ** ಮಗಳಾದ, **ಯಾಂ** ಯಾವ **ರೇಣುಕಾಂ** ರೇಣುಕೆಯನ್ನು, **ಜಮದಗ್ನಿಃ** ಜಮದಗ್ನಿಗಳು **ಉವಾಹ** ವಿವಾಹ ಮಾಡಿಕೊಂಡರು.

**ತಾತ್ಪರ್ಯ-** ಆ ಸತ್ಯವತಿಯು ಮಹಾಪುಣ್ಯತಮವಾದ ಕೌಶಿಕೀ ಎಂಬ ನದಿಯಾಗಿ ಪ್ರವಹಿಸಿದಳು. ರೇಣುವಿನ ಮಗಳಾದ ರೇಣುಕಾದೇವಿಯನ್ನು ಜಮದಗ್ನಿ ಋಷಿಗಳು ವಿವಾಹವಾದರು. ।।೧೨।।

**ತಸ್ಯಾಂ ವೈ ಭಾರ್ಗವಋಷೇಃ ಸುತಾ ವಸುಮದಾದಯಃ ।**
**ಯವೀಯಾನ್ ಜಜ್ಞ ಏತೇಷಾಂ ರಾಮ ಇತ್ಯಭಿವಿಶ್ರುತಃ ।।೧೩।।**

**ಭಾರ್ಗವಋಷೇಃ** ಆ ಜಮದಗ್ನಿಗಳ ದೆಶೆಯಿಂದ, **ತಸ್ಯಾಂ** ಆ ರೇಣುಕೆಯಲ್ಲಿ **ವಸುಮದಾದಯಃ** ವಸುಮಂತನೇ ಮೊದಲಾದವರು, **ಸುತಾಃ** ಮಕ್ಕಳಾದರು. **ಏತೇಷಾಂ** ಇವರುಗಳಿಗೆ, **ಯವೀಯಾನ್** ಕನಿಷ್ಠನಾದವನು, **ರಾಮಃ ಇತಿ** ಪರಶುರಾಮನೆಂದು, **ಅಭಿವಿಶ್ರುತಃ** ಪ್ರಸಿದ್ಧಿ ಹೊಂದಿದವನಾಗಿ, **ಜಜ್ಞೇ** ಜನಿಸಿದನು.

**ತಾತ್ಪರ್ಯ-** ಆ ಜಮದಗ್ನಿಗಳ ದೆಶೆಯಿಂದ ರೇಣುಕೆಯಲ್ಲಿ ವಸುಮಂತನೇ ಮೊದಲಾದವರು ಜನಿಸಿದರು. ಇವರುಗಳಲ್ಲಿ ಕೊನೆಯವನು ಪರಶುರಾಮನೆಂದು ಪ್ರಸಿದ್ಧನಾಗಿರುತ್ತಾನೆ. ।।೧೩।।

**ಯಮಾಹುರ್ವಾಸುದೇವಾಂಶಂ ಹೈಹಯಾನಾಂ ಕುಲಾಂತಕಮ್ ।**
**ತ್ರಿಃಸಪ್ತಕೃತ್ವೋ ಯ ಇಮಾಂ ಚಕ್ರೇ ನಿಃಕ್ಷತ್ರಿಯಾಂ ಮಹೀಮ್ ।।೧೪।।**

**ಹೈಹಯಾನಾಂ** ಹೈಹಯರಾಜರ **ಕುಲಾಂತಕಂ** ಕುಲನಾಶಕನಾದ, **ಯಂ** ಯಾವ ಈ ಪರಶುರಾಮನನ್ನು, **ವಾಸುದೇವಾಂಶಂ** ಪದ್ಮನಾಭನ ಅಂಶವನ್ನಾಗಿ, **ಆಹುಃ** ಕರೆದರು, **ಯಃ** ಯಾವಾತನು, **ತ್ರಿಃಸಪ್ತಕೃತ್ವಃ** ಇಪ್ಪತ್ತೊಂದು ಸಾರಿ ತಿರುಗಿ, **ಇಮಾಂ ಮಹೀಂ** ಈ ಭೂಮಿಯನ್ನು, **ನಿಃಕ್ಷತ್ರಿಯಾಂ** ಕ್ಷತ್ರಿಯರಹಿತವನ್ನಾಗಿ, **ಚಕ್ರೇ** ಮಾಡಿದನು.

**ತಾತ್ಪರ್ಯ-** ಹೈಹಯವಂಶನಾಶಕನಾದ ಇವನನ್ನು ಪದ್ಮನಾಭನ ಅಂಶನೆಂದು ಹೇಳುತ್ತಾರೆ. ಈತನೇ ಇಪ್ಪತ್ತೊಂದು ಸಾರಿ ಭೂಮಂಡಲವನ್ನು ಸಂಚರಿಸಿ ಭೂಮಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡಿದನು. ।।೧೪।।

**ದೃಪ್ತಂ ಕ್ಷತ್ರಂ ಭುವೋ ಭಾರಮಬ್ರಹ್ಮಣ್ಯಮಧಾರ್ಮಿಕಮ್ ।**
**ರಜಸ್ತಮೋವೃತಮಹನ್ ಫಲ್ಗುನ್ಯಪಿ ಕೃತೇಽಂಹಸಿ ।।೧೫।।**

**ದೃಪ್ತಂ** ಉನ್ಮತ್ತವಾದ, **ಭುವಃ** ಭೂಮಿಗೆ, **ಭಾರಭೂತಂ** ಭಾರವಾದದ್ದನ್ನು, **ಅಧಾರ್ಮಿಕಂ** ಅಧಾರ್ಮಿಕವಾಗಿರುವ ಮತ್ತು **ಅಬ್ರಹ್ಮಣ್ಯಂ** ಬ್ರಾಹ್ಮಣರಲ್ಲಿ ವಿಶ್ವಾಸವಿಲ್ಲದಿರುವುದನ್ನು, **ರಜಸ್ತಮೋವೃತಂ** ರಾಗದ್ವೇಷಾದಿಗಳಿಂದ ಕೂಡಿದ,

**ಫಲ್ಗುನಿ** ಸ್ವಲ್ಪವೇ, **ಅಂಹಸಿ** ಅಪರಾಧವು, **ಕೃತೇ ಅಪಿ** ಮಾಡಿದರೂ **ಕ್ಷತ್ರಂ** ಕ್ಷತ್ರಿಯಕುಲವನ್ನು (ಕ್ಷತ್ರಿಯರನ್ನು), **ಅಹನ್** ಸಂಹಾರ ಮಾಡಿದನು.

**ತಾತ್ಪರ್ಯ-** ಈ ಪರಶುರಾಮನು, ಉನ್ಮತ್ತರಾಗಿ ಭೂಮಿಗೆ ಭಾರಭೂತರಾಗಿ ಅಧಾರ್ಮಿಕರಾಗಿರುವ, ರಾಗದ್ವೇಷಾದಿಗಳಿಂದ ಕೂಡಿರುವ, ಬ್ರಾಹ್ಮಣ ವಿರೋಧಿಗಳಾದ, ಕ್ಷತ್ರಿಯರನ್ನು ಸ್ವಲ್ಪ ಅಪರಾಧಕ್ಕಾಗಿಯೇ ಸಂಹಾರ ಮಾಡಿದನು. ।।೧೫।।

**ರಾಜೋವಾಚ-**

**ಕಿಂ ತದಂಹೋ ಭಗವತೋ ರಾಜನ್ಯೈರಜಿತಾತ್ಮಭಿಃ ।**
**ಕೃತಂ ತೇನ ಕುಲಂ ನಷ್ಟಂ ಕ್ಷತ್ರಿಯಾಣಾಮಭೀಕ್ಷ್ಣಶಃ ।।೧೬।।**

**ಯೇನ** ಯಾವ ಪಾಪದಿಂದ **ಕ್ಷತ್ರಿಯಾಣಾಂ** ಕ್ಷತ್ರಿಯರ, **ಕುಲಂ** ವಂಶವು, **ಅಭೀಕ್ಷ್ಣಶಃ** ಅನೇಕ ಸಾರಿ, **ನಷ್ಟಂ** ನಷ್ಟವಾಯಿತೋ, **ತತ್** ಅಂಥ, **ಅಜಿತಾತ್ಮಭಿಃ** ಇಂದ್ರಿಯನಿಗ್ರಹವಿಲ್ಲದ, **ರಾಜನ್ಯೈಃ** ಕ್ಷತ್ರಿಯರಿಂದ **ಭಗವತಃ** ಭಗವಂತನಿಗೆ, **ಕೃತಂ** ಮಾಡಲ್ಪಟ್ಟ **ಅಂಹಃ** ಅಪರಾಧವು **ಕಿಂ** ಏನು?

**ತಾತ್ಪರ್ಯ-** ಯಾವ ಪಾಪದಿಂದ ಕ್ಷತ್ರಿಯರ ವಂಶವು ಬಹುಸಾರಿ ನಷ್ಟವಾಯಿತೋ, ಅಂಥ ಪಾಪವು ಯಾವುದು? ಇಂದ್ರಿಯ ನಿಗ್ರಹವಿಲ್ಲದ ರಾಜರು ಯಾವ ಅಪರಾಧವನ್ನು ಮಾಡಿದರು. ।।೧೬।।

**ಬಾದರಾಯಣಿರುವಾಚ-**

**ಹೈಹಯಾನಾಮಧಿಪತಿರರ್ಜುನಃ ಕ್ಷತ್ರಿಯರ್ಷಭಃ ।**
**ದತ್ತಂ ನಾರಾಯಣಸ್ಯಾಂಶಮಾರಾಧ್ಯ ಪರಿಕರ್ಮಭಿಃ ।।೧೭।।**

**ಬಾಹೂನ್ ದಶಶತಂ ಲೇಭೇ ದುರ್ಧರ್ಷತ್ವಮರಾತಿಷು ।**
**ಅವ್ಯಾಹತೇಂದ್ರಿಯಾಜಃಶ್ರೀತೇಜೋವೀರ್ಯಂ ಯಶೋಬಲಮ್।।೧೮।।**

**ಹೈಹಯಾನಾಂ** ಹೈಹಯರಾಜರ **ಅಧಿಪತಿಃ** ಒಡೆಯನಾದ, **ಅರ್ಜುನಃ** ಅರ್ಜುನನೆಂಬುವ, **ಕ್ಷತ್ರಿಯರ್ಷಭಃ** ಕ್ಷತ್ರಿಯ ಶ್ರೇಷ್ಠನು, **ನಾರಾಯಣಸ್ಯ** ನಾರಾಯಣನ **ಅಂಶಂ** ಅಂಶವಾದ, **ದತ್ತಂ** ದತ್ತನನ್ನು, **ಪರಿಕರ್ಮಭಿಃ** ಪರಿಚರ್ಯಾದಿಗಳಿಂದ, **ಆರಾಧ್ಯ** ಪೂಜಿಸಿ, **ಅರಾತಿಷು** ಶತ್ರುಗಳಲ್ಲಿ **ದುರ್ಧರ್ಷತ್ವಂ** ಅಜೇಯತ್ವರೂಪವಾದ ವರವನ್ನು, ಮತ್ತು **ಅವ್ಯಾಹತೇಂದ್ರಿಯಾಜಃಶ್ರೀತೇಜೋ-ವೀರ್ಯಂ** ನಾಶವಾಗದಿರುವ ಇಂದ್ರಿಯ ಶರೀರಕಾಂತಿ, ವೀರ್ಯಾದಿಗಳನ್ನು **ಯಶೋಬಲಂ** ಯಶಸ್ಸು, ಸ್ವಾಭಾವಿಕಬಲ, ಇವುಗಳನ್ನು **ದಶಶತಂ** ಒಂದು ಸಾವಿರ, **ಬಾಹೂನ್** ಬಾಹುಗಳನ್ನು, **ಲೇಭೇ** ಹೊಂದಿದನು.

**ತಾತ್ಪರ್ಯ-** ಹೈಹಯರಾಜನಾದ ಅರ್ಜುನನೆಂಬ ಕ್ಷತ್ರಿಯನು ನಾರಾಯಣನ ಅಂಶವಾದ ದತ್ತನನ್ನು ಆರಾಧಿಸಿ, ಶತ್ರುಗಳಿಂದ ಅಜೇಯತ್ವರೂಪವಾದ ವರವನ್ನು, ನಾಶವಾಗದಿರುವ ಇಂದ್ರಿಯಪಾಟವವನ್ನು ಸಾವಿರಬಾಹುಗಳನ್ನು ಸ್ಥಿರವಾದ, ಕಾಂತಿವೀರ್ಯಾದಿಗಳನ್ನು ಹೊಂದಿದನು. ।।೧೭-೧೮।।

**ಯೋಗೇಶ್ವರತ್ವಮೈಶ್ವರ್ಯಂ ಗುಣಾ ಯತ್ರಾಣಿಮಾದಯಃ ।**
**ಚಚಾರಾವ್ಯಾಹತಗತಿರ್ಲೋಕೇಷು ಪವನೋ ಯಥಾ ।।೧೯।।**

**ಯೋಗೇಶ್ವರತ್ವಂ** ಯೋಗೇಶ್ವರ ಸ್ವಭಾವವನ್ನು, **ಐಶ್ವರ್ಯಂ** ಐಶ್ವರ್ಯವನ್ನು, **ಅಣಿಮಾದಯಃ ಗುಣಾಃ** ಅಣಿಮಾದಿ ಅಷ್ಟಸಿದ್ಧಿಗಳು, **ಯತ್ರ** ಯಾವ ಐಶ್ವರ್ಯದಲ್ಲಿ ಇದೆಯೋ, ಅಂಥಾ ಐಶ್ವರ್ಯವನ್ನು, **ಲೇಭೇ** ಹೊಂದಿದನು. **ಲೋಕೇಷು** ಲೋಕಗಳಲ್ಲಿ **ಪವನಃ ಯಥಾ** ಮಾರುತನಂತೆ, **ಅವ್ಯಾಹತಗತಿಃ** ತಡೆಯಿಲ್ಲದ ಗಮನ ಉಳ್ಳವನಾಗಿ, **ಚಚಾರ** ಸಂಚರಿಸಿದನು.

**ತಾತ್ಪರ್ಯ-** ಈ ರಾಜನು ಯೋಗೇಶ್ವರರ ಗುಣವನ್ನು ಅಣಿಮಾದಿ ಅಷ್ಟಸಿದ್ಧಿ-ಗಳನ್ನು ಹೊಂದಿ, ಪವನನಂತೆ ಎಲ್ಲಾ ಲೋಕಗಳಲ್ಲೂ ಸಂಚರಿಸಿದನು. ।।೧೯।।

**ಸ್ತ್ರೀರತ್ನೈರಾವೃತಃ ಕ್ರೀಡನ್ ರೇವಾಂಭಸಿ ಮದೋತ್ಕಟಃ ।**
**ವೈಜಯಂತೀಂ ಸ್ರಜಂ ಬಿಭ್ರದ್ರುರೋಧ ಸರಿತಂ ಭುಜೈಃ ।।೨೦।।**

**ಸ್ತ್ರೀರತ್ನೈಃ** ಸ್ತ್ರೀರತ್ನಗಳಿಂದ, **ಆವೃತಃ** ಕೂಡಿದವನಾದ ಆ ರಾಜನು, **ರೇವಾಂಭಸಿ** ನರ್ಮದಾ ನದಿಯಲ್ಲಿ, **ಮದೋತ್ಕಟಃ** ಮದದಿಂದ ಕೂಡಿದವನಾಗಿ, **ಕ್ರೀಡನ್** ಕ್ರೀಡಿಸುತ್ತಾ, **ವೈಜಯಂತೀಂ** ವೈಜಯಂತೀ ಎಂಬ **ಸ್ರಜಂ** ಮಾಲೆಯನ್ನು **ಬಿಭ್ರತ್** ಧರಿಸಿದವನಾಗಿ, **ಭುಜೈಃ** ತನ್ನ ಭುಜಗಳಿಂದ, **ಸರಿತಂ** ನದಿಯನ್ನು, **ರುರೋಧ** ತಡೆದನು.

**ತಾತ್ಪರ್ಯ-** ಈ ರಾಜನು ಸ್ತ್ರೀರತ್ನಗಳಿಂದ ಕೂಡಿಕೊಂಡು ನರ್ಮದಾ ನದಿಯಲ್ಲಿ ಕ್ರೀಡಿಸುತ್ತಾ ವೈಜಯಂತೀ ಮಾಲೆಯನ್ನು ಧರಿಸಿ ತನ್ನ ಭುಜಗಳಿಂದ ನದಿಯ ಪ್ರವಾಹವನ್ನು ತಡೆಗಟ್ಟಿದನು. ।।೨೦।।

**ವಿಪ್ಲಾವಿತಂ ಸ್ವಶಿಬಿರಂ ಪ್ರತಿಸ್ರೋತಃ ಸರಿಜ್ಜಲೈಃ ।**
**ನಾಮೃಷ್ಯತ್ತಸ್ಯ ತದ್ವೀರ್ಯಂ ವೀರಮಾನೀ ದಶಾನನಃ ।।೨೧।।**

**ವೀರಮಾನೀ** ವೀರನೆಂಬ ಅಭಿಮಾನವುಳ್ಳ, **ದಶಾನನಃ** ರಾವಣನು, **ಪ್ರತಿಸ್ರೋತಃ ಸರಿಜ್ಜಲೈಃ** ಎದುರಾಗಿ ಪ್ರವಹಿಸುತ್ತಿರುವ ನದಿಯ ನೀರಿನಿಂದ, **ವಿಪ್ಲಾವಿತಂ** ಆಪತ್ತಿಗೆ

ಗುರಿಯಾದ, (ತೊಯಿದ) **ಸ್ವಶಿಬಿರಂ** ತನ್ನ ಸೈನ್ಯದ ಬಿಡಾರವನ್ನು ನೋಡಿ, **ತಸ್ಯ** ಆ ಕಾರ್ತವೀರ್ಯಾರ್ಜುನನ **ವೀರ್ಯಂ** ಪರಾಕ್ರಮವನ್ನು, **ನಾಮೃಷ್ಯತ್** ಸಹಿಸಲಿಲ್ಲ.

**ತಾತ್ಪರ್ಯ-** ತಾನೇ ವೀರನೆಂದು ಅಭಿಮಾನಿಯಾದ ರಾವಣನು ಎದುರಾಗಿ ಬರುತ್ತಿರುವ ಪ್ರವಾಹ ಜಲದಿಂದ ಆಪತ್ತಿಗೆ ಗುರಿಯಾದ ತನ್ನ ಸೇನಾಬಿಡಾರವನ್ನು ನೋಡಿ ಸಹಿಸಲಿಲ್ಲ. ।।೨೧।।

**ಗೃಹೀತೋ ಲೀಲಯಾ ಸ್ತ್ರೀಣಾಂ ಸಮಕ್ಷಂ ಕೃತಕಿಲ್ಬಿಷಃ ।**
**ಮಾಹಿಷ್ಮತ್ಯಾಂ ಸನ್ನಿರುದ್ಧೋ ಮುಕ್ತೋ ಯೇನ ಕಪಿರ್ಯಥಾ ।।೨೨।।**

**ಕೃತಕಿಲ್ಬಿಷಃ** ಅಪರಾಧ ಮಾಡಿದ ರಾವಣನು, **ಸ್ತ್ರೀಣಾಂ** ಹೆಂಗಸರ **ಸಮಕ್ಷಂ** ಎದುರಿನಲ್ಲಿ, **ಮಾಹಿಷ್ಮತ್ಯಾಂ** ಮಾಹಿಷ್ಮತಿಯಲ್ಲಿ, **ಯೇನ** ಯಾವ ಅರ್ಜುನನಿಂದ **ಸನ್ನಿರುದ್ಧಃ** ಕಟ್ಟಲ್ಪಟ್ಟವನಾಗಿ, **ಕಪಿಃ ಯಥಾ** ಕಪಿಯಂತೆ, **ಗೃಹೀತಃ** ಕಟ್ಟಿಹಾಕಿ **ಮುಕ್ತಃ** ಬಿಡಲ್ಪಟ್ಟನು.

**ತಾತ್ಪರ್ಯ-** ಈ ಕಾರ್ತವೀರ್ಯಾರ್ಜುನನು ತನ್ನನ್ನು ಕೆಣಕಿದ ರಾವಣನನ್ನು ಹೆಂಗಸರ ಎದುರಿನಲ್ಲಿ ಮಾಹಿಷ್ಮತಿಯಲ್ಲಿ ಕಪಿಯಂತೆ ಕಟ್ಟಿ ಹಾಕಿ ಪುನಃ ಬಿಡಿಸಿದನು.

**ಸ ಏಕದಾ ತು ಮೃಗಯಾಂ ವಿಚರನ್ ವಿಪಿನೇ ವನೇ ।**
**ಯದೃಚ್ಛಯಾಽಽಶ್ರಮಪದಂ ಜಮದಗ್ನೇರುಪಾವಿಶತ್ ।। ೨೩।।**

**ಸಃ** ಈ ಕಾರ್ತವೀರ್ಯಾರ್ಜುನನು, **ಏಕದಾ ತು** ಒಮ್ಮೆ, **ಮೃಗಯಾಂ** ಬೇಟೆಗಾಗಿ **ವಿಪಿನೇ** ಗಹನವಾದ, **ವನೇ** ವನದಲ್ಲಿ, **ವಿಚರನ್** ಸಂಚರಿಸುತ್ತಾ, **ಯದೃಚ್ಛಯಾ** ಆಕಸ್ಮಾತ್ತಾಗಿ, **ಜಮದಗ್ನೇಃ** ಜಮದಗ್ನಿಯ, **ಆಶ್ರಮಪದಂ** ಆಶ್ರಮವನ್ನು **ಉಪಾವಿಶತ್** ಪ್ರವೇಶಿಸಿದನು.

**ತಾತ್ಪರ್ಯ-** ಆ ಕಾರ್ಯವೀರ್ಯಾರ್ಜುನನು ಒಮ್ಮೆ ಬೇಟೆಗಾಗಿ ವನದಲ್ಲಿ ಸಂಚರಿಸುತ್ತಾ ಆಕಸ್ಮಾತ್ತಾಗಿ ಜಮದಗ್ನಿ ಋಷಿಗಳ ಆಶ್ರಮವನ್ನು ಪ್ರವೇಶಿಸಿದನು.

**ತಸ್ಮೈ ಸ ನರದೇವಾಯ ಮುನಿರರ್ಹಣಮಾಹರತ್ ।**
**ಸಸೈನ್ಯಾಮಾತ್ಯವಾಹಾಯ ಹವಿರ್ಧಾನ್ಯಾ ತಪೋಧನಃ ।।೨೪।।**

**ತಪೋಧನಃ** ತಪೋಧನರಾದ, **ಸಃ ಮುನಿಃ** ಆ ಜಮದಗ್ನಿಗಳು, **ನರದೇವಾಯ** ರಾಜನಾದ **ಸಸೈನ್ಯಾಮಾತ್ಯವಾಹಾಯ** ಸೈನ್ಯ ಮಂತ್ರಿ ಕುದುರೆಗಳಿಂದ ಸಹಿತನಾದ, **ತಸ್ಮೈ** ಆ ರಾಜನಿಗೆ **ಹವಿರ್ಧಾನ್ಯಾ** ಕಾಮಧೇನುವಿನಿಂದ **ಅರ್ಹಣಂ** ಸತ್ಕಾರವನ್ನು **ಆಹರತ್** ನಡೆಸಿದನು.

**ತಾತ್ಪರ್ಯ-** ತಪೋಧನರಾದ ಆ ಜಮದಗ್ನಿ ಮುನಿಗಳು ರಾಜನಾದ ಸೈನ್ಯ ಮಂತ್ರಿ ವಾಹನಗಳಿಂದ ಸಮೇತನಾದ ಈ ಕಾರ್ತವೀರ್ಯಾರ್ಜುನನಿಗೆ, ಕಾಮಧೇನುವಿನಿಂದ ಸತ್ಕಾರವನ್ನು ನಡೆಸಿದನು. ।।೨೪।।

**ಸ ವೀರಸ್ತಸ್ಯ ಸಂದೃಷ್ಟ್ವಾ ಆತ್ಮೈಶ್ವರ್ಯಾತಿಶಾಯಿನಮ್ ।**
**ತನ್ನಾದ್ರಿಯನ್ನಗ್ನಿಹೋತ್ರ್ಯಾಂ ಸಾಭಿಲಾಷಃ ಸಹೈಹಯಃ ।।೨೫।।**

**ಸಃ** ಆ **ವೀರಃ** ವೀರನಾದ ರಾಜನು, **ತಸ್ಯ** ಆ ಮುನಿಯ, **ಆತ್ಮೈಶ್ವರ್ಯಾತಿಶಾಯಿನಂ** ತನ್ನ ಸಂಪತ್ತನ್ನು ಮೀರಿದ ಮುನಿಯ ಸಂಪತ್ತನ್ನು, **ಸಂದೃಷ್ಟ್ವಾ** ನೋಡಿ, **ನ ಆದ್ರಿಯತ್** ಆದರಿಸಲಿಲ್ಲ. **ಸಹೈಹಯಃ** ಹೈಹಯ ಪ್ರಜೆಗಳಿಂದ ಸಹಿತನಾದ ಆತನು, **ಅಗ್ನಿಹೋತ್ರ್ಯಾಂ** ಉದ್ದೇಶಿತವಾದ, ಕಾಮಧೇನುವನ್ನು **ಸಾಭಿಲಾಷಃ** ಅಪೇಕ್ಷೆ ಉಳ್ಳವನಾಗಿ, ಆ ವೀರನಾದ ಕಾರ್ತವೀರ್ಯಾರ್ಜುನನು ತನ್ನ ಐಶ್ವರ್ಯವನ್ನು ಮೀರಿರುವ ಈ ಐಶ್ವರ್ಯವನ್ನು ನೋಡಿ ಆದರಮಾಡಲಿಲ್ಲ. ಅಲ್ಲದೇ ಆ ಕಾಮಧೇನುವನ್ನು ತಾನು ಅಪೇಕ್ಷಿಸಿದನು. ।।೨೫।।

**ಹವಿರ್ಧಾನೀಮೃಷೇರ್ದರ್ಪಾನ್ನರಾನ್ ಹರ್ತುಮಯೋಜಯತ್ ।**
**ತಾಂ ತೇ ಮಾಹಿಷ್ಮತೀಂ ನಿನ್ಯುಃ ಸವತ್ಸಾಂ ಕ್ರಂದತೀಂ ಬಲಾತ್ ।।೨೬।।**

**ಸಃ** ರಾಜನು, **ಋಷೇಃ** ಆ ಜಮದಗ್ನಿ ಋಷಿಗಳ, **ಹವಿರ್ಧಾನೀಂ** ಕಾಮಧೇನುವನ್ನು, **ದರ್ಪಾತ್** ತನ್ನ ದರ್ಪದಿಂದ, **ಮಾಹಿಷ್ಮತೀಂ** ಮಾಹಿಷ್ಮತೀ ನಗರವನ್ನು ಕುರಿತು, **ಹರ್ತುಂ** ಅಪಹರಿಸಲು, **ಅಯೋಜಯತ್** ಅಪ್ಪಣೆ ಮಾಡಿದನು. **ತೇ** ಅವರು, **ಕ್ರಂದತೀಂ** ಅಳುತ್ತಿರುವ, **ಸವತ್ಸಾಂ** ಕರುವಿನಿಂದ ಕೂಡಿದ **ತಾಂ** ಆ ಕಾಮಧೇನುವನ್ನು, **ಬಲಾತ್** ಬಲಾತ್ಕಾರವಾಗಿ **ಮಾಹಿಷ್ಮತೀಂ** ಮಾಹಿಷ್ಮತೀ ನಗರವನ್ನು ಕುರಿತು, **ನಿನ್ಯುಃ** ಕರೆದೊಯ್ದರು.

**ತಾತ್ಪರ್ಯ-** ಆ ರಾಜನು ದರ್ಪದಿಂದ ಆ ಕಾಮಧೇನುವನ್ನು ಮಾಹಿಷ್ಮತೀ ನಗರಕ್ಕೆ ತರಲು ತಮ್ಮವರಿಗೆ ಅಪ್ಪಣೆ ಮಾಡಿದನು. ಆತನ ಸೇವಕರು ಕರುವಿನಿಂದ ಸಹಿತವಾದ ರೋದಿಸುತ್ತಿರುವ ಆ ಕಾಮಧೇನುವನ್ನು ಬಲಾತ್ಕಾರವಾಗಿ ಆ ರಾಜನ ನಗರಕ್ಕೆ ಕರೆದೊಯ್ದರು. ।।೨೬।।

**ಅಥ ರಾಜನಿ ನಿರ್ಯಾತೇ ರಾಮ ಆಶ್ರಮಮಾಗತಃ ।**
**ಶ್ರುತ್ವಾ ತತ್ತಸ್ಯ ದೌರಾತ್ಮ್ಯಂ ಚುಕ್ರೋಧಾಹಿರಿವಾಹತಃ ।।೨೭।।**

**ಅಥ** ಅನಂತರದಲ್ಲಿ, **ರಾಜನಿ** ರಾಜನು, **ನಿರ್ಯಾತೇ** ಹಿಂತಿರುಗಿ ಹೋಗಲು, **ರಾಮಃ** ಪರಶುರಾಮನು, **ಆಶ್ರಮಂ** ಆಶ್ರಮವನ್ನು ಕುರಿತು, **ಆಗತಃ** ಬಂದನು. **ತಸ್ಯ**

ರಾಜನ **ತತ್** ಆ **ದೌರಾತ್ಮ್ಯಂ** ದೌರಾತ್ಮ್ಯವನ್ನು, **ಶ್ರುತ್ವಾ** ಕೇಳಿ, **ಆಹತಃ** ಹೊಡೆತ ತಿಂದ, **ಅಹಿಃ ಇವ** ಸರ್ಪದಂತೆ, **ಚುಕ್ರೋಧ** ಕೋಪಗೊಂಡನು.

**ತಾತ್ಪರ್ಯ-** ಅನಂತರದಲ್ಲಿ ರಾಜನು ಹಿಂತಿರುಗಿ ಹೋದನು. ಆಗ ಪರಶುರಾಮನು ಆಶ್ರಮಕ್ಕೆ ಬಂದು ನೋಡಲು ಈ ರಾಜನ ದೌರ್ಜನ್ಯ ತಿಳಿದು ಹೊಡೆತ ತಿಂದ ಹಾವಿನಂತೆ ಕೋಪಗೊಂಡನು. ॥೨೭॥

**ಪರಶುಂ ಯೋಜಯಮಾಸ ಸತೂಣಂ ಚರ್ಮ ಕಾರ್ಮುಕಮ್ ।**
**ಅನ್ವಧಾವತ ದುರ್ಮರ್ಷೋ ಮೃಗೇಂದ್ರ ಇವ ಯೂಥಪಮ್ ॥೨೮॥**

**ಸತೂಣಂ** ಬತ್ತಳಿಕೆಯಿಂದ ಸಹಿತವಾದ, **ಚರ್ಮಕಾರ್ಮುಕಂ** ಚರ್ಮ ಮತ್ತು ಬಾಣವನ್ನು, **ಪರಶುಂ** ಪರಶ್ವಾಯುಧವನ್ನು, **ಯೋಜಯಾಮಾಸ** ಸ್ವೀಕರಿಸಿದನು. **ದುರ್ಮರ್ಷಃ** ಕೋಪಗೊಂಡವನಾಗಿ, **ಯೂಥಪಂ** ಆನೆಯನ್ನು, **ಮೃಗೇಂದ್ರ ಇವ** ಸಿಂಹದಂತೆ, **ಅನ್ವಧಾವತ** ಬೆನ್ನು ಹತ್ತಿದನು.

**ತಾತ್ಪರ್ಯ-** ಪರಶುರಾಮನು ಪರಶು ಆಯುಧವನ್ನು ಢಾಲುಬಾಣಗಳನ್ನು ಧರಿಸಿ ಕೋಪಗೊಂಡವನಾಗಿ ಸಿಂಹವು ಆನೆಯನ್ನು ಬೆನ್ನಟ್ಟುವಂತೆ ಹೋದನು. ॥೨೮॥

**ತಮಾಪತಂತಂ ಭೃಗುವರ್ಯಮೋಜಸಾ**
**ಧನುರ್ಧರಂ ಬಾಣಪರಶ್ವದಾಯುಧಮ್।**
**ಐಣೇಯಚರ್ಮಾಂಬರಮಾತ್ಮ(ಅರ್ಕ)**
**ಧಾಮಭಿರ್ಯುತಂ ಜಟಾಭಿರ್ದದೃಶೇ ಪುರೀಂ ನೃಪಃ ॥೨೯॥**

**ನೃಪಃ** ರಾಜನು, **ಧನುರ್ಧರಂ** ಧನುರ್ಧಾರಿಯಾದ **ಬಾಣಪರಶ್ವಧಾಯುಧಂ** ಬಾಣಪರಶುಗಳೇ ಆಯುಧವಾಗಿ ಉಳ್ಳ, **ಐಣೇಯಚರ್ಮಾಂಬರಂ** ಜಿಂಕೆಯ ಚರ್ಮವನ್ನು ಉಟ್ಟಿರುವ, **ಆತ್ಮಧಾಮಭಿಃ** ಸ್ವರೂಪಭೂತ, ತೇಜೋಮೂರ್ತಿಗಳಾದ **ಜಟಾಭಿಃ** ಜಟೆಗಳಿಂದ ಕೂಡಿರುವ **ಪುರೀಂ** ತನ್ನ ನಗರವನ್ನು ಕುರಿತು, **ಓಜಸಾ** ವೇಗವಾಗಿ **ಅರ್ಕವತ್** ಬಾಲ ಸೂರ್ಯನಂತೆ, **ಆಪತಂತಂ** ಬರುತ್ತಿರುವ **ಭೃಗುವರ್ಯಂ** ಪರಶುರಾಮನನ್ನು, **ದದೃಶೇ** ನೋಡಿದನು.

**ತಾತ್ಪರ್ಯ-** ರಾಜನು ಧನುರ್ಧಾರಿಯಾದ, ಬಾಣ ಪರಶುಗಳೇ ಮೊದಲಾದ ಆಯುಧಗಳನ್ನು ಧರಿಸಿರುವ ಜಿಂಕೆ ಚರ್ಮವನ್ನು ಉಟ್ಟಿರುವ, ತೇಜೋರೂಪನಾದ, ಜಟಾಧಾರಿಯಾದ ತನ್ನ ನಗರವನ್ನು ಕುರಿತು ವೇಗದಿಂದ ಬರುತ್ತಿರುವ ಪರಶುರಾಮನನ್ನು ನೋಡಿದನು. ॥೨೯॥

**ಅಚೋದಯದ್ಧಸ್ತಿವರಾಂಶ್ಚ ಪತ್ತಿಭಿ-**
**ರ್ಗದಾಸಿಬಾಣರ್ಷ್ಟಿಶತಘ್ನಿಶಕ್ತಿಭಿಃ ।**
**ಅಕ್ಷೌಹಿಣೀಃ ಸಪ್ತದಶಾತಿಭೀಷಣಾಸ್ತಾ**
**ರಾಮ ಏಕೋ ಭಗವಾನಸೂದಯತ್ ॥೩೦॥**

ರಾಜನು, **ಹಸ್ತಿವರಾನ್** ಶ್ರೇಷ್ಠವಾದ ಆನೆಗಳನ್ನು, **ಪತ್ತಿಭಿಃ** ಕಾಲಾಳುಗಳಿಂದ, **ಗದಾ** ಗದೆಯು, **ಅಸಿ** ಖಡ್ಗವು, **ಬಾಣ** ಬಾಣಗಳು, **ಋಷ್ಟಿಶತಘ್ನಿಶಕ್ತಿಭಿಃ** ಈ ಮೂರು ಹೆಸರಿನ ವಿಶೇಷ ಆಯುಧಗಳಿಂದ, ಸಹಿತವಾದ, **ಸಪ್ತದಶ** ಹದಿನೇಳು ಆದ **ಅಕ್ಷೋಹಿಣೀಃ** ಅಕ್ಷೋಹಿಣಿಗಳುಳ್ಳ ಸೈನ್ಯವನ್ನು **ಅಚೋದಯತ್** ಯುದ್ಧಕ್ಕಾಗಿ ಕಳುಹಿಸಿದನು, **ಅತಿಭೀಷಣಾಃ** ಅತ್ಯಂತ ಭಯಂಕರವಾದ **ತಾಃ** ಆ ಎಲ್ಲಾ ಸೈನ್ಯಗಳನ್ನು **ಏಕಃ** ಒಬ್ಬನಾದ, **ಭಗವಾನ್** ಷಡ್ಗುಣ್ಯೈಶ್ವರ್ಯಸಂಪನ್ನನಾದ **ರಾಮಃ** ಪರಶುರಾಮನು, **ಅಸೂದಯತ್** ನಾಶ ಮಾಡಿದನು.

**ತಾತ್ಪರ್ಯ-** ಆಗ ಕಾರ್ತವೀರ್ಯಾರ್ಜುನನು ತನ್ನ ಚತುರಂಗಬಲಗಳನ್ನು ಆಯುಧ ಸಹಿತವಾಗಿ ಪರಶುರಾಮರ ಮೇಲೆ ಯುದ್ಧಕ್ಕಾಗಿ ಕಳುಹಿಸಿದನು. ಪರಶುರಾಮನು ಆ ಎಲ್ಲಾ ಸೈನ್ಯವನ್ನು ಒಬ್ಬನೇ ಸಂಹರಿಸಿದನು. ॥೩೦॥

**ಯತೋ ಯತೋಽಸೌ ಪ್ರಹರನ್ಪರಶ್ವಧೋ**
**ಮನೋಽನಿಲೌಜಾಃ ಪರಚಕ್ರಸೂದನಃ ।**
**ತತಸ್ತತಶ್ಛಿನ್ನ ಭುಜೋರುಕಂಧರಾ**
**ನಿಪೇತುರುರ್ವ್ಯಾಂ ಹತಸೂತವಾಹನಾಃ ॥೩೧॥**

**ಪರಚಕ್ರಸೂದನಃ** ಶತ್ರುಸೈನ್ಯ ಸಂಹಾರಕನಾದ, **ಮನೋನಿಲೌಜಾಃ** ಮನೋವೇಗ ವಾಯುವೇಗದಂತೆ, ಉಳ್ಳ **ಪರಶ್ವಧಃ** ಪರಶುಧಾರಿಯಾದ **ಅಸೌ** ಪರಶುರಾಮನು, **ಯತಃ ಯತಃ** ಹೇಗೇ ಹೇಗೇ **ಪ್ರಹರನ್** ಹೊಡೆದನೋ, **ತತಃ ತತಃ** ಹಾಗೇ ಹಾಗೇ **ಛಿನ್ನಭುಜೋರುಕಂಧರಾಃ** ಕತ್ತರಿಸಿದ ಭುಜ, ಎದೆ, ಕುತ್ತಿಗೆ ಉಳ್ಳವರಾಗಿ, **ಉರ್ವ್ಯಾಂ** ಭೂತಲದಲ್ಲಿ, **ಹತಸೂತವಾಹನಾಃ** ನಾಶಹೊಂದಿದ ಸಾರಥಿ, ವಾಹನ ಉಳ್ಳವರಾಗಿ, **ನಿಪೇತುಃ** ಬಿದ್ದರು.

**ತಾತ್ಪರ್ಯ-** ಶತ್ರುಸೈನ್ಯಸಂಹಾರಕನಾದ ಮನೋವೇಗದಂತೆ, ವಾಯು-ವೇಗದಂತೆ ವೇಗ ಉಳ್ಳ ಪರಶು, ಗದಾ, ಮೊದಲಾದ ಆಯುಧವನ್ನು ಧರಿಸಿರುವ ಪರಶುರಾಮನು, ಆ ಸೈನ್ಯದ ತೊಳು, ಕುತ್ತಿಗೆ ಮೊದಲಾದವುಗಳನ್ನು ಕತ್ತರಿಸಿದನು. ಸೈನ್ಯವು ಮರಣಹೊಂದಿ ನೆಲಕ್ಕೆ ಉರುಳಿತು. ಸೈನಿಕರು ಸಾರಥಿ, ರಥ, ವಾಹನಗಳೆಲ್ಲವೂ ನಷ್ಟವಾದವು. ॥೩೧॥

**ದೃಷ್ಟ್ವಾ ಸ್ವಸೈನ್ಯಂ ರುಧಿರೌಘಕರ್ದಮೇ**
**ರಣಾಜಿರೇ ರಾಮಕುಠಾರಸಾಯಕೈಃ ।**
**ವಿವೃಕ್ಣಚರ್ಮಧ್ವಜಚಾಪವಿಗ್ರಹಂ**
**ವಿಪಾತಿತಂ ಹೈಹಯ ಆಪತದ್ರುಷಾ ॥೩೨॥**

**ಹೈಹಯಃ** ಕಾರ್ತವೀರ್ಯಾರ್ಜುನನು, **ರುಧಿರೌಘಕರ್ದಮೇ** ರಕ್ತದ ಕೆಸರಿನಿಂದ ಕೂಡಿದ, **ರಣಾಜಿರೇ** ಯುದ್ಧಭೂಮಿಯಲ್ಲಿ, **ರಾಮಕುಠಾರಸಾಯಕೈಃ** ಪರಶುರಾಮನ ಕುಠಾರ ಬಾಣಗಳಿಂದ, **ವಿವೃಕ್ಣಚರ್ಮಧ್ವಜಚಾಪವಿಗ್ರಹಂ** ಭಿನ್ನವಾದ ಚರ್ಮ ಧ್ವಜ ಬಿಲ್ಲು ಇವುಗಳಿಂದ ಕೂಡಿದ ಶರೀರವುಳ್ಳ, **ವಿಪಾತಿತಂ** ಉರುಳಿ ಬಿದ್ದ, **ಸ್ವಸೈನ್ಯಂ** ತನ್ನ ಸೈನ್ಯವನ್ನು **ದೃಷ್ಟ್ವಾ** ನೋಡಿ, **ರುಷಾ** ಕೋಪದಿಂದ **ಆಪತತ್** ಎದುರಿಸಿದನು.

**ತಾತ್ಪರ್ಯ-** ಆ ಕಾರ್ತವೀರ್ಯಾರ್ಜುನನು ರಕ್ತಪ್ರವಾಹವುಳ್ಳ ಸಮರ ಭೂಮಿಯಲ್ಲಿ ಪರಶುರಾಮನ ಆಯುಧಗಳಿಂದ ಛಿನ್ನ ಭಿನ್ನರಾಗಿ ಮೃತಹೊಂದಿ, ಉರುಳಿ ಬಿದ್ದ ತನ್ನ ಸೈನ್ಯವನ್ನು ನೋಡಿ ತಾನೇ ಎದುರಿಸಿದನು. ॥೩೨॥

**ಅಥಾರ್ಜುನಃ ಪಂಚಶತೇಷು ಬಾಹುಭಿ**
**ರ್ಧನುಷ್ಷು ಬಾಣಾನ್ಯುಗಪತ್ಸುಸಂದಧೇ ।**
**ರಾಮಾಯ ರಾಮೋಽಸ್ತ್ರಭೃತಾಂ ಸಮಗ್ರಣೀ-**
**ಸ್ತಾನೇಕಬದ್ಧೇಷುಭಿರಚ್ಛಿನತ್ಸಮಮ್ ॥೩೩॥**

**ಅಥ** ಅನಂತರದಲ್ಲಿ, **ಅರ್ಜುನಃ** ಕಾರ್ತವೀರ್ಯಾರ್ಜುನನ **ಬಾಹುಭಿಃ** ತೋಳುಗಳಿಂದ, ಗೃಹೀತವಾದ, **ಪಂಚಶತೇಷು** ಐದುನೂರು, **ಧನುಷ್ಷು** ಧನುಸ್ಸುಗಳಲ್ಲಿ, **ಬಾಣಾನ್** ಅಷ್ಟು ಸಂಖ್ಯಾ ಉಳ್ಳ ಬಾಣಗಳನ್ನು, **ಯುಗಪತ್** ಒಂದೇ ಕಾಲದಲ್ಲಿ, **ರಾಮಾಯ** ರಾಮನಿಗಾಗಿ, **ಸಂದಧೇ** ಏರಿಸಿದನು. **ಅಸ್ತ್ರಭೃತಾಂ** ಅಸ್ತ್ರಧಾರಿಗಳಲ್ಲಿ, **ಸಮಗ್ರಣೀಃ** ಶ್ರೇಷ್ಠನಾದ, **ರಾಮಃ** ಪರಶುರಾಮದೇವರು, **ತಾನ್** ಆ ಬಾಣಗಳನ್ನು **ಧನೂಂಷಿ ಸಮಂ** ಧನುಸ್ಸುಗಳಿಂದ ಸಹಿತವಾಗಿ, **ಏಕಬದ್ಧೇಷುಭಿಃ** ಒಂದೇ ಧನಸ್ಸಿನಲ್ಲಿ ಕೂಡಿದ ನಿರಂತರಧಾರಾ ಬಾಣಗಳಿಂದ, **ಅಚ್ಛಿನತ್** ಕತ್ತರಿಸಿದನು.

**ತಾತ್ಪರ್ಯ-** ಅನಂತರದಲ್ಲಿ ಆ ಕಾರ್ತವೀರ್ಯಾರ್ಜುನನು ತನ್ನ ಐದುನೂರು ಬಾಹುಗಳಿಂದ ಧನಸ್ಸುಗಳಲ್ಲಿ ಬಾಣಗಳನ್ನು ಒಂದೇ ಸಮಯದಲ್ಲಿ ಪರಶುರಾಮನ ಮೇಲೆ ಏರಿಸಿದನು. ಆ ಬಾಣಗಳನ್ನು ಧನುಸ್ಸುಗಳಿಂದ ಸಹಿತವಾಗಿ ಒಂದೇ ಬಾಣಧಾರಾದಿಂದ ಕತ್ತರಿಸಿದನು. ॥೩೩॥

**ಪುನಃ ಸ್ವಹಸ್ತೈರಚಲಾನ್ ಮೃಧೇಽಂಘ್ರಿಪಾ-**
**ನುತ್ಕ್ಷಿಪ್ಯ ವೇಗಾದಭಿಧಾವತೋ ಯುಧಿ ।**
**ಭುಜಾನ್ ಕುಠಾರೇಣ ಕಠೋರನೇಮಿನಾ**
**ಚಿಚ್ಛೇದ ರಾಮಃ ಪ್ರಸಭಂ ಹಸನ್ನಿವ ।।೩೪।।**

**ಪುನಃ** ಮತ್ತೆ **ರಾಮಃ** ರಾಮನು, **ಸ್ವಹಸ್ತೈಃ** ತನ್ನ ಹಸ್ತಗಳಿಂದ, **ಅಚಲಾನ್** ಪರ್ವತಗಳನ್ನು, **ಅಂಘ್ರಿಪಾನ್** ವೃಕ್ಷಗಳನ್ನು, **ಮೃಧೇ** ಯುದ್ಧದಲ್ಲಿ, **ಉತ್ಕ್ಷಿಪ್ಯ** ಮೇಲಕ್ಕೆ ಎತ್ತಿ , ಹೊಡೆದು **ಯುಧಿ** ಯುದ್ಧದಲ್ಲಿ, **ವೇಗಾತ್** ವೇಗದಿಂದ, **ಅಭಿಧಾವತಃ** ಓಡುತ್ತಿರುವ ಆ ಅರ್ಜುನನ, **ಭುಜಾನ್** ತೋಳುಗಳನ್ನು , **ಪ್ರಸಭಂ** ತಕ್ಷಣ, **ಹಸನ್** ನಗುತ್ತಾ, **ಕಠೋರನೇಮಿನಾ** ತೀಕ್ಷ್ಣವಾದ, **ಕುಠಾರೇಣ** ಕೊಡಲಿಯಿಂದ **ಚಿಚ್ಛೇದ** ಕತ್ತರಿಸಿದನು.

**ತಾತ್ಪರ್ಯ-** ಪರಶುರಾಮನು ತನ್ನ ಹಸ್ತಗಳಿಂದ ಪರ್ವತಗಳನ್ನು ವೃಕ್ಷಗಳನ್ನು ಕಿತ್ತು ಒಗೆದು ಯುದ್ಧದಲ್ಲಿ ಓಡುತ್ತಿರುವ ಆ ಕಾರ್ತವೀರ್ಯಾರ್ಜುನನ ಕೈಗಳನ್ನು ನಗುತ್ತಾ ಕತ್ತರಿಸಿದನು. ।।೩೪।।

**ಕೃತ್ತಬಾಹೋಃ ಶಿರಸ್ತಸ್ಯ ಗಿರಿಶೃಂಗಮಿವಾಹರತ್ ।**
**ಹತೇ ಪಿತರಿ ತತ್ಪುತ್ರಾ ಅಯುತಂ ದುದ್ರುವುರ್ಭಯಾತ್ ।।೩೫।।**

ಪರಶುರಾಮನು **ಕೃತ್ತಬಾಹೋಃ** ಕತ್ತರಿಸಲ್ಪಟ್ಟ ಬಾಹು ಉಳ್ಳ, **ತಸ್ಯ** ಆತನ **ಶಿರಃ** ತಲೆಯನ್ನು, **ಗಿರಿಶೃಂಗಮಿವ** ಪರ್ವತದ ಶಿಖರದಂತೆ, **ಆಹರತ್** ಕತ್ತರಿಸಿದನು. **ಅಯುತಂ** ಹತ್ತು ಸಾವಿರ ಸಂಖ್ಯಾಕರಾದ, **ತತ್ಪುತ್ರಾಃ** ಆತನ ಮಕ್ಕಳು, **ಪಿತರಿ** ತಂದೆಯು, **ಹತೇ** ಸಂಹೃತನಾಗಲು, **ಭಯಾತ್** ಭಯದಿಂದ **ದುದ್ರುವುಃ** ಓಡಿಹೋದರು.

**ತಾತ್ಪರ್ಯ-** ಪರಶುರಾಮನು ಕಾರ್ತವೀರ್ಯಾರ್ಜುನನ ತೋಳುಗಳನ್ನು ಕತ್ತರಿಸಿ ಆತನ ಶಿರಸ್ಸನ್ನು ಪರ್ವತದ ಶಿಖರದಂತೆ ಕತ್ತರಿಸಿದನು. ಇದರಿಂದ ಭೀತರಾದ ಈತನ ಮಕ್ಕಳೆಲ್ಲರೂ ಓಡಿಹೋದರು. ।।೩೫।।

**ಅಗ್ನಿಹೋತ್ರೀಮುಪಾವರ್ತ್ಯ ಸವತ್ಸಾಂ ಪರವೀರಹಾ ।**
**ಸಮುಪೇತ್ಯಾಶ್ರಮಂ ಪಿತ್ರೇ ಪರಿಕ್ಲಿಷ್ಟಾಂ ಸಮರ್ಪಯತ್ ।।೩೬।।**

**ಪರವೀರಹಾ** ಶತ್ರುಭಯಂಕರನಾದ ಆ ಪರಶುರಾಮನು, **ಸವತ್ಸಾಂ** ಕರುವಿನಿಂದ ಸಹಿತವಾದ, **ಅಗ್ನಿಹೋತ್ರೀಂ** ಕಾಮಧೇನುವನ್ನು, **ಉಪಾವರ್ತ್ಯ** ಆಶ್ರಮಕ್ಕೆ ಹಿಂದಕ್ಕೆ ತಿರುಗಿ ಕಳುಹಿಸಿ, **ಆಶ್ರಮಂ** ಆಶ್ರಮವನ್ನು ಕುರಿತು, **ಸಮುಪೇತ್ಯ**

ಬಂದು ಸೇರಿ, **ಪಿತ್ರೇ** ತಂದೆಗಳಿಗೆ, **ಪರಿಕ್ಲಿಷ್ಟಾಂ** ಕ್ಲೇಶ ಹೊಂದಿದ ಕಾಮಧೇನುವನ್ನು **ಸಮರ್ಪಯತ್** ಸಮರ್ಪಿಸಿದನು.

**ತಾತ್ಪರ್ಯ-** ಆ ಪರಶುರಾಮನು ಕರುವಿನಿಂದ ಸಹಿತವಾದ, ಕ್ಲೇಶ ಹೊಂದಿದ ಆ ಕಾಮಧೇನುವನ್ನು ಆಶ್ರಮಕ್ಕೆ ತಿರುಗಿ ಕಳುಹಿಸಿ ತಮ್ಮ ತಂದೆಗೆ ಸಮರ್ಪಿಸಿದನು.

**ಸ್ವಕರ್ಮ ತತ್ಕೃತಂ ರಾಮಃ ಪಿತ್ರೇ ಭ್ರಾತೃಭ್ಯ ಏವ ಚ ।**
**ವರ್ಣಯಾಮಾಸ ತಚ್ಛ್ರುತ್ವಾ ಜಮದಗ್ನಿರಭಾಷತ ॥೩೭॥**

**ರಾಮಃ** ಆ ಪರಶುರಾಮನು, **ಪಿತ್ರೇ** ತಂದೆಗೂ, **ಭ್ರಾತೃಭ್ಯಃ** ಸಹೋದರರಿಗೂ **ತತ್ಕೃತಂ** ತನ್ನಿಂದ ಮಾಡಲ್ಪಟ್ಟ ಆ ಕರ್ಮವನ್ನು, **ವರ್ಣಯಾಮಾಸ** ವಿವರಿಸಿದನು, **ಜಮದಗ್ನಿಃ** ಜಮದಗ್ನಿಯು, **ತಚ್ಛ್ರುತ್ವಾ** ಅದನ್ನು ಕೇಳಿ, **ಅಭಾಷತ** ಮಾತನಾಡಿದನು.

**ತಾತ್ಪರ್ಯ-** ಆ ಪರಶುರಾಮನು ಕಾರ್ತವೀರ್ಯಾರ್ಜುನನಲ್ಲಿ ನಡೆದ ಎಲ್ಲಾ ವರ್ತಮಾನ- ಗಳನ್ನು ತನ್ನ ತಂದೆಗೂ ಮತ್ತು ಸಹೋದರರಿಗೂ ಹೇಳಿದನು. ॥೩೭॥

ಜಮದಗ್ನಿಗಳು ಹೇಳುತ್ತಾರೆ ಏನೆಂದರೆ :-

**ರಾಮ ರಾಮ ಮಹಾಬಾಹೋ ಭವಾನ್ ಪಾಪಮಕಾರಷೀತ್ ।**
**ಅವಧೀರ್ನರದೇವಂ ಯತ್ಸರ್ವದೇವಮಯಂ ವೃಥಾ ॥೩೮॥**

**ರಾಮ ! ರಾಮ !** ಹೇ ರಾಮನೇ ! **ಮಹಾಬಾಹೋ** ಪರಾಕ್ರಮಿಯೇ, **ಭವಾನ್** ನೀನು **ಪಾಪಂ** ಪಾಪವನ್ನು, **ಅಕಾರಷೀತ್** ಮಾಡಿದ್ದೀಯೇ, **ಯತ್** ಏಕೆಂದರೆ **ಸರ್ವದೇವಮಯಂ** ಸರ್ವದೇವತೆಗಳ ವಿಶೇಷಸನ್ನಿಧಾನವುಳ್ಳ, **ನರದೇವಂ** ಕಾರ್ತವೀರ್ಯಾರ್ಜುನನನ್ನು, **ವೃಥಾ** ವ್ಯರ್ಥವಾಗಿ **ಅವಧೀಃ** ಸಂಹರಿಸಿರುತ್ತಿಯೇ.

**ತಾತ್ಪರ್ಯ-** ಪರಾಕ್ರಮಿಯಾದ ಪರಶುರಾಮನೇ! ನೀನು ಸಕಲದೇವತೆಗಳ ವಿಶೇಷ ಸನ್ನಿಧಾನ ಉಳ್ಳ ರಾಜನನ್ನು ವ್ಯರ್ಥ ಸಂಹರಿಸಿರುವಿ. ಇದು ಮಹತ್ ಪಾಪವಾದದ್ದು ಎಂದು ಹೇಳಿದನು. ॥೩೮॥

**ವಯಂ ಹಿ ಬ್ರಾಹ್ಮಣಾಸ್ತಾತ ಕ್ಷಮಯಾಽರ್ಹಣತಾಂ ಗತಾಃ ।**
**ಯಯಾ ಲೋಕಗುರುರ್ದೇವಃ ಪಾರಮೇಷ್ಠ್ಯಮಗಾತ್ಪದಮ್ ॥೩೯॥**

**ತಾತ** ಮಗುವೇ! **ವಯಂ** ನಾವುಗಳು, **ಬ್ರಾಹ್ಮಣಾಃ** ಬ್ರಾಹ್ಮಣರಾಗಿದ್ದೇವೆ. **ಕ್ಷಮಯಾ** ಕ್ಷಮಾಗುಣದಿಂದ, **ಅರ್ಹಣತಾಂ** ಪೂಜ್ಯತೆಯನ್ನು, **ಗತಾಃ** ಹೊಂದಿರುತ್ತೇವೆ. **ಲೋಕಗುರುಃ** ಬ್ರಹ್ಮನು, **ಯಯಾ** ಯಾವ ಕ್ಷಮಾಗುಣದಿಂದ **ಪಾರಮೇಷ್ಠ್ಯಂ ಪದಂ** ಸತ್ಯಲೋಕಾಧಿಪತ್ಯವನ್ನು, **ಅಗಾತ್** ಹೊಂದಿದನು. **ತೇ** ಆ ರಾಜರು

**ಕ್ಷಮಯಾ ಏವ** ಭೂ ಒಡೆತನದಿಂದಲೇ, **ಅರ್ಹಣತಾಂ ಗತಾಃ** ಮಾನ್ಯರಾಗಿರುತ್ತಾರೆ, ಕಾರಣ ಐಶ್ವರ್ಯವಿಲ್ಲದಿದ್ದರೂ ಕ್ಷಮಾಗುಣದಿಂದ ಮಾನ್ಯರಾದ ಬ್ರಾಹ್ಮಣರಿಗೆ ಸರಿಯಾಗಲಾರರು ಎಂಬ ಅಭಿಪ್ರಾಯ ಸೂಚಿತವಾಗುವುದು.

**ತಾತ್ಪರ್ಯ-** ಮಗುವೇ ನಾವು ಬ್ರಾಹ್ಮಣರು. ನಮ್ಮಲ್ಲಿ ಕ್ಷಮಾಗುಣವಿದ್ದುದರಿಂದ ಪೂಜ್ಯರಾಗಿದ್ದೇವೆ. ಚತುರ್ಮುಖಬ್ರಹ್ಮನು ಈ ಕ್ಷಮಾಗುಣದಿಂದಲೇ ಸತ್ಯಲೋಕ-ವನ್ನು ಹೊಂದಿರುತ್ತಾನೆ. ।।೩೯।।

**ಕ್ಷಮಯಾ ರೋಚತೇ ಲಕ್ಷ್ಮೀರ್ಬ್ರಾಹ್ಮೀ ಸೌರೀ ಯಥಾ ಪ್ರಭಾ ।**
**ಕ್ಷಮಿಣಾಮಾಶು ಭಗವಾಂಸ್ತುಷ್ಯತೇ ಹರಿರೀಶ್ವರಃ ।।೪೦।।**

**ಸೌರೀ** ಸೂರ್ಯನ ಸಂಬಂಧವಾದ, **ಪ್ರಭಾ** ಪ್ರಭೆಯು, **ಯಥಾ** ಹೇಗೆ (ಪ್ರಕಾಶಿಸುತ್ತದೋ) ಹಾಗೆ **ಈಶ್ವರಃ** ಸ್ವಾಮಿಯಾದ **ಭಗವಾನ್** ಪೂರ್ಣನಾದ **ಹರಿಃ** ಶ್ರೀನಾರಾಯಣನು, **ಕ್ಷಮಿಣಾಂ** ಕ್ಷಮಾಶೀಲರಿಗೆ, **ಆಶು** ಜಾಗ್ರತೆಯಾಗಿ, **ತುಷ್ಯತಿ** ಸಂತೋಷಪಡುತ್ತಾನೆ. **ಬ್ರಾಹ್ಮೀ** ಬ್ರಾಹ್ಮಣರ ಸಂಬಂಧವಾದ, **ಲಕ್ಷ್ಮೀಃ** ತೇಜಸ್ಸು **ಕ್ಷಮಯಾ** ಕ್ಷಮಾಗುಣದಿಂದ, **ರೋಚತೇ** ಪ್ರಕಾಶಿಸುತ್ತದೆ.

**ತಾತ್ಪರ್ಯ-** ಸೂರ್ಯನ ಕಾಂತಿಯು ಹೇಗೆ ಪ್ರಕಾಶಿಸುತ್ತದೆಯೋ ಹಾಗೆ ಕ್ಷಮಾಶೀಲರಾದ ಬ್ರಾಹ್ಮಣರ ತೇಜಸ್ಸು ಪ್ರಕಾಶಿಸುತ್ತದೆ. ಮತ್ತು ಶ್ರೀ ಭಗವಂತನು ಕ್ಷಮಾಶೀಲರಲ್ಲಿ ಅನುಗ್ರಹಿಸುತ್ತಾನೆ. ।।೪೦ ।।

**ರಾಜ್ಞೋ ಮೂರ್ಧಾವಸಿಕ್ತಸ್ಯ ವಧೋ ಬ್ರಹ್ಮವಧಾದ್ಗುರುಃ ।**
**ತೀರ್ಥಸಂಸೇವಯಾ ಚಾಂಹೋ ಜಹ್ಯಂಗಾಚ್ಯುತಚೇತನಃ ।।೪೧।।**

**ಮೂರ್ಧಾವಸಿಕ್ತಸ್ಯ** ಚಕ್ರವರ್ತಿಯಾದ, **ರಾಜ್ಞಃ** ರಾಜನ **ವಧಃ** ಸಂಹಾರವು, **ಬ್ರಹ್ಮವಧಾತ್** ಬ್ರಹ್ಮಹತ್ಯೆಗಿಂತಲೂ **ಗುರುಃ** ಗುರುತರವಾದದ್ದು. **ಅಚ್ಯುತಚೇತನಃ** ನೀನು ಭಗವಂತನಲ್ಲಿ ಮನಸ್ಸುಳ್ಳವನಾಗಿ, **ತೀರ್ಥಸಂಸೇವಯಾ** ತೀರ್ಥಸೇವನೆ-ಯಿಂದ, **ಅಂಹಃ** ಪಾಪವನ್ನು, **ಜಹಿ** ಕಳೆದುಕೋ ಎಂದು ಹೇಳಿದರು.

**ತಾತ್ಪರ್ಯ-** ಮಗನೇ! ಚಕ್ರವರ್ತಿಯ ವಧೆಯು ಬ್ರಹ್ಮಹತ್ಯೆಗಿಂತಲೂ ಬಹು ಗುರುತರವಾದದ್ದು. ಆದ್ದರಿಂದ ನೀನು ತೀರ್ಥಾಟನಾದಿಗಳನ್ನು ಮಾಡಿ ಆ ಪಾಪವನ್ನು ಪರಿಹಾರ ಮಾಡಿಕೊಳ್ಳತಕ್ಕದ್ದು ಎಂದು ಹೇಳಿದರು. ।।೪೧।।

**।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ತ್ರಯೋದಶೋಽಧ್ಯಾಯಃ ।।**

★★★

## ಅಥ ಚತುರ್ದಶೋऽಧ್ಯಾಯಃ

**ಪಿತ್ರೋಪಶಿಕ್ಷಿತೋ ರಾಮಸ್ತಥೇತಿ ಕುರುನಂದನ ।**
**ಸಂವತ್ಸರಂ ತೀರ್ಥಚರ್ಯಾಂ ಚರಿತ್ವಾऽऽಶ್ರಮಮಾವ್ರಜತ್ ॥೧॥**

**ಕುರುನಂದನ** ಪರೀಕ್ಷಿತನೇ **ಪಿತ್ರಾ ಉಪಶಿಕ್ಷಿತಃ** ಪರಶುರಾಮನ ಮಹಾತ್ಮ್ಯ-ವನ್ನು ತಿಳಿಯದ ತಂದೆಯಿಂದ ಹೇಳಿಸಿಕೊಳ್ಳಲ್ಪಟ್ಟ **ರಾಮಃ** ಆ ಪರಶುರಾಮನು, ಮೋಹನಾರ್ಥವಾಗಿ, **ತಥಾ ಇತಿ** ಹಾಗೆ ಆಗಲೆಂದು ಸಮ್ಮತಿಸಿ, **ಸಂವತ್ಸರಂ** ಒಂದುವರ್ಷ ಪರ್ಯಂತ, **ತೀರ್ಥಚರ್ಯಾಂ** ತೀರ್ಥಯಾತ್ರೆಯನ್ನು, **ಚರಿತ್ವಾ** ಆಚರಿಸಿ, **ಆಶ್ರಮಂ** ಆಶ್ರಮವನ್ನು ಕುರಿತು **ಆವ್ರಜತ್** ಬಂದನು.

**ತಾತ್ಪರ್ಯ-** ಪರೀಕ್ಷಿತರಾಜನೇ ಪರಶುರಾಮರು ತಂದೆಯ ಮಾತನ್ನು ಒಪ್ಪಿ ಒಂದುವರುಷ ತೀರ್ಥಯಾತ್ರೆಯನ್ನು ಆಚರಿಸಿ, ತಂದೆಗಳ ಆಶ್ರಮಸ್ಥಾನಕ್ಕೆ ಬಂದರು. ॥೧॥

**ಕದಾಚಿದ್ರೇಣುಕಾ ಯಾತಾ ಗಂಗಾಯಾಂ ಪದ್ಮಮಾಲಿನಮ್ ।**
**ಗಂಧರ್ವರಾಜಂ ಕ್ರೀಡಂತಮಪ್ಸರೋಭಿರಪಶ್ಯತ ॥೨॥**

**ಕದಾಚಿತ್** ಒಮ್ಮೆ, **ರೇಣುಕಾ** ರೇಣುಕೆಯು **ಗಂಗಾಯಾಂ** ಗಂಗಾನದಿಯಲ್ಲಿ, **ಪದ್ಮಮಾಲಿನಂ** ಕಮಲಮಾಲಾಧಾರಿಯಾದ, **ಅಪ್ಸರೋಭಿಃ** ಅಪ್ಸರಸ್ತ್ರೀಯರಿಂದ ಸಹಿತನಾಗಿ, **ಗಂಗಾಯಾಂ** ಗಂಗೆಯಲ್ಲಿ **ಕ್ರೀಡಂತಂ** ಕ್ರೀಡಿಸುತ್ತಿರುವ **ಗಂಧರ್ವರಾಜಂ** ಗಂಧರ್ವರಾಜನನ್ನು **ಅಪಶ್ಯತ** ನೋಡಿದಳು.

**ತಾತ್ಪರ್ಯ-** ಒಮ್ಮೆ ರೇಣುಕಾದೇವಿಯು ಗಂಗೆಯಲ್ಲಿ ಅಪ್ಸರಸ್ತ್ರೀಯರಿಂದ ಕ್ರೀಡಿಸುತ್ತಿರುವ ಮಾಲಾಧಾರಿಯಾದ ಗಂಧರ್ವರಾಜನನ್ನು ನೋಡಿದಳು. ॥೨॥

**ವಿಲೋಕಯಂತೀ ಕ್ರೀಡಂತಮುದಕಾರ್ಥಂ ನದೀಂ ಗತಾ ।**
**ಹೋಮವೇಲಾಂ ನ ಸಸ್ಮಾರ ಕಿಂಚಿಚ್ಚಿತ್ರರಥಸ್ಪೃಹಾ ॥೩॥**

**ಉದಕಾರ್ಥಂ** ನೀರಿಗಾಗಿ **ನದೀಂ** ನದಿಯನ್ನು ಕುರಿತು, **ಗತಾ** ಹೋಗಿರುವ, ಅವಳು **ಕ್ರೀಡಂತಂ** ಕ್ರೀಡಿಸುತ್ತಿರುವ, ಆ ಗಂಧರ್ವನನ್ನು **ವಿಲೋಕಯಂತೀ** ನೋಡುತ್ತಾ **ಹೋಮವೇಲಾಂ** ಹೋಮದ ಸಮಯವನ್ನು **ಕಿಂಚಿತ್** ಸ್ವಲ್ಪ **ಚಿತ್ರರಥಸ್ಪೃಹಾ** ಚಿತ್ರರಥನಲ್ಲಿ ಮನಸ್ಸಿಟ್ಟವಳಾದ್ದರಿಂದ **ನ ಸಸ್ಮಾರ** ಮರೆತಳು.

**ತಾತ್ಪರ್ಯ-** ನೀರಿಗಾಗಿ ನದಿಗೆ ಹೋಗಿರುವ ಅವಳು ಕ್ರೀಡಿಸುತ್ತಿರುವ ಆ ಗಂಧರ್ವನನ್ನು ನೋಡುತ್ತಾ ಚಿತ್ರರಥನಲ್ಲಿ ಮನಸ್ಸು ಸ್ವಲ್ಪ ಹೋದದ್ದರಿಂದ ಹೋಮದ ಸಮಯವನ್ನು ಮರೆತಳು. ॥೩॥

**ಕಾಲಾತ್ಯಯಂ ತಂ ವಿಲೋಕ್ಯ ಮುನೇಃ ಶಾಪವಿಶಂಕಿತಾ ।**
**ಆಗತ್ಯ ಕಲಶಂ ತಸ್ಥೌ ಪುರೋಧಾಯ ಕೃತಾಂಜಲಿಃ ॥೪॥**

ಅವಳು **ತಂ ಕಾಲಾತ್ಯಯಂ** ಕಾಲದ ಅತಿಕ್ರಮವನ್ನು **ವಿಲೋಕ್ಯ** ನೋಡಿ **ಮುನೇಃ** ಮುನಿಗಳ, **ಶಾಪವಿಶಂಕಿತಾ** ಶಾಪದಿಂದ ಶಂಕಿತಳಾಗಿ, **ಆಗತ್ಯ** ಆಶ್ರಮಕ್ಕೆ ಬಂದು **ಕಲಶಂ** ನೀರಿನ ಕಲಶವನ್ನು, **ಪುರೋಧಾಯ** ಮುಂದುಗಡೆ ಇಟ್ಟು **ಕೃತಾಂಜಲಿಃ** ಕೈ ಮುಗಿದುಕೊಂಡವಳಾಗಿ, **ತಸ್ಥೌ** ನಿಂತಳು.

ಅವಳು ತನ್ನ ಆ ಕಾಲಾತಿಕ್ರಮಣವನ್ನು ನೋಡಿ ಮುನಿಗಳ ಶಾಪದಿಂದ ಶಂಕಿತಳಾಗಿ ಆಶ್ರಮಕ್ಕೆ ಬಂದು ನೀರಿನ ಕಲಶವನ್ನು ಮುನಿಗಳ ಮುಂದೆ ಇಟ್ಟು ಕೈ ಮುಗಿದು ನಿಂತಳು. ॥೪॥

**ವ್ಯಭಿಚಾರಂ ಮುನಿರ್ಜ್ಞಾತ್ವಾ ಪತ್ನ್ಯಾಃ ಪ್ರಕುಪಿತೋಽಬ್ರವೀತ್ ।**
**ಘ್ನತೈನಾಂ ಪುತ್ರಕಾಃ ಪಾಪಾಮಿತ್ಯುಕ್ತಾಸ್ತಾಂ ನ ಚಕ್ರಿರೇ ॥೫॥**

**ಮುನಿಃ** ಜಮದಗ್ನಿಯು **ಪತ್ನ್ಯಾಃ** ಹೆಂಡತಿಯ, **ವ್ಯಭಿಚಾರಂ** ಮಾನಸಿಕ ವ್ಯಭಿಚಾರವನ್ನು, **ಜ್ಞಾತ್ವಾ** ಆಲೋಚಿಸಿ ತಿಳಿದು, **ಪ್ರಕುಪಿತಃ** ಕೋಪಗೊಂಡವನಾಗಿ **ಪುತ್ರಕಾಃ** ಮಕ್ಕಳೇ ! **ಪಾಪಾಂ** ಪಾಪಮಾಡಿದ, **ಏನಾಂ** ಇವಳನ್ನು, **ಘ್ನತ** ಸಂಹರಿಸಿರಿ, **ಇತಿ** ಈ ರೀತಿಯಾಗಿ **ಅಬ್ರವೀತ್** ಹೇಳಿದನು. **ಉಕ್ತಾಃ** ಹೇಳಲ್ಪಟ್ಟ ಆ ಮಕ್ಕಳು **ತಾಂ** ಆ ಸಂಹಾರವನ್ನು (ಹತಿಯನ್ನು) **ನ ಚಕ್ರಿರೇ** ಮಾಡಲಿಲ್ಲ.

**ತಾತ್ಪರ್ಯ-** ಆ ಋಷಿಗಳು ತಮ್ಮ ಆಲೋಚನೆಯಿಂದ ಹೆಂಡತಿಯ ಮಾನಸಿಕ ವ್ಯಭಿಚಾರವನ್ನು ತಿಳಿದು ತಮ್ಮ ಮಕ್ಕಳನ್ನು ಕುರಿತು ಇವಳನ್ನು ಕೊಲ್ಲಿರಿ ಎಂದು ಹೇಳಿದರು. ಆ ಮಕ್ಕಳು ಇವಳ ಸಂಹಾರವನ್ನು ಮಾಡಲಿಲ್ಲ. ॥೫॥

**ರಾಮಃ ಸಂಚೋದಿತಃ ಪಿತ್ರಾ ಭ್ರಾತೄನ್ಮಾತ್ರಾ ಸಹಾವಧೀತ್ ।**
**ಪ್ರಭಾವಜ್ಞೋ ಮುನೇಃ ಸಮ್ಯಕ್ ಸಮಾಧೇಸ್ತಪಸಶ್ಚ ಸಃ ॥೬॥**

**ಮುನೇಃ** ಮುನಿಗಳ, **ಸಮಾಧೇಃ** ಸಮಾಧಿಯ, **ತಪಸಃ** ತಪಸ್ಸಿನ, **ಸಮ್ಯಕ್ ಪ್ರಭಾವಜ್ಞಃ** ಪ್ರಭಾವವನ್ನು ಚೆನ್ನಾಗಿ ತಿಳಿದಿರುವ **ಸಃ** ಆ **ರಾಮಃ** ಪರಶುರಾಮನು, **ಪಿತ್ರಾ** ತಂದೆಯಿಂದ, **ಸಂಚೋದಿತಃ** ಪ್ರೇರಿತನಾಗಿ, **ಮಾತ್ರಾ** ತಾಯಿಯಿಂದ, **ಸಹ** ಸಹಿತನಾಗಿ, **ಭ್ರಾತೄನ್** ಸಹೋದರರನ್ನು **ಅವಧೀತ್** ಸಂಹರಿಸಿದನು.

**ತಾತ್ಪರ್ಯ-** ಮುನಿಗಳ ಸಮಾಧಿ, ತಪಸ್ಸು ಇವುಗಳ ಪ್ರಭಾವವನ್ನು ಚೆನ್ನಾಗಿ ತಿಳಿದ ಪರಶುರಾಮನು ತಂದೆಯ ಪ್ರೇರಣೆಯಂತೆ, ತಾಯಿ ಮತ್ತು ಸಹೋದರರನ್ನು ಸಂಹರಿಸಿದನು. ॥೬॥

**ವರೇಣ ಛಂದಯಾಮಾಸ ಪ್ರೀತಃ ಸತ್ಯವತೀಸುತಃ ।**
**ವವ್ರೇ ಹತಾನಾಂ ರಾಮೋऽಪಿ ಜೀವಿತಂ ಚಾಸ್ಮೃತಿಂ ವಧೇ ॥೭॥**

**ಪ್ರೀತಃ** ಪ್ರೀತರಾದ, **ಸತ್ಯವತೀಸುತಃ** ಜಮದಗ್ನಿ ಋಷಿಗಳು, **ವರೇಣ** ವರದಿಂದ **ಛಂದಯಾಮಾಸ** ಪ್ರೀತಿ ಪಡಿಸಿದನು (ವರವನ್ನು ಕೇಳೆಂದರು) **ರಾಮಃ ಅಪಿ** ರಾಮನಾದರೂ, **ಹತಾನಾಂ** ಮೃತರಾದವರ, **ಜೀವಿತಂ** ಜೀವನವನ್ನೂ **ಪುನಃ** ಮತ್ತು **ವಧೇ** ಸಂಹಾರದ ವಿಷಯದಲ್ಲಿ **ಅಸ್ಮೃತಿಂ ಚ** ವಿಸ್ಮೃತಿಯನ್ನೂ, **ವವ್ರೇ** ವರವನ್ನಾಗಿ ಕೇಳಿಕೊಂಡನು.

**ತಾತ್ಪರ್ಯ-** ಸುಪ್ರೀತರಾದ, ಜಮದಗ್ನಿ ಮುನಿಗಳು, ಪರಶುರಾಮನನ್ನು ವರ ಕೇಳೆಂದರು. ಪರಶುರಾಮನಾದರೂ ಮೃತರಾದವರ ಪುನರ್ಜೀವನವನ್ನು ಮತ್ತು ಅವರಿಗೆ ಮರಣದ ವಿಸ್ಮರಣೆಯನ್ನೂ ವರವನ್ನಾಗಿ ಕೇಳಿದನು. ॥೭॥

**ಉತ್ತಸ್ಥುಸ್ತೇ ಕುಶಲಿನೋ ನಿದ್ರಾಪಾಯ ಇವಾಂಜಸಾ ।**
**ಪಿತುರ್ವಿದ್ವಾಂಸ್ತಪೋವೀರ್ಯಂ ರಾಮಶ್ಚಕ್ರೇ ಸುಹೃದ್ವಧಮ್ ॥೮॥**

**ತೇ** ಆ ಮೃತರಾದವರೆಲ್ಲರೂ, **ನಿದ್ರಾಪಾಯ ಇವ** ನಿದ್ರೆಯ ಕೊನೆಯಲ್ಲಿ ಎಂಬುವಂತೆ **ಕುಶಲಿನಃ** ಕುಶಲರಾಗಿ, **ಉತ್ತಸ್ಥುಃ** ಮೇಲಕ್ಕೆ ಎದ್ದರು. **ರಾಮಃ** ಪರಶುರಾಮನು **ಪಿತುಃ** ತಂದೆಯ, **ತಪಃ** ತಪಸ್ಸನ್ನು, **ವೀರ್ಯಂ** ಪರಾಕ್ರಮವನ್ನು, **ವಿದ್ವಾನ್** ತಿಳಿದಿದ್ದರಿಂದ, **ಸುಹೃದ್ವಧಂ** ಬಂಧುಗಳ ವಧೆಯನ್ನು, **ಚಕ್ರೇ** ಮಾಡಿದನು.

**ತಾತ್ಪರ್ಯ-** ತಂದೆಯ ವರದಿಂದ, ಅವರೆಲ್ಲರೂ (ಮೃತರೆಲ್ಲರೂ) ನಿದ್ರೆಯಿಂದ ಮೇಲಕ್ಕೆ ಎದ್ದವರಂತೆ ಕುಶಲರಾಗಿ ಎದ್ದು ನಿಂತರು. ಪರಶುರಾಮನು, ಸರ್ವಜ್ಞನಾಗಿ ನಿಂದಿತವಾದ ಕಾರ್ಯವನ್ನು ಹೇಗೆ? ಮಾಡಿದನು ಎಂದರೆಃ-

ಪರಶುರಾಮದೇವರು ಸರ್ವಸಮರ್ಥರಾಗಿದ್ದಾರೆ. ದೋಷದೂರರಾಗಿದ್ದಾರೆ. ಆದ್ದರಿಂದ ಈ ಸಂಹಾರದಿಂದ ಯಾವುದೇ ವಿಧವಾದ ಲೇಪವು ಪರಮಾತ್ಮನಾದ ಪರಶುರಾಮದೇವರಿಗೆ ಇಲ್ಲವೇ ಇಲ್ಲ. ಹೀಗಿದ್ದರೂ ಸರ್ವಜ್ಞರಾದ ಪರಶುರಾಮದೇವರು ತನ್ನ ತಂದೆಯ ತಪೋಮಹಿಮೆಯನ್ನು ತಿಳಿದಿದ್ದರು. ತಂದೆಯಾದ ಜಮದಗ್ನಿಗಳು ಮತ್ತೆ ಇವರನ್ನು ಬದುಕಿಸುತ್ತಾರೆ ಎಂಬುದನ್ನು ತಿಳಿದ ಪರಶುರಾಮದೇವರು ಹೀಗೆ ಮಾಡಿದರೆಂದು ತಿಳಿಯಬೇಕು.

ಸಾಕ್ಷಾನ್ನಾರಾಯಣಾವತಾರನಾದ, ದೋಷದೂರನಾಗಿ ಸಕಲಗುಣಾಕರನಾದ, ಶ್ರೀಪರಶುರಾಮನಿಗೆ ಕ್ಷತ್ರಿಯಹನನಾದಿ ದೋಷ ಕಳೆದುಕೊಳ್ಳಲು ತೀರ್ಥಯಾತ್ರೆ, ಸೇವಾ, ತಾಯಿ ಸಹೋದರರನ್ನು ಸಂಹರಿಸಿ ತನ್ನ ಅಪ್ಪಣೆಯನ್ನೂ ನಡೆಸಿದ್ದರಿಂದ

ಸಂತೋಷಗೊಂಡ ತಂದೆಯಿಂದ ವರದಾನ, ಇವೆಲ್ಲವೂ ಹೇಗೆ ಕೂಡುತ್ತದೆ ಎಂದರೆ 'ಜಾಮದಗ್ನ್ಯೋ ವರಂ ವವ್ರೇऽನಂತಶಕ್ತಿರಪಿ ಸ್ವಯಮ್ । ಪಿತುರ್ಮಾನ್ಯತ್ವಸಿದ್ಧ್ಯರ್ಥಂ ಲೋಕೇ ಲೋಕೇಶ್ವರಃ ಪ್ರಭುಃ । 'ಶ್ರೀಪರಶುರಾಮರು ತಾವು ಅನಂತ ಶಕ್ತಿ ಉಳ್ಳವರಾಗಿದ್ದರೂ ತಂದೆಗೆ ಮಾನ್ಯತೆ ಕೊಡಬೇಕೆಂದು ಲೋಕಕ್ಕೆ ತಿಳಿಸಲು ಈ ರೀತಿ ನಟಿಸಿರುತ್ತಾರೆಂದು ತಿಳಿಯಬೇಕು. ।।೮।।

**ಯೇऽರ್ಜುನಸ್ಯ ಸುತಾ ರಾಜನ್ ಸ್ಮರಂತಃ ಸ್ಮ ಪಿತುರ್ವಧಮ್ ।**
**ರಾಮವೀರ್ಯಪರಾಭೂತಾ ಲೇಭಿರೇ ಶರ್ಮ ನ ಕ್ವಚಿತ್ ।।೯।।**

**ರಾಜನ್** ಪರೀಕ್ಷಿತ್ ರಾಜನೇ! **ಯೇ** ಯಾರು **ಅರ್ಜುನಸ್ಯ** ಕಾರ್ತವೀರ್ಯಾ-ರ್ಜುನನ **ಸುತಾಃ** ಮಕ್ಕಳೋ, ಅವರು **ಪಿತುಃ** ತಂದೆಯ **ವಧಂ** ವಧೆಯನ್ನು **ಸ್ಮರಂತಃ** ಸ್ಮರಿಸುತ್ತಾ, **ರಾಮವೀರ್ಯಪರಾಭೂತಾಃ** ಪರಶುರಾಮನ ಪರಾಕ್ರಮದಿಂದ ನಿರ್ಜಿತರಾಗಿ **ಕ್ವಚಿತ್** ಸ್ವಲ್ಪವಾದರೂ, **ಶರ್ಮ** ಸುಖವನ್ನು, **ನ ಲೇಭಿರೇ** ಹೊಂದಲಿಲ್ಲ.

**ತಾತ್ಪರ್ಯ-** ಪರೀಕ್ಷಿತನೇ! ಕಾರ್ತವೀರ್ಯಾರ್ಜುನನ ಮಕ್ಕಳು ತಮ್ಮ ತಂದೆಯ ವಧೆಯನ್ನು ಸ್ಮರಿಸುತ್ತಾ ಪರಶುರಾಮನ ವೀರ್ಯದಿಂದ ಪರಾಜಿತರಾಗಿ ಸ್ವಲ್ಪವೂ ಶಾಂತಿಯನ್ನು ಹೊಂದಲಿಲ್ಲ. ।।೯।।

**ಏಕದಾऽऽಶ್ರಮತೋ ರಾಮೇ ಸಭ್ರಾತರಿ ವನಂ ಗತೇ ।**
**ವೈರಂ ಸಿಷಾಧಯಿಷವೋ ಲಬ್ಧಚ್ಛಿದ್ರಾ ಉಪಾಗಮನ್ ।।೧೦।।**

**ಏಕದಾ** ಒಮ್ಮೆ, **ರಾಮಃ** ಪರಶುರಾಮನು **ಆಶ್ರಮತಃ** ಆಶ್ರಮದಿಂದ **ಸಭ್ರಾತರಿ** ಸಹೋದರಸಹಿತನಾಗಿ, **ವನಂ** ಅರಣ್ಯವನ್ನು ಕುರಿತು, **ಗತೇ** ಹೋಗಿರಲು **ವೈರಂ** ದ್ವೇಷವನ್ನು **ಸಿಷಾಧಯಿಷವಃ** ಸಾಧಿಸಲು ಅಪೇಕ್ಷೆ ಉಳ್ಳವರಾಗಿ, **ಲಬ್ಧಚ್ಛಿದ್ರಾಃ** ಅವಕಾಶ ಉಳ್ಳವರಾಗಿ, **ಉಪಾಗಮನ್** ಬಂದರು.

**ತಾತ್ಪರ್ಯ-** ಒಮ್ಮೆ ಪರಶುರಾಮನು ಆಶ್ರಮದಿಂದ, ತನ್ನ ಸಹೋದರರಿಂದ ಸಹಿತವಾಗಿ ಅರಣ್ಯಕ್ಕೆ ಹೋಗಿರಲು, ಕಾರ್ತವೀರ್ಯಾರ್ಜುನನ ಮಕ್ಕಳು ಋಷಿಗಳಲ್ಲಿ ದ್ವೇಷ ಸಾಧಿಸುವುದಕ್ಕಾಗಿ ಸಮಯ ಉಳ್ಳವರಾಗಿ ಆಶ್ರಮದ ಕಡೆ ಧಾವಿಸಿ ಬಂದರು. ।।೧೦।।

**ದೃಷ್ಟ್ವಾಗ್ನ್ಯಗಾರ ಆಸೀನಮಾವೇಶಿತಧಿಯಂ ಮುನಿಮ್ ।**
**ಭಗವತ್ಯುತ್ತಮಶ್ಲೋಕೇ ಜಘ್ನುಸ್ತೇ ಪಾಪನಿಶ್ಚಯಾಃ ।।೧೧।।**

**ಪಾಪನಿಶ್ಚಯಾಃ** ಪಾಪದಲ್ಲಿ ನಿಶ್ಚಯ ಹೊಂದಿದ **ತೇ** ಅವರು, **ಅಗ್ನ್ಯಾಗಾರೇ** ಅಗ್ನಿಮಂದಿರದಲ್ಲಿ, **ಆಸೀನಂ** ಕುಳಿತಿರುವ **ಭಗವತಿ** ದೇವರಲ್ಲಿ **ಆವೇಶಿತಧಿಯಂ** ಆಸಕ್ತವಾದ ಮನಸ್ಸುಳ್ಳ **ಮುನಿಂ** ಜಮದಗ್ನಿ ಮುನಿಗಳನ್ನು **ದೃಷ್ಟ್ವಾ** ನೋಡಿ, **ಜಘ್ನುಃ** ಸಂಹರಿಸಿದರು.

**ತಾತ್ಪರ್ಯ-** ಪಾಪದಲ್ಲಿ ನಿಶ್ಚಯ ಹೊಂದಿದ ಅವರು, ಅಗ್ನಿಮಂದಿರದಲ್ಲಿ ಕುಳಿತಿರುವ ದೇವರಲ್ಲಿ ಮನಸ್ಸುಳ್ಳ ಜಮದಗ್ನಿಗಳನ್ನು ನೋಡಿ, ಸಂಹಾರ ಮಾಡಿದರು. ಜಮದಗ್ನಿ ಋಷಿಗಳು ಜ್ಞಾನಿಗಳಾದರೂ ಹರಿಯ ಇಚ್ಛೆಯನ್ನು ತಿಳಿದು ಸುಮ್ಮನೇ ಇದ್ದರು. ಇಲ್ಲವಾದರೆ ಮೃತಪುತ್ರರನ್ನು ಬದುಕಿಸುವ ಸಾಮರ್ಥ್ಯ ಹೇಗೆ ಬಂದೀತು. ||೧೧||

**ಯಾಚಮಾನಾಃ ಕೃಪಣಯಾ ರಾಮಮಾತ್ರಾಽತಿದಾರುಣಾಃ |**
**ಪ್ರಸಹ್ಯ ಶಿರ ಉತ್ಕೃತ್ಯ ಜಗ್ಮುಸ್ತೇ ಕ್ಷತ್ರಬಂಧವಃ ||೧೨||**

**ಕೃಪಣಯಾ** ದೀನಳಾದ, **ರಾಮಮಾತ್ರಾ** ರೇಣುಕೆಯಿಂದ **ಯಾಚಮಾನಾಃ** ಪ್ರಾರ್ಥಿಸಲ್ಪಟ್ಟರೂ **ದಾರುಣಾಃ** ಭಯಂಕರರಾದ, **ಕ್ಷತ್ರಬಂಧವಃ** ನೀಚಕ್ಷತ್ರಿಯ-ರಾದ ಅವರು **ಪ್ರಸಹ್ಯ** ಬಲಾತ್ಕರಿಸಿ **ಶಿರಃ** ಮುನಿಯ ಶಿರಸ್ಸನ್ನು, **ಉತ್ಕೃತ್ಯ** ಕತ್ತರಿಸಿ **ಜಗ್ಮುಃ** ಹೋದರು.

**ತಾತ್ಪರ್ಯ-** ದೀನಳಾದ ರೇಣುಕೆಯಿಂದ ಪ್ರಾರ್ಥಿಸಲ್ಪಟ್ಟರೂ ಭಯಂಕರರಾದ ಕ್ಷತ್ರಿಯಾಧಮರಾದ ಅವರು ಮುನಿಯ ಶಿರಸ್ಸನ್ನು ಕತ್ತರಿಸಿದರು. ||೧೨||

**ರೇಣುಕಾ ದುಃಖಶೋಕಾರ್ತಾ ನಿಘ್ನಂತ್ಯಾತ್ಮಾನಮಾತ್ಮನಾ |**
**ರಾಮ ರಾಮೇತಿ ತಾತೇತಿ ವಿಚುಕ್ರೋಶೋಚ್ಚಕೈಃ ಸತೀ ||೧೩||**

**ದುಃಖಶೋಕಾರ್ತಾ** ದುಃಖ-ಶೋಕಗಳಿಂದ ಆರ್ತಳಾದ ಅವಳು **ಆತ್ಮಾನಂ** ತನ್ನನ್ನು **ಆತ್ಮನಾ** ಕೈಯಿಂದ, **ನಿಘ್ನಂತೀ ಸತೀ** ಹೊಡೆದುಕೊಳ್ಳುತ್ತಾ **ಉಚ್ಚಕೈಃ** ಗಟ್ಟಿಯಾಗಿ **ರಾಮ ರಾಮ ಇತಿ** ರಾಮ ರಾಮ ಎಂದು **ತಾತ ಇತಿ** ಮಗನೇ ಎಂದು **ವಿಚುಕ್ರೋಶ** ಅತ್ತಳು.

**ತಾತ್ಪರ್ಯ-** ದುಃಖಶೋಕದಿಂದ ಆರ್ತಳಾದ ಅವಳು ತನ್ನ ದೇಹವನ್ನು ಘಟ್ಟಿಯಾಗಿ ಕೈಯಿಂದ ಬಡೆದುಕೊಳ್ಳುತ್ತಾ ರಾಮ ರಾಮ ಎಂದು ಆರ್ತಧ್ವನಿಯಿಂದ ರೋದಿಸಿದಳು. ||೧೩||

**ತದುಪಶ್ರುತ್ಯ ದೂರಸ್ಥಾ ಹಾ ರಾಮೇತ್ಯಾರ್ತವತ್‍ಸ್ವರಮ್ |**
**ತ್ವರಯಾಽಶ್ರಮಮಾಸಾದ್ಯ ದದೃಶುಃ ಪಿತರಂ ಹತಮ್ ||೧೪||**

**ದೂರಸ್ಥಾಃ** ದೂರದಲ್ಲಿರುವ ಆ ಮಕ್ಕಳು, **ಹಾ ! ರಾಮ ಇತಿ** ಹಾ ! ರಾಮ ರಾಮನೆಂಬ, **ಆರ್ತವತ್‌ಸ್ವರಮ್** ಆರ್ತಧ್ವನಿಯನ್ನು **ಉಪಶ್ರುತ್ಯ**ಕೇಳಿ, **ತ್ವರಯಾ** ವೇಗದಿಂದ, **ಆಶ್ರಮಂ** ಆಶ್ರಮವನ್ನು, **ಆಸಾದ್ಯ** ಹೊಂದಿ, **ಹತಂ** ಮರಣಹೊಂದಿದ, **ಪಿತರಂ** ತಂದೆಯನ್ನು, **ದದೃಶುಃ** ನೋಡಿದರು.

**ತಾತ್ಪರ್ಯ-** ದೂರದಲ್ಲಿರುವ ಆ ಮಕ್ಕಳು ಹಾ ರಾಮ ! ಹಾ ರಾಮ ! ಎಂಬುವ ಆರ್ತಧ್ವನಿಯನ್ನು ಕೇಳಿ ಅವಸರದಿಂದ ಆಶ್ರಮಕ್ಕೆ ಬಂದರು. ಮರಣಹೊಂದಿದ ತಂದೆಯನ್ನು ನೋಡಿದರು. ।।೧೪।।

**ತೇ ದುಃಖರೋಷಾಮರ್ಷಾರ್ತಿಶೋಕವೇಗವಿಮೋಹಿತಾಃ ।**
**ಹಾ ತಾತ ಸಾಧೋ ಧರ್ಮಿಷ್ಠ ತ್ಯಕ್ತ್ವಾಽಸ್ಮಾನ್ ಸ್ವರ್ಗತೋ ಭವಾನ್।।೧೫।**

**ದುಃಖರೋಷಾಮರ್ಷಾರ್ತಿಶೋಕವೇಗವಿಮೋಹಿತಾಃ** ದುಃಖ, ಕೋಪ, ಉದ್ವೇಗ, ಆರ್ತಿ ಇವುಗಳಿಂದ ವಿಮೋಹಿತರಾದ, **ತೇ** ಮಕ್ಕಳು, **ಹಾ ತಾತ!** ತಾತನೇ! **ಸಾಧೋ!** ಸಾಧುವೇ! **ಧರ್ಮಿಷ್ಠ!** ಧರ್ಮಿಷ್ಠನೇ! **ಭವಾನ್** ತಾವು **ಅಸ್ಮಾನ್** ನಮ್ಮನ್ನು **ತ್ಯಕ್ತ್ವಾ** ಬಿಟ್ಟು, **ಸ್ವರ್ಗತಃ** ಸ್ವರ್ಗಕ್ಕೆ ಸೇರಿದವರು ಆಗಿರುತ್ತೀರಿ ಎಂದು ದುಃಖಪಟ್ಟರು.

ದುಃಖರೋಷಾಮರ್ಷಾರ್ತಿಶೋಕವೇಗವಿಮೋಹಿತಾಃ **ದುಃಖ** ಶೋಕನಿಮಿತ್ತಕ ಎದೆ ಬಡಿದುಕೊಳ್ಳುವದು, **ರೋಷ** ವೆಂದರೆ ಸಿಟ್ಟು **ಅಮರ್ಷ** ಅಸಹನವು, **ಆರ್ತಿ** ಶಬ್ದಾರ್ಥವು ಚಿಂತೆ, **ಶೋಕ** ಚಿಂತಾನಿಮಿತ್ತಕ ದುಃಖಾತಿಶಯವೇ ವೇಗ, ಇವುಗಳಿಂದ ವಿಮೋಹಿತರಾಗಿ ಎಂದು ಅರ್ಥ. ಈ ವಿಷಯದಲ್ಲಿ ಭಾರತದಲ್ಲಿ ಹೀಗೆ ಕಥೆ ಉಂಟು. ಪರಶುರಾಮನು ಕ್ಷತ್ರಿಯರನ್ನು ಸಂಹರಿಸಿ ಸ್ಯಮಂತಪಂಚಕದಲ್ಲಿ ರಕ್ತದ ಮಡುವುಗಳನ್ನು ಹರಿಸಲು ಪಿತೃಗಳು ಅಲ್ಲಿಗೆ ಬಂದು ಅವನನ್ನು ಕ್ಷತ್ರಿಯವಧದಿಂದ ನಿವಾರಿಸಿದರು. ಪರಶುರಾಮನು ಅವರ ಮಾತಿನಂತೆ ಸಂಹರಿಸುವದನ್ನು ಬಿಟ್ಟನು. ಮತ್ತು ಅವರ ಅಪ್ಪಣೆಯಿಂದಲೇ ಕ್ಷತ್ರವಧದ ಪ್ರಾಯಶ್ಚಿತ್ತರೂಪವಾಗಿ ತೀರ್ಥಯಾತ್ರೆಯನ್ನು ಮಾಡಿದನು. ಈ ವರ್ಣನೆಯು ಸ್ವತಂತ್ರನಾದ ಪಾಪರಹಿತನಾದ ಪರಶುರಾಮನ ವಿಷಯದಲ್ಲಿ ಹೊಂದುವುದಿಲ್ಲ. ಆದ್ದರಿಂದ ತಾತ್ಪರ್ಯದಲ್ಲಿ ಹೀಗೆ ಪರಿಹರಿಸಿರುವರು. ''ಅಪಾಪಮಪಿ ದೇವೇಶಂ ಪಿತರಃ ಸಂನ್ಯವರ್ತಯನ್ । ಅಜಾನಂತೋಽಸ್ಯ ಮಾಹಾತ್ಮ್ಯಂ ಮೋಹಿತಾಸ್ತಸ್ಯ ಮಾಯಯಾ'', ಪಿತೃಗಳು ಪರಮಾತ್ಮನ ಮಾಯೆಯಿಂದ ಮೋಹಿತರಾಗಿ ಅವನ ಮಾಹಾತ್ಮ್ಯವನ್ನು ತಿಳಿಯದೇ ದೇವೋತ್ತಮನಾದ ಪಾಪರಹಿತನಾದ ಪರಮಾತ್ಮನಿಗೂ ಸಹ ಉಪದೇಶಿಸಿದವರು. ''ಮೋಹಯನ್ಮಾಯಯಾ ಲೋಕಂ ಚಕ್ರೇ ಚಾಪಿ

ಚಿತಿಂ ವಧೇ । ಪುಣ್ಯಪಾಪಾದಿನಿರ್ಮಾತುಃ ಕುತಃ ಪಾಪಾದಿಸಂಗತಿಃ'' ಪರಶುರಾಮನಾದರೂ ಮೋಹನಾರ್ಥವಾಗಿ ಪ್ರಾಯಶ್ಚಿತ್ತವನ್ನು ಮಾಡಿದನೇ ಹೊರತು ಪಿತೃಗಳ ಆದೇಶದಿಂದಲ್ಲ. ಏಕೆಂದರೆ ಪರಶುರಾಮನು ಪುಣ್ಯ, ಪಾಪ, ಅವುಗಳ ಫಲ, ಮುಂತಾದವುಗಳಿಗೆ ಸ್ವಯಂ ಕಾರಣನು ನಿಯಾಮಕನೂ ಆಗಿರುವನು. ಹೀಗಿರಲು ಅವನಿಗೆ ಪಾಪಲೇಪಪ್ರಸಕ್ತಿಯೇ ಇಲ್ಲ. ಇದರಿಂದ ಸ್ಯಮಂತಪಂಚಕಂ ಚಕ್ರೇ ಮುಂತಾದ ಶ್ಲೋಕಗಳಲ್ಲಿ ಸೂಚಿತವಾದ ಭಾರತಕಥಾವಿಶೇಷದ ತಾತ್ಪರ್ಯ ಹಾಗೂ ೧೩ ನೇ ಅಧ್ಯಾಯದ ಕೊನೆಯ ಶ್ಲೋಕದ ಮತ್ತು ೧೪ ನೇ ಅಧ್ಯಾಯದ ಆದಿಶ್ಲೋಕದ ತಾತ್ಪರ್ಯವು ತಿಳಿಯುತ್ತದೆ.

**ತಾತ್ಪರ್ಯ-** ಆ ಮಕ್ಕಳು ಕೋಪೋದ್ರಿಕ್ತರಾಗಿ, ಹಾ! ತಾತನೇ! ಸಾಧುವೇ! ಧರ್ಮಿಷ್ಠನೇ! ನೀವು ನಮ್ಮನ್ನು ತ್ಯಜಿಸಿ ಸ್ವರ್ಗವಾಸ ಮಾಡಿದಿರಿ ಎಂದು ಉದ್ಗರಿಸಿದರು. ॥೧೫॥

**ವಿಲಪ್ಯೈವಂ ಪಿತುರ್ದೇಹಂ ನಿಧಾಯ ಭ್ರಾತೃಷು ಸ್ವಯಮ್ ।**
**ಪ್ರಗೃಹ್ಯ ಪರಶುಂ ರಾಮಃ ಕ್ಷತ್ರಾಂತಾಯ ಮನೋ ದಧೇ ॥೧೬॥**

**ರಾಮಃ** ರಾಮನು, **ಏವಂ** ಈ ರೀತಿಯಾಗಿ, **ವಿಲಪ್ಯ** ದುಃಖಿಸಿ, **ಪಿತುಃ** ತಂದೆಯ **ದೇಹಂ** ದೇಹವನ್ನು, **ಭ್ರಾತೃಷು** ಸಹೋದರರಲ್ಲಿ, **ನಿಧಾಯ** ಇಟ್ಟು, **ಸ್ವಯಂ** ತಾನು, **ಪರಶುಂ** ಪರಶುವನ್ನು, **ಪ್ರಗೃಹ್ಯ** ಹಿಡಿದುಕೊಂಡು **ಕ್ಷತ್ರಾಂತಾಯ** ಕ್ಷತ್ರಿಯರ ನಾಶಕ್ಕಾಗಿ, **ಮನಃ** ಮನಸ್ಸನ್ನು **ದಧೇ** ನಿರ್ಧರಿಸಿದನು.

**ತಾತ್ಪರ್ಯ-** ರಾಮನು ಈ ರೀತಿಯಾಗಿ ದುಃಖಿಸಿ, ತಂದೆಯ ದೇಹವನ್ನು ಸಹೋದರರಲ್ಲಿ ಇರಿಸಿ ತಾನು ಪರಶುವನ್ನು ಹಿಡಿದುಕೊಂಡು ಎಲ್ಲಾ ಕ್ಷತ್ರಿಯರನ್ನು ನಾಶಮಾಡಲು ನಿಶ್ಚಯ ಮಾಡಿದನು. ॥೧೬॥

**ಗತ್ವಾ ಮಾಹಿಷ್ಮತೀಂ ರಾಮೋ ಬ್ರಹ್ಮಘ್ನವಿಹತಶ್ರಿಯಮ್ ।**
**ತಸ್ಯಾಂ ಸ ಶೀರ್ಷಭೀ ರಾಜ್ಞಾಂ ಮಧ್ಯೇ ಚಕ್ರೇ ಮಹಾಗಿರಿಮ್ ॥೧೭॥**

**ರಾಮಃ** ಪರಶುರಾಮನು, **ಬ್ರಹ್ಮಘ್ನವಿಹತಶ್ರಿಯಂ** ಬ್ರಹ್ಮಹತ್ಯೆಯಿಂದ ಕಳೆಗುಂದಿದ, **ಮಾಹಿಷ್ಮತೀಂ** ಮಾಹಿಷ್ಮತೀ ನಗರವನ್ನು ಕುರಿತು, **ಗತ್ವಾ** ಹೋಗಿ, **ತಸ್ಯಾಂ ಮಧ್ಯೇ** ಆ ನಗರ ಮಧ್ಯದಲ್ಲಿ, **ರಾಜ್ಞಾಂ** ರಾಜರ **ಶೀರ್ಷಭಿಃ** ತಲೆಗಳಿಂದ **ಮಹಾಗಿರಿಂ** ದೊಡ್ಡಪರ್ವತವನ್ನು **ಚಕ್ರೇ** ಮಾಡಿದನು.

**ತಾತ್ಪರ್ಯ-** ಪರಶುರಾಮನು ಬ್ರಹ್ಮಹತ್ಯಾದೋಷದಿಂದ ತೇಜಸ್ಸನ್ನು ಕಳೆದುಕೊಂಡ ಮಾಹಿಷ್ಮತೀನಗರವನ್ನು ಪ್ರವೇಶಿಸಿ ನಗರಮಧ್ಯದಲ್ಲಿ ಕ್ಷತ್ರಿಯರ ತಲೆಗಳ ರಾಶಿಯಿಂದ ಪರ್ವತವನ್ನು ಮಾಡಿದನು. ॥೧೭॥

**ತದ್ರಕ್ತೇನ ನದೀಂ ಘೋರಾಮಬ್ರಹ್ಮಣ್ಯಭಯಾವಹಾಮ್ ।**
**ಹೇತುಂ ಕೃತ್ವಾ ಪಿತೃವಧಂ ಕ್ಷತ್ರೇಽಮಂಗಳಕಾರಿಣಿ ॥೧೮॥**

**ರಾಮಃ** ಪರಶುರಾಮನು, **ಕ್ಷತ್ರೇ** ಕ್ಷತ್ರಿಯರು, **ಅಮಂಗಳಕಾರಿಣಿ** ಅನ್ಯಾಯ ಮಾಡುತ್ತಿರಲು, **ಪಿತೃವಧಂ** ತಂದೆಯ ವಧೆಯನ್ನು **ಹೇತುಂ** ಕಾರಣವಾಗಿ, **ಕೃತ್ವಾ** ಮಾಡಿ, **ತದ್ರಕ್ತೇನ** ಆ ಕ್ಷತ್ರಿಯರ ರಕ್ತದಿಂದ, **ಅಬ್ರಹ್ಮಣ್ಯಭಯಾವಹಾಂ** ಬ್ರಾಹ್ಮಣ ದ್ವೇಷಿಗಳಿಗೆ ಭಯಂಕರವಾದ **ಘೋರಾಂ** ಘೋರವಾದ, **ನದೀಂ** ನದಿಯನ್ನು ಪ್ರವಹಿಸಿದನು.

**ತಾತ್ಪರ್ಯ-** ಕ್ಷತ್ರಿಯರು ಅನ್ಯಾಯ ಮಾಡುತ್ತಿರಲು ಪರಶುರಾಮನು ಬ್ರಾಹ್ಮಣ ದ್ವೇಷಿಗಳಾದ ಆ ಕ್ಷತ್ರಿಯರನ್ನು ತನ್ನ ತಂದೆಯ ವಧೆಯ ಕಾರಣದಿಂದ, ಸಂಹಾರ ಮಾಡಿ ಅವರ ರಕ್ತದಿಂದ ಒಂದು ಘೋರನದಿಯನ್ನೇ ಪ್ರವಹಿಸಿದನು. ॥೧೮॥

**ತ್ರಿಃಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ವಿಭುಃ ।**
**ಸ್ಯಮಂತಪಂಚಕೇ ಚಕ್ರೇ ಶೋಣಿತೋದಾನ್ ಹ್ರದಾನ್ನವ ॥೧೯॥**

**ವಿಭುಃ** ಸಮರ್ಥನಾದ ಪರಶುರಾಮನು, **ಪೃಥಿವೀಂ** ಭೂಮಂಡಲವನ್ನು **ತ್ರಿಃ ಸಪ್ತಕೃತ್ವಃ** ಇಪ್ಪತ್ತೊಂದು ಸಾರಿ ತಿರುಗಿ, **ನಿಃಕ್ಷತ್ರಿಯಾಂ** ಕ್ಷತ್ರಿಯ ರಹಿತವಾದದ್ದನ್ನಾಗಿ, **ಕೃತ್ವಾ** ಮಾಡಿ, **ಸ್ಯಮಂತಪಂಚಕೇ** ಕುರುಕ್ಷೇತ್ರದಲ್ಲಿ, **ಶೋಣಿತೋದಾನ್** ರಕ್ತವೆಂಬ ಜಲಪೂರ್ಣವಾದ **ಹ್ರದಾನ್** ಮಡುವುಗಳನ್ನು **ನವ** ಒಂಭತ್ತು **ಚಕ್ರೇ** ಮಾಡಿದನು.

**ತಾತ್ಪರ್ಯ-** ಸಮರ್ಥನಾದ ಪರಶುರಾಮನು ಭೂಮಂಡಲವನ್ನು ಇಪ್ಪತ್ತೊಂದುಬಾರಿ ತಿರುಗಿ ಕ್ಷತ್ರಿಯರಾರೂ ಇರದಂತೆ ಸಂಹರಿಸಿ, ಕುರುಕ್ಷೇತ್ರದಲ್ಲಿ ಈ ಕ್ಷತ್ರಿಯರಕ್ತ ಪೂರ್ಣವಾದ ಸರೋವರಗಳನ್ನು ನಿರ್ಮಿಸಿದನು. ॥೧೯॥

**ಪಿತುಃ ಕಾಯೇನ ಸಂಧಾಯ ಶಿರ ಆದಾಯ ಬರ್ಹಿಷಿ ।**
**ಸರ್ವದೇವಮಯಂ ದೇವಮಾತ್ಮಾನಮಯಜನ್ಮಖೈಃ ॥೨೦॥**

**ಪಿತುಃ** ತಂದೆಯ, **ಕಾಯೇನ** ಶರೀರದಿಂದ, **ಶಿರಃ** ಶಿರಸ್ಸನ್ನು **ಸಂಧಾಯ** ಕೂಡಿಸಿ, **ಬರ್ಹಿಷಿ** ಯಜ್ಞದಲ್ಲಿ, **ಸರ್ವದೇವಮಯಂ** ದೇವೋತ್ತಮನಾದ ತನ್ನನ್ನು, **ಮಖೈಃ** ಯಾಗಗಳಿಂದ, **ಅಯಜತ್** ಯಾಗ ಮಾಡಿದನು (ಪೂಜಿಸಿದನು) ಅಂತ್ಯೇಷ್ಟಿ ಮಾಡಿದನು.

**ತಾತ್ಪರ್ಯ-** ಪರಶುರಾಮನು ತಂದೆಯ ಶರೀರಕ್ಕೆ ತಲೆಯನ್ನು ಕೂಡಿಸಿ ಯಜ್ಞದಲ್ಲಿ ದೇವೋತ್ತಮನಾದ ತನ್ನನ್ನು ಯಾಗಗಳಿಂದ ಪೂಜಿಸಿದನು. ಅಂತ್ಯೇಷ್ಟಿ ಮಾಡಿದನು, ಎಂದು ಭಾವವು. ॥೨೦॥

**ದದೌ ಪ್ರಾಚೀಂ ದಿಶಂ ಹೋತ್ರೇ ಬ್ರಹ್ಮಣೇ ದಕ್ಷಿಣಾಂ ದಿಶಮ್ ।**
**ಅಧ್ವರ್ಯವೇ ಪ್ರತೀಚೀಂ ವೈ ಉದ್ಗಾತ್ರೇ ಚೋತ್ತರಾಂ ದಿಶಮ್ ॥೨೧॥**

**ಹೋತ್ರೇ** ಹೋತೃವಿಗೆ **ಪ್ರಾಚೀಂ ದಿಶಂ** ಪೂರ್ವದಿಕ್ಕನ್ನು, **ದದೌ** ಕೊಟ್ಟನು. **ಬ್ರಹ್ಮಣೇ** ಬ್ರಹ್ಮನಿಗೆ, **ದಕ್ಷಿಣಾಂ ದಿಶಂ** ದಕ್ಷಿಣದ ದಿಕ್ಕನ್ನು **ಅಧ್ವರ್ಯವೇ** ಅಧ್ವರ್ಯುವಿಗೆ **ಪ್ರತೀಚೀಂ ದಿಶಂ** ಪಶ್ಚಿಮದಿಕ್ಕನ್ನು **ಉದ್ಗಾತ್ರೇ** ಉದ್ಗಾತೃವಿಗೆ (ಸಾಮಗಾನ ಮಾಡುವವನಿಗೆ) **ಉತ್ತರಾಂ ದಿಶಂ** ಉತ್ತರ ದಿಕ್ಕನ್ನು **ದದೌ** ಕೊಟ್ಟನು.

**ತಾತ್ಪರ್ಯ-** ಹೋತೃವಿಗೆ ಪೂರ್ವದಿಕ್ಕಿನ ಭೂಪ್ರದೇಶವನ್ನು, ಬ್ರಹ್ಮನಿಗೆ ದಕ್ಷಿಣದಿಕ್ಕನ್ನು, ಅಧ್ವರ್ಯುವಿಗೆ ಪಶ್ಚಿಮದ ದಿಕ್ಕನ್ನು, ಉದ್ಗಾತೃವಿಗೆ ಉತ್ತರದಿಕ್ಕನ್ನು ಕೊಟ್ಟನು. ॥೨೧॥

**ಅನ್ಯೇಭ್ಯೋಽವಾಂತರದಿಶಃ ಕಶ್ಯಪಾಯ ಚ ಮಧ್ಯತಃ ।**
**ಆರ್ಯಾವರ್ತಮುಪದ್ರಷ್ಟ್ರೇ ಸದಸ್ಯೇಭ್ಯಸ್ತತಃ ಪರಮ್ ॥೨೨॥**

**ಅನ್ಯೇಭ್ಯೋ** ಇತರ ಋತ್ವಿಜರಿಗೆ, **ಅವಾಂತರದಿಶಃ** ಉಪದಿಕ್ಕುಗಳನ್ನು **ಕಶ್ಯಪಾಯ** ಕಶ್ಯಪರಿಗೆ, **ಮಧ್ಯತಃ** ಮಧ್ಯಸ್ಥಳವನ್ನು, **ಉಪದ್ರಷ್ಟ್ರೇ** ಕರ್ಮಸಾಕ್ಷಿಗಳಿಗೆ, **ಆರ್ಯಾವರ್ತಂ** ಆರ್ಯಾವರ್ತವನ್ನು, **ಸದಸ್ಯೇಭ್ಯಃ** ಸದಸ್ಯರುಗಳಿಗೆ, **ತತಃ ಪರಂ** ಉಳಿದ ಪ್ರದೇಶವನ್ನು **ದದೌ** ಕೊಟ್ಟನು.

**ತಾತ್ಪರ್ಯ-** ಇತರ ಋತ್ವಿಜರಿಗೆ ಆಗ್ನೇಯಾದಿ ಕೋನಗಳನ್ನು, ಕಶ್ಯಪರಿಗೆ ಮಧ್ಯಪ್ರದೇಶವನ್ನು, ಕರ್ಮಸಾಕ್ಷಿಗಳಿಗೆ ಆರ್ಯಾವರ್ತವನ್ನು, ಸದಸ್ಯರಿಗೆ ಉಳಿದ ಪ್ರದೇಶಗಳನ್ನು ಕೊಟ್ಟನು. ॥೨೨॥

**ತತಶ್ಚಾವಭೃಥಸ್ನಾನವಿಧೂತಾಶೇಷಕಿಲ್ಬಿಷಃ ।**
**ಸರಸ್ವತ್ಯಾಂ ಬ್ರಹ್ಮನದ್ಯಾಂ ರೇಜೇ ವ್ಯಭ್ರ ಇವಾಂಶುಮಾನ್ ॥೨೩॥**

**ಅವಭೃಥಸ್ನಾನವಿಧೂತಾಶೇಷಕಿಲ್ಬಿಷಃ** ಅವಭೃಥಸ್ನಾನದಿಂದ ನಷ್ಟವಾದ ಸಮಸ್ತ-ಪಾಪವುಳ್ಳ (ಪಾಪನಷ್ಟವಾಗುವುದು ಎನ್ನುವುದು ಶ್ರೀಪರಶುರಾಮರಲ್ಲಿ ಔಪಚಾರಿಕ ಎಂದು ತಿಳಿಯಬೇಕು). ಅಥವಾ **ಜನ** ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಧ್ಯಾಹಾರ ಮಾಡಿದಾಗ ನಷ್ಟಹೊಂದಿದ ಪಾಪ ಉಳ್ಳ ಜನರುಳ್ಳ ಪರಶುರಾಮನು, **ಬ್ರಹ್ಮನದ್ಯಾಂ** ಪುಣ್ಯನದಿಯಾದ, **ಸರಸ್ವತ್ಯಾಂ** ಸರಸ್ವತಿ ನದಿಯಲ್ಲಿ ಸ್ನಾನ ಮಾಡಿ, **ವ್ಯಭ್ರಃ** ಮೇಘದಿಂದ ಮುಕ್ತನಾದ, **ಅಂಶುಮಾನ್ ಇವ** ಸೂರ್ಯನಂತೆ **ರೇಜೇ** ವಿರಾಜಿಸಿದನು.

**ತಾತ್ಪರ್ಯ-** ಶ್ರೀಪರಶುರಾಮನು ಪುಣ್ಯನದಿಯಾದ, ಸರಸ್ವತೀ ನದಿಯಲ್ಲಿ ಅವಭೃಥಸ್ನಾನ ಮಾಡಿ ಸಕಲಪಾಪವನ್ನು ಕಳೆದುಕೊಂಡ ಜನರಿಂದ ಸಹಿತನಾಗಿ ಮೇಘದಿಂದ ಬಿಡಲ್ಪಟ್ಟ ಸೂರ್ಯನಂತೆ ಪ್ರಕಾಶಿಸಿದನು. ||೨೩||

**ಸ್ವದೇಹಂ ಜಮದಗ್ನಿಸ್ತು ಲಬ್ಧ್ವಾ ಸಂಜ್ಞಾನಲಕ್ಷಣಮ್ |**
**ಋಷೀಣಾಂ ಮಂಡಲೇ ಸೋಽಭೂತ್ಸಪ್ತಮೋ ರಾಮಪೂಜಿತಃ ||೨೪||**

**ಜಮದಗ್ನಿಸ್ತು** ಜಮದಗ್ನಿಯಾದರೂ, **ಸಂಜ್ಞಾನಲಕ್ಷಣಂ** ತೇಜೋಲಕ್ಷಣವಾದ **ಸ್ವದೇಹಂ** ತನ್ನ ದೇಹವನ್ನು, **ಲಬ್ಧ್ವಾ** ಹೊಂದಿ, **ರಾಮಪೂಜಿತಃ** ಪರಶುರಾಮನಿಂದ ಪೂಜಿತನಾಗಿ, **ಋಷಿಮಂಡಲೇ** ಸಪ್ತಋಷಿಗಳ ಮಂಡಲದಲ್ಲಿ, **ಸಪ್ತಮಃ** ಏಳನೇಯವನು, **ಅಭೂತ್** ಆದನು.

**ತಾತ್ಪರ್ಯ-** ಜಮದಗ್ನಿಗಳಾದರೂ ತೇಜೋಮಯವಾದ ತಮ್ಮ ದೇಹವನ್ನು ಹೊಂದಿ ಪರಶುರಾಮರಿಂದ ಪೂಜಿತರಾಗಿ ಸಪ್ತಋಷಿಮಂಡಲದಲ್ಲಿ ಏಳನೇ ಸ್ಥಾನವನ್ನು ಹೊಂದಿದರು. ||೨೪||

**ಜಾಮದಗ್ನ್ಯೋಽಪಿ ಭಗವಾನ್ ರಾಮಃ ಕಮಲಲೋಚನಃ |**
**ಆಗಾಮಿನ್ಯಂತರೇ ರಾಜನ್ ವರ್ತಯಿಷ್ಯತಿ ವೈ ಬೃಹತ್ ||೨೫||**

**ಕಮಲಲೋಚನಃ** ಪದ್ಮಗಳಂತೆ ನೇತ್ರ ಉಳ್ಳ, **ಜಾಮದಗ್ನ್ಯಃ** ಜಮದಗ್ನಿಯ ಪುತ್ರನಾದ **ಭಗವಾನ್** ಷಡ್ಗುಣಗಳಿಂದ ಪೂರ್ಣನಾದ, **ರಾಮಃ** ಪರಶುರಾಮನು, **ಆಗಾಮಿನಿ** ಮುಂದೆ ಬರುವ, **ಅಂತರೇ** ಮನ್ವಂತರದಲ್ಲಿ **ಬೃಹತ್ ವರ್ತಯಿಷ್ಯತಿ** ವೇದಪ್ರವರ್ತಕನು ಆಗುತ್ತಾನೆ.

**ತಾತ್ಪರ್ಯ-** ರಾಜನೇ! ಕಮಲಲೋಚನನಾದ ಶ್ರೀಪರಶುರಾಮನು ಮುಂದಿನ ಮನ್ವಂತರದಲ್ಲಿ ವೇದಪ್ರವರ್ತಕನು ಆಗುತ್ತಾನೆ. ||೨೫||

**ಆಸ್ತೇಽದ್ಯಾಪಿ ಮಹೇಂದ್ರಾದ್ರೌ ನ್ಯಸ್ತದಂಡಃ ಪ್ರಶಾಂತಧೀಃ |**
**ಉಪಗೀಯಮಾನಚರಿತಃ ಸಿದ್ಧಗಂಧರ್ವಚಾರಣೈಃ ||೨೬||**

**ಅದ್ಯಾಪಿ** ಈಗಲೂ ಸಹ, **ಮಹೇಂದ್ರಾದ್ರೌ** ಮಹೇಂದ್ರಪರ್ವತದಲ್ಲಿ **ನ್ಯಸ್ತದಂಡಃ** ದಂಡ ಇಟ್ಟವನಾಗಿ, **ಪ್ರಶಾಂತಧೀಃ** ಶಾಂತಚಿತ್ತ ಉಳ್ಳವನಾಗಿ, **ಸಿದ್ಧಗಂಧರ್ವಚಾರಣೈಃ** ಸಿದ್ದರು, ಗಂಧರ್ವ, ಚಾರಣರಿಂದ, **ಉಪಗೀಯಮಾನಚರಿತಃ** ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ಮಹಿಮೆ ಉಳ್ಳವನಾಗಿ, **ಆಸ್ತೇ** ಇರುತ್ತಾನೆ.

**ತಾತ್ಪರ್ಯ-** ದಂಡವನ್ನು ಇಟ್ಟವನಾದ, ಶಾಂತಚಿತ್ತ ಉಳ್ಳವನಾದ ಸಕಲ-ದೇವತೆಗಳಿಂದಲೂ ಪೂಜ್ಯನಾದ ಶ್ರೀಪರಶುರಾಮನು ಈಗಲೂ ಮಹೇಂದ್ರ ಪರ್ವತದಲ್ಲಿರುತ್ತಾನೆ. ।।೨೬।।

**ಏವಂ ಭೃಗುಷು ವಿಶ್ವಾತ್ಮಾ ಭಗವಾನ್ ಹರಿರೀಶ್ವರಃ ।**
**ಅವತೀರ್ಯ ಪರಂ ಭಾರಂ ಭುವೋಽಹನ್ ಬಹುಶೋ ನೃಪಾನ್ ।।೨೭।।**

**ವಿಶ್ವಾತ್ಮಾ** ವಿಶ್ವವ್ಯಾಪಿಯಾದ, **ಭಗವಾನ್** ಷಡ್ಗುಣಸಂಪನ್ನನಾದ **ಈಶ್ವರಃ** ಸ್ವಾಮಿಯಾದ, **ಹರಿಃ** ಹರಿಯು **ಏವಂ** ಈ ರೀತಿಯಾಗಿ, **ಭೃಗುಷು** ಭೃಗುವಂಶದಲ್ಲಿ **ಅವತೀರ್ಯ** ಅವತರಿಸಿ, **ಭುವಃ** ಭೂಮಿಯ, **ಪರಂ ಭಾರಂ** ಕೇವಲ ಭಾರರಾದ **ನೃಪಾನ್** ರಾಜರನ್ನು, **ಬಹುಶಃ** ಅನೇಕ ಸಲ **ಅಹನ್** ನಾಶ ಮಾಡಿದನು.

**ತಾತ್ಪರ್ಯ-** ವಿಶ್ವವ್ಯಾಪಿಯಾದ ಸ್ವಾಮಿಯಾದ ಭಗವಂತನು ಈ ರೀತಿಯಾಗಿ, ಭೃಗುವಂಶದಲ್ಲಿ ಅವತರಿಸಿ ಭೂಭಾರರಾದ ದುಷ್ಟಕ್ಷತ್ರಿಯರನ್ನು ನಾಶಮಾಡಿದನು.

**ಗಾಧೇರಭೂನ್ಮಹಾತೇಜಾಃ ಸಮಿದ್ಧ ಇವ ಪಾವಕಃ ।**
**ತಪಸಾ ಕ್ಷಾತ್ರಮುತ್ಸೃಜ್ಯ ಯೋ ಲೇಭೇ ಬ್ರಹ್ಮವರ್ಚಸಮ್ ।।೨೮।।**

**ಗಾಧೇಃ** ಗಾಧಿರಾಜನ ದೆಶೆಯಿಂದ, **ಮಹಾತೇಜಾಃ** ಮಹಾತೇಜಸ್ವಿಯಾದ, **ಸಮಿದ್ಧಃ** ವೃದ್ಧಿಹೊಂದಿದ, **ಪಾವಕಃ ಇವ** ಅಗ್ನಿಯಂತೆ, ವಿಶ್ವಾಮಿತ್ರನು, **ಅಭೂತ್** ಜನಿಸಿದನು. **ಯಃ** ಯಾವ ಈ ವಿಶ್ವಾಮಿತ್ರನು, **ತಪಸಾ** ತಪಸ್ಸಿನಿಂದ, **ಕ್ಷಾತ್ರಂ** ಕ್ಷತ್ರಿಯತ್ವವನ್ನು, **ಉತ್ಸೃಜ್ಯ** ತ್ಯಜಿಸಿ, **ಬ್ರಹ್ಮವರ್ಚಸಂ** ಬ್ರಹ್ಮತೇಜಸ್ಸನ್ನು, **ಲೇಭೇ** ಹೊಂದಿದನು.

**ತಾತ್ಪರ್ಯ-** ಗಾಧಿರಾಜನ ದೆಶೆಯಿಂದ ಮಹಾತೇಜಸ್ವಿಯಾದ, ವೃದ್ಧಿಹೊಂದಿದ ಅಗ್ನಿಯಂತಿರುವ, ವಿಶ್ವಾಮಿತ್ರನು ಜನಿಸಿದನು. ಈತನು ತಪಸ್ಸು ಮಾಡಿ ಕ್ಷತ್ರಿಯತ್ವವನ್ನು ತ್ಯಜಿಸಿ, ಬ್ರಹ್ಮತ್ವವನ್ನು ಪಡೆದನು. ।।೨೮।।

**ವಿಶ್ವಾಮಿತ್ರಸ್ಯ ಚೈವಾಸನ್ ಪುತ್ರಾ ಏಕಶತಂ ನೃಪ ।**
**ಮಧ್ಯಮಸ್ತು ಮಧುಚ್ಛಂದಾ ಮಧುಚ್ಛಂದಸ ಏವ ತೇ ।।೨೯।।**

**ನೃಪ** ರಾಜನೇ! **ವಿಶ್ವಾಮಿತ್ರಸ್ಯ** ವಿಶ್ವಾಮಿತ್ರನಿಗೆ, **ಏಕಶತಂ** ನೂರಾ ಒಂದು ಜನ **ಪುತ್ರಾಃ** ಮಕ್ಕಳು, **ಆಸನ್** ಆದರು. **ಮಧ್ಯಮಃ** ಇವರಲ್ಲಿ ಮಧ್ಯಮನು, **ಮಧುಚ್ಛಂದಾಃ** ಮಧುಚ್ಛಂದ ಎಂಬುವನು, **ತೇ ಏವ** ಆ ಕೊನೆಯ ಐವತ್ತು ಮಕ್ಕಳು **ಮಧುಚ್ಛಂದಸಃ** ಮಧುಚ್ಛಂದರು ಎಂದು ಹೆಸರುಳ್ಳವರಾಗಿದ್ದಾರೆ.

**ತಾತ್ಪರ್ಯ-** ರಾಜನೇ! ಆ ವಿಶ್ವಾಮಿತ್ರನಿಗೆ ಒಂದುನೂರಾ ಒಂದು ಜನ ಮಕ್ಕಳಾದರು. ಇವರಲ್ಲಿ ಮಧ್ಯಮನ ಹೆಸರು ಮಧುಚ್ಛಂದನೆಂದು, ಈತನಿಂದ ಸಹಿತರಾದ ಕೊನೆಯ ಐವತ್ತು ಮಕ್ಕಳು ಮಧುಚ್ಛಂದರೆಂದು ಹೆಸರಾದರು. ।।೨೯।।

**ಪುತ್ರಂ ಕೃತ್ವಾ ಶುನಃಶೇಪಂ ದೇವರಾತಂ ಚ ಭಾರ್ಗವಮ್ ।**
**ಆಜೀಗರ್ತಂ ಸುತಾನಾಹ ಜ್ಯೇಷ್ಠ ಏಷ ಪ್ರಕಲ್ಪ್ಯತಾಮ್ ।।೩೦।।**

ಈ ವಿಶ್ವಾಮಿತ್ರರು, **ಭಾರ್ಗವಂ** ಭಾರ್ಗವ ವಂಶದವನಾದ, **ಆಜೀಗರ್ತಂ** ಆಜೀಗರ್ತನ ಮಗನಾದ, **ದೇವರಾತಂ** ದೇವದತ್ತನಾದ, **ಶುನಃಶೇಪಂ** ಶುನಃ ಶೇಪನನ್ನು, **ಪುತ್ರಂ** ಮಗನನ್ನಾಗಿ, **ಕೃತ್ವಾ** ಮಾಡಿಕೊಂಡು, ''**ಏಷಃ** ಈತನು, **ಜ್ಯೇಷ್ಠಃ** ಜ್ಯೇಷ್ಠನಾಗಿ, **ಪ್ರಕಲ್ಪ್ಯತಾಂ** ಕಲ್ಪಿಸಲ್ಪಡಲಿ'' ಎಂದು, **ಸುತಾನ್** ತಮ್ಮ ಮಕ್ಕಳನ್ನು ಕುರಿತು, **ಆಹ** ಹೇಳಿದನು.

**ತಾತ್ಪರ್ಯ-** ಈ ವಿಶ್ವಾಮಿತ್ರರು ಭಾರ್ಗವವಂಶದವನಾದ ಆಜೀಗರ್ತನ ಮಗನಾದ, ದೇವದತ್ತನಾದ ಶುನಃಶೇಪನನ್ನು ತಮ್ಮ ಮಗನನ್ನಾಗಿ ಮಾಡಿಕೊಂಡು ತನ್ನ ಮಕ್ಕಳಿಗೆ ಈತನನ್ನು ಅವರಿಗೆ ಜ್ಯೇಷ್ಠನನ್ನಾಗಿ ಮಾಡಿಕೊಳ್ಳುವುದಕ್ಕೆ ಹೇಳಿದನು.

**ಯೋ ವೈ ಹರಿಶ್ಚಂದ್ರಮಖೇ ವಿಕ್ರೀತಃ ಪುರುಷಃ ಪಶುಃ ।**
**ಸ್ತುತ್ವಾ ದೇವಾನ್ ಪ್ರಜೇಶಾದೀನ್ ಮುಮುಚೇ ಪಾಶಬಂಧನಾತ್ ।।೩೧।।**

**ಯಃ** ಯಾವ ಶುನಃಶೇಪನು **ಹರಿಶ್ಚಂದ್ರಮಖೇ** ಹರಿಶ್ಚಂದ್ರನ ಯಾಗದಲ್ಲಿ, **ವಿಕ್ರೀತಃ** ಆಜೀಗರ್ತನೆಂಬ ತನ್ನ ತಂದೆಯಿಂದ ರೋಹಿತನಿಗೆ ಕೊಡಲ್ಪಟ್ಟು **ಪುರುಷಃ ಪಶುಃ** ಪುರುಷಾಖ್ಯಪಶು, **ಅಭೂತ್** ಆಗಿದ್ದನು. **ಪ್ರಜೇಶಾದೀನ್** ಬ್ರಹ್ಮಾದಿದೇವತೆಗಳನ್ನು, **ಸ್ತುತ್ವಾ** ಸ್ತೋತ್ರಮಾಡಿ, **ಪಾಶಬಂಧನಾತ್** ಪಾಶಬಂಧನದಿಂದ, ಯೂಪಸ್ತಂಭದ ರಜ್ಜುಬಂಧನದಿಂದ **ಮುಮುಚೇ** ಬಿಡಿಸಿಕೊಂಡನು.

**ತಾತ್ಪರ್ಯ-** ಈ ಶುನಃಶೇಪನನ್ನು ಹರಿಶ್ಚಂದ್ರನ ಯಾಗದಲ್ಲಿ ಅವನ ತಂದೆಯಾದ ಆಜೀಗರ್ತನು ರೋಹಿತನಿಗೆ ಕೊಟ್ಟಿದ್ದನು. ಈತನನ್ನು ಯಜ್ಞಸ್ತಂಭದಲ್ಲಿ ಬಂಧಿಸಿದ್ದರು. ಈತನು ಬ್ರಹ್ಮಾದಿದೇವತೆಗಳನ್ನು ಸ್ತೋತ್ರಮಾಡಿ ಈ ಬಂಧನದಿಂದ ಬಿಡುಗಡೆ ಹೊಂದಿದನು. ।।೩೧।।

**ಯೋ ರಾತೋ ದೇವಯಜನೇ ದೇವೈರ್ಗಾಧಿಸುತಾಯ ಸಃ ।**
**ದೇವರಾತ ಇತಿ ಖ್ಯಾತಃ ಶುನಃಶೇಪಸ್ತು ಭಾರ್ಗವಃ ।।೩೨।।**

**ಭಾರ್ಗವಃ** ಭೃಗುಕುಲೋತ್ಪನ್ನನಾದ, **ಯಃ** ಯಾವಾತನು, **ಶುನಃಶೇಪಃ** ಶುನಃಶೇಪನು, **ದೇವಯಜನೇ** ಯಜ್ಞದಲ್ಲಿ, **ದೇವೈಃ** ದೇವತೆಗಳಿಂದ, **ರಾತಃ**

ರಕ್ಷಿತನಾಗಿರುತ್ತಾನೆ. ಆದ್ದರಿಂದಲೇ, **ಗಾಧಿಸುತಾಯ** ವಿಶ್ವಾಮಿತ್ರನಿಗಾಗಿ, **ರಾತಃ** ಕೊಡಲ್ಪಟ್ಟಿರುತ್ತಾನೆ, **ಇತಿ** ಈ ಕಾರಣದಿಂದ, **ಅಯಂ** ಇವನು **ದೇವರಾತಃ** ದೇವರಾತನೆಂದು, **ಖ್ಯಾತಃ** ಪ್ರಸಿದ್ಧನಾಗಿದ್ದಾನೆ.

**ಯೇ ಮಧುಚ್ಛಂದಸೋ ಜ್ಯೇಷ್ಠಾಃ ಕುಶಲಂ ಮೇನಿರೇ ನ ತತ್ ।**
**ಅಶಪತ್ತಾನ್ಮುನಿಃ ಕ್ರುದ್ಧೋ ಮ್ಲೇಂಛಾಭವತ ದುರ್ಜನಾಃ ॥೩೩॥**

**ಯೇ** ಯಾವ ಐವತ್ತು ಮಕ್ಕಳು, **ಮಧುಚ್ಛಂದಸಃ** ಮಧುಚ್ಛಂದಸರಕ್ಕಿಂತ **ಜ್ಯೇಷ್ಠಾಃ** ಜ್ಯೇಷ್ಠರಾಗಿದ್ದರೋ, **ತೇ** ಅವರುಗಳು, **ತತ್** ಆ ಶುನಃಶೇಪನ ಜ್ಯೇಷ್ಠತ್ವವನ್ನು ತಮ್ಮ ಕನಿಷ್ಠತ್ವವನ್ನು, **ಕುಶಲಂ** ಸಾಧು ಎಂದು **ನ ಮೇನಿರೇ** ತಿಳಿಯಲಿಲ್ಲ. **ಕ್ರುದ್ಧಃ** ಕೋಪಗೊಂಡ, **ಮುನಿಃ** ವಿಶ್ವಾಮಿತ್ರ ಮುನಿಯು, **ದುರ್ಜನಾಃ** ದುಷ್ಟರಾದ ನೀವು, **ಮ್ಲೇಂಛಾಃ** ಮ್ಲೇಂಛರಾಗಿ, **ಭವತ** ಆಗಿರಿ ಎಂದು **ಅಶಪತ್** ಶಾಪಕೊಟ್ಟರು.

**ತಾತ್ಪರ್ಯ-** ಜ್ಯೇಷ್ಠರಾದ ಐವತ್ತು ಮಕ್ಕಳು ಶುನಃಶೇಪನನ್ನು ಜ್ಯೇಷ್ಠನನ್ನಾಗಿ ಮಾಡಿಕೊಳ್ಳುವುದು ಸಾಧು ಎಂದು ತಿಳಿಯಲಿಲ್ಲ. ಕುಪಿತರಾದ ವಿಶ್ವಾಮಿತ್ರರು ''ನೀವು ಮ್ಲೇಂಛರಾಗಿರಿ'' ಎಂದು ಶಪಿಸಿದರು. ॥೩೨-೩೩॥

**ಸಹೋವಾಚ ಮಧುಚ್ಛಂದಾಃ ಸಾರ್ಧಂ ಪಂಚಶತಾ ತತಃ ।**
**ಯನ್ನೋ ಭವಾನ್ಸಂಜಾನೀತೇ ತಸ್ಮಿಂಸ್ತಿಷ್ಠಾಮಹೇ ವಯಮ್ ॥೩೪॥**

**ಪಂಚಾಶತಾ** ಐವತ್ತು ಸಂಖ್ಯಾಕರಾದ ಕನಿಷ್ಠರಿಂದ, **ಸಹ** ಕೂಡಿಕೊಂಡು, **ಮಧುಚ್ಛಂದಾಃ** ಮಧುಚ್ಛಂದನು, **ಉವಾಚ** ವಿಶ್ವಾಮಿತ್ರರನ್ನು ಕುರಿತು ಹೇಳಿದನು. **ತಾತ** ತಂದೆಗಳೇ, **ಭವಾನ್** ನೀವುಗಳು, **ನಃ** ನಮ್ಮಗಳಿಗೆ **ಯತ್** ಯಾವ ಮಾತನ್ನು **ಸಂಜಾನೀತೇ** ಆಜ್ಞಾಪಿಸಿದ್ದೀರೋ, **ವಯಂ** ನಾವುಗಳು, **ತಸ್ಮಿನ್** ಆ ರೀತಿ ಶುನಃ ಶೇಪನು ಜ್ಯೇಷ್ಠನಾಗುವುದಕ್ಕೂ ನಾವು ಕನಿಷ್ಠರಾಗುವುದಕ್ಕೂ **ತಿಷ್ಠಾಮಹೇ** ನಿಶ್ಚಯ ಉಳ್ಳವರಾಗಿದ್ದೇವೆ.

**ತಾತ್ಪರ್ಯ-** ವಿಶ್ವಾಮಿತ್ರರ ಆ ದ್ವಿತೀಯ ಐವತ್ತು ಜನ ಮಕ್ಕಳು ಸೇರಿ ಮುಂದಾಳುವಾಗಿ ಮಧುಚ್ಛಂದನೊಬ್ಬನು ಉತ್ತರಿಸಿದನು. ಏನೆಂದರೆ ''ತಂದೆಗಳೇ! ತಮ್ಮ ಅಪ್ಪಣೆ ಪ್ರಕಾರ ನಾವು, ಶುನಃಶೇಪನು ಜ್ಯೇಷ್ಠನಾಗಿರಲು ನಾವು ಕನಿಷ್ಠರಾಗಿರಲಿಕ್ಕೆ ಸಮ್ಮತಿಸಿರುತ್ತೇವೆ'' ಎಂದು ಹೇಳಿದನು. ॥೩೪॥

**ಜ್ಯೇಷ್ಠಂ ಮಂತ್ರದೃಶಂ ಚಕ್ರುಸ್ತ್ವಾಮನ್ವಂಚೋ ವಯಂ ಸ್ಮ ಹಿ ।**
**ವಿಶ್ವಾಮಿತ್ರಃ ಸುತಾನಾಹ ವೀರವಂತೋ ಭವಿಷ್ಯಥ ॥೩೫॥**

ಶುನಃಶೇಪನೇ! **ವಯಂ** ನಾವು, **ತ್ವಾಂ** ನಿನ್ನನ್ನು, **ಅನ್ವಂಚಃ ಸ್ಮ ಹಿ** ಅನುವರ್ತ-ಮಾನರಾಗಿದ್ದೇವೆ, ಎಂದು ಹೇಳಿ ತಮ್ಮ **ಮಂತ್ರದೃಶಂ** ಮಂತ್ರದ್ರಷ್ಟಾರನಾದ, ಶುನಃಶೇಪನನ್ನು, **ಜ್ಯೇಷ್ಠಂ** ಜ್ಯೇಷ್ಠನನ್ನಾಗಿ **ಚಕ್ರುಃ** ಮಾಡಿದರು. **ವಿಶ್ವಾಮಿತ್ರಃ** ವಿಶ್ವಾಮಿತ್ರನು, **ಸುತಾನ್** ಮಕ್ಕಳನ್ನು ಕುರಿತು ನೀವು **ವೀರವಂತಃ** ಪರಾಕ್ರಮಿಗಳು, **ಭವಿಷ್ಯಥ** ಆಗುವಿರಿ ಎಂದು **ಆಹ** ಹೇಳಿದರು.

**ತಾತ್ಪರ್ಯ-** ಶುನಃಶೇಪನೇ! ನಾವು ನಿನ್ನನ್ನು ಅನುಸರಿಸಿದ್ದೇವೆ ಎಂದು ಹೇಳಿ, ಮಂತ್ರದ್ರಷ್ಟಾರನಾದ ಶುನಃಶೇಪನನ್ನು ತಮ್ಮ ಜ್ಯೇಷ್ಠನನ್ನಾಗಿ ಮಾಡಿಕೊಂಡರು. ಆಗ ವಿಶ್ವಾಮಿತ್ರನು ಮಕ್ಕಳನ್ನು ಕುರಿತು ನೀವು ಪರಾಕ್ರಮಿಗಳಾಗಿರುತ್ತೀರಿ ಎಂದು ಹೇಳಿದರು. ||೩೫||

**ಯೇ ಮಾನಂ ಮೇಽನುಗೃಹ್ಣಂತೋ ವೀರವಂತಮಕರ್ತ ಮಾ |**
**ಏಷ ವಃ ಕೌಶಿಕಾ ವೀರೋ ದೇವರಾತಸ್ತಮನ್ವಿತ ||೩೬||**

**ಯೇ** ಯಾವ ನೀವು, **ಮೇ** ನನಗೆ, **ಮಾನಂ** ಗೌರವವನ್ನು ( ಮಾತು ನಡೆಸುವ ಲಕ್ಷಣವಾದ ಗೌರವವನ್ನು ಮಾಡಿದ್ದಕ್ಕೆ), **ಅನುಗೃಹ್ಣಂತಃ** ಅನುಗ್ರಹಮಾಡುತ್ತಾ , **ಮಾ** ನನ್ನನ್ನು, **ವೀರವಂತಂ** (ಪುತ್ರವಂತನನ್ನಾಗಿ) ವೀರವಂತನನ್ನಾಗಿ, **ಅಕರ್ತ** ಮಾಡಿದಿರಿ, ಆದ್ದರಿಂದ **ಯೂಯಂ** ನೀವುಗಳು ವೀರವಂತರಾಗುತ್ತೀರಿ, **ಕೌಶಿಕಾಃ** ಹೇ ಕೌಶಿಕ ಗೋತ್ರದವರೇ, **ಏಷಃ** ಈ **ದೇವರಾತಃ** ದೇವರಾತನಾದ ಶುನಃಶೇಪನು, ನಿಮಗೆ ಚಿಕ್ಕಪ್ಪನು, **ಯೂಯಂ** ನೀವುಗಳು, **ತಂ** ಅವನನ್ನು **ಅನ್ವಿತ** ಅನುಸರಿಸಿ ಎಂದು ಹೇಳಿದರು.

**ತಾತ್ಪರ್ಯ-** ಪುತ್ರರೇ! ನೀವು ನನ್ನ ಮಾತನ್ನು ನಡೆಸಿಕೊಟ್ಟರಿ. ಆದ್ದರಿಂದ ನೀವು ವೀರವಂತರಾಗಿರಿ, ಶುನಃಶೇಪನು ನಿಮಗೆ ಜ್ಯೇಷ್ಠನಾಗಿರಲಿ. ನೀವು ಆತನನ್ನು ಅನುಸರಿಸಿರಿ. ಎಂದು ಹೇಳಿದನು. ||೩೬||

**ಅನ್ಯೇ ಚಾಷ್ಟಕಹಾರೀತಾ ಜಯಕ್ರತುಮದಾದಯಃ |**
**ಏವಂ ಕೌಶಿಕಗೋತ್ರಂ ತದ್ವೈಶ್ವಾಮಿತ್ರೈಃ ಪೃಥಗ್ವಿಧಮ್ ||೩೭||**

**ಅನ್ಯೇ** ಬೇರೆಯವರಾದ, ಅಷ್ಟಕ, ಹಾರೀತ, ಜಯ, ಕ್ರತು, ಮದ, ಇತ್ಯಾದಿ ಇವರೆಲ್ಲರೂ ಅನುಸರಿಸಿದರು. **ಏವಂ** ಈ ರೀತಿಯಾಗಿ, **ಕೌಶಿಕಗೋತ್ರಂ** ಕೌಶಿಕಗೋತ್ರವು, **ವೈಶ್ವಾಮಿತ್ರೈಃ** ವಿಶ್ವಾಮಿತ್ರರ ಮಕ್ಕಳಿಂದ, **ಪೃಥಗ್ವಿಧಂ** ಎರಡು ವಿಧವಾಗಿ ವಿಂಗಡವಾಯಿತು.

**ತಾತ್ಪರ್ಯ-** ಬೇರೆ ಅಷ್ಟಕ, ಹಾರೀತ, ಜಯ, ಕ್ರತು ಇತ್ಯಾದಿಗಳೆಲ್ಲರೂ ಆತನನ್ನು ಅನುಸರಿಸಿದರು. ಈ ರೀತಿಯಾಗಿ ವಿಶ್ವಾಮಿತ್ರನ ಮಕ್ಕಳಿಂದ ಕೌಶಿಕಗೋತ್ರವು ಎರಡು ರೀತಿ ವಿಂಗಡವಾಯಿತು. ।।೩೭।।

**ಪ್ರವರಾಂತರಮಾಪನ್ನಂ ತದ್ಧೀತ್ಯೇವಂ ಪ್ರಕಲ್ಪಿತಮ್ ।**
**ಯಃ ಪುರೂರವಸಃ ಪುತ್ರ ಆಯುಸ್ತಸ್ಯಾಭವನ್ಸುತಾಃ ।।೩೮।।**

**ಏವಂ** ಈ ರೀತಿಯಾಗಿ ಕೆಲವರು ಶಾಪಗ್ರಸ್ತರಾದರು. ಒಬ್ಬನು ಪುತ್ರನಾಗಿ ಅಂಗೀಕೃತನಾದನು. ಕೆಲವರು ಅನುಸರಿಸಿದರು. ಈ ರೀತಿಯಾಗಿ, **ತತ್** ಆ ಕೌಶಿಕಗೋತ್ರವು ನಾನಾವಿಧವಾಗಿ, **ಪ್ರಕಲ್ಪಿತಂ** ಕಲ್ಪಿತವಾಯಿತು. **ಪ್ರವರಾಂತರಂ** ಬೇರೆ ಬೇರೆ ಪ್ರವರಗಳನ್ನು, **ಆಪನ್ನಂ** ಹೊಂದಿತು. ಇನ್ನು ಶ್ರೀಕೃಷ್ಣಾವತಾರ ಮಹಿಮೆ ಹೇಳಲು ಪ್ರಸ್ತಾಪ ಮಾಡುತ್ತಾರೆ. **ಯಃ** ಯಾವಾತನು, **ಪುರೂರವಸಃ** ಪುರೂರವನಿಗೆ **ಆಯುಃ** ಆಯು ಎಂಬುವನು, **ಪುತ್ರಃ** ಮಗನು, **ತಸ್ಯ** ಈ ಆಯುವಿಗೆ, **ಸುತಾಃ** ಮಕ್ಕಳು **ಅಭವನ್** ಆದರು.

**ತಾತ್ಪರ್ಯ-** ಈ ರೀತಿಯಾಗಿ (ಕೆಲವರು ಶಾಪಗ್ರಸ್ತರಾದರು, ಒಬ್ಬನು ಪುತ್ರನಾದ. ಕೆಲವರು ಅನುಸರಿಸಿದರು.) ಆ ಕೌಶಿಕವಂಶವು ನಾನಾವಿಧವಾಗಿ ಕಲ್ಪಿತವಾಯಿತು. ಬೇರೆ ಬೇರೆ ಪ್ರವರಗಳಾದವು. ಇನ್ನು ಶ್ರೀಕೃಷ್ಣಾವತಾರ ಮಹಿಮೆ ಹೇಳಲು ಪ್ರಸ್ತಾಪ ಮಾಡುತ್ತಾರೆ. ಪುರೂರವನಿಗೆ ಆಯು ಎಂಬುವನು, ಇವನಿಗೆ ಅನೇಕ ಮಕ್ಕಳು ಜನಿಸಿದರು. ।।೩೮।।

**ನಹುಷಃ ಕ್ಷತ್ರವೃದ್ಧಶ್ಚ ರಜೀ ರಾಭಶ್ಚ ವೀರ್ಯವಾನ್ ।**
**ಅನೇನಾ ಇತಿ ರಾಜೇಂದ್ರ ಕ್ಷತ್ರವೃದ್ಧಾನ್ವಯಂ ಶೃಣು ।।೩೯।।**

**ರಾಜೇಂದ್ರ** ರಾಜನೇ, ಆಯುವಿನ ಮಕ್ಕಳು ಯಾರು ಎಂದರೆ ೧) **ನಹುಷಃ** ನಹುಷನು, ೨) **ಚ** ಮತ್ತು **ಕ್ಷತ್ರವೃದ್ಧಃ** ಕ್ಷತ್ರವೃದ್ಧನು, ೩) **ಚ** ಮತ್ತು **ರಜೀ** ರಜೀ ಎಂಬುವನು ೪) **ಚ** ಮತ್ತು **ರಾಭಃ** ರಾಭನು ಇವರುಗಳು **ವೀರ್ಯವಾನ್** ಪರಾಕ್ರಮಿಯಾದ, ೫) **ಅನೇನಾಃ** ಅನೇನಾ ಎಂಬುವನು, **ಇತಿ** ಈ ರೀತಿಯಾಗಿ ಇರುತ್ತಾರೆ ಇದರಲ್ಲಿ **ಕ್ಷತ್ರವೃದ್ಧಾನ್ವಯಂ** ಕ್ಷತ್ರವೃದ್ಧನ ವಂಶವನ್ನು, **ಶೃಣು** ಕೇಳು.

**ತಾತ್ಪರ್ಯ-** ರಾಜನೇ! ಆಯುವಿನ ಮಕ್ಕಳು ೧. ನಹುಷ ೨. ಕ್ಷತ್ರವೃದ್ಧ ೩. ರಜಿ ೪. ರಾಭ ವೀರ್ಯವಂತನಾದ ೫.ಅನೇನಾ ಈ ರೀತಿ ಐದು ಜನ ಮಕ್ಕಳು ಇದರಲ್ಲಿ ಕ್ಷತ್ರವೃದ್ಧನ ವಂಶವನ್ನು ಕೇಳು. ।।೩೯।।

**ಕ್ಷತ್ರವೃದ್ಧಸುತಸ್ಯಾಸನ್ ಸುಹೋತ್ರಸ್ಯಾತ್ಮಜಾಸ್ತ್ರಯಃ ।**
**ಕಾಶ್ಯಃ ಕುಶೋ ಗೃತ್ಸಮದ ಇತಿ ಗೃತ್ಸಮದಾದಭೂತ್ ।।೪೦।।**

**ಕ್ಷತ್ರವೃದ್ಧಸುತಸ್ಯ** ಕ್ಷತ್ರವೃದ್ಧನ ಮಗನಾದ **ಸುಹೋತ್ರಸ್ಯ** ಸುಹೋತ್ರನಿಗೆ **ಕಾಶ್ಯಃ** ಕಾಶ್ಯ ಎಂಬುವನು, **ಗೃತ್ಸಮದಃ** ಗೃತ್ಸಮದ ಎಂಬುವನು,**ಕುಶಃ** ಕುಶ ಎಂಬುವನು. **ಇತಿ** ಈ ರೀತಿ **ತ್ರಯಃ** ಮೂರು ಜನರು, **ಆತ್ಮಜಾಃ** ಮಕ್ಕಳು **ಆಸನ್** ಆದರು.

**ತಾತ್ಪರ್ಯ-** ಈ ಕ್ಷತ್ರವೃದ್ಧನಿಗೆ ಸುಹೋತ್ರ ಎಂಬುವನು. ಇವನಿಗೆ ೧.ಕಾಶ್ಯ , ೨. ಕುಶ, ೩. ಗೃತ್ಸಮದ ಈ ರೀತಿ ಮೂರು ಮಕ್ಕಳಾದರು. ।।೪೦।।

**ಶುನಕಃ ಶೌನಕೋ ಯಸ್ಯ ಬಹ್ವೃಚಪ್ರವರೋ ಮುನಿಃ ।**
**ಕಾಶ್ಯಸ್ಯ ಕಾಶಿಸ್ತತ್ಪುತ್ರಃ ಸುರಾಷ್ಟ್ರೋ ದೀರ್ಘತಮಃ ಪಿತಾ ।।೪೧।।**

**ಗೃತ್ಸಮದಾತ್** ಗೃತ್ಸಮದನಿಗೆ, **ಶುನಕಃ** ಶುನಕನು, **ಅಭೂತ್** ಆದನು. **ಯಸ್ಯ** ಯಾವ ಶುನಕನಿಗೆ **ಬಹ್ವೃಚಪ್ರವರಃ** ವೇದದೃಷ್ಟೃಗಳಲ್ಲಿ ಶ್ರೇಷ್ಠನಾದ, **ಶೌನಕಃ** ಶೌನಕನೆಂಬ **ಮುನಿಃ** ಮುನಿಯಾದ, **ಸುತಃ** ಮಗನು, **ಅಭವತ್** ಆದನು. **ಕಾಶ್ಯಸ್ಯ** ಕಾಶ್ಯನಿಗೆ, **ಕಾಶಿಃ** ಕಾಶಿ ಎಂಬುವನು, **ಪುತ್ರಃ** ಮಗನು ಆದನು. **ತತ್ಪುತ್ರಃ** ಈತನ ಮಗನು, **ದೀರ್ಘತಮಃ ಪಿತಾ** ದೀರ್ಘತಮಸ್ಸಿನ ತಂದೆಯಾದ, **ಸುರಾಷ್ಟ್ರಃ** ಸುರಾಷ್ಟ್ರ ಎಂಬುವನು.

**ತಾತ್ಪರ್ಯ-** ಗೃತ್ಸಮದನಿಗೆ ಶುನಕನು ಹುಟ್ಟಿದನು. ಈ ಶುನಕರಿಗೆ ಶ್ರೇಷ್ಠ ವೇದದ್ರಷ್ಟೃಗಳಾದ ಶೌನಕನೆಂಬ ಮುನಿಯು ಮಗನಾದನು. ಕಾಶ್ಯನಿಗೆ ಕಾಶಿ ಎಂಬುವನು ಈತನ ಮಗನು ಸುರಾಷ್ಟ್ರ ಎಂಬುವನು ಆದನು. ।।೪೧।।

**ಧನ್ವಂತರಿರ್ಧೀರ್ಘತಮಸ ಆಯುರ್ವೇದಪ್ರವರ್ತಕಃ ।**
**ಯಜ್ಞಭುಗ್ವಾಸುದೇವಾಂಶಃ ಸ್ಮೃತಿಮಾತ್ರಾರ್ತಿನಾಶನಃ ।।೪೨।।**

**ದೀರ್ಘತಮಸಃ** ದೀರ್ಘತಮಸ್ಸಿನ ದೆಶೆಯಿಂದ **ಆಯುರ್ವೇದಪ್ರವರ್ತಕಃ** ವೈದ್ಯಶಾಸ್ತ್ರಪ್ರವರ್ತಕನಾದ, **ಯಜ್ಞಭುಕ್** ಯಜ್ಞಭೋಕ್ತೃನಾದ **ವಾಸುದೇವಾಂಶಃ** ಪರಮಾತ್ಮನ ಅಂಶನಾದ, **ಸ್ಮೃತಿಮಾತ್ರಾರ್ತಿನಾಶನಃ** ಸ್ಮರಣದಿಂದಲೇ ದುಃಖ ನಾಶಕನಾದ, **ಧನ್ವಂತರಿಃ** ಧನ್ವಂತರಿಯು, ಅವತರಿಸಿದನು.

ಇಲ್ಲಿ ದೀರ್ಘತಮಸ್ಸಿನಿಂದ ಧನ್ವ ಎಂಬುವನು ಹುಟ್ಟಿದ್ದಾನೆ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಅನಂತರ ಧನ್ವನಿಂದ ಧನ್ವಂತರಿ ಎಂದು ಹೇಳಬೇಕು ಈ ವಿಷಯದಲ್ಲಿ ಹರಿವಂಶದಲ್ಲಿ ಈ ರೀತಿ ಹೇಳಿದೆ.

'ಧನ್ವಸ್ತು ದೀರ್ಘತಮಸಃ ವಿದ್ವಾನ್ ಧನ್ವಂತರಿಸ್ತತಃ' ಇತಿ ಎಂದು ದೀರ್ಘತಮಸಃ ದೀರ್ಘತಮಸ್ಸಿನಿಂದ ಧನ್ವನು. ತತಃ ಆ ಧನ್ವನಿಂದ ಎಂದರ್ಥ. ಈ ಧನ್ವಂತರಿಯೂ ಕೂಡ ಸಮುದ್ರಮಥನಕಾಲದಲ್ಲಿ ಹುಟ್ಟಿದ ಧನ್ವಂತರಿಯೂ ಪರಮಾತ್ಮನ ಅಂಶವೇ. ಅದನ್ನೇ ವಾಸುದೇವಾಂಶಃ ಇತ್ಯಾದಿ ಮೂರು ವಿಶೇಷಣಗಳಿಂದ ಹೇಳಿದ್ದಾರೆ. ಇದು ಮತ್ತೊಂದು ಜನ್ಮಾಂತರ. ಇದರ ವಿಸ್ತಾರವಾದ ವಿಚಾರವನ್ನು ಹರಿವಂಶದಲ್ಲಿ ಹೇಳಿದ್ದಾರೆ.

**ತಾತ್ಪರ್ಯ-** ದೀರ್ಘತಮಸ್ಸಿನ ಮಗನಾದ ಧನ್ವನ ದೆಶೆಯಿಂದ ಆಯುರ್ವೇದ ಶಾಸ್ತ್ರಪ್ರವರ್ತಕನಾದ ಪರಮಾತ್ಮನ ಅಂಶನಾದ ಧನ್ವಂತರಿಯು ಜನಿಸಿದನು.

**ತತ್ಪುತ್ರಃ ಕೇತುಮಾನ್ಯಸ್ಯ ಜಜ್ಞೇ ಭೀಮರಥಸ್ತತಃ ।**
**ದಿವೋದಾಸೋ ದ್ಯುಮಾಂಸ್ತಸ್ಮಾತ್ಪ್ರತರ್ದನ ಇತಿ ಸ್ಮೃತಃ ॥೪೩॥**

**ಕೇತುಮಾನ್** ಕೇತುಮಂತನು, **ತತ್ಪುತ್ರಃ** ಈ ಧನ್ವಂತರಿಯ ಮಗನು, **ಯಸ್ಯ** ಯಾವ ಕೇತುಮಂತನಿಗೆ, **ಭೀಮರಥಃ** ಭೀಮರಥನು, **ಜಜ್ಞೇ** ಹುಟ್ಟಿದನು. **ತತಃ** ಭೀಮರಥನಿಂದ, **ದಿವೋದಾಸಃ** ದೀವೋದಾಸನು ಹುಟ್ಟಿದನು. **ತಸ್ಮಾತ್** ಈ ದಿವೋದಾಸನಿಂದ, **ಪ್ರತರ್ದನ ಇತಿ** ಪ್ರತರ್ದನನೆಂದು, **ಸ್ಮೃತಃ** ಕರೆಸಿಕೊಂಡ **ದ್ಯುಮಾನ್** ದ್ಯುಮಂತನು, ಹುಟ್ಟಿದನು.

**ತಾತ್ಪರ್ಯ-** ಧನ್ವಂತರಿಗೆ ಕೇತುಮಂತನು ಹುಟ್ಟಿದನು. ಈ ಕೇತುಮಂತನಿಂದ ಭೀಮರಥನು ಹುಟ್ಟಿದನು. ಇವನಿಂದ ದಿವೋದಾಸನು ಹುಟ್ಟಿದನು. ಈ ದಿವೋದಾಸನಿಂದ ದ್ಯುಮಂತನು ಜನಿಸಿದನು. ಇವನೇ ಪ್ರತರ್ದನ ಎಂದೆನಿಸಿ-ಕೊಂಡನು. ॥೪೩॥

**ಸ ಏವ ಶತ್ರುಜಿದ್ವತ್ಸೋ ಋತಧ್ವಜ ಇತೀರಿತಃ ।**
**ತಥಾ ಕುವಲಯಾಶ್ವೇತಿ ಪ್ರೋಕ್ತೋಽಲರ್ಕಾದಯಸ್ತತಃ ॥೪೪॥**

**ತತಃ** ಪ್ರತರ್ದನನಿಂದ, **ವತ್ಸಃ** ವತ್ಸನು **ಅಭೂತ್** ಜನಿಸಿದನು. **ಸ ಏವ** ವತ್ಸನೆಂದು ಕರೆಸಿಕೊಂಡವನೇ, **ಶತ್ರುಜಿತ್** ಶತ್ರುಜಿತ್ ಎಂದೂ, **ಋತಧ್ವಜಃ ಇತಿ** ಋತಧ್ವಜನೆಂದೂ, **ತಥಾ** ಹಾಗೇ **ಕುವಲಯಾಶ್ವೇತಿ** ಕುವಲಯಾಶ್ವನೆಂದೂ **ಪ್ರೋಕ್ತಃ** ಕರೆಸಿಕೊಂಡನು. **ತತಃ** ವತ್ಸನಿಂದ, **ಅಲರ್ಕಾದಯಃ** ಅಲರ್ಕನೇ ಮೊದಲಾದ ಮಕ್ಕಳು ಆದರು.

ಸ ಏವ ಎನ್ನುವುದಕ್ಕೆ ಕೆಲವರು ಪ್ರತರ್ದನನೇ ಎಂದು ಹೇಳಿ ಅವನೇ ಶತ್ರುಜಿತ್ ಇತ್ಯಾದಿ ನಾಮಗಳಿಂದ ಕರೆಸಿಕೊಂಡವನು ಎಂದು ಹೇಳುತ್ತಾರೆ. ಇದಕ್ಕೆ

ಹರಿವಂಶದ ವಾಕ್ಯವಾದ, 'ಪ್ರತರ್ದನಸ್ಯ ಪುತ್ರೌ ದ್ವೌ ವತ್ಸಗರ್ಭೌ ಸುವಿಶ್ರುತೌ ವತ್ಸಪುತ್ರೋ ಹ್ಯಲರ್ಕಃ' ಎಂಬುವದರಿಂದ ವಿರೋಧ ಬರುತ್ತದೆ. ಆದ್ದರಿಂದ ಮೇಲೆ ಹೇಳಿದಂತೆ ವತ್ಸನೇ ಶತ್ರುಜಿದಾದಿ ನಾಮವಾಚ್ಯನು ಎಂದು ಹೇಳಿದರೇ ವಿರೋಧ ಬರುವದಿಲ್ಲ.

**ತಾತ್ಪರ್ಯ-** ಪ್ರತರ್ದನನಿಂದ ವತ್ಸನು. ವತ್ಸನೇ ಶತ್ರುಜಿದಾದಿ ನಾಮಗಳಿಂದ ಕರೆಸಿಕೊಂಡನು. ಇವನಿಂದ ಅಲರ್ಕಾದಿ ಮಕ್ಕಳು ಜನಿಸಿದರು. ।।೪೪।।

ಅಲರ್ಕನು ರಾಜ್ಯಭಾರವನ್ನು ಹೇಗೆ ಮಾಡಿದನು ಎನ್ನುವುದನ್ನು ಹೇಳುತ್ತಾರೆ -

**ಷಷ್ಠಿವರ್ಷಸಹಸ್ರಾಣಿ ಷಷ್ಠಿವರ್ಷಶತಾನಿ ಚ ।**
**ನಾಲರ್ಕಾದಪರೋ ರಾಜಾ ಬುಭುಜೇ ಮೇದಿನೀಂ ಯುವಾ ।।೪೫।।**

**ಆಲರ್ಕಾತ್** ಆಲರ್ಕನಿಂದ, **ಅಪರಃ** ಬೇರೆಯಾದ, **ರಾಜಾ** ರಾಜನು, **ಷಷ್ಠಿವರ್ಷಸಹಸ್ರಾಣಿ** ಅರವತ್ತು ಸಾವಿರ ವರ್ಷಗಳನ್ನು, ಹಾಗೂ **ಷಷ್ಠಿವರ್ಷ ಶತಾನಿ ಚ** ಅರವತ್ತು ನೂರು ವರ್ಷಗಳನ್ನು, **ಯುವಾ ಸನ್ನೇವ** ಯುವಕನಾಗಿಯೇ **ಮೇದಿನೀಂ** ಭೂಮಿಯನ್ನು, **ನ ಬುಭುಜೇ** ಭೋಗಿಸಲಿಲ್ಲ.

**ತಾತ್ಪರ್ಯ-** ಈ ಆಲರ್ಕನು ಅರವತ್ತು ಸಾವಿರದ ಅರವತ್ತನೂರು ವರ್ಷಗಳನ್ನು ಯುವಕನಾಗಿಯೇ ರಾಜ್ಯಪರಿಪಾಲನ ಮಾಡುತ್ತಾ ಸುಖವಾಗಿದ್ದನು. ಬೇರೆ ಯಾರೂ ಈ ರೀತಿ ರಾಜ್ಯಪರಿಪಾಲನ ಮಾಡಲಿಲ್ಲ. ।।೪೫।।

**ಆಲರ್ಕಾತ್ಸಂತತಿ (ಸನ್ನತಿ) ಸ್ತಸ್ಮಾತ್ಸುನೀತೋಽಥ ಸುಕೇತನಃ ।**
**ಧರ್ಮ(ಧೃಷ್ಟ)ಕೇತುಃ ಸುತಸ್ತಸ್ಮಾತ್ಸತ್ಯಕೇತುರಜಾಯತ ।।೪೬।।**

**ಆಲರ್ಕಾತ್** ಆಲರ್ಕನ ದೆಶೆಯಿಂದ **ಸಂತತಿಃ** ಸಂತತಿ ಎಂಬುವನು ಜನಿಸಿದನು. **ತಸ್ಮಾತ್** ಸಂತತಿಯಿಂದ, **ಸುನೀತಃ** ಸುನೀತನು, **ಅಥ** ಸುನೀತನಿಂದ, **ಸುಕೇತನಃ** ಸುಕೇತನನು, **ತಸ್ಮಾತ್** ಸುಕೇತನನಿಂದ, **ಧರ್ಮಕೇತುಃ ಸುತಃ** ಧರ್ಮಕೇತು ಎಂಬು ಮಗನು **ತಸ್ಮಾತ್** ಧರ್ಮಕೇತುವಿನಿಂದ, **ಸತ್ಯಕೇತುಃ** ಸತ್ಯಕೇತುವು, **ಅಜಾಯತ** ಜನಿಸಿದನು.

**ತಾತ್ಪರ್ಯ-** ಆಲರ್ಕನಿಂದ ಸಂತತಿಯು (ಸನ್ನತಿ) ಸಂತತಿಯಿಂದ ಸುನೀತನು ಇವನಿಂದ ಸುಕೇತನನೂ ಜನಿಸಿದರು. ಈ ಸುಕೇತನನಿಂದ ಧರ್ಮಕೇತುವು, ಧರ್ಮಕೇತುವಿನಿಂದ ಸತ್ಯಕೇತುವೂ ಜನಿಸಿದನು. ।।೪೬।।

**ಧೃಷ್ಟಕೇತುಸ್ತತಸ್ತಸ್ಮಾತ್ಸುಕುಮಾರಃ ಕ್ಷಿತೀಶ್ವರಃ ।**
**ವೀತಿಹೋತ್ರೋಽಸ್ಯ ಭರ್ಗೋಽತೋ ಭಾರ್ಗಭೂಮಿರಭೂನ್ನೃಪ।।೪೭**

**ನೃಪ** ಎಲೈ ರಾಜನೇ! **ತತಃ** ಸತ್ಯಕೇತುವಿನಿಂದ, **ಧೃಷ್ಟಕೇತುಃ** ಧೃಷ್ಟಕೇತುವು, **ತಸ್ಮಾತ್** ಈ ಧೃಷ್ಟಕೇತುವಿನಿಂದ, **ಸುಕುಮಾರಃ** ಸುಕುಮಾರನು, **ತಸ್ಮಾತ್** ಸುಕುಮಾರನಿಂದ, **ವೀತಿಹೋತ್ರಃ** ವೀತಿಹೋತ್ರನು, **ಕ್ಷಿತೀಶ್ವರಃ** ರಾಜನು, **ಅಸ್ಯ** ಈ ವೀತಿಹೋತ್ರನಿಗೆ, **ಭರ್ಗಃ** ಭರ್ಗನು, **ಅತಃ** ಈ ಭರ್ಗನಿಂದ, **ಭಾರ್ಗಭೂಮಿಃ** ಭಾರ್ಗಭೂಮಿಯು **ಅಭೂತ್** ಹುಟ್ಟಿದನು.

**ತಾತ್ಪರ್ಯ-** ಎಲೈ ರಾಜನೇ! ಸತ್ಯಕೇತುವಿನಿಂದ ಧೃಷ್ಟಕೇತುವು, ಧೃಷ್ಟಕೇತುವಿಗೆ ಸುಕುಮಾರನು, ಇವನಿಗೆ ರಾಜನಾದ ವೀತಿಹೋತ್ರನು, ಈ ವೀತಿಹೋತ್ರನಿಗೆ ಭರ್ಗನು, ಇವನಿಂದ ಭಾರ್ಗಭೂಮಿಯೂ ಜನಿಸಿದನು. ॥೪೭॥

**ಇತಿ ಮೇ ಕಾಶ್ಯಜಾ ಭೂಪಾಃ ಕ್ಷತ್ರವೃದ್ಧಾನ್ವಯಾಯಿನಃ ।**
**ರಾಭಸ್ಯ ರಭಸಃ ಪುತ್ರೋ ಗಂಭೀರಶ್ಚಕ್ರಕಸ್ತತಃ ॥೪೮॥**

**ಇತಿ** ಕಾಶಿಯಿಂದ, ಆರಂಭಮಾಡಿ ಭಾರ್ಗವ ಭೂಮಿಯವರೆಗೆ, **ಇಮೇ** ಈ **ಕಾಶ್ಯಜಾಃ** ಕಾಶ್ಯನಲ್ಲಿ ಜನಿಸಿದ, **ಭೂಪಾಃ** ರಾಜರುಗಳು, **ಕ್ಷತ್ರವೃದ್ಧಾನ್ವಯಾಯಿನಃ** ಕ್ಷತ್ರವೃದ್ಧನ ವಂಶವುಳ್ಳವರು, **ರಾಭಸ್ಯ** ರಾಭನಿಗೆ, **ರಭಸಃ** ರಭಸನು **ಪುತ್ರಃ** ಮಗನು, **ತತಃ** ರಭಸನಿಂದ, **ಗಂಭೀರಃ** ಗಂಭೀರನು **ತತಃ** ಗಂಭೀರನಿಂದ **ಚಕ್ರಕಃ** ಚಕ್ರಕನು ಜನಿಸಿದರು.

**ತಾತ್ಪರ್ಯ-** ಇಲ್ಲಿ ಕ್ಷತ್ರವೃದ್ಧನ ವಂಶ ಹೇಳಿದ ಅನಂತರ ರಜಿಯ ವಂಶವನ್ನು ಹೇಳಬೇಕಿತ್ತು . ಆದರೆ ರಾಭನ ವಂಶ ಅಲ್ಪವಾದ್ದರಿಂದ ರಾಭನ ವಂಶ ಮೊದಲು ಹೇಳಿದ್ದಾರೆ. ಮೇಲೆ ಹೇಳಿದ ರೀತಿಯಿಂದ ಕಾಶ್ಯನ ಮಕ್ಕಳು ಕ್ಷತ್ರವೃದ್ಧವಂಶದವರು, ರಾಭನ ಮಗ ರಭಸ, ಇವನಿಂದ ಗಂಭೀರ, ಗಂಭೀರನಿಂದ ಚಕ್ರಕ ಜನಿಸಿದರು.

**ತಸ್ಯ ಕ್ಷೇತ್ರೇ ಬ್ರಹ್ಮ ಜಜ್ಞೇ ಶೃಣು ವಂಶಮನೇನಸಃ ।**
**ಶುದ್ಧಸ್ತತಃ ಶುಚಿಸ್ತಸ್ಮಾತ್ ತ್ರಿಕಕುಬ್ಧರ್ಮಸಾರಥಿಃ ॥೪೯॥**

**ತಸ್ಯ** ಚಕ್ರಕನ, **ಕ್ಷೇತ್ರೇ** ಹೆಂಡತಿಯಲ್ಲಿ, **ಬ್ರಹ್ಮ** ಬ್ರಾಹ್ಮಣಕುಲವು, **ಜಜ್ಞೇ** ಜನಿಸಿತು. **ಅನೇನಸಃ** ಅನೇನಸನ, **ವಂಶಂ** ವಂಶವನ್ನು **ಶೃಣು** ಕೇಳು, **ತತಃ** ಅನೇನಸನಿಂದ **ಶುದ್ಧಃ** ಶುದ್ಧನು, **ತತಃ** ಶುದ್ಧನಿಂದ **ಶುಚಿಃ** ಶುಚಿಯು **ತಸ್ಮಾತ್** ಶುಚಿಯಿಂದ **ತ್ರಿಕಕುಪ್** ತ್ರಿಕಕುಪ್ ಎಂಬುವನು, ತ್ರಿಕಕುಪ್‌ನಿಂದ **ಧರ್ಮಸಾರಥಿಃ** ಧರ್ಮಸಾರಥಿಯು ಜನಿಸಿದನು.

**ತಾತ್ಪರ್ಯ-** ಚಕ್ರಕನ ಹೆಂಡತಿಯಲ್ಲಿ ಬ್ರಾಹ್ಮಣಕುಲವು ಜನಿಸಿತು. ಅನೇನಸನಿಂದ ಶುದ್ಧನು, ಶುದ್ಧನಿಂದ ಶುಚಿಯು, ಶುಚಿಯಿಂದ ತ್ರಿಕಕುಪ್ ಎಂಬುವನು, ತ್ರಿಕಕುಪ್‌ನಿಂದ ಧರ್ಮಸಾರಥಿಯು ಜನಿಸಿದರು. ॥೪೯॥

**ತತಃ ಶಾಂತರಜಾ ಜಜ್ಞೇ ಕೃತಕೃತ್ಯಃ ಸ ಆತ್ಮವಾನ್ ।**
**ರಜೇಃ ಪಂಚಾಶತಾನ್ಯಾಸನ್ ಪುತ್ರಾಣಾಮಮಿತೌಜಸಾಮ್ ॥೫೦॥**

**ತತಃ** ಧರ್ಮಸಾರಥಿಯಿಂದ, **ಶಾಂತರಜಾಃ** ಶಾಂತರಜನು, **ಜಜ್ಞೇ** ಜನಿಸಿದನು. **ಸಃ** ಇವನು **ಆತ್ಮವಾನ್** ಜ್ಞಾನಿಯಾಗಿ, **ಕೃತಕೃತ್ಯಃ** ಕೃತಕೃತ್ಯನಾದನು. ಮಕ್ಕಳನ್ನು ಅಪೇಕ್ಷಿಸಲಿಲ್ಲ. **ರಜೇಃ** ಆಯುವಿನ ಮೂರನೆಯ ಮಗನಾದ ರಜಿಗೆ, **ಅಮಿತೌಜಸಾಂ** ಒಳ್ಳೆಯ ಪರಾಕ್ರಮವುಳ್ಳ, **ಪುತ್ರಾಣಾಂ** ಮಕ್ಕಳುಗಳ, **ಪಂಚಶತಾನಿ** ಐದನೂರು, **ಆಸನ್** ಇದ್ದರು.

**ತಾತ್ಪರ್ಯ-** ಧರ್ಮಸಾರಥಿಯಿಂದ ಶಾಂತರಜನು ಜನಿಸಿದನು. ಈ ಶಾಂತರಜನು ಕೇವಲ ಜ್ಞಾನದಿಂದಲೇ ಕೃತಕೃತ್ಯನಾದನು. ಮಕ್ಕಳನ್ನು ಅಪೇಕ್ಷಿಸಲಿಲ್ಲ. ಆಯುವಿನ ಮೂರನೆಯ ಮಗನಾದ ರಜಿಗೆ ಶ್ರೇಷ್ಠ ಪರಾಕ್ರಮದಿಂದ ಕೂಡಿದ ಐದುನೂರು ಮಕ್ಕಳು ಇದ್ದರು. ॥೫೦॥

**ದೇವೈರಭ್ಯರ್ಥಿತೋ ದೈತ್ಯಾನ್ ಹತ್ವೇಂದ್ರಾಯಾದದಾದ್ದಿವಮ್ ।**
**ಇಂದ್ರಸ್ತಸ್ಮೈ ಪುನರ್ದತ್ವಾ ಗೃಹೀತ್ವಾ ಚರಣೌ ರಜೇಃ ॥೫೧॥**

**ದೇವೈಃ** ದೇವತೆಗಳಿಂದ, **ಅಭ್ಯರ್ಥಿತಃ** ಪ್ರಾರ್ಥಿತನಾಗಿ, **ದೈತ್ಯಾನ್** ರಾಕ್ಷಸರನ್ನು, **ಹತ್ವಾ** ಸಂಹಾರಮಾಡಿ, **ಇಂದ್ರಾಯ** ದೇವೇಂದ್ರನಿಗೆ, **ದಿವಂ** ಸ್ವರ್ಗವನ್ನು, **ಅದದಾತ್** ಕೊಟ್ಟನು. **ಇಂದ್ರಃ** ಇಂದ್ರನು, **ಪುನಃ** ಮತ್ತೆ **ದತ್ವಾ** ಕೊಟ್ಟು, **ರಜೇಃ** ರಜಿಯ, **ಚರಣೌ** ಪಾದಗಳನ್ನು, **ಗೃಹೀತ್ವಾ** ಹಿಡಿದು ಕೊಂಡು.

**ತಾತ್ಪರ್ಯ-** ರಜಿಯು ದೇವತೆಗಳಿಂದ ಪ್ರಾರ್ಥಿತನಾಗಿ ದೈತ್ಯರನ್ನು ಸಂಹಾರಮಾಡಿ ಇಂದ್ರನಿಗೆ ಸ್ವರ್ಗಲೋಕವನ್ನು ಕೊಟ್ಟನು. ಇಂದ್ರನು ಪುನಃ ರಜಿಗೆ ಕೊಟ್ಟು ಅವನ ಪಾದಗಳನ್ನು ಹಿಡಿದುಕೊಂಡು, ॥೫೧॥

**ಆತ್ಮಾನಮರ್ಪಯಾಮಾಸ ಪ್ರಹ್ಲಾದಾತ್ಪರಿಶಂಕಿತಃ ।**
**ಪಿತರ್ಯುಪರತೇ ಪುತ್ರಾ ಯಾಚಮಾನಾಯ ನೋ ದದುಃ ॥೫೨॥**

**ತ್ರಿವಿಷ್ಟಪಂ ಮಹೇಂದ್ರಾಯ ಯಜ್ಞಭಾಗಾನ್ ಸಮಾದಧುಃ ।**
**ಗುರುಣಾಽಹೂಯಮಾನೇಽಗ್ನೌ ಬಲಭಿತ್ತನಯಾನ್ ರಜೇಃ ॥೫೩॥**

**ಪ್ರಹ್ಲಾದಾತ್** ಪ್ರಹ್ಲಾದನಿಂದ, **ಪರಿಶಂಕಿತಃ** ಭಯಗೊಂಡು, **ಆತ್ಮಾನಂ** ತನ್ನ ಅಧಿಪತ್ಯವನ್ನು, **ಅರ್ಪಯಾಮಾಸ** ಸಮರ್ಪಣೆ ಮಾಡಿದನು. **ಪಿತರಿ** ತಂದೆಯಾದ ರಜಿಯು, **ಉಪರತೇ** ಮರಣ ಹೊಂದಲು, **ಪುತ್ರಾಃ** ಮಕ್ಕಳುಗಳು,

**ಯಾಚಮಾನಾಯ** ಸ್ವರ್ಗವನ್ನು ಕೇಳುವ **ಮಹೇಂದ್ರಾಯ** ಇಂದ್ರನಿಗೆ **ತ್ರಿವಿಷ್ಟಪಂ** ಸ್ವರ್ಗವನ್ನು, **ನೋ ದದುಃ** ಕೊಡಲಿಲ್ಲ.

**ಯಜ್ಞಭಾಗಾನ್** ಯಜ್ಞಭಾಗವನ್ನು ಕೂಡ ತಾವೇ, **ಸಮಾದದುಃ** ಸ್ವೀಕಾರ ಮಾಡಿದರು, **ಗುರುಣಾ** ಗುರುಗಳಾದ ಬೃಹಸ್ಪತ್ಯಾಚಾರ್ಯರಿಂದ, **ಅಗ್ನೌ** ಅಗ್ನಿಯಲ್ಲಿ, **ಆಹೂಯಮಾನೇ** ಆಭಿಚಾರಿಕ ಮಂತ್ರದಿಂದ ಹೋಮ ಮಾಡಲು **ಬಲಭಿತ್** ಇಂದ್ರನು, **ರಜೇಃ** ರಜಿಯ, **ತನಯಾನ್** ಮಕ್ಕಳನ್ನು,

**ಅವಧೀತ್ ಭ್ರಂಶಿತಾನ್ ಮಾರ್ಗಾನ್ನ ಕಶ್ಚಿದವಶೇಷಿತಃ ।**
**ಪ್ರತಿಕ್ಷತ್ರಃ ಕ್ಷತ್ರವೃದ್ಧಾತ್ ಸಂಜಯಸ್ತತ್ಸುತೋ ಜಯಃ ॥೫೪॥**

**ಮಾರ್ಗಾತ್** ಮಾರ್ಗದಿಂದ, **ಭ್ರಂಶಿತಾನ್** ಉನ್ಮಾದಾದಿಗಳಿಂದ ಚ್ಯುತರಾದ ರಜಿಯ ಮಕ್ಕಳನ್ನು, **ಅವಧೀತ್** ಸಂಹಾರ ಮಾಡಿದನು. **ಕಶ್ಚಿತ್** ಐದುನೂರು ಮಂದಿಯಲ್ಲಿ ಒಬ್ಬನೂ ಕೂಡ **ನ ಅವಶೇಷಿತಃ** ಉಳಿಯಲಿಲ್ಲ. **ಕ್ಷತ್ರವೃದ್ಧಾತ್** ಕ್ಷತ್ರವೃದ್ಧನ ದೆಶೆಯಿಂದ, **ಪ್ರತಿಕ್ಷತ್ರಃ** ಪ್ರತಿಕ್ಷತ್ರನು, **ತತ್ಸುತಃ** ಪ್ರತಿಕ್ಷತ್ರನ ಮಗನು, **ಸಂಜಯಃ** ಸಂಜಯನು, **ತತ್ಸುತಃ** ಸಂಜಯನ ಮಗನು, **ಜಯಃ** ಜಯನು.

**ತಾತ್ಪರ್ಯ-** ಇಂದ್ರನು ಪ್ರಹ್ಲಾದನಿಗೆ ಹೆದರಿ ರಜಿಗೆ ಸ್ವರ್ಗಾಧಿಪತ್ಯವನ್ನು ಕೊಟ್ಟನು. ರಜಿಯು ಮೃತನಾಗಲು ಇಂದ್ರನು ಸ್ವರ್ಗಾಧಿಪತ್ಯವನ್ನು ಕೇಳಿದಾಗ ಮಕ್ಕಳು ಕೊಡಲಿಲ್ಲ.

ಇಂದ್ರನು ಉನ್ಮಾದದಿಂದ ಮಾರ್ಗಭ್ರಂಶಿತರಾದ ರಜಿಯ ಮಕ್ಕಳನ್ನು ಸಂಹಾರ ಮಾಡಿದನು. ಐದುನೂರು ಮಂದಿಯಲ್ಲಿ ಒಬ್ಬನೂ ಉಳಿಯಲಿಲ್ಲ.

ಕ್ಷತ್ರವೃದ್ಧನ ವಂಶವನ್ನು ಸಿಂಹಾವಲೋಕನ ನ್ಯಾಯದಿಂದ ಪುನಃ ಹೇಳುತ್ತಾರೆ. ಕ್ಷತ್ರವೃದ್ಧನ ದೆಶೆಯಿಂದ ಪ್ರತಿಕ್ಷತ್ರನು, ಪ್ರತಿಕ್ಷತ್ರನಿಂದ ಸಂಜಯನು, ಸಂಜಯನಿಂದ ಜಯನು ಹುಟ್ಟಿದರು. ॥೫೨-೫೩-೫೪॥

**ತತಃ ಕೃತಃ ಕೃತಸ್ಯಾಪಿ ಜಜ್ಞೇ ವೀರ್ಯಧನೋ ನೃಪಃ ।**
**ಸಹದೇವಸ್ತತೋಽಹೀನೋ ಜಯತ್ಸೇನಸ್ತು ತತ್ಸುತಃ ॥೫೫॥**

**ತತಃ** ಜಯನಿಂದ, **ಕೃತಃ** ಕೃತನು, **ಕೃತಸ್ಯಾಪಿ** ಕೃತನಿಗಾದರೂ, **ನೃಪಃ** ರಾಜನಾದ, **ವೀರ್ಯಧನಃ** ವೀರ್ಯಧನನು, **ಜಜ್ಞೇ** ಜನಿಸಿದನು, **ತತಃ** ವೀರ್ಯಧನನಿಂದ, **ಸಹದೇವಃ** ಸಹದೇವನು, **ತತಃ** ಸಹದೇವನಿಂದ, **ಅಹೀನಃ** ಅಹೀನನು, **ತತ್ಸುತಃ** ಅಹೀನನ ಮಗನು, **ಜಯತ್ಸೇನಃ** ಜಯತ್ಸೇನನು.

**ತಾತ್ಪರ್ಯ-** ಜಯನಿಂದ ಕೃತನು, ಕೃತನಿಂದ ರಾಜನಾದ ವೀರ್ಯಧನನೂ, ಅವನಿಂದ ಸಹದೇವನು, ಸಹದೇವನಿಂದ ಅಹೀನನು, ಇವನಿಂದ ಜಯತ್ಸೇನನು, ಜನಿಸಿದರು. ||೫೫||

**ಸಂಸ್ಕೃತಿಸ್ತಸ್ಯ ಚ ಜಯಃ ಕ್ಷತ್ರಧರ್ಮಾ ಮಹಾರಥಃ |**
**ಕ್ಷತ್ರವೃದ್ಧಾನ್ವಯಾ ಭೂಪಾ ಇಮೇ ಶೃಣ್ವಥ ನಾಹುಷಾನ್ ||೫೬||**

**ತಸ್ಯ** ಜಯತ್ಸೇನನಿಗೆ, **ಸಂಸ್ಕೃತಿಃ** ಸಂಸ್ಕೃತಿಯು **ತಸ್ಯ** ಈ ಸಂಸ್ಕೃತಿಗೆ, **ಜಯಃ** ಜಯನು, ಇವನು, **ಕ್ಷತ್ರಧರ್ಮಾ** ಕ್ಷತ್ರಿಯಧರ್ಮನಿರತನು, ಹಾಗೂ **ಮಹಾರಥಾಃ** ಮಹಾರಥಿಕನು ಕೂಡ ಆಗಿದ್ದಾನೆ. **ಇಮೇ** ಇವರು, **ಕ್ಷತ್ರವೃದ್ಧಾನ್ವಯಾಃ** ಕ್ಷತ್ರವೃದ್ಧನ ವಂಶದಲ್ಲಿ ಹುಟ್ಟಿದ, **ಭೂಪಾಃ** ರಾಜರು. **ಅಥ** ಅನಂತರ, **ನಾಹುಷಾನ್** ನಹುಷನ ವಂಶವನ್ನು **ಶೃಣು** ಕೇಳು.

**ತಾತ್ಪರ್ಯ-** ಜಯತ್ಸೇನನಿಗೆ ಸಂಸ್ಕೃತಿಯು ಸಂಸ್ಕೃತಿಗೆ ಮಹಾರಥಿಕನಾದ, ಕ್ಷಾತ್ರಧರ್ಮನಿರತನಾದ ಜಯನು ಜನಿಸಿದನು. ಇವರು ಕ್ಷತ್ರವೃದ್ಧನ ವಂಶದಲ್ಲಿ ಜನಿಸಿದ ಭೂಪರು. ಇನ್ನು ಮುಂದೆ ನಹುಷನ ವಂಶದ ರಾಜರನ್ನು ಕೇಳು. ||೫೬||

**|| ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಚತುರ್ದಶೋಽಧ್ಯಾಯಃ ||**

★★★

# ಅಥ ಪಂಚದಶೋಽಧ್ಯಾಯಃ

ಈಗ ನಹುಷನ ಸಂತತಿಯನ್ನು ಹೇಳುತ್ತಾರೆ.

**ಶ್ರೀಶುಕ ಉವಾಚ-**

**ಯತಿರ್ಯಯಾತಿಃ ಸಂಯಾತಿರಾಯತಿರ್ವಿಯತಿಃ ಕೃತಿಃ ।**
**ಷಡಿಮೇ ನಹುಷಸ್ಯಾಸನ್ನಿಂದ್ರಿಯಾಣೀವ ದೇಹಿನಃ ॥೧॥**

**ಯತಿಃ** ಯತಿಯು, **ಯಯಾತಿಃ** ಯಯಾತಿಯು, **ಸಂಯಾತಿಃ** ಸಂಯಾತಿಯು, **ಆಯತಿಃ** ಆಯತಿಯು, **ವಿಯತಿಃ** ವಿಯತಿಯು, **ಕೃತಿಃ** ಕೃತಿಯು **ಇಮೇ ಷಟ್** ಈ ಆರುಮಂದಿ ಮಕ್ಕಳು, **ದೇಹಿನಃ** ಜೀವನಿಗೆ, **ಷಟ್ ಇಂದ್ರಿಯಾಣೀವ** ಆರು ಇಂದ್ರಿಯಗಳಿದ್ದಂತೆ, **ನಹುಷಸ್ಯ** ನಹುಷನಿಗೆ, **ಆಸನ್** ಇದ್ದರು.

**ತಾತ್ಪರ್ಯ-** ನಹುಷನಿಗೆ ಯತಿ, ಯಯಾತಿ, ಸಂಯಾತಿ, ಆಯತಿ, ವಿಯತಿ, ಕೃತಿ ಎಂದು ಆರುಜನ ಮಕ್ಕಳು, ಜೀವನಿಗೆ ಆರು ಇಂದ್ರಿಯಗಳಿದ್ದಂತೆ ಇದ್ದರು. ॥೧॥

**ರಾಜ್ಯಂ ನೈಚ್ಛದ್ಯತಿಃ ಪಿತ್ರಾ ದತ್ತಂ ತತ್ಪರಿಣಾಮವಿತ್ ।**
**ಯತ್ರ ಪ್ರವಿಷ್ಟಃ ಪುರುಷ ಆತ್ಮಾನಂ ನಾವಬುಧ್ಯತೇ ॥೨॥**

**ಯತಿಃ** ಯತಿಯು **ಪಿತ್ರಾ** ತಂದೆಯಾದ ನಹುಷನಿಂದ, **ದತ್ತಂ** ಕೊಡಲ್ಪಟ್ಟ, **ರಾಜ್ಯಂ** ರಾಜ್ಯವನ್ನು, **ತತ್ಪರಿಣಾಮವಿತ್** ರಾಜ್ಯದಿಂದಾಗುವ ಅನರ್ಥವನ್ನು ತಿಳಿದವನಾಗಿ, **ನೈಚ್ಛತ್** ಅಪೇಕ್ಷೆಮಾಡಲಿಲ್ಲ. ಅನರ್ಥವನ್ನು ಹೇಳುತ್ತಾರೆ. **ಯತ್ರ** ಯಾವ ರಾಜ್ಯದಲ್ಲಿ **ಪ್ರವಿಷ್ಟಃ** ಪ್ರವೇಶಮಾಡಿದ, ಆಸಕ್ತನಾದ, **ಪುರುಷಃ** ಜೀವನು, **ಆತ್ಮಾನಂ** ತನ್ನನ್ನು, ಮತ್ತು ಪರಮಾತ್ಮನನ್ನು **ನ ಅವಬುಧ್ಯತೇ** ತಿಳಿಯುವುದಿಲ್ಲ.

**ತಾತ್ಪರ್ಯ-** ರಾಜ್ಯ ವಿಷಯದಲ್ಲಿ ಆಸಕ್ತನಾದ ಜೀವನು, ತನ್ನನ್ನು, ಪರಮಾತ್ಮನನ್ನೂ ಕೂಡ ತಿಳಿಯುವುದಿಲ್ಲ, ಎನ್ನುವ ಅನರ್ಥವನ್ನು ತಿಳಿದ ಯತಿಯು ತಂದೆಯು ಕೊಟ್ಟ ರಾಜ್ಯವನ್ನು ಸ್ವೀಕರಿಸಲಿಲ್ಲ. ॥೨॥

**ಪಿತರಿ ಭ್ರಂಶಿತೇ ಸ್ಥಾನಾದಿಂದ್ರಾಣ್ಯಾ ಧರ್ಷಣಾದ್ದ್ವಿಜೈಃ ।**
**ಪ್ರಾಪಿತೇಽಜಗರತ್ವಂ ಚ ಯಯಾತಿರಭವನ್ನೃಪಃ ॥೩॥**

**ಇಂದ್ರಾಣ್ಯಾಃ** ಶಚೀದೇವಿಯ, **ಧರ್ಷಣಾತ್** ಸ್ಪರ್ಶಮಾತ್ರದಿಂದ, **ಪಿತರಂ** ತಂದೆಯಾದ ನಹುಷನು, **ಸ್ಥಾನಾತ್** ಇಂದ್ರಪದವಿಯಿಂದ, **ಭ್ರಂಶಿತೇ** ಭ್ರಷ್ಟ-ನಾಗುತ್ತಿರಲು, **ದ್ವಿಜೈಃ** ಅಗಸ್ತ್ಯಾದಿ ಮುನಿಗಳಿಂದ, **ಅಜಗರತ್ವಂ ಚ** ಸರ್ಪಭಾವವನ್ನು

ಕೂಡಾ, **ಪ್ರಾಪಿತೇ** ಹೊಂದುತ್ತಿರಲು, **ಯಯಾತಿಃ** ಯಯಾತಿಯು, **ನೃಪಃ** ರಾಜನು **ಅಭವತ್** ಆದನು.

**ತಾತ್ಪರ್ಯ-** ಇದರ ವಿಚಾರವಾಗಿ ವನಪರ್ವದಲ್ಲಿ ನಹುಷನಿಗೆ ಶಾಪಕೊಟ್ಟವರು ಆಗಸ್ತ್ಯಋಷಿಗಳು ಎಂದು ಹೇಳಿದೆ, ಆದರೂ ಕೂಡಾ ಅಗಸ್ತ್ಯನಲ್ಲಿ ಆವಿಷ್ಟನಾದ ಭೃಗುಋಷಿಯೇ ಶಾಪ ಕೊಟ್ಟವರು ಎಂದು ಹೇಳಬೇಕು. ಇದನ್ನು ದಾನಧರ್ಮಪರ್ವದಲ್ಲಿ ಹೀಗೆ ಹೇಳಿದ್ದಾರೆ.

**''ತತೋ ಭೃಗುರ್ಮಹಾತೇಜಾ ಮೈತ್ರಾವರುಣಿಮಬ್ರವೀತ್ । ನಿಮೀಲಯಸ್ವ ನಯನೇ ಜಟಾ ಯಾವದ್ವಿಶಾಮಿ ತೇ ॥ ಸ್ಥಾಣುಭೂತಸ್ಯ ತಸ್ಯಾಥ ಜಟಾಃ ಪ್ರಾವಿಶದಚ್ಯುತಃ । ಭೃಗುಃ ಸ ಸುಮಹಾತೇಜಾಃ ಪಾತನಾಯ ನೃಪಸ್ಯ ಚ''**

ಈ ರೀತಿ ಭೃಗುಋಷಿಗಳು ರಾಜನ ಅಧಃಪತನಕೋಸ್ಕರ ಆಗಸ್ತ್ಯ ಋಷಿಗಳ ಜಟಾಪ್ರವೇಶ ಮಾಡಿದರು, ಎಂದು ಹೇಳಿ ನಹುಷನಿಗಿದ್ದ ವರವನ್ನು ತಿಳಿದು ಅವನ ಕಣ್ಣಿಗೂ ಕೂಡ ಬೀಳದಂತೆ ಇದ್ದರು. ನಹುಷನು ಅಗಸ್ತ್ಯಋಷಿಗಳನ್ನು ಶಿಬಿಕಾವಹನಕ್ಕಾಗಿ ಯೋಜನೆ ಮಾಡಿದನು. ಆಗ ನಹುಷರಾಜನು ಅಗಸ್ತ್ಯಋಷಿಗಳಿಗೆ ಎಡಗಾಲಿನಿಂದ ಒದ್ದನು. ''ತಸ್ಮಿಂಚ್ಛಿರಸ್ಯಭಿಹತೇ ಸ ಜಟಾಂತರ್ಗತೋ ಭೃಗುಃ । ಶಶಾಪ ಬಲವತ್ಕ್ರುದ್ಧೋ ನಹುಷಂ ಪಾಪಚೇತಸಮ್'' ಆಗ ತಲೆಗೆ ಒದೆಯಲು ಜಟಾದಲ್ಲಿದ್ದ ಭೃಗುಋಷಿಯು ಕೋಪಗೊಂಡು ನಹುಷನನ್ನು ಶಪಿಸಿದರು. ಎಂದು ಇರುವುದರಿಂದ ಭೃಗುಋಷಿಗಳೇ ಶಾಪಕೊಟ್ಟವರು ಎಂದು ಹೇಳಬೇಕು. ಇನ್ನೊಂದು ವಿಶೇಷ ಏನೆಂದರೆ ಇಲ್ಲಿ ತಾತ್ಪರ್ಯನಿರ್ಣಯದಲ್ಲಿ ಉಕ್ತವಾಗಿದೆ-

**ವೇದಪ್ರಾಮಾಣ್ಯವಿಷಯೇ ಪೃಷ್ಟೋ ನೇತ್ಯಾಹ ಮೂಢಧೀಃ ।**
**ಪ್ರಮಾಣಮಿತಿ ತೇನೋಕ್ತೇ ಶಿರಸ್ಯೇನಂ ಪದಾऽಹನತ್ ॥**

**ತದಾ ಭೃಗುಂ ತಸ್ಯ ಜಟಾಸು ಲೀನಃ ಕದಾಪಿ ತಸ್ಯಾಕ್ಷಿಪಥಂ ನ ಯಾತಮ್ ।**
**ಆವಿಶ್ಯ ಕಂಜಪ್ರಭವಃ ಶಶಾಪ ವ್ರಜಸ್ವ ಪಾಪಾಜಗರತ್ವಮೇವ ॥**

ವೇದಪ್ರಾಮಾಣ್ಯವಿಷಯದಲ್ಲಿ ನಹುಷನನ್ನು ಕೇಳಿದಾಗ ಪ್ರಮಾಣ ಅಲ್ಲ ಎಂದು ಹೇಳಿದ. ಆಗ ಅಗಸ್ತ್ಯನು ಪ್ರಮಾಣ ಎಂದು ಹೇಳಿದಾಗ ಇವನ ತಲೆಗೆ ಕಾಲಿನಿಂದ ಒದ್ದನು. ಆಗ ಜಟಾಲೀನನಾದ ಭೃಗುವನ್ನು ಬ್ರಹ್ಮನು ಪ್ರವೇಶಮಾಡಿ ಶಾಪಕೊಟ್ಟನು ಎಂದು ಹೇಳಿದೆ. ವನಪರ್ವದಲ್ಲಿ ಹೇಳಿದ್ದು ಅಗಸ್ತ್ಯಋಷಿಗಳು ಮೂಲಕಾರಣ ಎಂದು ನಹುಷರಾಜನಿಗೆ ಬ್ರಹ್ಮನ ವರವಿದೆ. ಭೃಗುಋಷಿಯ ಶಾಪ ಹೇಗೆ ತಗುಲಿತು ಎಂದರೆ ಅದಕ್ಕೆ ಆಚಾರ್ಯರು ''ಆವಿಶ್ಯ ಕಂಜಪ್ರಭವಃ''

ಎಂದು ಹೇಳಿದ್ದಾರೆ. ಬ್ರಹ್ಮನ ಆವೇಶವಿದೆ ಎಂದು ಹೇಳಿದ್ದರಿಂದ ಶಾಪವು ವ್ಯರ್ಥವಾಗುವುದಿಲ್ಲ.

**ತಾತ್ಪರ್ಯ-** ನಹುಷನು ಶಚೀದೇವಿಯ ಸ್ಪರ್ಶನಿಮಿತ್ತವಾಗಿ ರಾಜ್ಯಭ್ರಷ್ಟನಾಗಿ ಅಗಸ್ತ್ಯ ಮುನಿಗಳ ಶಾಪಕಾರಣದಿಂದ ಮಹಾಸರ್ಪವಾಗಿರಲು ನಂತರ ಯಯಾತಿಯು ರಾಜನಾಗಿದ್ದನು. ||೩||

**ಚತಸೃಷ್ವಾದಿಶದ್ದಿಕ್ಷು ಭ್ರಾತೄನ್ ಗೋಪ್ತ್ರೂನ್ ಯವೀಯಸಃ |**
**ಕೃತದಾರೋ ಜುಗೋಪೋರ್ವೀಂ ಕಾವ್ಯಸ್ಯ ವೃಷಪರ್ವಣಃ ||೪||**

**ಯವೀಯಸಃ** ಚಿಕ್ಕವರಾದ ಸಂಯಾತಿ ಮೊದಲಾದ, **ಭ್ರಾತೄನ್** ತಮ್ಮಂದಿರನ್ನು, **ಚತಸೃಷು ದಿಕ್ಷು** ನಾಲ್ಕು ದಿಕ್ಕುಗಳಲ್ಲಿ, **ಗೋಪ್ತ್ರೂನ್** ರಕ್ಷಕರನ್ನಾಗಿ **ಆದಿಶತ್** ಆಜ್ಞಾಪಿಸಿದನು. **ಕಾವ್ಯಸ್ಯ** ಶುಕ್ರಾಚಾರ್ಯರ, **ವೃಷಪರ್ವಣಃ** ವೃಷಪರ್ವರಾಜನ, **ಕನ್ಯಾಭ್ಯಾಂ** ಕನ್ಯೆಯರಿಂದ, **ಕೃತದಾರಃ** ವಿವಾಹ ಮಾಡಿಕೊಂಡು, **ಉರ್ವೀಂ** ಭೂಮಿಯನ್ನು **ಜುಗೋಪ** ರಕ್ಷಣೆ ಮಾಡಿದನು.

**ತಾತ್ಪರ್ಯ-** ಯಯಾತಿ ರಾಜನು ನಾಲ್ಕು ದಿಕ್ಕುಗಳನ್ನು ರಕ್ಷಿಸಲು ತಮ್ಮಂದಿರನ್ನು ಆದೇಶ ಮಾಡಿದನು. ತಾನು ಶುಕ್ರಾಚಾರ್ಯರ ಮಗಳನ್ನು, ಮತ್ತು ವೃಷಪರ್ವರಾಜನ ಮಗಳನ್ನು ಕೂಡಾ ವಿವಾಹ ಮಾಡಿಕೊಂಡು ರಾಜ್ಯಭಾರವನ್ನು ಮಾಡಿದನು. ||೪||

**ರಾಜೋವಾಚ -**

**ಬ್ರಹ್ಮರ್ಷಿರ್ಭಗವಾನ್ಕಾವ್ಯಃ ಕ್ಷತ್ರಬಂಧುಶ್ಚ ನಾಹುಷಃ |**
**ರಾಜನ್ಯವಿಪ್ರಯೋಃ ಕಸ್ಮಾದ್ವಿವಾಹಃ ಪ್ರಾತಿಲೋಮಕಃ ||೫||**

**ಭಗವಾನ್** ಪೂಜ್ಯರಾದ, **ಕಾವ್ಯಃ** ಶುಕ್ರಾಚಾರ್ಯರು, **ಬ್ರಹ್ಮರ್ಷಿಃ** ಬ್ರಹ್ಮರ್ಷಿಗಳಾಗಿದ್ದಾರೆ **ನಾಹುಷಶ್ಚ** ನಹುಷನ ಮಗನಾದ ಯಯಾತಿಯಾದರೂ, **ಕ್ಷತ್ರಬಂಧುಃ** ಕ್ಷತ್ರಿಯನಾಗಿದ್ದಾನೆ. **ರಾಜನ್ಯವಿಪ್ರಯೋಃ** ರಾಜನ ಮತ್ತು ಬ್ರಾಹ್ಮಣರ **ಪ್ರಾತಿಲೋಮಕಃ** ವ್ಯತ್ಯಾಸವಾದ, **ವಿವಾಹಃ** ವಿವಾಹವು **ಕಸ್ಮಾತ್** ಯಾವ ಕಾರಣದಿಂದ **ಅಭೂತ್** ಆಯಿತು?

**ತಾತ್ಪರ್ಯ-** ಶುಕ್ರಾಚಾರ್ಯರು ಬ್ರಹ್ಮರ್ಷಿಗಳು. ಯಯಾತಿಯಾದರೂ ಕ್ಷತ್ರಿಯನಾಗಿದ್ದಾನೆ. ಆದರೂ ಕೂಡ ಬ್ರಾಹ್ಮಣ ಮತ್ತು ಕ್ಷತ್ರಿಯರ ಪ್ರತಿಲೋಮ ವಿವಾಹವು ಯಾವ ಕಾರಣದಿಂದ ಆಯಿತು? ಎನ್ನುವುದನ್ನು ಹೇಳಿರಿ ಎಂದು ಪರೀಕ್ಷಿದ್ರಾಜನು ಕೇಳಿದನು.||೫||

ಇವರಿಬ್ಬರ ವಿವಾಹವು ದೈವವಶದಿಂದ ಹೀಗಾಗಿದೆ. ಅಷ್ಟೇ ಅಲ್ಲ ಕಚನ ಶಾಪವೂ ಕೂಡ ಇದೆ ಎನ್ನುವುದನ್ನು ಕಥಾಮೂಲಕ ತಿಳಿಸುತ್ತಾರೆ-

**ಶ್ರೀಶುಕ ಉವಾಚ-**

**ಏಕದಾ ದಾನವೇಂದ್ರಸ್ಯ ಶರ್ಮಿಷ್ಠಾ ನಾಮ ಕನ್ಯಕಾ ।**
**ಸಖೀಸಹಸ್ರಸಂಯುಕ್ತಾ ಗುರುಪುತ್ರ್ಯಾ ಚ ಭಾಮಿನಿ ॥೬॥**

**ಏಕದಾ** ಒಂದು ದಿವಸ, **ದಾನವೇಂದ್ರಸ್ಯ** ದೈತ್ಯರಾಜನಾದ ವೃಷಪರ್ವರಾಜನ **ಸಖೀಸಹಸ್ರ** ಸಾವಿರ ಸಖಿಯರಿಂದ, **ಸಂಯುಕ್ತಾ** ಕೂಡಿದ, **ಗುರುಪುತ್ರ್ಯಾ** ಗುರುಪುತ್ರಿಯಾದ, **ದೇವಯಾನ್ಯಾ ಚ** ದೇವಯಾನಿಯಿಂದಲೂ, **ಸಂಯುಕ್ತಾ** ಕೂಡಿದ **ಭಾಮಿನೀ** ತೇಜಸ್ವಿನಿಯಾದ, **ಶರ್ಮಿಷ್ಠಾನಾಮ** ಶರ್ಮಿಷ್ಠಾ ಎಂಬ **ಕನ್ಯಕಾ** ಕನ್ಯೆಯು.

**ತಾತ್ಪರ್ಯ-** ಒಂದು ದಿವಸ ದೈತ್ಯರಾಜನಾದ ವೃಷಪರ್ವರಾಜನ ಮಗಳಾದ ಶರ್ಮಿಷ್ಠೆಯು, ಸಾವಿರಸಖಿಯರಿಂದ, ಮತ್ತು ಗುರುಪುತ್ರಿಯಾದ ದೇವಯಾನಿ-ಯಿಂದಲೂ ಕೂಡಿಕೊಂಡು, ॥೬॥

**ದೇವಯಾನ್ಯಾ ಪುರೋದ್ಯಾನೇ ಪುಷ್ಪಿತದ್ರುಮಸಂಕುಲೇ ।**
**ವ್ಯಚರತ್ಕಲಗೀತಾಲಿನಲಿನೀಪುಲಿನೇಽಬಲಾ ॥೭॥**

**ಪುಷ್ಪಿತದ್ರುಮಸಂಕುಲೇ** ಹೂವಿನ ಗಿಡಗಳಿಂದ ಕೂಡಿದ, **ಕಲಗೀತಾಲಿನಲಿನೀ-ಪುಲಿನೇ** ಕಲಕಲ ಧ್ವನಿಯಿಂದ ಕೂಡಿದ ಭ್ರಮರಗಳುಳ್ಳ, ಸರೋವರದ ಮರಳಿನಿಂದ ಕೂಡಿದ, **ಪುರೋದ್ಯಾನೇ** ನಂದನವನದಲ್ಲಿ, **ಅಬಲಾ** ಅಬಲೆಯಾದ ಶರ್ಮಿಷ್ಠೆಯು, **ವ್ಯಚರತ್** ಸಂಚಾರ ಮಾಡಿದಳು.

**ತಾತ್ಪರ್ಯ-** ಅಬಲೆಯಾದ ಶರ್ಮಿಷ್ಠೆಯು ಗುರುಪುತ್ರಿಯಿಂದ ಕೂಡಿಕೊಂಡು ಉದ್ಯಾನವನದಲ್ಲಿ ಸಂಚಾರ ಮಾಡಿದಳು. ॥೭॥

**ಜಲಾಶಯಂ ಸಮಾಸಾದ್ಯ ಕನ್ಯಾಃ ಕಮಲಲೋಚನಾಃ ।**
**ತೀರೇ ನ್ಯಸ್ಯ ದುಕೂಲಾನಿ ವಿಜಹ್ರುಃ ಸಿಂಚತೀರ್ಮಿಥಃ ॥೮॥**

**ಕಮಲಲೋಚನಾಃ** ಕಮಲದ ದಳದಂತೆ ಕಣ್ಣುಳ್ಳ **ಕನ್ಯಾಃ** ಕನ್ಯೆಯರು, **ಜಲಾಶಯಂ** ಜಲಾಶಯವನ್ನು **ಸಮಾಸಾದ್ಯ** ಹೊಂದಿ, **ದುಕೂಲಾನಿ** ಬಟ್ಟೆಗಳನ್ನು, **ತೀರೇ** ದಡದಲ್ಲಿ **ನ್ಯಸ್ಯ** ಇಟ್ಟು **ಮಿಥಃ** ಪರಸ್ಪರವಾಗಿ, **ಸಿಂಚತೀಃ** ನೀರನ್ನು ಸಿಂಪಡಿಸುವರಾಗಿ, **ವಿಜಹ್ರುಃ** ವಿಹಾರ ಮಾಡಿದರು.

**ತಾತ್ಪರ್ಯ-** ಕಮಲದಂತೆ ಕಣ್ಣುಗಳುಳ್ಳ ಆ ಸ್ತ್ರೀಯರು ಜಲಾಶಯಕ್ಕೆ ಬಂದು ಬಟ್ಟೆಗಳನ್ನು ತೀರದಲ್ಲಿ ಕಳಚಿಟ್ಟು ನೀರನ್ನು ಪರಸ್ಪರ ಸಿಂಪಡಿಸುವರಾಗಿ ವಿಹಾರ ಮಾಡಿದರು. ।।೮।।

**ವೀಕ್ಷ್ಯ ವ್ರಜಂತಂ ಗಿರಿಶಂ ಸಹ ದೇವ್ಯಾ ವೃಷೇ ಸ್ಥಿತಮ್ ।**
**ಸಹಸೋತ್ತೀರ್ಯ ವಾಸಾಂಸಿ ಪರ್ಯಧುರ್ವ್ರೀಡಿತಾಃ ಸ್ತ್ರಿಯಃ ।।೯।।**

**ವೃಷೇ** ಎತ್ತಿನಲ್ಲಿ, **ಸ್ಥಿತಂ** ಕುಳಿತಿರುವ, **ದೇವ್ಯಾ** ಉಮಾದೇವಿಯಿಂದ, **ಸಹ** ಕೂಡಿಕೊಂಡು, **ವ್ರಜಂತಂ** ಬರುತ್ತಿರುವ, **ಗಿರಿಶಂ** ರುದ್ರನನ್ನು, **ವೀಕ್ಷ್ಯ** ನೋಡಿ, **ಸ್ತ್ರಿಯಃ** ಕನ್ಯೆಯರು, **ಸಹಸಾ** ಕೂಡಲೇ **ವ್ರೀಡಿತಾಃ** ಲಜ್ಜಿತರಾಗಿ, **ಉತ್ತೀರ್ಯ** ನೀರಿನಿಂದ ಮೇಲೆದ್ದು **ವಾಸಾಂಸಿ** ಬಟ್ಟೆಗಳನ್ನು **ಪರ್ಯಧುಃ** ಧಾರಣಮಾಡಿದರು.

**ತಾತ್ಪರ್ಯ-** ವೃಷವಾಹನನಾಗಿ ಉಮಾದೇವಿಯಿಂದ ಕೂಡಿಕೊಂಡು ಬರುತ್ತಿರುವ ರುದ್ರದೇವರನ್ನು ನೋಡಿ, ಕೂಡಲೇ ಸ್ತ್ರೀಯರು ಲಜ್ಜಿತರಾಗಿ, ನೀರಿನಿಂದ ಮೇಲೆದ್ದು ಬಟ್ಟೆಗಳನ್ನು ಧಾರಣ ಮಾಡಿದರು. ।।೯।।

**ಶರ್ಮಿಷ್ಠಾಽಜಾನತೀ ವಾಸೋ ಗುರುಪುತ್ರ್ಯಾಃ ಸಮವ್ಯಯತ್ ।**
**ಸ್ವೀಯಂ ಮತ್ವಾ ಪ್ರಕುಪಿತಾ ದೇವಯಾನೀದಮಬ್ರವೀತ್ ।।೧೦।।**

**ಶರ್ಮಿಷ್ಠಾ** ವೃಷಪರ್ವರಾಜನ ಮಗಳು, **ಗುರುಪುತ್ರ್ಯಾಃ** ದೇವಯಾನಿಯ **ವಾಸಃ** ಬಟ್ಟೆಯನ್ನು **ಅಜಾನತೀ** ತಿಳಿಯದವಳಾಗಿ, **ಸ್ವೀಯಂ** ತನ್ನದೆಂದು, **ಮತ್ವಾ** ತಿಳಿದುಕೊಂಡು, **ಸಮವ್ಯಯತ್** ಧಾರಣಮಾಡಿದಳು. **ಪ್ರಕುಪಿತಾ** ಸಿಟ್ಟಿಗೆದ್ದ **ದೇವಯಾನೀ** ದೇವಯಾನಿಯು, **ಇದಂ** ಮುಂದೆ ಹೇಳುವುದನ್ನು, **ಅಬ್ರವೀತ್** ಮಾತನಾಡಿದಳು.

**ತಾತ್ಪರ್ಯ-** ಶರ್ಮಿಷ್ಠೆಯು ದೇವಯಾನಿಯ ಬಟ್ಟೆಯೂ ಕೂಡಿ ತನ್ನ ಬಟ್ಟೆಯಂತೆ ಇದ್ದದ್ದರಿಂದ ದೇವಯಾನಿಯ ಬಟ್ಟೆಯನ್ನು ಹಾಕಿಕೊಂಡಳು. ದೇವಯಾನಿಯು ಅದನ್ನು ತಿಳಿದು ಸಿಟ್ಟಿಗೆದ್ದು ಮುಂದೆ ಹೇಳುವ ಮಾತನ್ನಾಡಿದಳು.

**ಅಹೋ ನಿರೀಕ್ಷ್ಯತಾಂ ಮಹ್ಯಂ ದಾಸ್ಯಾಃ ಕರ್ಮ ಹ್ಯಸಾಂಪ್ರತಮ್ ।**
**ಅಸ್ಮದ್ಧಾರ್ಯಂ ಧೃತವತೀ ಶುನೀವ ಹವಿರಧ್ವರೇ ।।೧೧।।**

**ಅಸಾಂಪ್ರತಂ** ಅಯುಕ್ತವಾದ, **ಮಹ್ಯಂ** ನನ್ನ, **ದಾಸ್ಯಾಃ** ಸೇವಕಿಯ, **ಕರ್ಮ** ಕಾರ್ಯವನ್ನು, **ನಿರೀಕ್ಷ್ಯತಾಂ** ನೋಡಿರಿ ಎಂದು ಹೇಳಿದಳು. **ಅಧ್ವರೇ** ಯಜ್ಞದಲ್ಲಿ **ಶುನೀ** ಹೆಣ್ಣು ನಾಯಿಯು **ಹವಿರಿವ** ಹವಿಸ್ಸಿನಂತೆ **ಅಸ್ಮದ್ಧಾರ್ಯಂ**

ನಾವು ಹಾಕಿಕೊಳ್ಳಬೇಕಾದ ಬಟ್ಟೆಯನ್ನು, **ಧೃತವತೀ** ಹಾಕಿಕೊಂಡಿದ್ದಾಳೆ. **ಅಹೋ** ಆಶ್ಚರ್ಯವು.

**ತಾತ್ಪರ್ಯ-** ನಮಗೆ ಅನಭಿಪ್ರೇತವಾದ ದಾಸಿಯ ಕಾರ್ಯವನ್ನು ನೋಡಿರಿ, ಯಜ್ಞದ ಹವಿಸ್ಸನ್ನು ನಾಯಿಯು ಸ್ವೀಕರಿಸುವಂತೆ, ನಾವು ಹಾಕಿಕೊಳ್ಳಬೇಕಾದ ಬಟ್ಟೆಯನ್ನು ಹಾಕಿಕೊಂಡಿದ್ದಾಳೆ ಎಂದು ಹೇಳಿದಳು. ||೧೧||

**ಯೈರಿದಂ ತಪಸಾ ಸೃಷ್ಟಂ ಮುಖಂ ಪುಂಸಃ ಪರಸ್ಯ ವೈ ।**
**ಧಾರ್ಯತೇ ಯೈಃ ಪರಂಜ್ಯೋತಿಃ ಶಿವಃ ಪಂಥಾಶ್ಚ ದರ್ಶಿತಃ ||೧೨||**

**ಯೈಃ** ಯಾವ ಬ್ರಾಹ್ಮಣರಿಂದ, **ಇದಂ** ಈ ವಿಶ್ವವು, **ತಪಸಾ** ತಮ್ಮ ತಪಃ ಸಾಮರ್ಥ್ಯದಿಂದ, **ಸೃಷ್ಟಂ** ನಿರ್ಮಿತವಾಗಿದೆ. **ಪರಸ್ಯ ಪುಂಸಃ** ಶ್ರೀಹರಿಯ **ಮುಖಂ** ವದನವು, ಅಂದರೆ ವದನದಿಂದ ಹುಟ್ಟಿದ್ದಾರೆ. ಮತ್ತು ಆಶ್ರಯಿಸಿದ್ದಾರೆ, **ವೈ** ಮಂತ್ರಪ್ರಸಿದ್ಧವು. **ಯೈಃ** ಯಾವ ಬ್ರಾಹ್ಮಣರಿಂದ, **ಪರಂಜ್ಯೋತಿಃ** ನಾರಾಯಣನು, **ಧಾರ್ಯತೇ** ಹೃದಯದಲ್ಲಿ ಧಾರಣಮಾಡಲ್ಪಟ್ಟಿದ್ದಾನೆ, **ಶಿವಃ** ಮಂಗಳಕರವಾದ, **ಪಂಥಾಃ** ವೇದಮಾರ್ಗವು, **ದರ್ಶಿತಃ** ತೋರಿಸಲ್ಪಟ್ಟಿದೆ.

**ತಾತ್ಪರ್ಯ-** ಬ್ರಾಹ್ಮಣರು (ಚ್ಯವನಾದಿಗಳು) ಈ ವಿಶ್ವವನ್ನು ನಿರ್ಮಾಣ ಮಾಡಿದ್ದಾರೆ. ಪರಮಾತ್ಮನ ವದನಾರವಿಂದದಿಂದ ಜನಿಸಿದ್ದಾರೆ. ಮತ್ತು ಆಶ್ರಯಿಸಿಕೊಂಡಿದ್ದಾರೆ. ಪರಮಾತ್ಮನನ್ನು ತಮ್ಮ ಹೃದಯದಲ್ಲಿ ಧಾರಣಮಾಡಿದ್ದಾರೆ. ಮೋಕ್ಷಾನುಕೂಲವಾದ ವೇದಮಾರ್ಗವನ್ನು ತೋರಿಸಿದ್ದಾರೆ. ||೧೨||

**ಯೇಽಪೀದಮುಪತಿಷ್ಠಂತೇ ಲೋಕನಾಥಾಃ ಸುರೇಶ್ವರಾಃ ।**
**ಭಗವಾನಪಿ ವಿಶ್ವಾತ್ಮಾ ಪಾವನಃ ಶ್ರೀನಿಕೇತನಃ ||೧೩||**

**ಯೇ ಲೋಕನಾಥಾಃ** ಯಾವ ಜಗದೊಡೆಯರಾದ, **ಸುರೇಶ್ವರಾಃ** ದೇವತೆಗಳೋ, **ತೇಽಪಿ** ಅವರೂ ಕೂಡಾ **ಇದಂ** ಈ ಬ್ರಾಹ್ಮಣಕುಲವನ್ನು **ಉಪತಿಷ್ಠಂತೇ** ಅಗ್ನಿಮುಖದಿಂದ ಹವಿಸ್ಸನ್ನು ಸ್ವೀಕಾರಮಾಡಲು ಪ್ರತೀಕ್ಷಾ ಮಾಡುತ್ತಾರೆ. **ವಿಶ್ವಾತ್ಮಾ** ವ್ಯಾಪಕನಾದ, **ಪಾವನಃ** ಮಂಗಳಕರನಾದ, **ಶ್ರೀನಿಕೇತನಃ** ಲಕ್ಷ್ಮೀದೇವಿಗೆ ಆಶ್ರಯನಾದ, **ಭಗವಾನಪಿ** ಪರಮಾತ್ಮನು ಕೂಡಾ, **ಇದಂ** ಈ ಬ್ರಾಹ್ಮಣಕುಲವನ್ನು **ಉಪತಿಷ್ಠಂತೇ** ಪ್ರಶಂಸಿಸುತ್ತಾನೆ.

**ತಾತ್ಪರ್ಯ-** ಜಗದೊಡೆಯರಾದ ಸಮಸ್ತದೇವತೆಗಳೂ ಈ ಬ್ರಾಹ್ಮಣಕುಲವನ್ನು ಪ್ರತೀಕ್ಷಾ ಮಾಡುತ್ತಾರೆ. ಜಗದ್ವ್ಯಾಪ್ತನಾದ ಮಂಗಳಕರನಾದ ಪರಮಾತ್ಮನೂ ಕೂಡ ಇವರನ್ನು ''ನಮಸ್ಯೇ ಶಿರಸಾಽಸಕೃತ್'' ಇತ್ಯಾದಿಯಾಗಿ ಸ್ತೋತ್ರ ಮಾಡಿದ್ದಾನೆ. ||೧೩||

ಬ್ರಾಹ್ಮಣರು ಮಾತ್ರ ಈ ರೀತಿ ಇದ್ದಾರೆ. ನಾವೂ ಈ ರೀತಿ ಇದ್ದೇವೆ. ಅಷ್ಟೇ ಅಲ್ಲ ಇನ್ನೂ ಹೆಚ್ಚಿನ ವಿಶೇಷ ಉಂಟೆಂದು ಹೇಳುತ್ತಾಳೆ-

**ವಯಂ ತತ್ರಾಪಿ ಭೃಗವಃ ಶಿಷ್ಯೋऽಸ್ಯಾ ನಃ ಪಿತಾಽಸುರಃ ।**
**ಅಸ್ಮದ್ಧಾರ್ಯಂ ಧೃತವತೀ ಶೂದ್ರೋ ವೇದಮಿವಾಸತೀ ॥೧೪॥**

**ತತ್ರಾಪಿ** ಬ್ರಾಹ್ಮಣರಲ್ಲಿಯೂ ಕೂಡ, **ವಯಂ** ನಾವು, **ಭೃಗವಃ** ಭೃಗುವಂಶದಲ್ಲಿ ಉತ್ಪನ್ನರಾದವರು, **ಅಸ್ಯಾಃ** ಈ ಶರ್ಮಿಷ್ಠೆಯ, **ಪಿತಾ** ತಂದೆಯು, **ಅಸುರಃ** ಅಸುರನಾಗಿದ್ದಾನೆ ನಮ್ಮಗಳಿಗೆ, **ಶಿಷ್ಯಃ** ಶಿಷ್ಯನು, **ಶೂದ್ರಃ** ಶೂದ್ರನು, **ವೇದಮಿವ** ವೇದವನ್ನು ಧಾರಣ ಮಾಡುವಂತೆ, **ಅಸತೀ** ದುಷ್ಟಳಾದ ಶರ್ಮಿಷ್ಠೆಯು **ಅಸ್ಮದ್ಧಾರ್ಯಂ** ನಾವು ಧಾರಣ ಮಾಡುವ ವಸ್ತುವನ್ನೇ **ಧೃತವತೀ** ಧಾರಣೆಯನ್ನು ಮಾಡಿದ್ದಾಳೆ.

**ತಾತ್ಪರ್ಯ-** ಬ್ರಾಹ್ಮಣರಲ್ಲಿಯೂ ಕೂಡಾ ನಾವು ಭೃಗುವಂಶ ಸಂಭವರು, ಇವಳ ತಂದೆಯು ನಮ್ಮ ಶಿಷ್ಯನು, ಶೂದ್ರನು ವೇದಾಧ್ಯಯನ ಮಾಡುವಂತೆ ದುಷ್ಟಳಾದ ಶರ್ಮಿಷ್ಠೆಯು ನಾವು ಧಾರಣಮಾಡುವ ವಸ್ತ್ರವನ್ನು ಧಾರಣ ಮಾಡಿದ್ದಾಳೆ.

ಇಲ್ಲಿ ಶೂದ್ರನಂತೆ ಎಂದು ಹೇಳಿದ್ದರಿಂದ ಶೂದ್ರನಿಗೆ ವೇದಾಧ್ಯಯನ ಮಾಡಿದರೆ ''ಅಧ್ಯಯನೇ ಜಿಹ್ವಾಛೇದಃ'' ಎಂದು ಹೇಳಿದ್ದರಿಂದ, ಹೇಗೆ ಜಿಹ್ವಾಛೇದ ಮಾಡಬೇಕೋ ಹಾಗೆ ಇವಳಿಗೂ ಕೂಡ ಶಿಕ್ಷೆಯಾಗಬೇಕು ಎನ್ನುವ ಅರ್ಥ. ॥೧೪॥

**ಏವಂ ಕ್ಷಿಪಂತೀಂ ಶರ್ಮಿಷ್ಠಾ ಗುರುಪುತ್ರೀಮಭಾಷತ ।**
**ರುಷಾ ಶ್ವಸಂತೀ ನಾಗೀವ ಧರ್ಷಿತಾ ದಷ್ಟದಚ್ಛದಾ ॥೧೫॥**

**ರುಷಾ** ಸಿಟ್ಟಿನಿಂದ, **ಶ್ವಸಂತೀ** ಉಸಿರು ಬಿಡುತ್ತಿರುವ, **ನಾಗೀವ** ಹಾವಿನಂತೆ, **ಧರ್ಷಿತಾ** ಪರಾಭವ ಹೊಂದಿದ, **ದಷ್ಟದಚ್ಛದಾ** ಕಡಿಸಿಕೊಳ್ಳಲ್ಪಟ್ಟ ತುಟಿಯುಳ್ಳ, **ಶರ್ಮಿಷ್ಠಾ** ಶರ್ಮಿಷ್ಠೆಯು, **ಏವಂ** ಹಿಂದೆ ಹೇಳಿದ ರೀತಿಯಲ್ಲಿ, **ಕ್ಷಿಪಂತೀಂ** ಆಕ್ಷೇಪ ಮಾಡುತ್ತಿರುವ, **ಗುರುಪುತ್ರೀಂ** ದೇವಯಾನಿಯನ್ನು ಕುರಿತು, **ಅಭಾಷತ** ಮಾತನಾಡಿದಳು.

**ತಾತ್ಪರ್ಯ-** ಹಾವಿನಂತೆ ಪರಾಭವ ಹೊಂದಿದ ಸಿಟ್ಟಿನಿಂದ ಶ್ವಾಸ ಬಿಡುತ್ತಿರುವ, ಕಡಿಸಿಕೊಳ್ಳಲ್ಪಟ್ಟ ತುಟಿಯುಳ್ಳ ಶರ್ಮಿಷ್ಠೆಯು ತನ್ನನ್ನು ಕುರಿತು ಆಕ್ಷೇಪಿಸುತ್ತಿರುವ ದೇವಯಾನಿಯನ್ನು ಕುರಿತು ಮಾತನಾಡಿದಳು. ॥೧೫॥

**ಆತ್ಮವೃತ್ತಿಮವಿಜ್ಞಾಯ ಕತ್ಥಸೇ ಬಹು ಭಿಕ್ಷುಕಿ ।**
**ಕಿಂ ನ ಪ್ರತೀಕ್ಷಸೇಽಸ್ಮಾಕಂ ಗೃಹಾನ್ ಬಲಿಭುಜೋ ಯಥಾ ॥೧೬॥**

**ಭಿಕ್ಷುಕಿ** ಎಲೈ ಭಿಕ್ಷುಕಿಯೇ! **ಆತ್ಮವೃತ್ತಿಂ** ನಿನ್ನ ಜೀವಿಕಾವೃತ್ತಿಯನ್ನು, **ಅವಿಜ್ಞಾಯ** ತಿಳಿಯದೇ, **ಬಹು** ಬಹಳವಾಗಿ, **ಕತ್ಥಸೇ** ಮಾತನಾಡುತ್ತಿದ್ದೀಯಾ **ಬಲಿಭುಜಃ** ನಾಯಿಯು, **ಯಥಾ** ಹೇಗೆ ನಮ್ಮನ್ನು ಪ್ರತೀಕ್ಷಿಸುತ್ತದೆಯೋ ಹಾಗೆ, **ಅಸ್ಮಾಕಂ** ನಮ್ಮ **ಗೃಹಾನ್** ಮನೆಗಳನ್ನು **ನ ಪ್ರತೀಕ್ಷಸೇ ಕಿಂ** ಪ್ರತೀಕ್ಷಾ ಮಾಡುವುದಿಲ್ಲವೇನು? ಮಾಡೇ ಮಾಡುತ್ತೀಯೇ.

**ತಾತ್ಪರ್ಯ-** ಭಿಕ್ಷುಕಿಯಾದ ನೀನು ನಿನ್ನ ವೃತ್ತಿಯನ್ನು ತಿಳಿಯದೇ ವ್ಯರ್ಥವಾಗಿ ಬಹಳ ಮಾತನಾಡುತ್ತಿದ್ದೀಯೇ. ಬಲಿಭುಜಿಗಳಾದ ನಾಯಿಗಳು ಹೇಗೆ ನಮ್ಮನ್ನು ಪ್ರತೀಕ್ಷಿಸುತ್ತವೇಯೋ ಹಾಗೆ ನೀನೂ ಕೂಡಾ ಪ್ರತೀಕ್ಷಾ ಮಾಡುತ್ತೀಯೇ. ಇದರಿಂದ ಭಿಕ್ಷುಕಿ ಎನ್ನುವದನ್ನು ಸ್ಪಷ್ಟಮಾಡಿದಳು. ॥೧೬॥

**ಏವಂವಿಧೈಃ ಸುಪರುಷೈಃ ಕ್ಷಿಪ್ತ್ವಾಽಚಾರ್ಯಸುತಾಂ ಸತೀಮ್ ।**
**ಶರ್ಮಿಷ್ಠಾ ಪ್ರಾಕ್ಷಿಪತ್ಕೂಪೇ ವಾಸಸ್ತ್ವಾದಾಯ ಮನ್ಯುನಾ ॥೧೭॥**

**ಶರ್ಮಿಷ್ಠಾ** ಶರ್ಮಿಷ್ಠೆಯು **ಏವಂವಿಧೈಃ** ಅನೇಕ ಪ್ರಕಾರವಾದ **ಸುಪರುಷೈಃ** ಕ್ರೂರವಾದ ಮಾತುಗಳಿಂದ **ಕ್ಷಿಪ್ತ್ವಾ** ತಿರಸ್ಕಾರ ಮಾಡಿ **ವಾಸಸ್ತು** ಬಟ್ಟೆಯನ್ನೂ ಕೂಡಾ **ಆದಾಯ** ತೆಗೆದುಕೊಂಡು (ನಗ್ನಳನ್ನಾಗಿ ಮಾಡಿ) **ಸತೀಂ** ಸಜ್ಜನಳಾದ **ಆಚಾರ್ಯಸುತಾಂ** ದೇವಯಾನಿಯನ್ನು **ಮನ್ಯುನಾ** ಸಿಟ್ಟಿನಿಂದ **ಕೂಪೇ** ಬಾವಿಯಲ್ಲಿ **ಪ್ರಾಕ್ಷಿಪತ್** ಹಾಕಿದಳು.

**ತಾತ್ಪರ್ಯ-** ಶರ್ಮಿಷ್ಠಾದೇವಿಯು ಅನೇಕ ಪ್ರಕಾರವಾದ ಕ್ರೂರವಾದ ಮಾತುಗಳಿಂದ ಬೈದು ಅವಳ ಬಟ್ಟೆಯನ್ನು ತೆಗೆದುಕೊಂಡು ನಗ್ನಳನ್ನಾಗಿ ಮಾಡಿ ಸಿಟ್ಟಿನಿಂದ ದೇವಯಾನಿಯನ್ನು ಬಾವಿಯಲ್ಲಿ ಹಾಕಿದಳು. ॥೧೭॥

**ತಸ್ಯಾಂ ಗತಾಯಾಂ ಸ್ವಗೃಹಂ ಯಯಾತಿರ್ಮೃಗಯಾಂ ಚರನ್ ।**
**ಪ್ರಾಪ್ತೋ ಯದೃಚ್ಛಯಾ ಕೂಪೇ ಜಲಾರ್ಥೀ ತಾಂ ದದರ್ಶ ಹ ॥೧೮॥**

**ತಸ್ಯಾಂ** ಆ ಶರ್ಮಿಷ್ಠಾದೇವಿಯು, **ಸ್ವಗೃಹಂ** ತನ್ನ ಮನೆಯನ್ನು ಕುರಿತು, **ಗತಾಯಾಂ** ಹೋಗಲು, **ಯಯಾತಿಃ** ಯಯಾತಿರಾಜನು, **ಮೃಗಯಾಂ ಚರನ್** ಬೇಟೆಯಾಡುತ್ತಾ, **ಯದೃಚ್ಛಯಾ** ಪರಮಾತ್ಮನ ಇಚ್ಛೆಯಿಂದ, **ಜಲಾರ್ಥೀ** ನೀರಡಿಸಿದವನಾಗಿ **ಪ್ರಾಪ್ತಃ** ಬಂದವನಾಗಿ, **ಕೂಪೇ** ಭಾವಿಯಲ್ಲಿ ಬಿದ್ದಿರುವ **ತಾಂ** ದೇವಯಾನಿಯನ್ನು, **ದದರ್ಶ** ನೋಡಿದನು, **ಹ** ಪ್ರಸಿದ್ಧವು.

**ತಾತ್ಪರ್ಯ-** ಶರ್ಮಿಷ್ಠಾದೇವಿಯು ತನ್ನ ಮನೆಯನ್ನು ಕುರಿತು ಹೋದಳು. ಆಗ ಯಯಾತಿರಾಜನು ಬೇಟೆಯಾಡುತ್ತಾ ಬಾಯಾರಿಕೆಯಿಂದ ಕೂಡಿದವನಾಗಿ, ದೈವೇಚ್ಛೆಯಿಂದ ಬಾವಿಯ ಹತ್ತಿರ ಬಂದವನಾಗಿ ಭಾವಿಯಲ್ಲಿ ಬಿದ್ದಿರುವ ದೇವಯಾನಿಯನ್ನು ನೋಡಿದನು. ||೧೮||

**ದತ್ವಾ ಸ್ವಮುತ್ತರಂ ವಾಸಸ್ತಸ್ಯೈ ರಾಜಾ ವಿವಾಸಸೇ |**
**ಗೃಹೀತ್ವಾ ಪಾಣಿನಾ ಪಾಣಿಮುಜ್ಜಹಾರ ದಯಾಪರಃ ||೧೯||**

**ದಯಾಪರಃ** ದಯಾಲುವಾದ **ರಾಜಾ** ಯಯಾತಿರಾಜನು, **ವಿವಾಸಸೇ** ನಗ್ನಳಾದ ದೇವಯಾನಿಗೆ, **ಸ್ವಂ ಉತ್ತರಂ ವಾಸಃ** ತನ್ನ ಮೇಲುವಸ್ತ್ರವನ್ನು **ದತ್ವಾ** ಕೊಟ್ಟು, **ಪಾಣಿನಾ** ತನ್ನ ಕೈಯಿಂದ, **ಪಾಣಿಂ** ಅವಳ ಕೈಯನ್ನು **ಗೃಹೀತ್ವಾ** ಹಿಡಿದುಕೊಂಡು ಭಾವಿಯಿಂದ **ಉಜ್ಜಹಾರ** ಮೇಲೆತ್ತಿದನು.

**ತಾತ್ಪರ್ಯ-** ದಯಾಲುವಾದ ರಾಜನು ದೇವಯಾನಿಗೆ ತನ್ನ ಹೊದ್ದುಕೊಳ್ಳುವ ವಸ್ತ್ರವನ್ನು ಕೊಟ್ಟು ಕೈಯಿಂದ ಹಿಡಿದುಕೊಂಡು ಬಾವಿಯಿಂದ ಮೇಲೆತ್ತಿದನು.

**ತಂ ವೀರಮಾಹೋಶನಸೀ ಪ್ರೇಮನಿರ್ಭರಯಾ ಗಿರಾ |**
**ರಾಜಂಸ್ತ್ವಯಾ ಗೃಹೀತೋ ಮೇ ಪಾಣಿಃ ಪರಪುರಂಜಯ |**
**ಹಸ್ತಗ್ರಹೋಽಪರೋ ಮಾಽಭೂದ್ಗೃಹೀತಾಯಾಸ್ತ್ವಯಾ ಹಿಮೇ ||೨೦**

**ಉಶನಸೀ** ದೇವಯಾನಿಯು, **ಪ್ರೇಮನಿರ್ಭರಯಾ** ಪ್ರೇಮಾತಿಶಯದಿಂದ, ಕೂಡಿದ, **ಗಿರಾ** ಮಾತಿನಿಂದ, **ತಂ ವೀರಂ** ಆ ರಾಜನನ್ನು ಕುರಿತು **ಆಹ** ಮಾತನಾಡಿದಳು. **ಪರಪುರಂಜಯ** ಶತ್ರುಗಳ ಪುರವನ್ನು ಜಯಿಸುವ, **ರಾಜನ್** ರಾಜನೇ! **ಗೃಹೀತಾಯಾಃ** ನಿನ್ನಿಂದ ಗೃಹೀತಳಾದ **ಮೇ** ನನ್ನ **ಪಾಣಿಃ** ಹಸ್ತವು, **ಗೃಹೀತಃ** ಹಿಡಿಯಲ್ಪಟ್ಟಿದೆ. **ಅತಃ** ಆದ್ದರಿಂದ **ಅಪರಃ** ನಿನ್ನ ಭಿನ್ನನಾದವನು, **ಹಿಮೇ** ಛಳಿಯಲ್ಲಿ **ತ್ವಯಾ** ನಿನ್ನಿಂದ ಹಿಡಿಯಲ್ಪಟ್ಟ, **ಹಸ್ತಗ್ರಹಃ** ಕೈ ಹಿಡಿಯುವವನು, **ಮಾ ಅಭೂತ್** ಆಗುವುದು ಬೇಡ.

**ತಾತ್ಪರ್ಯ-** ದೇವಯಾನಿಯು ಸ್ನೇಹಪೂರ್ಣವಾದ ಮಾತಿನಿಂದ ರಾಜನನ್ನು ಕುರಿತು ಮಾತನಾಡಿದಳು. ರಾಜನೇ! ನೀನು ನನ್ನ ಕೈಯನ್ನು ಹಿಡಿದಿದ್ದೀಯಾ, ಆದ್ದರಿಂದ ಬೇರೆಯವರು ನನ್ನ ಕೈ ಹಿಡಿಯುವರು ಆಗುವದು ಬೇಡ. ನೀನು ಅಂತಹ ಸಂಕಟದಲ್ಲಿ ಸಿಲುಕಿದ್ದೀಯಾ. ಎಂದರೆ ಅದಕ್ಕೆ ಹೇಳುತ್ತಾಳೆ. ಹಿಮೇ ಎಂದು ಭಾವಿಯಲ್ಲಿ ಬಿದ್ದಾಗ ಮರಣ ಕಾರಣವಾದ ಛಳಿಯಾಗುವಾಗ ನನ್ನನ್ನು ಕೆಳಗಿನಿಂದ ಮೇಲೆ ಎತ್ತಿದ್ದೀ. ನನ್ನ ಕೈಯನ್ನು ಕೂಡಾ ಹಿಡಿದಿದ್ದೀಯಾ. ಆದ್ದರಿಂದ ನಿನ್ನ ವ್ಯತಿರಿಕ್ತನು ನನಗೆ ವರನಾಗುವದು ಬೇಡ ಎಂಬ ಆಶಯ. ||೨೦||

ವರ್ಣದಲ್ಲಿ ಕಡಿಮೆಯವನಾದ ನಾನು ನಿನಗೆ ಹೇಗೆ ವರನಾಗುವೆನು ಹೇಳು ಎಂದಾಗ ಅದಕ್ಕೆ ಇದು ಪರಮಾತ್ಮನ ನಿಶ್ಚಯ ಆದ್ದರಿಂದ ಬೇರೆಯಾಗಲು ಸಾಧ್ಯವಿಲ್ಲ ಎಂದು ಹೇಳುತ್ತಾಳೆ-

**ಏಷ ಈಶಕೃತೋ ವೀರ ಸಂಬಂಧೋ ನೌ ನ ಪೌರುಷಃ ।**
**ಯದಿದಂ ಕೂಪಮಗ್ನಾಯಾ ಭವತೋ ದರ್ಶನಂ ಮಮ ॥೨೦॥**

**ಹೇ ವೀರ** ಎಲೈ ರಾಜನೇ, **ಕೂಪಮಗ್ನಾಯಾಃ** ಭಾವಿಯಲ್ಲಿ ಬಿದ್ದಿರುವ, **ಮಮ** ನನಗೆ **ಭವತಃ** ನಿಮ್ಮ **ಯದಿದಂ** ಯಾವ ಈ **ದರ್ಶನಂ** ದರ್ಶನವು ಆಯಿತು, **ನೌ** ನಮ್ಮಿಬ್ಬರ **ಏಷಃ ಸಂಬಂಧಃ** ಈ ಸಂಬಂಧವು **ಪೌರುಷಃ** ತಂದೆ ಮೊದಲಾದ ಪುರುಷರಿಂದ ಆಲೋಚಿತವಾದದ್ದು, **ನ** ಅಲ್ಲ, ಕಿಂತು ಆದರೆ **ಈಶಕೃತಃ** ಪರಮಾತ್ಮನಿಂದ ಮಾಡಲ್ಪಟ್ಟಿದೆ ಎಂದು ಹೇಳಿದಳು.

**ತಾತ್ಪರ್ಯ-** ಎಲೈ ರಾಜನೇ! ಭಾವಿಯಲ್ಲಿ ಬಿದ್ದಿರುವ ನನಗೆ ನಮ್ಮಿಬ್ಬರ ಸಂಬಂಧ ರೂಪವಾದ ದರ್ಶನವು ಪುರುಷಾಲೋಚಿತವಲ್ಲ. ಪರಮಾತ್ಮನ ವಿಚಿತ್ರವಾದ ಲೀಲೆಯಿದು ಎಂದು ಹೇಳಿದಳು. ॥೨೦॥

ದೇವಯಾನಿಯು ರಾಜನನ್ನು ನೀನು ಕೈ ಹಿಡಿಯುವುದು ಯೋಗವೇ ಆಗಿದೆ ಕಚನ ಶಾಪವೇ ಇದೆ ಎಂದು ಹೇಳುತ್ತಾಳೆ-

**ನ ಬ್ರಾಹ್ಮಣೋ ಮೇ ಭವಿತಾ ಹಸ್ತಗ್ರಾಹೋ ಮಹಾಭುಜ ।**
**ಕಚಸ್ಯ ಬಾರ್ಹಸ್ಪತ್ಯಸ್ಯ ಶಾಪಾದ್ಯಮಶಪಂ ಪುರಾ ॥೨೧॥**

**ಮಹಾಭುಜ** ಎಲೈ ರಾಜನೇ! **ಅಹಂ** ನಾನು **ಪುರಾ** ಹಿಂದೆ **ಯಂ** ಯಾವನನ್ನು **ಅಶಪಂ** ಶಪಿಸಿದೆನೋ ಅಂತಹ **ಬಾರ್ಹಸ್ಪತ್ಯಸ್ಯ** ಬೃಹಸ್ಪತಿಯ ಮಗನಾದ **ಕಚಸ್ಯ** ಕಚನ **ಶಾಪಾತ್** ಶಾಪದಿಂದ **ಮೇ** ನನ್ನ **ಹಸ್ತಗ್ರಾಹಃ** ಕೈಹಿಡಿಯುವವನು **ಬ್ರಾಹ್ಮಣಃ** ಬ್ರಾಹ್ಮಣನು **ನ ಭವಿತಾ** ಆಗುವುದಿಲ್ಲ.

**ತಾತ್ಪರ್ಯ-** ಇಲ್ಲಿ ''ಯಮಶಪಂ ಪುರಾ'' ಎನ್ನುವ ಪದಗಳಿಂದ ಈ ಅಖ್ಯಾಯಿಕೆಯನ್ನು ಸಂಗ್ರಹ ಮಾಡಿದ್ದಾರೆ. ಮೃತಸಂಜೀವಿನಿವಿದ್ಯೆಯು ಶುಕ್ರಾಚಾರ್ಯರನ್ನು ಬಿಟ್ಟು ಬೇರೆ ಯಾರಲ್ಲಿ ಇಲ್ಲ ಎನ್ನುವದು ಕಚನಿಗೆ ತಿಳಿದ ವಿಷಯ. ಕಚನು ಶುಕ್ರಾಚಾರ್ಯರ ಹತ್ತಿರ ಬಂದನು. ಅವನು ವಿದ್ಯೆಯನ್ನು ಹೊಂದಿದವನಾಗಿ ತನ್ನ ಮನೆಗೆ ಹೊರಡಲು ಉದ್ಯುಕ್ತನಾದನು. ಆಗ ನಾನು ಒಂದೇ ಕಡೆಯ ಸಹವಾಸದಿಂದ ಅವನ ಗುಣಲುಬ್ಧೆಯಾಗಿ ಮಮತೆಯಿಂದ ನನಗೆ ಪತಿಯಾಗು ಎಂದು ಕೇಳಿಕೊಂಡೆನು. ಆಗ ಆ ಕಚನಾದರೂ ಹೇ

ಭಗಿನಿ! ಈ ರೀತಿಯಾಗಿ ಮಾತನಾಡಬೇಡ ಎಂದನು. ಆಗ ನಾನು ಭಗ್ನವಾದ ಇಚ್ಛೆಯುಳ್ಳವಳಾಗಿ ಕಾಮಾರ್ತಳಾಗಿ ಸಿಟ್ಟಿನಿಂದ ಇಂದಿನಿಂದ ನಿನಗೆ ಓದಿದ ವಿದ್ಯೆ ಫಲಿಸದೇ ಹೋಗಲಿ ಎಂದು ಶಾಪಕೊಟ್ಟೆನು. ಆಗ ಕಚನೂ ಇನ್ನು ಮುಂದೆ ಸಜಾತೀಯನಾದ ಅಂದರೆ ಬ್ರಾಹ್ಮಣವರ್ಣನಾದವನು ನಿನಗೆ ಪತಿಯಾಗದೇ ಹೋಗಲಿ ಎಂದು ಶಾಪಕೊಟ್ಟನು. ಇದೆಲ್ಲವೂ ಸಂಗ್ರಹೀತವಾಯಿತು. ಇದನ್ನೆಲ್ಲವನ್ನೂ ಆದಿಪರ್ವದಲ್ಲಿ ಅನೇಕ ಶ್ಲೋಕದಿಂದ ಹೇಳಿದ್ದಾರೆ. ನನ್ನಿಂದ ಮೊದಲು ಶಪಿಸಲ್ಪಟ್ಟ ಕಚನು ನನಗೆ ಪ್ರತಿಯಾಗಿ ಶಪಿಸಿದನು. ಈ ಶಾಪದಿಂದ ನನಗೆ ಬ್ರಾಹ್ಮಣನು ಪತಿಯಾಗುವುದಿಲ್ಲ ಎಂದು ಹೇಳಿದಳು. ॥೨೨॥

ಯಾವಳಿಂದ ಅತಿಪ್ರಾರ್ಥಿತನಾದ ಯಯಾತಿಯು ದೇವಯಾನಿಯನ್ನು ಇಲ್ಲವೆಂದನೋ? ಅಥವಾ ಪತಿಯಾಗುವೆನೆಂದನೋ? ಎಂದರೆ ಅಂಗೀಕರಿಸಿದನು ಎಂದು ಹೇಳುತ್ತಾರೆ-

**ಯಯಾತಿರನಭಿಪ್ರೇತಂ ದೈವೋಪಹೃತಮಾತ್ಮನಃ ।**
**ಮನಸ್ತು ತದ್ಗತಂ ಬುಧ್ವಾ ಪ್ರತಿಜಗ್ರಾಹ ತದ್ವಚಃ ॥೨೩॥**

**ಯಯಾತಿಃ** ಯಯಾತಿರಾಜನು, **ಅನಭಿಪ್ರೇತಂ** ಪ್ರಾತಿಲೋಮ್ಯದಿಂದ ಅನಭಿಪ್ರೇತವಾದ, **ದೈವೋಪಹೃತಂ** ದೈವದಿಂದ ಬಂದ, **ಆತ್ಮನಃ** ತನ್ನ **ಮನಃ** ಮನಸ್ಸು, **ತದ್ಗತಂ** ದೇವಯಾನಿಯಲ್ಲಿ ಸ್ಥಿತವಾದದ್ದನ್ನು, **ಬುಧ್ವಾ** ತಿಳಿದುಕೊಂಡು, **ತದ್ವಚಃ** ದೇವಯಾನಿಯ ಮಾತನ್ನು, **ಪ್ರತಿಜಗ್ರಾಹ** ಅಂಗೀಕಾರ ಮಾಡಿದನು.

**ತಾತ್ಪರ್ಯ-** ಯಯಾತಿರಾಜನು ವಿಚಾರಿಸಿದ. ಈ ವಿವಾಹವು ಪ್ರಾತಿಲೋಮ್ಯದಿಂದ ನಡೆಯುತ್ತಿದೆ. ಆದ್ದರಿಂದ ಅನಭಿಪ್ರೇತವಾಗಿದೆ. ದೇವಯಾನಿಯು ಜಿಂಕೆಯಂತೆ ನೇತ್ರಗಳುಳ್ಳವಳು. ನಾನು ಬೇಟೆಯಾಡುವವನು. ನಾನೆಂದಿಗೂ ಅಧರ್ಮದಲ್ಲಿ ತೊಡಗಿದವನಲ್ಲ. ಈಗ ನಾನು ದೇವಯಾನಿಯಲ್ಲಿ ಆಸಕ್ತನಾಗಿದ್ದೇನೆ. ಇದು ದೈವನಿರ್ಣಯವಾಗಿದೆ. ಆದ್ದರಿಂದ ದೋಷವಿಲ್ಲ. ಎಂದು ತಿಳಿದುಕೊಂಡು ದೇವಯಾನಿಯ ಮಾತನ್ನು ಅಂಗೀಕರಿಸಿದನು. ॥೨೩॥

**ಗತೇ ರಾಜನಿ ಸಾ ವೀರೇ ತತ್ರ ಸ್ಮ ರುದತೀ ಪಿತುಃ ।**
**ನ್ಯವೇದಯತ್ತತಃ ಸರ್ವಮುಕ್ತಂ ಶರ್ಮಿಷ್ಠಯಾ ಕೃತಮ್ ॥೨೪॥**

**ವೀರೇ** ವೀರನಾದ, **ರಾಜನಿ** ಯಯಾತಿರಾಜನು, **ಗತೇ ಸತಿ** ಹೋಗಲು, **ತತ್ರ** ಅಲ್ಲಿಯೇ, **ರುದತೀ** ಅಳುತ್ತಿರುವ, **ಸಾ** ದೇವಯಾನಿಯು **ಪಿತುಃ** ತಂದೆಯ ಮುಂದೆ, **ಶರ್ಮಿಷ್ಠಯಾ** ಶರ್ಮಿಷ್ಠಾದೇವಿಯಿಂದ **ಉಕ್ತಂ** ಭಿಕ್ಷುಕಿ ಇತ್ಯಾದಿಯಾಗಿ

ಹೇಳಿದ್ದನ್ನು, **ಕೃತಂ** ಕೂಪದಲ್ಲಿ ಹಾಕಿದ್ದನ್ನು ಇತ್ಯಾದಿ **ಸರ್ವಂ** ಎಲ್ಲವನ್ನೂ, **ನ್ಯವೇದಯತ್** ಹೇಳಿದಳು.

**ತಾತ್ಪರ್ಯ-** ಯಯಾತಿರಾಜನು ಹೋಗಲು, ದೇವಯಾನಿಯು ತನ್ನ ತಂದೆಯ ಮುಂದೆ ಅಲ್ಲಿ ನಡೆದ ಶರ್ಮಿಷ್ಠಾದೇವಿಯು ಮಾತನಾಡಿದ ಮತ್ತು ಮಾಡಿದ ಕೃತ್ಯವನ್ನು ಹೇಳಿದಳು. ||೨೪||

**ದುರ್ಮನಾ ಭಗವಾನ್ಕಾವ್ಯಃ ಪೌರೋಹಿತ್ಯಂ ವಿಗರ್ಹಯನ್ ।**
**ಸ್ತುವನ್ ವೃತ್ತಿಂ ಚ ಕಾಪೋತೀಂ ದುಹಿತ್ರಾ ಸ ಯಯೌ ಪುರಾತ್ ||೨೫||**

**ಭಗವಾನ್** ಪೂಜ್ಯರಾದ, **ಕಾವ್ಯಃ** ಶುಕ್ರಾಚಾರ್ಯರು, **ದುರ್ಮನಾಃ** ದುರ್ಮನಸ್ಕರಾಗಿ, **ಪೌರೋಹಿತ್ಯಂ** ಪೌರೋಹಿತ್ಯ ವೃತ್ತಿಯನ್ನು, **ವಿಗರ್ಹಯನ್** ನಿಂದಿಸುತ್ತಾ, **ಕಾಪೋತೀಂ ವೃತ್ತಿಂ** ಉಂಛ ವೃತ್ತಿಯನ್ನು **ಸ್ತುವನ್** ಪ್ರಶಂಸಾ ಮಾಡುವವರಾಗಿ, **ಸಃ** ಶುಕ್ರಾಚಾರ್ಯರು, **ದುಹಿತ್ರಾ** ಮಗಳಿಂದ ಕೂಡಿಕೊಂಡು, **ಪುರಾತ್** ನಗರದಿಂದ **ಯಯೌ** ಹೋದರು.

**ತಾತ್ಪರ್ಯ-** ಶುಕ್ರಾಚಾರ್ಯರು ತಮ್ಮ ಪೌರೋಹಿತ್ಯ ಜೀವನವನ್ನು ನಿಂದಿಸುತ್ತಾ, ಈ ಪೌರೋಹಿತ್ಯದಿಂದಲೇ ನನಗೆ ಈ ದುರ್ಗತಿಬಂದದ್ದು, ಎಂದು ಬೈದುಕೊಳ್ಳುತ್ತಾ ಉಂಛ ವೃತ್ತಿಯನ್ನು ಸ್ತೋತ್ರ ಮಾಡಿದರು. ಉಂಛ ವೃತ್ತಿಯೆಂದರೆ? ಧಾನ್ಯಗಳ ರಾಶಿ ಮಾಡಿದ ಮೇಲೆ ಖಣದಲ್ಲಿ ಸಿಡಿದು ಉಳಿದ ಧಾನ್ಯ ಆರಿಸಿಕೊಂಡು ಅದರಿಂದ ಜೀವನ ಮಾಡುವುದು. ಕಾಪೋತಿ ಎಂದರೂ ಕೂಡಾ ಇದೇ ವೃತ್ತಿಯೇ. ಕಪೋತಾನಾಂ ಇಯಂ ಕಪೋತ ಪಾರಿವಾಳಗಳು ಅಲ್ಲಲ್ಲಿ ಬಿದ್ದ ಧಾನ್ಯಗಳಿಂದ ಜೀವನ ಮಾಡುತ್ತವೆ. ಆದ್ದರಿಂದ ಇದಕ್ಕೆ ಕಾಪೋತೀ ಎಂದು ಕರೆಯುವರು. ಇಂಥ ವೃತ್ತಿಯನ್ನು ಸ್ತೋತ್ರ ಮಾಡಿ, ಮಗಳಿಂದ ಕೂಡಿಕೊಂಡು ಆ ರಾಜನ ಪಟ್ಟಣವನ್ನು ಬಿಟ್ಟು ಹೋದರು.

ಈ ವಿಚಾರದಲ್ಲಿ ಭಾರತದ ವಿರೋಧ ಬರುತ್ತದೆ ಹೇಗೆಂದರೆ?

**ತತಃ ಕಾವ್ಯೋ ಭೃಗುಶ್ರೇಷ್ಠಃ ಸಮನ್ಯುರುಪಗಮ್ಯ ಹ ।**
**ವೃಷಪರ್ವಾಣಮಾಸೀನಮ್.....**

ಅನಂತರದಲ್ಲಿ ಭೃಗುಶ್ರೇಷ್ಠರಾದ ಶುಕ್ರಾಚಾರ್ಯರು, ಸಿಟ್ಟಿನಿಂದ ವೃಷಪರ್ವರಾಜನ ಹತ್ತಿರ ಬಂದು ಮಾತನಾಡಿದರು ಎಂದು ಇದೆ. ಭಾಗವತದಲ್ಲಿ ಮಗಳಿಂದ ಕೂಡಿಕೊಂಡು ಹೋದರು ಎಂದು ಹೇಳಿದೆ. ಪರಸ್ಪರ ವಿರೋಧ ಬರುವದಲ್ಲ ಎಂದರೆ ಅದಕ್ಕೆ ಈ ರೀತಿ ಅರ್ಥ ಮಾಡಬೇಕು. ದೇವಯಾನಿಯನ್ನು

ಸಂತೋಷಪಡಿಸುವುದಕ್ಕೋಸ್ಕರ ಅವಳ ಜೊತೆಗೆ ಹೋಗಿ ಅವಳನ್ನು ಹೊರಗೆ ಬಿಟ್ಟು, ಮತ್ತೆ ಬಂದನು. ವೃಷಪರ್ವರಾಜನನ್ನು ಶಾಸನಮಾಡಿ, ರಾಜನಿಂದ ಕೂಡಿಕೊಂಡು ಹೊರಗೆ ಹೋಗಿ ಶಾಂತಳಾದ ದೇವಯಾನಿಯನ್ನು ಪಟ್ಟಣಕ್ಕೆ ಕರೆದುಕೊಂಡು ಬಂದರು ಎಂದು ಅರ್ಥಮಾಡಬೇಕು. ಹೀಗೆ ಮಾಡುವದರಿಂದ ವಿರೋಧ ಬರುವದಿಲ್ಲ. ಅಲ್ಲಿಯೇ ಈ ರೀತಿ ಹೇಳಿದೆ. ''ಪ್ರವಿಶಾಮಿ ಪುರಂ ತಾತ ತುಷ್ಟಾऽಸ್ಮಿ ದ್ವಿಜಸತ್ತಮ'' ಎಂದು. ।।೨೫।।

**ವೃಷಪರ್ವಾ ತಮಾಜ್ಞಾಯ ಪ್ರತ್ಯನೀಕವಿವಕ್ಷಿತಮ್ ।**
**ಗುರುಂ ಪ್ರಸಾದಯನ್ಮೂರ್ಧ್ನಾ ಪಾದಯೋಃ ಪತಿತಃ ಪಥಿ ।।೨೬।।**

**ವೃಷಪರ್ವಾ** ವೃಷಪರ್ವರಾಜನು, **ಪ್ರತ್ಯನೀಕವಿವಕ್ಷಿತಂ** ದೇವತೆಗಳಿಗೆ ಪ್ರಿಯವಾದದ್ದನ್ನು ಮಾಡಬೇಕೆಂಬ ಅಪೇಕ್ಷೆಯುಳ್ಳ, **ಗುರುಂ** ಗುರುವಾದ **ತಂ** ಶುಕ್ರಾಚಾರ್ಯರನ್ನು **ಮೂರ್ಧ್ನಾ** ತಲೆಬಾಗಿ, **ಪ್ರಸಾದಯನ್** ಸಂತೋಷ-ಪಡಿಸುತ್ತಾ , **ಪಥಿ** ಮಾರ್ಗದಲ್ಲಿ **ಪಾದಯೋಃ** ಕಾಲುಗಳಲ್ಲಿ, **ಪತಿತಃ** ನಮಸ್ಕಾರ ಮಾಡಿದನು.

**ತಾತ್ಪರ್ಯ-** ವೃಷಪರ್ವರಾಜನು, ದೇವತೆಗಳಿಗೆ ಇಷ್ಟವಾದ ಜಯವನ್ನು ತಂದುಕೊಡಬೇಕೆಂಬ ಅಪೇಕ್ಷೆಯುಳ್ಳ ಶುಕ್ರಾಚಾರ್ಯರನ್ನು ಸಂತೋಷ ಪಡಿಸುವನಾಗಿ, ಅವರ ಕಾಲುಗಳಿಗೆ ಹಾದಿಯಲ್ಲಿಯೇ ಸಾಷ್ಟಾಂಗ ಪ್ರಣಾಮ ಮಾಡಿದನು. ।।೨೬।।

**ಕ್ಷಣಾರ್ಧಮನ್ಯುರ್ಭಗವಾನ್ ಶಿಷ್ಯಂ ವ್ಯಾಚಷ್ಟ ಭಾರ್ಗವಃ ।**
**ಕಾಮೋऽಸ್ಯಾಃ ಕ್ರಿಯತಾಂ ರಾಜನ್ನೈನಾಂ ತ್ಯಕ್ತುಮಿಹೋತ್ಸಹೇ ।।೨೭।।**

**ಕ್ಷಣಾರ್ಧಮನ್ಯುಃ** ಅರ್ಧಕ್ಷಣ ಕೋಪವುಳ್ಳ, **ಭಗವಾನ್** ಪೂಜ್ಯರಾದ, **ಭಾರ್ಗವಃ** ಶುಕ್ರಾಚಾರ್ಯರು **ಶಿಷ್ಯಂ** ರಾಜನನ್ನು ಕುರಿತು, **ವ್ಯಾಚಷ್ಟ** ಹೇಳಿದರು. **ರಾಜನ್** ಎಲೈ ರಾಜನೇ! **ಏನಾಂ** ಈ ದೇವಯಾನಿಯನ್ನು, **ತ್ಯಕ್ತುಂ** ಬಿಡಲು, **ನ ಉತ್ಸಹೇ** ಸಮರ್ಥನಾಗುವುದಿಲ್ಲ, ಆದ್ದರಿಂದ **ಅಸ್ಯಾಃ** ದೇವಯಾನಿಯ **ಕಾಮಃ** ಅಪೇಕ್ಷಿತವಾದದ್ದು, **ಕ್ರಿಯತಾಂ** ಮಾಡಲ್ಪಡಲಿ.

**ತಾತ್ಪರ್ಯ-** ಅರ್ಧ ಕ್ಷಣ ಕೋಪವುಳ್ಳ ಶುಕ್ರಾಚಾರ್ಯರು, ರಾಜನೇ! ನಾನು ಮಗಳನ್ನು ಬಿಡುವುದಿಲ್ಲ. ಆದ್ದರಿಂದ ಅವಳಿಗೆ ಅಪೇಕ್ಷಿತವಾದದ್ದನ್ನು ನೆರವೇರಿಸು ಎಂದು ಹೇಳಿದರು. ।।೨೭।।

**ತಥೇತ್ಯವಸ್ಥಿತೇ ಪ್ರಾಹ ದೇವಯಾನೀ ಮನೋಗತಮ್ ।**
**ಪಿತ್ರಾ ದತ್ತಾ ಯತೋ ಯಾಸ್ಯೇ ಸಾನುಗಾ ಯಾತು ಮಾಮನು ॥೨೮॥**

**ತಥೇತಿ** ಹಾಗೆ ಆಗಲೆಂದು, ಹೇಳಿ, **ಅವಸ್ಥಿತೇ** ವೃಷಪರ್ವನು ನಿಂತಿರಲು, **ದೇವಯಾನೀ** ದೇವಿಯಾನಿಯು, **ಮನೋಗತಂ** ತನ್ನ ಮನಸ್ಸಿನಲ್ಲಿರುವುದನ್ನು, **ಪ್ರಾಹ** ಹೇಳಿದಳು. **ಅಹಂ** ನಾನು **ಪಿತ್ರಾ** ತಂದೆಯಿಂದ, **ದತ್ತಾ** ವರನಿಗೆ ಕೊಡಲ್ಪಟ್ಟವಳಾಗಿ, **ಯತಃ** ಎಲ್ಲಿಗೆ **ಯಾಸ್ಯೇ** ಹೋಗುತ್ತೇನೆಯೋ ಅಲ್ಲಿಗೆ **ಸಾನುಗಾ** ದಾಸಿಯರಿಂದ ಸಹಿತಳಾಗಿ, **ಮಾಮನು** ನನ್ನನ್ನು ಅನುಸರಿಸಿ **ಯಾತು** ಬರಲಿ.

**ತಾತ್ಪರ್ಯ-** ಆಗ ವೃಷಪರ್ವರಾಜನು ಹಾಗೇ ಆಗಲೆಂದು ಹೇಳಲು ದೇವಯಾನಿಯು, ನನ್ನನ್ನು ತಂದೆಯು ವರನಿಗೆ ಕೊಟ್ಟ ನಂತರ ನಾನು ಎಲ್ಲಿಗೆ ಹೋಗುತ್ತೇನೆಯೋ ಅಲ್ಲಿಗೆ ಶರ್ಮಿಷ್ಠೆಯು ದಾಸಿಯರಿಂದ ಸಹಿತಳಾಗಿ ನನ್ನನ್ನು ಅನುಸರಿಸಿ ಬರಲಿ, ಎಂದು ಹೇಳಿದಳು. ॥೨೮॥

**ಸ್ವಾನಾಂ ತತ್ಸಂಕಟಂ ವೀಕ್ಷ್ಯ ತದರ್ಥಸ್ಯ ಚ ಗೌರವಮ್ ।**
**ದೇವಯಾನೀ ಪರ್ಯಚರತ್ ಸ್ತ್ರೀಸಹಸ್ರೇಣ ದಾಸಿವತ್ ॥೨೯॥**

ಶರ್ಮಿಷ್ಠಾದೇವಿಯು, **ಸ್ವಾನಾಂ** ತನ್ನವರ, **ತತ್ಸಂಕಟಂ** ಗುರುದ್ರೋಹದಿಂದ ಕುಲವೇ ನಷ್ಟವಾಗುತ್ತದೆ ಎಂಬ ಸಂಕಟವನ್ನು, **ವೀಕ್ಷ್ಯ** ನೋಡಿ, **ತದರ್ಥಸ್ಯ** ಅವಳನ್ನು ಅನುಸರಿಸಿ ಹೋಗುವ ಪ್ರಯೋಜನರೂಪವಾದ **ಗೌರವಂ ಚ** ಗುರು ಪ್ರಸಾದದಿಂದ ಮುಂದೆ ಆಗುವ ಫಲವನ್ನು ಕೂಡ, **ವೀಕ್ಷ್ಯ** ನೋಡಿ, **ಸ್ತ್ರೀಸಹಸ್ರೇಣ** ಎರಡು ಸಾವಿರ ಸ್ತ್ರೀಯರಿಂದ, **ದೇವಯಾನೀಂ** ದೇವಯಾನಿಯನ್ನು, **ದಾಸೀವತ್** ಸೇವಕಿಯಂತೆ, **ಪರ್ಯಚರತ್** ಸೇವಿಸಿದಳು.

**ತಾತ್ಪರ್ಯ-** ಶರ್ಮಿಷ್ಠಾದೇವಿಯು ತನ್ನವರಿಗೆ ಬಂದಿರುವ ಗುರುದ್ರೋಹದಿಂದ ಸಂಸಾರ ನಾಶರೂಪವಾದ ಸಂಕಟವನ್ನು ನೋಡಿ, ಅವಳನ್ನು ಅನುಸರಿಸಿ ಹೋದರೆ ಆಗುವ ಗುರುಪ್ರಸಾದವನ್ನು ತಿಳಿದುಕೊಂಡು, ದೇವಯಾನಿಯನ್ನು ಸೇವಕಿಯಂತೆ ಪರಿಚರಿಸಿದಳು.

ಸ್ತ್ರೀಸಹಸ್ರೇಣ ಎನ್ನುವದಕ್ಕೆ ಎರಡು ಸಾವಿರ ಎಂದು ಅರ್ಥ ಮಾಡಬೇಕು. ಸ್ತ್ರೀಯಶ್ಚ ಸಹಸ್ರಸಂಖ್ಯಾಕಾಃ ತಾಭಿಃ ಸಹಿತಂ ಯತ್ಸಹಸ್ರಂ ಆಹತ್ಯ ಸಹಸ್ರ-ದ್ವಯೇನ, ಸಾವಿರಮಂದಿ ಸ್ತ್ರೀಯರು, ಈ ಸಾವಿರ ಸ್ತ್ರೀಯರಿಂದ ಸಹಿತವಾದ ಸಹಸ್ರವು, ಕೂಡಿಸಿ ಎರಡು ಸಹಸ್ರ . ಇದನ್ನು ಆದಿಪರ್ವದಲ್ಲಿ ಹೇಳಿದ್ದಾರೆ. ॥೨೯॥

ದ್ವಾಭ್ಯಾಂ ಕನ್ಯಾಸಹಸ್ರಾಭ್ಯಾಂ ದ್ವೇ ಕನ್ಯೇ ಪರಿವಾರಿತೇ ।
ದ್ವಿಸಹಸ್ರೇಣ ಕನ್ಯಾನಾಂ ತಥಾ ಶರ್ಮಿಷ್ಠಯಾ ಸಹ ಇತಿ ॥ -ಮಹಾಭಾರತ

**ನಾಹುಷಾಯ ಸುತಾಂ ದತ್ವಾ ಸಹ ಶರ್ಮಿಷ್ಠಯೋಶನಾಃ ।**
**ತಮಾಹ ರಾಜನ್ ಶರ್ಮಿಷ್ಠಾಂ ಮಾಧಾಸ್ತಲ್ಪೇ ತು ಕರ್ಹಿಚಿತ್ ॥೩೦॥**

**ಉಶನಾಃ** ಶುಕ್ರಾಚಾರ್ಯರು, **ನಾಹುಷಾಯ** ಯಯಾತಿರಾಜನಿಗೆ, **ಶರ್ಮಿಷ್ಠಯಾ ಸಹ** ಶರ್ಮಿಷ್ಠೆಯಿಂದ ಕೂಡಿದ **ಸುತಾಂ** ಮಗಳನ್ನು, **ದತ್ವಾ** ಕೊಟ್ಟು, **ತಂ** ಆ ರಾಜನನ್ನು ಕುರಿತು, **ರಾಜನ್** ಹೇ ರಾಜನೇ! **ಶರ್ಮಿಷ್ಠಾಂ** ಶರ್ಮಿಷ್ಠಾಳನ್ನು **ಕರ್ಹಿಚಿತ್** ಯಾವಾಗಲಾದರೂ ಕೂಡ, **ತಲ್ಪೇ** ಹಾಸಿಗೆಯಲ್ಲಿ **ಮಾ ಧಾಃ** ಹೆಂಡತಿಯಂತೆ ಮಾಡಿಕೊಳ್ಳಬೇಡ, **ಇತಿ** ಎಂದು **ಆಹ** ಮಾತನಾಡಿದನು.

**ತಾತ್ಪರ್ಯ-** ಶುಕ್ರಾಚಾರ್ಯರು ಯಯಾತಿರಾಜನಿಗೆ ಶರ್ಮಿಷ್ಠೆಯಿಂದ ಸಹಿತವಾಗಿ ದೇವಯಾನಿಯನ್ನು ಕೊಟ್ಟು ರಾಜನಿಗೆ, ರಾಜನೇ! ಶರ್ಮಿಷ್ಠಾಳನ್ನು ಎಂದಿಗೂ ಕೂಡ ಹಾಸಿಗೆಯಲ್ಲಿ ಮಲಗಿಸಿಕೊಳ್ಳಬೇಡ. ಶರ್ಮಿಷ್ಠೆಯನ್ನು ನಿನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳಬೇಡ. ಎಂದು ಹೇಳಿದರು. ॥೩೦॥

**ವಿಲೋಕ್ಯೌಶನಸೀಂ ರಾಜ್ಞೀಂ ಶರ್ಮಿಷ್ಠಾ ಸುಪ್ರಜಾಂ ಕ್ವಚಿತ್ ।**
**ತಮೇವ ವವ್ರೇ ರಹಸಿ ಸಖ್ಯಾಃ ಪತಿಮೃತೌ ಸತೀ ॥೩೧॥**

**ಸತೀ** ಶೀಲಸಂಪನ್ನಳಾದ **ಶರ್ಮಿಷ್ಠಾ** ಶರ್ಮಿಷ್ಠಾದೇವಿಯು **ರಾಜ್ಞೀಂ** ರಾಜನ ಪತ್ನಿಯಾದ **ಔಶನಸೀಂ** ದೇವಯಾನಿಯನ್ನು **ಸುಪ್ರಜಾಂ** ಒಳ್ಳೆಯ ಮಕ್ಕಳುಳ್ಳವಳನ್ನು **ವೀಕ್ಷ್ಯ** ನೋಡಿ **ಸಖ್ಯಾಃ** ಗೆಳತಿಯ **ಪತಿಂ** ಗಂಡನನ್ನು **ಋತೌ** ಋತುಕಾಲದಲ್ಲಿ **ತಮೇವ** ಆ ರಾಜನನ್ನೇ **ಕ್ವಚಿತ್** ಒಮ್ಮೆ **ರಹಸಿ** ಏಕಾಂತದಲ್ಲಿ **ವವ್ರೇ** ಕೇಳಿದಳು.

**ತಾತ್ಪರ್ಯ-** ಶರ್ಮಿಷ್ಠಾದೇವಿಯು ರಾಣಿಯಾದ ದೇವಯಾನಿಯನ್ನು ಪ್ರಜಾವತಿಯನ್ನು ನೋಡಿ ಸಖಿಯ ಪತಿಯಾದ ಆ ರಾಜನನ್ನೇ ಋತುಕಾಲದಲ್ಲಿ ಏಕಾಂತದಲ್ಲಿ ಕೇಳಿದಳು. ॥೩೧॥

**ರಾಜಪುತ್ರ್ಯಾಽರ್ಥಿತೋಽಪತ್ಯೇ ಧರ್ಮಂ ಚಾವೇಕ್ಷ್ಯ ಧರ್ಮವಿತ್ ।**
**ಸ್ಮರನ್ ಶುಕ್ರವಚಃ ಕಾಲೇ ದಿಷ್ಟಮೇವಾಭ್ಯಪದ್ಯತ ॥೩೨॥**

**ರಾಜಪುತ್ರ್ಯಾ** ಶರ್ಮಿಷ್ಠಾದೇವಿಯಿಂದ **ಅಪತ್ಯೇ** ಸಂತಾನಕ್ಕೋಸ್ಕರ **ಅರ್ಥಿತಃ** ಪ್ರಾರ್ಥಿತನಾದ **ಧರ್ಮವಿತ್** ಧರ್ಮವನ್ನು ತಿಳಿದ ರಾಜನು **ಧರ್ಮಂ** ಕೇಳಿದವರಿಗೆ ಉಚಿತವಾದದ್ದನ್ನು ಕೊಡಬೇಕು ಎನ್ನುವ ಧರ್ಮವನ್ನು **ಅವೇಕ್ಷ್ಯ** ತಿಳಿದು

**ಶುಕ್ರವಚಃ** ಶುಕ್ರಾಚಾರ್ಯರ ಮಾತನ್ನು **ಸ್ಮರನ್** ಜ್ಞಾಪಕಕ್ಕೆ ತಂದುಕೊಂಡು **ದಿಷ್ಟಮೇವ** ದೈವವೇ ಕಾರಣವೆಂದು ತಿಳಿದು **ಕಾಲೇ** ಋತುಕಾಲದಲ್ಲಿ **ತಾಂ** ಆ ಶರ್ಮಿಷ್ಠಾದೇವಿಯನ್ನು **ಅಭ್ಯಪದ್ಯತ** ಗಮನ ಮಾಡಿದನು.

ಆದಿಪರ್ವದಲ್ಲಿ ಇದರ ಬಗ್ಗೆ ಹೇಳಿದೆ. ಶರ್ಮಿಷ್ಠಾದೇವಿಯು ಹೇಳುತ್ತಾಳೆ.

**ಸಾ ತ್ವಾಂ ಪ್ರಸಾದ್ಯ ಯಾಚೇ ತ್ವಾಮೃತುಂ ದೇಹಿ ನರಾಧಿಪ ।**

ನಾನು ನಿನ್ನನ್ನು ಪ್ರಸಾದಿಸಿ ಯಾಚಿಸುತ್ತೇನೆ, ನರಾಧಿಪನೇ ! ಪುತ್ರನನ್ನು ಕೊಡು.

ಆಗ ಯಯಾತಿರಾಜನು ಹೇಳುತ್ತಾನೆ -

**ವೇದ ತ್ವಾ ಶೀಲಸಂಪನ್ನಾಂ ದೈತ್ಯಕನ್ಯಾಮನಿಂದಿತಾಮ್ ।**
**ರೂಪೇ ಚ ತೇ ನ ಪಶ್ಯಾಮಿ ಸೂಚ್ಯಗ್ರಮಪಿ ನಿಂದಿತಮ್ ॥**
**ಕಿಂಚಾಬ್ರವೀನ್ಮಾಮುಶನಾ ದೇವಯಾನೀಂ ಯದಾಽವಹಮ್ ।**
**ನೇಯಮಾಹ್ವಯಿತವ್ಯಾ ತೇ ಶಯನೇ ವಾರ್ಷಪರ್ವಣೀ ॥**

ದೈತ್ಯಕನ್ಯೆಯಾದ ನೀನು ಶೀಲಸಂಪನ್ನಳಾಗಿರುವಿ. ಅನಿಂದ್ಯಳಾಗಿರುವಿ. ರೂಪಸಿಯೂ ಆಗಿರುವಿ. ಆದರೆ ಶುಕ್ರಾಚಾರ್ಯರು ವಿವಾಹಕಾಲದಲ್ಲಿ ನನಗೆ ಶರ್ಮಿಷ್ಠಾಳಿಗೆ ಶಯನದಲ್ಲಿ ಸ್ಥಾನಕೊಡಬೇಡ ಎಂದು ಹೇಳಿದ್ದರು ಎಂದು ಹೇಳಿದನು.

ಆಗ ಪುನಃ ಶರ್ಮಿಷ್ಠಾದೇವಿ ಹೇಳುತ್ತಾಳೆ-

ಸುಳ್ಳಿನಿಂದ ಕೂಡಿದ ಮಾತು ಐದು ಕಾಲದಲ್ಲಿ ಪಾತಕವಾಗುವುದಿಲ್ಲ, ಸ್ತ್ರೀಯರಲ್ಲಿ ಹೇಳಿದ್ದು, ವಿವಾಹಕಾಲದಲ್ಲಿ, ಪ್ರಾಣಹೋಗುವ ಕಾಲದಲ್ಲಿ, ಸಮಸ್ತಧನ ಹೋಗುವ ಕಾಲದಲ್ಲಿ

**ನ ನರ್ಮಯುಕ್ತಂ ವಚನಂ ಹಿನಸ್ತಿ ನ ಸ್ತ್ರೀಷು ರಾಜನ್ನ ವಿವಾಹಕಾಲೇ**
**ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥**

ಆದ್ದರಿಂದ ವಿವಾಹಕಾಲದಲ್ಲಿ ಸುಳ್ಳು ಹೇಳಿದರೇ ದೋಷವಿಲ್ಲ ಆದ್ದರಿಂದ ನನ್ನನ್ನು ಅಂಗೀಕರಿಸು. ॥೩೨॥

**ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ ।**
**ದ್ರುಹ್ಯುಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ ॥೩೩॥**

**ದೇವಯಾನೀ** ದೇವಯಾನಿಯು **ಯದುಂ ಚ** ಯದುವನ್ನು **ತುರ್ವಸುಂ ಚೈವ** ತುರ್ವಸುವನ್ನು **ವ್ಯಜಾಯತ** ಪ್ರಸವಿಸಿದಳು **ವಾರ್ಷಪರ್ವಣೀ** ವೃಷಪರ್ವನ ಮಗಳು **ಶರ್ಮಿಷ್ಠಾ** ಶರ್ಮಿಷ್ಠೆಯು **ದ್ರುಹ್ಯುಂ** ದ್ರುಹ್ಯುವನ್ನು **ಚ** ಮತ್ತು **ಅನುಂ** ಅನುವನ್ನು **ಚ** ಮತ್ತು **ಪೂರುಂ** ಪೂರುವನ್ನು ಕೂಡಾ **ವ್ಯಜಾಯತ** ಪ್ರಸವಿಸಿದಳು.

**ತಾತ್ಪರ್ಯ-** ದೇವಯಾನಿಯು ಯದು ತುರ್ವಸು ಎಂಬ ಮಕ್ಕಳನ್ನು ಪಡೆದಳು. ಶರ್ಮಿಷ್ಠೆಯು ದ್ರುಹ್ಯು , ಅನು, ಪೂರು ಎಂಬ ಮೂರು ಮಕ್ಕಳನ್ನು ಪಡೆದಳು. ॥೩೩॥

**ಗರ್ಭಸಂಭವಮಾಸುರ್ಯಾ ಭರ್ತುರ್ವಿಜ್ಞಾಯ ಭಾಮಿನೀ ।**
**ದೇವಯಾನೀ ಪಿತುರ್ಗೇಹಂ ಯಯೌ ಕ್ರೋಧವಿಮೂರ್ಚ್ಛಿತಾ ॥೩೪॥**

**ಭಾಮಿನೀ** ತೇಜಸ್ವಿನಿಯಾದ **ದೇವಯಾನೀ** ದೇವಯಾನಿಯು **ಆಸುರ್ಯಾಃ** ಶರ್ಮಿಷ್ಠೆಯ **ಭರ್ತುಃ** ಯಯಾತಿ ರಾಜನಿಂದ **ಗರ್ಭಸಂಭವಂ** ಗರ್ಭೋತ್ಪತ್ತಿಯನ್ನು **ವಿಜ್ಞಾಯ** ತಿಳಿದು **ಕ್ರೋಧವಿಮೂರ್ಚ್ಛಿತಾ** ಕ್ರೋಧದಿಂದ ಪರವಶಳಾಗಿ **ಪಿತುಃ** ತಂದೆಯ **ಗೃಹಂ** ಮನೆಯನ್ನು ಕುರಿತು **ಯಯೌ** ಹೋದಳು.

**ತಾತ್ಪರ್ಯ-** ಯಯಾತಿರಾಜನಿಂದ ಶರ್ಮಿಷ್ಠೆಯು ಗರ್ಭವತಿ- ಯಾದದ್ದನ್ನು ತಿಳಿದ ದೇವಯಾನಿಯು ಕೋಪದಿಂದ ತನ್ನ ತಂದೆಯ ಮನೆಗೆ ಹೋದಳು. ॥೩೪॥

**ಪ್ರಿಯಾಮನುಗತಃ ಕಾಮೀ ವಚೋಭಿರಭಿಮಂತ್ರಯನ್ ।**
**ನ ಪ್ರಸಾದಯಿತುಂ ಶೇಕೇ ಪಾದಸಂವಾಹನಾದಿಭಿಃ ॥೩೫॥**

**ಪ್ರಿಯಾಂ ಅನುಗತಃ** ದೇವಯಾನಿಯನ್ನು ಅನುಸರಿಸಿದ **ಕಾಮೀ** ಸ್ತ್ರೀಕಾಮಿಯಾದ ಯಯಾತಿಯು **ವಚೋಭಿಃ** ಸಾಂತ್ವನ ವಚನಗಳಿಂದ **ಅಭಿಮಂತ್ರಯನ್** ಗುಪ್ತದಲ್ಲಿ ಮಾಡಿದ ಕಾರ್ಯ ನಿವಾರಿಸಲು ಸಮಾಧಾನ ಮಾಡುತ್ತಾ **ಪಾದಸಂವಾಹನಾದಿಭಿಃ** ಪಾದಸ್ಪರ್ಶಾದಿಗಳಿಂದ **ಪ್ರಸಾದಯಿತುಂ** ಸಮಾಧಾನ ಮಾಡಲು **ನ ಶೇಕೇ** ಸಮರ್ಥನಾಗಲಿಲ್ಲ.

**ತಾತ್ಪರ್ಯ-** ಸ್ತ್ರೀ ಕಾಮಿಯಾದ ಯಯಾತಿರಾಜನು ಸಾಂತ್ವನ ವಚನಗಳಿಂದ ಸಮಾಧಾನ ಮಾಡುತ್ತಾ ಹೆಂಡತಿಯನ್ನು ಅನುಸರಿಸಿದನು. ಪಾದಸ್ಪರ್ಶಾದಿ- ಗಳಿಂದಲೂ ಸಹ ಸಮಾಧಾನ ಪಡಿಸಲು ಸಮರ್ಥನಾಗಲಿಲ್ಲ. ॥೩೫॥

**ಶುಕ್ರಸ್ತಮಾಹ ಕುಪಿತಃ ಸ್ತ್ರೀಕಾಮಾನೃತಪೂರುಷ ।**
**ತ್ವಾಂ ಜರಾ ವಿಶತೇ ಮಂದ ವಿರೂಪಕರಣೀ ನೃಣಾಮ್ ॥೩೬॥**

**ಕುಪಿತಃ** ಸಿಟ್ಟಿಗೆದ್ದ **ಶುಕ್ರಃ** ಶುಕ್ರಾಚಾರ್ಯರು **ತಂ** ಆ ರಾಜನನ್ನು ಕುರಿತು, **ಆಹ** ಹೇಳಿದರು. **ಸ್ತ್ರೀಕಾಮ** ಸ್ತ್ರೀಕಾಮಿಯೇ **ಅನೃತಪೂರುಷ** ಸುಳ್ಳು ಹೇಳುವ ಪುರುಷನೇ **ಮಂದ** ಎಲೈ ಮೂಢನೇ **ತ್ವಾಂ** ನಿನ್ನನ್ನು **ನೃಣಾಂ** ಮನುಷ್ಯರಿಗೆ **ವಿರೂಪಕರಣೀ** ವಿರೂಪವನ್ನು ಮಾಡುವ **ಜರಾ** ಮುಪ್ಪು **ವಿಶತೇ** ಪ್ರವೇಶಮಾಡುತ್ತದೆ.

**ತಾತ್ಪರ್ಯ-** ಕೋಪಗೊಂಡ ಶುಕ್ರಾಚಾರ್ಯರು ರಾಜನಿಗೆ ಸ್ತ್ರೀಕಾಮಿಯೇ ಸುಳ್ಳನ್ನಾಡುವ ಪುರುಷನೇ! ನಿನ್ನನ್ನು ಮನುಷ್ಯರಿಗೆ ವಿಕಾರಪ್ರಾಪಕವಾದ ಜರೆಯು ಪ್ರವೇಶಿಸುತ್ತದೆ ಎಂದು ಹೇಳಿದರು. ।।೩೬।।

**ಯಯಾತಿರುವಾಚ-**

**ಅತೃಪ್ತೋಽಸ್ಮ್ಯದ್ಯ ಕಾಮಾನಾಂ ಬ್ರಹ್ಮನ್ ದುಹಿತರಿ ಸ್ಮ ೃತೇ ।**
**ವ್ಯತ್ಯಸ್ಯೈ ೃತಾಂ ಯಥಾಕಾಮಂ ವಯಸಾ ಯೋಽಭಿಧಾಸ್ಯತಿ ।।೩೭।।**

**ಬ್ರಹ್ಮನ್** ಶುಕ್ರಾಚಾರ್ಯರೇ **ಅದ್ಯ** ಇಂದು **ಕಾಮಾನಾಂ** ಕಾಮ ವಿಷಯ ಭೋಗಗಳಿಂದ **ತೇ** ನಿನ್ನ **ದುಹಿತರಿ** ಮಗಳಲ್ಲಿ **ಅತೃಪ್ತೋಽಸ್ಮಿ** ಅಲಂಬುದ್ಧಿಯನ್ನು ಹೊಂದಿಲ್ಲ **ಏತಾಂ** ಈ ನಿಂದಿತವಾದ ಮುಪ್ಪನ್ನು **ವ್ಯತ್ಯಸ್ಯ** ವ್ಯತ್ಯಾಸಮಾಡಿ **ಯಃ** ಯಾವನು ತಾರುಣ್ಯವನ್ನು **ಅಭಿಧಾಸ್ಯತಿ** ಕೊಡುತ್ತಾನೆಯೋ ಅವನಲ್ಲಿ, **ಏತಾಂ** ಮುಪ್ಪನ್ನು **ವ್ಯತ್ಯಸ್ಯ** ಇಟ್ಟು **ವಯಸಾ** ಯುವಕನಾಗಿ **ಯಥಾಕಾಮಂ** ಯಥೇಚ್ಛವಾಗಿ ಅನುಭವಿಸುತ್ತೇನೆ.

**ತಾತ್ಪರ್ಯ-** ಶುಕ್ರಾಚಾರ್ಯರು ಶಾಪಕೊಟ್ಟಾಗ, ಯಯಾತಿರಾಜನು ಇನ್ನೂ ನಾನು ನಿನ್ನ ಮಗಳಲ್ಲಿ ತೃಪ್ತಿಯನ್ನು ಹೊಂದಿಲ್ಲ. ಆದ್ದರಿಂದ ಶಾಪಕ್ಕೆ ವಿಮೋಚನೆಯನ್ನು ಕೊಡಿರಿ ಎಂದು ಕೇಳಿದನು. ನನ್ನ ಈ ಮುಪ್ಪನ್ನು ನನ್ನ ಮಕ್ಕಳಿಗೆ ಕೊಟ್ಟು ಅವರ ವಯಸ್ಸನ್ನು ನಾನು ಸ್ವೀಕಾರ ಮಾಡುತ್ತೇನೆ ಎಂದು ಹೇಳಿದನು. ಶುಕ್ರಾಚಾರ್ಯರು ತಥಾಸ್ತು ಎಂದರು. ದುಹಿತರಿ ಎಂದು ಹೇಳಿದ್ದರಿಂದ ತೃಪ್ತಿಯು ಇಬ್ಬರಿಗೂ ಸಂಬಂಧಿಸಿದ್ದರಿಂದ ದೇವಯಾನಿಯೂ ತೃಪ್ತಿಹೊಂದಿಲ್ಲ ಎಂಬುವದು ಧ್ವನಿತವಾಗುತ್ತದೆ. ।।೩೭।।

**ಇತಿ ಲಬ್ಧವ್ಯವಸ್ಥಾನಃ ಪುತ್ರಂ ಜ್ಯೇಷ್ಠಮಯಾಚತ ।**
**ಯದೋ ತಾತ ಪ್ರತೀಚ್ಛೇಮಾಂ ಜರಾಂ ದೇಹಿ ನಿಜಂ ವಯಃ ।।೩೮।।**

**ಇತಿ** ಈ ರೀತಿಯಾಗಿ **ಲಬ್ಧವ್ಯವಸ್ಥಾನಃ** ಹೊಂದಲ್ಪಟ್ಟ ವ್ಯವಸ್ಥೆಯುಳ್ಳ ರಾಜನು **ಜ್ಯೇಷ್ಠಂ** ಹಿರಿಯವನಾದ **ಪುತ್ರಂ** ಮಗನನ್ನು **ಅಯಾಚತ** ಕೇಳಿದನು. **ತಾತ** ಮಗನೇ **ಯದೋ** ಎಲೈ ಯದುವೇ **ಇಮಾಂ ಜರಾಂ** ಈ ಮುಪ್ಪನ್ನು **ಪ್ರತೀಚ್ಛ** ಸ್ವೀಕರಿಸು

ಮತ್ತು **ನಿಜಂ** ನಿನ್ನ ಸ್ವಕೀಯವಾದ **ವಯಃ** ವಯಸ್ಸನ್ನು ಯೌವ್ವನವನ್ನು **ದೇಹಿ** ಕೊಡು ಎಂದು ಕೇಳಿದನು.

ಈ ಶ್ಲೋಕದಲ್ಲಿ ಇತಿ ಎನ್ನುವುದರಿಂದ ಶುಕ್ರಾಚಾರ್ಯರು ಅಂಗೀಕರಿಸಿದರು ಎನ್ನುವುದನ್ನು ಸೂಚಿಸುತ್ತಾರೆ. ಆದಿಪರ್ವದಲ್ಲಿ ಹೇಳಿದ್ದಾರೆ- ''ನಾಹಂ ಮಿಥ್ಯಾ ಬ್ರವೀಮ್ಯೇತಜ್ಜರಾಂ ಪ್ರಾಪ್ಸ್ಯೋಷಿ ಭೂಮಿಪ । ಜರಾಮೇನಾಂ ತ್ವಮನ್ಯಸ್ಮೈ ಸಂಕ್ರಾಮಯ ಯದೀಚ್ಛಸಿ ।। ಇತಿ'' ನಾನು ಕೊಟ್ಟ ಶಾಪವು ಸುಳ್ಳಾಗಲು ಸಾಧ್ಯವಿಲ್ಲ. ನೀನು ಮುಪ್ಪನ್ನು ಹೊಂದಿಯೇ ತೀರುತ್ತಿ . ಆದರೆ ನಿನ್ನ ಮುಪ್ಪನ್ನು ನೀನು ಇಚ್ಛಿಸುವದಾದರೆ ಬೇರೆಯವರಿಗೆ ಕೊಡು ಎಂದು ಹೇಳಿದರು.

**ತಾತ್ಪರ್ಯ-** ಶುಕ್ರಾಚಾರ್ಯರು ಹಾಗೇ ಆಗಲೆಂದು ಹೇಳಿದರು. ಆಗ ಯಯಾತಿ ರಾಜನು ತನ್ನ ಹಿರಿಯಮಗನಾದ ಯದುವನ್ನು, ಎಲೈ ಯದುವೇ, ನನ್ನ ಈ ಜರಾವನ್ನು ಸ್ವೀಕರಿಸು, ನಿನ್ನ ಯೌವ್ವನವನ್ನು ನನಗೆ ಕೊಡು ಎಂದು ಕೇಳಿದನು.

**ಮಾತಾಮಹಕೃತಾಂ ವತ್ಸ ನ ತೃಪ್ತೋ ವಿಷಯೇಷ್ವಹಮ್ ।**
**ವಯಸಾ ಭವದೀಯೇನ ರಂಸ್ಯೇ ಕತಿಪಯಾಃ ಸಮಾಃ ।।೩೯।।**

**ವತ್ಸ** ಮಗುವೇ **ಮಾತಾಮಹಕೃತಾಂ** ನಿನ್ನ ತಾತನಿಂದ ಮಾಡಲ್ಪಟ್ಟ **ಜರಾಂ** ಮುಪ್ಪನ್ನು **ಪ್ರತೀಚ್ಛ** ಸ್ವೀಕರಿಸು **ಅಹಂ** ನಾನು **ವಿಷಯೇಷು** ಕಾಮೋಪಭೋಗ ವಿಷಯಗಳಲ್ಲಿ **ನತೃಪ್ತಃ** ತೃಪ್ತನಾಗಿಲ್ಲ. **ಭವದೀಯೇನ** ನಿನ್ನ **ವಯಸಾ** ಯೌವ್ವನದಿಂದ **ಕತಿಪಯಾಃ** ಕೆಲವು **ಸಮಾಃ** ವರ್ಷಗಳನ್ನು **ರಂಸ್ಯೇ** ಕ್ರೀಡಿಸುತ್ತೇನೆ.

**ತಾತ್ಪರ್ಯ-** ಎಲೈ ಮಗುವೇ ನಿನ್ನ ತಾತನು ಮಾಡಿದ ಮುಪ್ಪನ್ನು ಸ್ವೀಕರಿಸು. ನಾನು ವಿಷಯಸುಖಗಳಲ್ಲಿ ಅಲಂಬುದ್ಧಿಯನ್ನು ಹೊಂದಿಲ್ಲ. ನಿನ್ನ ಯೌವ್ವನದಿಂದ ನಾನು ಕೆಲವು ವರ್ಷಗಳನ್ನು ಸುಖದಿಂದ ಕಳೆಯುತ್ತೇನೆ. ।।೩೯।।

**ಯದುರುವಾಚ-**

**ನೋತ್ಸಹೇ ಜರಯಾ ಸ್ಥಾತುಮಂತರಾ ಪ್ರಾಪ್ತಯಾ ತವ ।**
**ಅವಿದಿತ್ವಾ ಸುಖಂ ಗ್ರಾಮ್ಯಂ ವೈತೃಷ್ಣ್ಯಂ ನೈತಿ ಪೂರುಷಃ ।।೪೦।।**

**ಪೂರುಷಃ** ಮನುಷ್ಯನು **ಗ್ರಾಮ್ಯಂ** ಸುರತದಿಂದುಂಟಾಗುವ **ಸುಖಂ** ಸುಖವನ್ನು **ಅವಿದಿತ್ವಾ** ತಿಳಿಯದಲೇ **ವೈತೃಷ್ಣ್ಯಂ** ವೈರಾಗ್ಯವನ್ನು **ನ ಏತಿ** ಹೊಂದುವದಿಲ್ಲ ಆದ್ದರಿಂದ, **ಅಂತರಾ** ಮಧ್ಯದಲ್ಲಿ **ಪ್ರಾಪ್ತಯಾ** ಬಂದಿರುವ, **ತವ** ನಿನ್ನ **ಜರಯಾ** ಮುಪ್ಪಿನಿಂದ **ಸ್ಥಾತುಂ** ಇರಲು **ನ ಉತ್ಸಹೇ** ಇಚ್ಛಿಸುವದಿಲ್ಲ.

**ತಾತ್ಪರ್ಯ-** ಮನುಷ್ಯನು ಸುರತಸುಖವನ್ನನುಭವಿಸದೇ ವೈರಾಗ್ಯವನ್ನು ಹೊಂದುವದಿಲ್ಲ. ಆದ್ದರಿಂದ ಮಧ್ಯೇ ಬಂದಿರುವ ನಿನ್ನ ಮುಪ್ಪಿನಿಂದ ನಾನಿರಲು ಸಾಧ್ಯವಿಲ್ಲ.

**ತುರ್ವಸುಶ್ಚೋದಿತಃ ಪಿತ್ರಾ ದ್ರುಹ್ಯುಶ್ಚಾನುಶ್ಚ ಭಾರತ ।**
**ಪ್ರತ್ಯಾಚಖ್ಯುರಧರ್ಮಜ್ಞಾ ಹ್ಯನಿತ್ಯೇ ನಿತ್ಯಬುದ್ಧಯಃ ॥೪೧॥**

**ಭಾರತ** ಪರೀಕ್ಷಿತನೇ **ಪಿತ್ರಾ** ತಂದೆಯಿಂದ **ಚೋದಿತಃ** ಕೇಳಲ್ಪಟ್ಟ **ತುರ್ವಸುಃ** ತುರ್ವಸುವು **ಚ** ಮತ್ತು **ದ್ರುಹ್ಯುಃ** ದ್ರುಹ್ಯುವು **ಚ** ಮತ್ತು **ಅನುಶ್ಚ** ಅನುವೂ ಕೂಡಾ **ಅಧರ್ಮಜ್ಞಾಃ** ಪಿತೃವಾಕ್ಯಪರಿಪಾಲನಾದಿ ಧರ್ಮಜ್ಞಾನ ಹೀನರಾದ **ಅನಿತ್ಯೇ** ಕ್ಷಣದಲ್ಲಿ ಕ್ಷಯವನ್ನು ಹೊಂದುವ ಶರೀರದಲ್ಲಿ ಯೌವ್ವನದಲ್ಲಿ, **ನಿತ್ಯಬುದ್ಧಯಃ** ಶಾಶ್ವತವೆಂಬ ಬುದ್ಧಿಯುಳ್ಳ ಅವರು **ಪ್ರತ್ಯಾಚಖ್ಯುಃ** ನಿರಾಕರಣ ಮಾಡಿದರು.

ಯಯಾತಿರಾಜನು ಈ ನಾಲ್ಕು ಜನಕ್ಕೂ ಕೂಡಾ ಶಾಪ ಕೊಟ್ಟಿದ್ದಾನೆ. ಯದುವಿಗೆ ತನ್ನ ರಾಜ್ಯದ ಸಿಂಹಾಸನಕ್ಕೆ ಅವನ ಸಂತತಿಯು ಅರ್ಹವಲ್ಲ ಎಂದು. ತುರ್ವಸುವಿಗೆ ಮ್ಲೇಂಛ ರಾಜನಾಗೆಂದು, ದ್ರುಹ್ಯುವಿಗೆ ದಾಶ ದೇಶಕ್ಕೆ ಈಶನಾಗೆಂದು, ಅನುವಿಗೆ ನಿನ್ನ ಬಾಲಕರು ಬಾಲ್ಯದಲ್ಲಿಯೇ ಮರಣಹೊಂದಲಿ ಎಂದು ನಾಲ್ವರಿಗೂ ಈ ರೀತಿಯಾದ ಶಾಪವನ್ನು ಕೊಟ್ಟಿದ್ದಾನೆ ಎನ್ನುವದು ಆದಿಪರ್ವದಲ್ಲಿ ಹೇಳಿದೆ.

ಇನ್ನು ''ಅಧರ್ಮಜ್ಞಾಃ'' ಎಂದು ಹೇಳಿದ್ದಾರೆ. ಇಲ್ಲಿ ಧರ್ಮ ಎಂದರೆ ಏನು?

**ಜೀವತೋಃ ವಾಕ್ಯಕರಣಾತ್ ಪ್ರತ್ಯಬ್ದಂ ಭೂರಿಭೋಜನಾತ್ ।**
**ಗಯಾಯಾಂ ಪಿಂಡದಾನಾಚ್ಚ ತ್ರಿಭಿಃ ಪುತ್ರಸ್ಯ ಪುತ್ರತಾ ॥**

ಎಂದು ಹೇಳಿದ್ದಾರೆ. ತಂದೆತಾಯಿಗಳು ಇದ್ದಾಗ ಅವರು ಹೇಳಿದ ಕಾರ್ಯವನ್ನು ಮಾಡಬೇಕು. ಅನಂತರ ತಂದೆತಾಯಿಗಳು ಹರಿಪದವನ್ನು ಹೊಂದಿದ ಮೇಲೆ, ಪ್ರತಿವರ್ಷವೂ ಅವರನ್ನುದ್ದೇಶಿಸಿ ಬ್ರಾಹ್ಮಣಸುವಾಸಿನಿಯರ ಭೋಜನ ಮಾಡಿಸಬೇಕು, ಮತ್ತು ಗಯಾದಲ್ಲಿ ಪಿಂಡಹಾಕಿ ಬರಬೇಕು. ಈ ಮೂರು ಕಾರ್ಯ ಮಾಡುವುದರಿಂದ ಪುತ್ರನಿಗೆ ಪುತ್ರತ್ವ ಬರುತ್ತದೆ ಎಂದು ಹೇಳಿದ್ದಾರೆ.

ಈ ಧರ್ಮವನ್ನು ತಿಳಿಯದೇ ಇದ್ದವರು ಎಂದು ಹೇಳಬೇಕು.

**ತಾತ್ಪರ್ಯ-** ಯಯಾತಿರಾಜನು ತುರ್ವಸು, ದ್ರುಹ್ಯು, ಅನು ಈ ಮೂವರನ್ನು ಕೂಡಾ ಕೇಳಿದನು. ಅವರು ನಿರಾಕರಿಸಿದರು. ಎಲ್ಲರಿಗೂ ಶಾಪಕೊಟ್ಟನು. ॥೪೧॥

**ಅಪೃಚ್ಛತ್ತನಯಂ ಪುತ್ರಂ ವಯಸೋನಂ ಗುಣಾಧಿಕಮ್ ।**
**ನ ತ್ವಮಗ್ರಜವದ್ವತ್ಸ ಮಾಂ ಪ್ರತ್ಯಾಖ್ಯಾತುಮರ್ಹಸಿ ॥೪೨॥**

**ವಯಸೋನಂ** ವಯಸ್ಸಿನಿಂದ ಸಣ್ಣವನಾದ **ಗುಣಾಧಿಕಂ** ಗುಣಗಳಿಂದ ಜ್ಯೇಷ್ಠನಾದ **ಪುತ್ರಂ** ಪುನ್ನಾಮಕ ನರಕದಿಂದ ರಕ್ಷಣ ಮಾಡುವ **ತನಯಂ** ಪೂರು ಎಂಬ ಮಗನನ್ನು **ಅಪೃಚ್ಛತ್** ಕೇಳಿದನು **ವತ್ಸ** ಪುತ್ರನೇ! **ತ್ವಂ** ನೀನು **ಅಗ್ರಜವತ್** ಅಣ್ಣಂದಿರಂತೆ **ಮಾಂ** ನನ್ನನ್ನು **ಪ್ರತ್ಯಾಖ್ಯಾತುಂ** ನಿರಾಕರಣ ಮಾಡಲು **ನ ಅರ್ಹಸಿ** ಯೋಗ್ಯನಲ್ಲ.

**ತಾತ್ಪರ್ಯ-** ಯಯಾತಿ ರಾಜನು, ವಯಸಾ ಸಣ್ಣವನಾದರೂ ಗುಣಗಳಿಂದ ಜ್ಯೇಷ್ಠನಾದ ಪುನ್ನಾಮಕ ನರಕದಿಂದ ಪಾರುಮಾಡುವ ಪೂರುವನ್ನು ಕೇಳಿದನು. ಮತ್ತು ಇವನು ಅವಿವೇಕನಲ್ಲ ಎನ್ನುವದು ಗೊತ್ತಿದ್ದರೂ ಕೂಡ ನಾಲ್ಕು ಮಕ್ಕಳು ಆಜ್ಞಾಭಂಗ ಮಾಡಿದ್ದರಿಂದ ಸ್ವಲ್ಪ ಶಂಕಿತಮನಸ್ಸುಳ್ಳ ರಾಜನು ಅವನ ಮುಖಬಂಧನ ಮಾಡುತ್ತಾನೆ. ನೀನು ನಿನ್ನ ಅಣ್ಣಂದಿರಂತೆ ನನ್ನ ಆಜ್ಞಾತಿರಸ್ಕಾರ ಮಾಡಲು ಅರ್ಹನಲ್ಲ ಎಂದು ಹೇಳಿದನು. ||೪೨||

**ಪೂರುರುವಾಚ-**

**ಕೋ ನು ಲೋಕೇ ಮನುಷ್ಯೇಂದ್ರ ಪಿತುರಾತ್ಮಕೃತಃ ಪುಮಾನ್ ।**
**ಪ್ರತಿಹರ್ತುಂ ಕ್ಷಮೋ ಯಸ್ಯ ಪ್ರಸಾದಾದ್ವಿಂದತೇ ಪರಮ್ ||೪೩||**

**ಮನುಷ್ಯೇಂದ್ರ** ಎಲೈ ರಾಜನೇ! **ಯಸ್ಯ** ಯಾವ ತಂದೆಯ **ಪ್ರಸಾದಾತ್** ಅನುಗ್ರಹದಿಂದ **ಪರಂ** ಪರಮಾತ್ಮನನ್ನು **ವಿಂದತೇ** ಹೊಂದುತ್ತಾನೆಯೋ ಅಂತಹ **ಆತ್ಮಕೃತಃ** ಶರೀರ ನಿರ್ಮಾತೃವಾದ **ಪಿತುಃ** ತಂದೆಗೆ **ಲೋಕೇ** ಲೋಕದಲ್ಲಿ **ಕೋ ನು ಪುಮಾನ್** ಯಾವ ಮನುಷ್ಯನು **ಪ್ರತಿಹರ್ತುಂ** ನಿರಾಕರಿಸಲು **ಕ್ಷಮಃ** ಸಮರ್ಥನಾದಾನು? ಆಗುವುದಿಲ್ಲ.

**ತಾತ್ಪರ್ಯ-** ಇಲ್ಲಿ ಹೇಳುವ ಪ್ರಮೇಯವೇನೆಂದರೆ ತಂದೆಯು ಕೇವಲ ಐಹಿಕವಾದ ದೇಹನಿರ್ಮಾಣಕ್ಕೆ ಮಾತ್ರ ಕಾರಣನಲ್ಲ, ಕಿಂತು ತಂದೆಯ ಪ್ರಸಾದದಿಂದ ಪರಮಾತ್ಮನನ್ನೂ ಕೂಡ ಹೊಂದುತ್ತಾನೆ ಎಂದು ಹೇಳುತ್ತಾರೆ.

ಯಾರು ರಾಜನ ಮುಪ್ಪನ್ನು ಸ್ವೀಕರಿಸುತ್ತಾರೋ ಅವರಿಗೆ ರಾಜ್ಯ ದೊರಕುತ್ತದೆ ಎಂದು ರಾಜನ ಪ್ರಾರ್ಥನೆ. ಮತ್ತು ಶುಕ್ರಾಚಾರ್ಯರ ಆಜ್ಞೆಯೂ ಕೂಡ ಇದೆ ಈ ವಿಷಯದಲ್ಲಿ ಮತ್ಸ್ಯಪುರಾಣದಲ್ಲಿ ಹೇಳಿದೆ.

**ಯಯಾತಿರುವಾಚ-**

**ರಾಜ್ಯಭಾಕ್ ಸಂಭವೇದ್ ಬ್ರಹ್ಮನ್ ಪುಣ್ಯಭಾಕ್ಕೀರ್ತಿಭಾಕ್ ತಥಾ ।**
**ಯೋ ದದ್ಯಾತ್ತು ವಯಃ ಪುತ್ರಸ್ತದ್ಭವಾನನುಮನ್ಯತಾಮ್ ॥**
**ವಯೋ ದಾಸ್ಯತಿ ಯಃ ಪುತ್ರಃ ಸ ವೈ ರಾಜಾ ಭವಿಷ್ಯತಿ ॥**

ಯಯಾತಿ ರಾಜನು ಹೇಳುತ್ತಾನೆ. ಯಾವನು ನನಗೆ ಯೌವ್ವನವನ್ನು ಕೊಡುತ್ತಾನೆಯೋ, ಅವನು ರಾಜ್ಯವನ್ನು ಹೊಂದುತ್ತಾನೆ. ಪುಣ್ಯವನ್ನು ಹೊಂದುತ್ತಾನೆ. ಕೀರ್ತಿಯನ್ನು ಹೊಂದುತ್ತಾನೆ.

**ತಾತ್ಪರ್ಯ-** ಅದನ್ನು ನೀನು ಅನುಮೋದಿಸು, ಯಾವನು ಯೌವ್ವನವನ್ನು ಕೊಡುತ್ತಾನೆಯೋ ಅಂತಹ ಶರೀರಕ್ಕೆ ಕಾರಣನಾದ ತಂದೆಗೆ ಯಾವ ಮಗನು ಲೋಕದಲ್ಲಿ ಉಪಕಾರ ಮಾಡದೇ ಇರುವನು? ಮಾಡೇ ಮಾಡುವನು. ।।೪೩।।

ನನಗೆ ಮೊದಲೇ ವಾರ್ತೆ ಗೊತ್ತಾಗಲಿಲ್ಲ. ಗೊತ್ತಾಗಿದ್ದರೆ ನಿನ್ನ ಆಜ್ಞೆಯಿಲ್ಲದಲೇ ಮುಪ್ಪನ್ನು ತೆಗೆದುಕೊಳ್ಳಲು ಸಾಧ್ಯ ಎಂದು ಪಶ್ಚಾತ್ತಾಪವನ್ನು ಅರ್ಥತಃ ಹೇಳುತ್ತಾನೆ.

**ಉತ್ತಮಶ್ಚಿಂತಿತಂ ಕುರ್ಯಾತ್ ಪ್ರೋಕ್ತಕಾರೀ ತು ಮಧ್ಯಮಃ ।**
**ಅಧಮೋಽಶ್ರದ್ಧಯಾ ಕುರ್ಯಾದಕರ್ತೋಚ್ಚರಿತಂ ಪಿತುಃ ।।೪೪।।**

**ಉತ್ತಮಃ** ಉತ್ತಮನಾದವನು **ಪಿತುಃ** ತಂದೆಯಿಂದ **ಚಿಂತಿತಂ** ವಿಚಾರ ಮಾಡಿದ್ದನ್ನು **ಕುರ್ಯಾತ್** ಮಾಡಬೇಕು. **ಪ್ರೋಕ್ತಕಾರೀ ತು** ಹೇಳಿದ್ದನ್ನು ಮಾಡುವನು **ಮಧ್ಯಮಃ** ಮಧ್ಯಮನು **ಅಧಮಃ** ಅಧಮನು **ಅಶ್ರದ್ಧಯಾ** ಅವಿಶ್ವಾಸದಿಂದ **ಕುರ್ಯಾತ್** ಮಾಡುತ್ತಾನೆ. **ಅಕರ್ತಾ** ಹೇಳಿದರೂ ಕೂಡಾ ಮಾಡದೇ ಇದ್ದವನು **ಪಿತುಃ** ತಂದೆಯ **ಉಚ್ಚರಿತಂ** ಪುರೀಷದಂತೆ, ಇದ್ದವನು,

ಪುರುವು ಮಾಡದೇ ಇದ್ದವನು ಪುರೀಷದಂತೆ ಎಂದು ಬೈದನು. ಇದರಿಂದ ಕೆಲಸ ಮಾಡದೇ ಇದ್ದ ತನ್ನ ಭ್ರಾತೃಗಳನ್ನು ತಂದೆಯ ಸಮರಾದ ಇವರನ್ನು ಪುರೀಷ ಎಂದು ಹೇಳಿದನು. ಆದ್ದರಿಂದ ಪ್ರತ್ಯವಾಯ ಪ್ರಾಪ್ತವಾಯಿತಲ್ಲ ಎಂದರೆ ಅದಕ್ಕೆ **ತು** ಶಬ್ದವನ್ನು ಇಟ್ಟಿದ್ದಾರೆ. ನಾಲ್ಕು ಮಂದಿ ಭ್ರಾತೃಗಳಿಗೆ ತಂದೆಯು ಶಾಪವನ್ನು ಕೊಟ್ಟಿದ್ದಾನೆ. ಆದ್ದರಿಂದ ಬೈದರೂ ಕೂಡಾ ಪ್ರತ್ಯವಾಯವಿಲ್ಲ.

**ತಾತ್ಪರ್ಯ-** ತಂದೆಯು ಮನಸ್ಸಿನಲ್ಲಿ ಚಿಂತಿಸಿದ್ದನ್ನು ಮಾಡುವನು ಉತ್ತಮನು. ಹೇಳಿದ್ದನ್ನು ಮಾಡುವನು ಮಧ್ಯಮನು. ಅಶ್ರದ್ಧೆಯಿಂದ ಮಾಡುವನು ಅಧಮನು. ಹೇಳಿದರೂ ಕೂಡ ಮಾಡದೇ ಇದ್ದವನು ಪುರೀಷದಂತೆ. ।।೪೪।।

**ಇತಿ ಪ್ರಮುದಿತಃ ಪೂರುಃ ಪ್ರತ್ಯಗೃಹ್ಣಾಜ್ಜರಾಂ ಪಿತುಃ ।**
**ಸೋಽಪಿ ತದ್ವಯಸಾ ಕಾಮಾನ್ಯಥಾವಜ್ಜುಜುಷೇ ನೃಪಃ ।।೪೫।।**

**ಇತಿ** ಈ ರೀತಿಯಾಗಿ **ಪ್ರಮುದಿತಃ** ಪಿತೃಸೇವೆಗೆ ಉಪಯುಕ್ತವಾದ ವಯಸ್ಸು ಆಯಿತು ಎಂದು ಸಂತೋಷಗೊಂಡ **ಪೂರುಃ** ಪೂರುವು **ಪಿತುಃ** ತಂದೆಯ **ಜರಾಂ** ಮುಪ್ಪನ್ನು **ಪ್ರತ್ಯಗೃಹ್ಣಾತ್** ಸ್ವೀಕಾರ ಮಾಡಿದನು. **ಸಃ ನೃಪಃ ಅಪಿ** ಆ ರಾಜನೂ ಕೂಡ

**ತದ್ವಯಸಾ** ಅವನ ಯೌವ್ವನದಿಂದ **ಕಾಮಾನ್** ವಿಷಯಸುಖಗಳನ್ನು **ಯಥಾವತ್** ಸ್ವೇಚ್ಛಾನುಸಾರವಾಗಿ **ಜುಜುಷೇ** ಭೋಗಿಸಿದನು.

**ತಾತ್ಪರ್ಯ-** ಪೂರುರಾಜನು ತನ್ನ ಯೌವ್ವನವು ತಂದೆಯ ಸೇವೆಗೆ ಉಪಯೋಗವಾಯಿತೆಂದು ಸಂತೋಷಗೊಂಡನು. ಮತ್ತು ತಂದೆಯ ಮುಪ್ಪನ್ನು ಸ್ವೀಕಾರ ಮಾಡಿದನು. ಯಯಾತಿರಾಜನೂ ಕೂಡ ವಿಷಯಸುಖಗಳನ್ನು ಅನುಭೋಗಿಸಿದನು. ||೪೫||

**ಸಪ್ತದ್ವೀಪಪತಿಃ ಸಮ್ಯಕ್ ಪಿತೃವತ್ಪಾಲಯನ್ ಪ್ರಜಾಃ |**
**ಯಥೋಪಜೋಷಂ ವಿಷಯಾನ್ ಜುಜೋಷಾವ್ಯಾಹತೇಂದ್ರಿಯಃ ||೪೬**

**ಸಪ್ತದ್ವೀಪಪತಿಃ** ಸಪ್ತದ್ವೀಪಕ್ಕೆ ಒಡೆಯನಾದ ಯಯಾತಿ ರಾಜನು **ಪ್ರಜಾಃ** ಪ್ರಜೆಗಳನ್ನು **ಸಮ್ಯಕ್** ಚೆನ್ನಾಗಿ **ಪಿತೃವತ್** ತಂದೆಯಂತೆ **ಪಾಲಯನ್** ರಕ್ಷಣೆ-ಮಾಡುತ್ತಾ **ಅವ್ಯಾಹತೇಂದ್ರಿಯಃ** ಅಪ್ರತಿಹತವಾದ ಇಂದ್ರಿಯ ಪಾಟವಶಕ್ತಿ ಉಳ್ಳವನಾಗಿ **ವಿಷಯಾನ್** ವಿಷಯಸುಖಗಳನ್ನು **ಯಥೋಪಜೋಷಂ** ತನ್ನಿಚ್ಛಾನು-ಸಾರವಾಗಿ **ಜುಜೋಷ** ಅನುಭವಿಸಿದನು.

**ತಾತ್ಪರ್ಯ-** ಯಯಾತಿರಾಜನು ಸಪ್ತದ್ವೀಪಕ್ಕೆ ಒಡೆಯನಾಗಿ ತಂದೆಯಂತೆ ಪ್ರಜೆಗಳನ್ನು ರಕ್ಷಿಸುತ್ತಾ ಇಂದ್ರಿಯಗಳ ಸಾಮರ್ಥ್ಯ ಕುಂದದವನಾಗಿ ವಿಷಯ-ಸುಖವನ್ನು ಅನುಭವಿಸಿದನು. ||೪೬||

**ದೇವಯಾನ್ಯಪ್ಯನುದಿನಂ ಮನೋವಾಗ್ದೇಹವಸ್ತುಭಿಃ |**
**ಪ್ರೇಯಸಃ ಪರಮಾಂ ಪ್ರೀತಿಮುವಾಹ ಪ್ರೇಯಸೀ ರಹಃ ||೪೭||**

**ಪ್ರೇಯಸೀ** ಪ್ರೀತ್ಯಾಸ್ಪದಳಾದ **ದೇವಯಾನ್ಯಪಿ** ದೇವಯಾನಿಯೂ ಕೂಡಾ **ಅನುದಿನಂ** ಪ್ರತಿನಿತ್ಯ **ಮನೋವಾಗ್ದೇಹವಸ್ತುಭಿಃ** ಮನಸ್ಸು, ವಾಕ್, ದೇಹ ಮೊದಲಾದ ಪ್ರೀತಿಸಾಧವಸ್ತುಗಳಿಂದ **ಪ್ರೇಯಸಃ** ಪತಿಯ **ಪರಮಾಂ** ಶ್ರೇಷ್ಠವಾದ **ಪ್ರೀತಿಂ** ಪ್ರೀತಿಯನ್ನು **ರಹಃ** ಏಕಾಂತದಲ್ಲಿ **ಉವಾಹ** ಹೊಂದಿದಳು.

**ತಾತ್ಪರ್ಯ-** ಪರಮಪ್ರೀತ್ಯಾಸ್ಪದಳಾದ ದೇವಯಾನಿಯೂ ಕೂಡ ಮನೋ, ವಾಕ್, ದೇಹ ಮುಂತಾದ ಪ್ರೀತಿಸಾಧನ ಪದಾರ್ಥಗಳಿಂದ ಪ್ರಿಯನ ಪ್ರೀತಿಯನ್ನು ಏಕಾಂತದಲ್ಲಿ ಹೊಂದಿದಳು. ||೪೭||

**ಅಯಜದ್ಯಜ್ಞಪುರುಷಂ ಕ್ರತುಭಿರ್ಭೂರಿದಕ್ಷಿಣೈಃ |**
**ಸರ್ವದೇವಮಯಂ ದೇವಂ ಸರ್ವವೇದಮಯಂ ಹರಿಮ್ ||೪೮||**

**ಭೂರಿದಕ್ಷಿಣೈಃ** ಬಹಳ ದಕ್ಷಿಣೆಯಿಂದ ಕೂಡಿದ **ಕ್ರತುಭಿಃ** ಯಜ್ಞಗಳಿಂದ **ಸರ್ವದೇವಮಯಂ** ಸರ್ವದೇವಪ್ರಧಾನವಾದ **ಸರ್ವವೇದಮಯಂ** ಸರ್ವವೇದ-ಪ್ರತಿಪಾದ್ಯನಾದ **ದೇವಂ** ಕ್ರೀಡಾದಿಗುಣವಿಶಿಷ್ಟನಾದ **ಯಜ್ಞಪುರುಷಂ** ಯಜ್ಞಪುರುಷನಾದ **ಹರಿಂ** ಪರಮಾತ್ಮನನ್ನು **ಆಯಜತ್** ಪೂಜೆ ಮಾಡಿದನು.

**ತಾತ್ಪರ್ಯ-** ಯಯಾತಿರಾಜನು ಸರ್ವದೇವಪ್ರಧಾನನಾದ ಸರ್ವವೇದ-ಪ್ರತಿಪಾದ್ಯನಾದ ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನನ್ನು ಯಜ್ಞಗಳಿಂದ ಪೂಜೆಮಾಡಿದನು. ವಿಶೇಷವಾಗಿ ದಕ್ಷಿಣಾದಿಗಳನ್ನು ಕೊಟ್ಟನು. ।।೪೮।।

**ಯಸ್ಮಿನ್ನಿದಂ ವಿಚರಿತಂ ವ್ಯೋಮ್ನೀವ ಜಲದಾವಲಿಃ ।**
**ನಾನೇವ ಭಾತಿ ನಾಭಾತಿ ಸ್ವಪ್ನಮಾಯಾಮನೋರಥಃ ।।೪೯।।**

**ಇದಂ** ಈ ಎಲ್ಲ ಜಗತ್ತು **ಜಲದಾವಲಿಃ** ಮೋಡವು **ವ್ಯೋಮ್ನೀವ** ಆಕಾಶವನ್ನು ಆಶ್ರಯಿಸಿದಂತೆ **ಯಸ್ಮಿನ್** ಪರಮಾತ್ಮನಲ್ಲಿ **ವಿಚರಿತಂ** ಸಂಬದ್ಧವಾಗಿದೆ. **ನಾನಾ** ನಾನಾವಿಧವಾದ ಜಗತ್ತು **ಭಾತಿ** ಸೃಷ್ಟಿಕಾಲದಲ್ಲಿ ತೋರುತ್ತದೆ. **ನ ಆಭಾತಿ** ಪ್ರಳಯಕಾಲದಲ್ಲಿ ತೋರುವದಿಲ್ಲ ಹೇಗೆಂದರೆ **ಸ್ವಪ್ನಮಾಯಾಮನೋರಥ ಇವ** ಸ್ವಪ್ನಪದಾರ್ಥವು ಸ್ವಪ್ನಕಾಲದಲ್ಲಿ ತೋರುತ್ತದೆ, ನಿದ್ರಾಕಾಲದಲ್ಲಿ ತೋರುವುದಿಲ್ಲ, ಅದರಂತೆ ಜಗತ್ತೂ ಕೂಡ.

**ತಾತ್ಪರ್ಯ-** ಈ ಎಲ್ಲ ಸಮಸ್ತ ಜಗತ್ತೂ ಕೂಡಾ ಮೋಡವು ಆಕಾಶವನ್ನು ಆಶ್ರಯಿಸುವಂತೆ, ಪರಮಾತ್ಮನನ್ನು ಆಶ್ರಯಿಸಿದೆ. ಮತ್ತು ಅನೇಕ ಪ್ರಕಾರವಾದ ಜಗತ್ತು, ಸ್ವಪ್ನ ಪದಾರ್ಥವು ಸ್ವಪ್ನಕಾಲದಲ್ಲಿ ಕಾಣುತ್ತದೆ. ನಿದ್ರಾಕಾಲದಲ್ಲಿ ಕಾಣುವದಿಲ್ಲ. ಅದರಂತೆ ಸೃಷ್ಟಿಕಾಲದಲ್ಲಿ ಕಾಣುತ್ತದೆ. ಪ್ರಲಯಕಾಲದಲ್ಲಿ ಕಾಣುವದಿಲ್ಲ. ಸ್ವಪ್ನಪದಾರ್ಥಗಳು ಐಂದ್ರಜಾಲಿಕ ಪದಾರ್ಥಗಳು ಮನೋರಥ-ಗಳಾಗಲಿ ಜಗತ್ತಿಗೆ ಅನಿತ್ಯ ವಿಕಾರ ಉಳ್ಳದ್ದು ಪರಾಧೀನ ಎನ್ನುವಲ್ಲಿ ದೃಷ್ಟಾಂತವೇ ಹೋರತು ಜ್ಞಾನದಿಂದ ನಿವೃತ್ತಿ ಆಗುತ್ತದೆಂದಲ್ಲಾ. ಜಗತ್ತು ಪರಮಾತ್ಮನಿಂದ ಸದಾ ನೋಡುತ್ತಿರುವದರಿಂದ ಸತ್ಯವೇ ಆಗಿದೆ ಎಂದು ಭಾವ ।।೪೯।।

**ತಮೇವ ಹೃದಿ ವಿನ್ಯಸ್ಯ ವಾಸುದೇವಂ ಗುಹಾಶಯಮ್ ।**
**ನಾರಾಯಣಮಣೀಯಾಂಸಂ ನಿರಾಶೀರಯಜತ್ ಪ್ರಭುಃ ।।೫೦।।**

**ನಿರಾಶೀಃ** ಅಪೇಕ್ಷಾರಹಿತನಾದ **ಪ್ರಭುಃ** ಯಯಾತಿರಾಜನು **ಗುಹಾಶಯಂ** ಹೃದಯಗುಹಾದಲ್ಲಿ ವಾಸುವಾಗಿರುವ **ಅಣೀಯಾಂಸಂ** ಅತ್ಯಂತ ಸೂಕ್ಷ್ಮನಾದ **ನಾರಾಯಣಂ** ಗುಣಪರಿಪೂರ್ಣನಾದ ದೋಷರಹಿತನಾದ **ತಮೇವ** ಆ

**ವಾಸುದೇವಂ** ವಾಸುದೇವನನ್ನು **ಹೃದಿ** ಹೃದಯದಲ್ಲಿ **ವಿನ್ಯಸ್ಯ** ಧ್ಯಾನಮಾಡುತ್ತಾ **ಅಯಜತ್** ಪೂಜೆ ಮಾಡಿದನು. ಯಜ್ಞ ಮಾಡಿದನು.

**ತಾತ್ಪರ್ಯ-** ಅಪೇಕ್ಷಾರಹಿತನಾದ ಯಯಾತಿರಾಜನು ಸರ್ವಹೃದಯಗುಹಾ-ವಾಸಿಯಾದ ಸೂಕ್ಷ್ಮನಾದ ಪರಮಾತ್ಮನನ್ನು ಧ್ಯಾನಮಾಡುತ್ತಾ ಪರಮಾತ್ಮನನ್ನು ಪೂಜೆ ಮಾಡಿದನು. ।।೫೦।।

**ಏವಂ ವರ್ಷಸಹಸ್ರಾಣಿ ಮನಃಷಷ್ಠೈಃ ಮನಃಸುಖಮ್ ।**
**ವಿದಧಾನೋಽಪಿ ನಾತೃಪ್ಯತ್ಸಾರ್ವಭೌಮಃ ಕದಿಂದ್ರಿಯೈಃ ।।೫೧।।**

**ಸಾರ್ವಭೌಮಃ** ರಾಜನಾದ ಯಯಾತಿ ರಾಜನು **ಏವಂ** ಈ ಪ್ರಕಾರವಾಗಿ **ವರ್ಷಸಹಸ್ರಾಣಿ** ಸಾವಿರ ವರ್ಷ ಪರ್ಯಂತರವಾಗಿ **ಮನಃಷಷ್ಠೈಃ** ಮನಸ್ಸು ಸಹಿತ ಆರು ಸಂಖ್ಯಾಕವಾದ **ಕದಿಂದ್ರಿಯೈಃ** ದುಷ್ಟೇಂದ್ರಿಯಗಳಿಂದ **ಮನಃಸುಖಂ** ಮನಸ್ಸಿನ ಸಂತೋಷವನ್ನು **ವಿದಧಾನೋಽಪಿ** ಮಾಡುವವನಾಗಿಯೂ **ನ ಅತೃಪ್ಯತ್** ತೃಪ್ತನಾಗಲಿಲ್ಲ.

ಈ ರೀತಿಯಾಗಿ ಸಾವಿರ ವರ್ಷಪರ್ಯಂತವಾಗಿ ದುಷ್ಟವಾದ ಸಪ್ತೇಂದ್ರಿಯ-ಗಳಿಂದ ಮನಸ್ಸಿನ ಸಂತೋಷವನ್ನು ಉಂಟುಮಾಡುವವನಾಗಿಯೂ ತೃಪ್ತಿಯನ್ನು ಹೊಂದಲಿಲ್ಲ. ।।೫೧।।

**।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಪಂಚದಶೋಽಧ್ಯಾಯಃ ।।**

★★★

## ಅಥ ಷೋಡಶೋಽಧ್ಯಾಯಃ

**ಶ್ರೀಶುಕ ಉವಾಚ-**

**ಸ ಇತ್ಥಮಾಚರನ್ ಕಾಮಾಂಸ್ತ್ರೈಣೋಽಪಹ್ನವಮಾತ್ಮನಃ ।**
**ಬುಧ್ವಾ ಪ್ರಿಯಾಯೈ ನಿರ್ವಿಣ್ಣೋ ಗಾಥಾಮೇತಾಮಗಾಯತ ॥೧॥**

**ಸ್ತ್ರೈಣಃ** ಸ್ತ್ರೀಜಿತನಾದ **ಸಃ** ಆ ಯಯಾತಿರಾಜನು **ಇತ್ಥಂ** ಈ ರೀತಿಯಾದ ಅಂದರೆ ಆ ತನ್ನ ಜ್ಞಾನನಾಶಕ್ಕೆ ಕಾರಣವಾದ **ಕಾಮಾನ್** ವಿಷಯಸುಖಗಳನ್ನು **ಆಚರನ್** ಭೋಗಿಸುವವನಾಗಿ **ಆತ್ಮನಃ** ತನ್ನ **ಅಪಹ್ನವಂ** ನಿತ್ಯಸುಖ ಹಾನಿರೂಪ-ನಾಶವನ್ನು **ಬುಧ್ವಾ** ತಿಳಿದು **ನಿರ್ವಿಣ್ಣಃ** ವಿರಕ್ತನಾಗಿ ಆಡಿನ ಕಥೆಯ ನೆಪದಿಂದ **ಏತಾಂ** ಈ ಬುದ್ಧಿಸನ್ನಿಹಿತವಾದ **ಗಾಥಾಂ** ಕಥೆಯನ್ನು, ಸ್ವವೃತ್ತಾಂತವನ್ನು **ಪ್ರಿಯಾಯೈ** ದೇವಯಾನಿಗೆ **ಅಗಾಯತ** ಹೇಳಿದನು. ।।೧।।

**ತಾತ್ಪರ್ಯ-** ಯಯಾತಿರಾಜನು ಸ್ತ್ರೀಜಿತನಾಗಿದ್ದ. ಅನೇಕವಿಷಯ-ಭೋಗಗಳನ್ನು ಅನುಭವಿಸಿದ. ಕೊನೆಗೆ ವಿಷಯಸುಖ ಇದು ಅಸಾರ ಎಂಬುದಾಗಿ ತಿಳಿದ. ವಿಷಯಸುಖಗಳಿಂದ ಆಗುವ ಅನರ್ಥ ಏನೆಂಬುದನ್ನೂ ತಿಳಿದ. ಅತಿಶಯವಾದ ವಿಷಯಭೋಗ ಜ್ಞಾನದ ನಾಶಕ್ಕೆ ಕಾರಣವಾಗಿದೆ. ನಿತ್ಯಸುಖದ ಹಾನಿಗೆ ವಿಷಯಭೋಗಗಳು ಕಾರಣವಾಗಿದೆ. ಎಂಬುದನ್ನು ಮನಗಂಡ. ವಿಷಯಗಳಲ್ಲಿ ವಿರಕ್ತನಾದ. ಆಡಿನ ಕಥೆಯ ನೆಪದಿಂದ ತನ್ನ ವೃತ್ತಾಂತವನ್ನೇ ದೇವಯಾನಿಗೆ ಹೇಳಿದ.

**ಶೃಣು ಭಾರ್ಗವ್ಯಮೂಂ ಗಾಥಾಂ ಮದ್ವಿಧಾಚರಿತಾಂ ಭುವಿ ।**
**ಧೀರಾ ಯಸ್ಯಾನುಶೋಚಂತಿ ವನೇ ಗ್ರಾಮನಿವಾಸಿನಃ ॥೨॥**

**ಭಾರ್ಗವಿ** ಭೃಗುಕುಲೋತ್ಪನ್ನಳಾದ ದೇವಯಾನಿಯೇ! **ಭುವಿ** ಭೂಮಿಯಲ್ಲಿ **ಮದ್ವಿಧಾಚರಿತಾಂ** ನನ್ನಂತಹ ಸ್ತ್ರೈಣರಿಂದ ಮಾಡಲ್ಪಟ್ಟ **ಅಮೂಂ** ಈ **ಗಾಥಾಂ** ಇತಿಹಾಸವನ್ನು **ಶೃಣು** ಕೇಳು. **ಗ್ರಾಮನಿವಾಸಿನಃ** ಪೂರ್ವದಲ್ಲಿ ಗ್ರಾಮವಾಸಿಗಳಾದ **ವನೇ ಧೀರಾಃ** ಸಂಸಾರ ಅಸಾರ ಎಂಬ ಜ್ಞಾನದಿಂದ ವನವಾಸಿಗಳಾದ ಮುನಿಗಳು **ಯಸ್ಯ ಗ್ರಾಮನಿವಾಸಿನಃ** ಕಾಮಿಯಾದ ಗೃಹಸ್ಥನ ಆಚರಣವನ್ನು ನೋಡಿ **ಅನುಶೋಚಂತಿ** ವ್ಯರ್ಥವಾಗಿ ನಾಶವಾಗುತ್ತಾನೆ ಎಂದು ದುಃಖಿಸುತ್ತಾರೆ.

**ತಾತ್ಪರ್ಯ-** ಎಲ್ಲೈ ಭೃಗುಕುಲೋತ್ಪನ್ನಳಾದ ದೇವಯಾನಿಯೇ! ಪೂರ್ವದಲ್ಲಿ ಗ್ರಾಮವಾಸಿಗಳಾಗಿ, ನಂತರ ಸಂಸಾರಾಸಾರತೆಯನ್ನು ಕಂಡು ವನವಾಸಿಗಳಾದ ಮುನಿಗಳು, ಕಾಮಿಯಾದ ಗೃಹಸ್ಥನ ಜೀವನವನ್ನು ನೋಡಿ ಇವನು ವ್ಯರ್ಥವಾಗಿ ನಾಶವಾಗುತ್ತಾನೆ ಎಂದು ಮಮ್ಮಲ ಮರುಗುವ ಇತಿಹಾಸವನ್ನು ಕೇಳು. ।।೨।।

**ಬಸ್ತ ಏಕೋ ವನೇ ಕಶ್ಚಿದ್ವಿಚಿನ್ವನ್ ಪ್ರಿಯಮಾತ್ಮನಃ ।**
**ದದರ್ಶ ಕೂಪೇ ಪತಿತಾಂ ಸ್ವಕರ್ಮವಶಗಾಮಜಾಮ್ ॥೩॥**

**ವನೇ** ಅರಣ್ಯದಲ್ಲಿ **ಏಕಃ** ನಿಸ್ಸಹಾಯವಾದ **ಬಸ್ತಃ** ಆಡು **ಆತ್ಮನಃ** ತನಗೆ **ಪ್ರಿಯಂ** ಪ್ರಿಯವಾದ ಪದಾರ್ಥವನ್ನು **ವಿಚಿನ್ವನ್** ಹುಡುಕುತ್ತಾ **ಕೂಪೇ** ಭಾವಿಯಲ್ಲಿ **ಪತಿತಾಂ** ಬಿದ್ದಿರುವ **ಸ್ವಕರ್ಮವಶಗಾಂ** ತನ್ನ ಕರ್ಮಾನುಸಾರವಾಗಿ ಲಭಿಸಿದ **ಅಜಾಂ** ಹೆಣ್ಣು ಆಡನ್ನು **ದದರ್ಶ** ನೋಡಿತು.

**ತಾತ್ಪರ್ಯ–** ಅಡವಿಯಲ್ಲಿ ಸಹಾಯರಹಿತವಾದ ಆಡು ತನಗೆ ಅಪೇಕ್ಷಿತವಾದ ವಸ್ತುವನ್ನು ಅರಸುತ್ತಾ ಕೂಪದಲ್ಲಿ ಬಿದ್ದಿರುವ ತನ್ನ ಕರ್ಮಾನುಸಾರವಾಗಿ ಲಬ್ಧವಾದ ಹೆಣ್ಣಾಡನ್ನು ನೋಡಿತು. ॥೩॥

**ತಸ್ಯಾ ಉದ್ಧರಣೋಪಾಯಂ ಬಸ್ತಃ ಕಾಮೀ ವಿಚಿಂತಯನ್ ।**
**ನಿವರ್ತ್ಯ ತೀರ್ಥ ಉದ್ಧೃತ್ಯ ವಿಷಾಣಾಗ್ರೇಣ ರೋಧಸಿ ।**
**ಸೋತ್ತೀರ್ಯ ಕೂಪಾತ್ಸುಶ್ರೋಣೀ ತಮೇವ ಚಕಮೇ ಕಿಲ ॥೪॥**

**ಕಾಮೀ** ಕಾಮಿಯಾದ **ಬಸ್ತಃ** ಆಡು **ತಸ್ಯಾಃ** ಹೆಣ್ಣಾಡಿನ **ಉದ್ಧರಣೋಪಾಯಂ** ಭಾವಿಯಿಂದ ಮೇಲೇತ್ತುವ ಉಪಾಯವನ್ನು **ವಿಚಿಂತಯನ್** ವಿಚಾರ ಮಾಡುತ್ತಾ **ತೀರ್ಥೇ** ಕೂಪಜಲದಲ್ಲಿ **ನಿವರ್ತ್ಯ** ಸ್ವಲ್ಪ ಇಳಿದು **ವಿಷಾಣಾಗ್ರೇಣ** ಕೋಡಿನ ತುದಿಯಿಂದ **ಉದ್ಧೃತ್ಯ** ಮೇಲೇತ್ತಿ **ರೋಧಸಿ** ದಂಡೆಯ ಮೇಲೆ **(ವ್ಯಧತ್ತ)** ಇಟ್ಟಿತು **ಸಾ** ಆ ಹೆಣ್ಣಾಡು **ಕೂಪಾತ್** ಭಾವಿಯಿಂದ **ಉತ್ತೀರ್ಯ** ಮೇಲೆದ್ದು ಬಂದು **ತಮೇವ** ಆ ಅಜವನ್ನೇ **ಚಕಮೇ** ವಿವಾಹ ಮಾಡಿಕೊಂಡಿತು. **ಕಿಲ** ಪ್ರಸಿದ್ಧವಷ್ಟೇ .

**ತಾತ್ಪರ್ಯ–** ಗಂಡಾಡು ಭಾವಿಯಲ್ಲಿ ಬಿದ್ದ ಹೆಣ್ಣಾಡನ್ನು ಹೇಗೆ ಮೇಲೆತ್ತುವದು? ಎನ್ನುವದನ್ನು ವಿಚಾರ ಮಾಡುತ್ತಾ , ನೀರಿನಲ್ಲಿ ಇಳಿದು ಕೋಡಿನಿಂದ ಮೇಲೆತ್ತಿ ತಂದು ದಂಡೆಯಲ್ಲಿ ಹಾಕಿತು. ಮೇಲೆ ಬಂದ ಆ ಹೆಣ್ಣಾಡು ತನ್ನನ್ನು ಮೇಲೆತ್ತಿದ ಗಂಡಾಡನ್ನೇ ವಿವಾಹಮಾಡಿಕೊಂಡಿತು. ॥೪॥

**ತಯಾ ವೃತಂ ಸಮುದ್ವೀಕ್ಷ್ಯ ಬಹ್ವ್ಯೋಽಜಾಃ ಕಾಂತಕಾಮಿನೀಃ ।**
**ಪೀವಾನಂ ಶ್ಮಶ್ರುಲಂ ಪ್ರೇಷ್ಠಂ ಮೀಢ್ವಾಂಸಂ ಯಾವಕೋವಿದಮ್ ॥೫॥**

**ಬಹ್ವ್ಯಃ ಅಜಾಃ** ಇನ್ನೂ ಕೆಲವು ಹೆಣ್ಣಾಡುಗಳು **ತಯಾ** ಆ ಒಂದು ಆಡಿನಿಂದ **ವೃತಂ** ವಿವಾಹಗೊಂಡ **ಪೀವಾನಂ** ಪುಷ್ಟವಾದ **ಪ್ರೇಷ್ಠಂ** ಶ್ರೇಷ್ಠವಾದ **ಶ್ಮಶ್ರುಲಂ** ಬಹಳ ಮೀಸೆಯುಳ್ಳ **ಮೀಢ್ವಾಂಸಂ** ರೇತಃಸೇಚನ ಮಾಡುವದಕ್ಕೆ ಸಮರ್ಥವಾದ **ಯಾವಕೋವಿದಂ** ಯಾವನ್ನ ಭಕ್ಷಣದಲ್ಲಿ ಸಮರ್ಥವಾದ, ಗೋಧೂಮ ಭಕ್ಷಣದಲ್ಲಿ

ಸಮರ್ಥವಾದ, ಗಂಡು ಮೇಕೆಯನ್ನು **ಸಮುದ್ವೀಕ್ಷ್ಯ** ನೋಡಿ **ಕಾಂತಕಾಮಿನೀಃ** ಪತಿಯನ್ನು ಅಪೇಕ್ಷೆ ಮಾಡುವವರು **ಅಭವನ್** ಆದರು.

**ತಾತ್ಪರ್ಯ-** ಇನ್ನೂ ಕೆಲವು ಹೆಣ್ಣು ಮೇಕೆಗಳು, ಒಂದು ಹೆಣ್ಣು ಮೇಕೆಯಿಂದ ವಿವಾಹವಾದ ದಷ್ಟಪುಷ್ಟವಾದ ಶ್ರೇಷ್ಠವಾದ ಒಳ್ಳೆಯ ಮೀಸೆಯುಳ್ಳ ಮತ್ತು ಸ್ವಾಮಿಯಾದ ಮೈಥುನಕುಶಲನಾದ ಯಾವಾನ್ನಭಕ್ಷಕನಾದ ಬಸ್ತವನ್ನು ನೋಡಿ ತಮಗೆ ಪತಿಯಾಗಬೇಕೆನ್ನುವ ಅಪೇಕ್ಷೆ ಉಳ್ಳವರಾದರು.

ಶ್ಲೋಕದಲ್ಲಿ ''ಯಾವಕೋವಿದಂ'' ಮತ್ತು ''ಯಾಭಕೋವಿದಂ'' ಎಂದು ಈ ರೀತಿಯಾಗಿ, ಎರಡು ಪಾಠಾಂತರವಿದೆ. ಯಾವಕೋವಿದಂ ಎಂದರೆ ಯಾವಾನ್ನಭಕ್ಷಕನೆಂದರ್ಥ. ''ಯಾಭಕೋವಿದಂ'' ಎಂದರೆ ಮೈಥುನ ಕುಶಲನೆಂದರ್ಥ. ಇಲ್ಲಿ ವಿಜಯಧ್ವಜರು ''ಯಾಭಕೋವಿದಂ'' ಎನ್ನುವದು ಬೇಕಿಲ್ಲ. ಯಾಕೆಂದರೆ ''ಮೀಢ್ವಾಂಸಂ'' ಎನ್ನುವದರಿಂದಲೇ, ರೇತಃಸೇಚಕ ಎನ್ನುವ ಅರ್ಥ ಸಿದ್ಧಿಸುತ್ತದೆ. ಇದರಿಂದಲೇ ಆ ಶಬ್ದದ ಅರ್ಥವೂ ಕೂಡ ಆಗುತ್ತದೆ. ಆದ್ದರಿಂದ ಗತಾರ್ಥ ಎಂದಿದ್ದಾರೆ. ಆದರೆ ಗತಾರ್ಥತಾ ಬರುವದಿಲ್ಲ. ''ಮೀಢ್ವಾಂಸಂ'' ಎನ್ನುವದಕ್ಕೆ ಕೇವಲ ಅಭಿಲಷಿತಸೇಚಕ, ದಾತಾ, ಸ್ವಾಮೀ ಎಂದು ಅರ್ಥ. ''ಯಾವಭಕೋವಿದಂ'' ಎನ್ನುವದಕ್ಕೆ ಮೈಥುನಕುಶಲ ಎಂದು ಅರ್ಥ ಹೇಳಬಹುದು. ಯಾವ ದೋಷವೂ ಬರುವದಿಲ್ಲ. ಈ ರೀತಿಯಾದ ಅರ್ಥವನ್ನು ಟೀಕಾಕೃತ್ಪಾದಕರು ಋಗ್ಭಾಷ್ಯಟೀಕಾದಲ್ಲಿ ''ಮೀಢ್ವಾನಸ್ಮಾಕಂ ಭೂಯಾತ್'' ಎನ್ನುವ ಶ್ರುತಿವ್ಯಾಖ್ಯಾನ ಮಾಡುವಾಗ, ''ಮೀಢ್ವಾನ್ ಸೇಚಕಃ ದಾತಾ ಸ್ವಾಮೀ ಚ'' ಎಂದು ವ್ಯಾಖ್ಯಾನ ಮಾಡಿದ್ದಾರೆ. ಎಂದು ಶ್ರೀಸತ್ಯಧರ್ಮ ಶ್ರೀಪಾದಂಗಳವರು ಈ ವಿಷಯವನ್ನು ತಿಳಿಸಿದ್ದಾರೆ. ।।೫।।

**ಸ ಏಕೋಽಜ ವೃಷಸ್ತಾಸಾಂ ಬಹ್ವೀನಾಂ ರತಿವರ್ಧನಃ ।**
**ರೇಮೇ ಕಾಮಗ್ರಹಗ್ರಸ್ತ ಆತ್ಮಾನಂ ನಾವಬುದ್ಧ್ಯತ ।।೬।।**

**ವೃಷಃ** ಗಂಡಾದ, **ಸಃ** ಆ **ಏಕಃ** ಒಂದಾದ **ಅಜಃ** ಆಡು, **ಬಹ್ವೀನಾಂ** ಅನೇಕರಾದ, **ತಾಸಾಂ** ಆ ಹೆಣ್ಣು ಆಡುಗಳ, **ರತಿವರ್ಧನಃ** ರತಿವರ್ಧಕನಾದ, ಆ ಗಂಡು ಆಡು **ಕಾಮಗ್ರಹಗ್ರಸ್ತಃ** ಕಾಮಪಿಶಾಚಪೀಡಿತನಾಗಿ, **ಆತ್ಮಾನಂ** ತನ್ನನ್ನೂ ಪರಮಾತ್ಮನನ್ನೂ **ನ ಅವಬುದ್ಧ್ಯತ** ತಿಳಿಯಲಿಲ್ಲ.

**ತಾತ್ಪರ್ಯ-** ಆ ಒಬ್ಬನೇ ಆದ ಗಂಡು ಆಡು ಅನೇಕ ಹೆಣ್ಣು ಆಡುಗಳಿಗೆ ರತಿಸುಖವರ್ಧಕನಾಗಿ ಕಾಮದಿಂದ ಪೀಡಿತನಾಗಿ ಪರಮಾತ್ಮನನ್ನು ತನ್ನನ್ನೂ ತಿಳಿದುಕೊಳ್ಳಲಿಲ್ಲ. ।।೬।।

**ತಮೇವ ವ್ರಜ್ಯತಮಯಾ ರಮಮಾಣಮಜಾನ್ಯಯಾ ।**
**ವಿಲೋಕ್ಯ ರೂಪಸಂಲಗ್ನಾ ನಾಮೃಷ್ಯದ್ಬಸ್ತಕರ್ಮ ತತ್ ॥೭॥**

**ವ್ರಜ್ಯತಮಯಾ** ಹೊಂದಲಿಕ್ಕೆ ಯೋಗ್ಯಳಾದ, **ಅನ್ಯಯಾ** ಬೇರೆಯವಳಾದ ಹೆಣ್ಣು ಆಡಿನಿಂದ ಕೂಡಿ, **ರಮಮಾಣಂ** ವಿಹರಿಸುತ್ತಿರುವ **ತಂ** ಆ ಗಂಡು ಆಡನ್ನು **ವಿಲೋಕ್ಯ** ನೋಡಿ, **ರೂಪಸಂಲಗ್ನಾ** ರೂಪವತಿಯಾದ **ಅಜಾ** ಆ ಹೆಣ್ಣು ಆಡು **ತತ್ ಬಸ್ತ ಕರ್ಮ** ಆ ಗಂಡಾಡಿನ ಕೆಲಸವನ್ನು **ನ ಅಮೃಷ್ಯತ್** ಸಹಿಸಲಿಲ್ಲ.

**ತಾತ್ಪರ್ಯ-** ಆ ಗಂಡು ಆಡು ಮತ್ತೊಂದು ಯೋಗ್ಯವಾದ ಹೆಣ್ಣಾಡಿನ ಸಂಗ ಮಾಡಿತು. ಆ ಗಂಡು ಆಡು ಮಾಡಿದ ಕರ್ಮ ರೂಪವತಿಯಾದ ಮೊದಲ ಹೆಣ್ಣು ಆಡಿಗೆ ಸಹನೆಯಾಗಲಿಲ್ಲ. ॥೭॥

**ತಂ ದುರ್ಹೃದಂ ಸುಹೃದ್ರೂಪಂ ಕಾಮಿನಂ ಕ್ಷಣಸೌಹೃದಮ್ ।**
**ಇಂದ್ರಿಯಾರಾಮಮುತ್ಸೃಜ್ಯ ಸ್ವಾಮಿನಂ ದುಃಖಿತಾ ಯಯೌ ॥೮॥**

**ದುರ್ಹೃದಂ** ದುಷ್ಟಮನಸ್ಸುಳ್ಳ, **ಸುಹೃದ್ರೂಪಂ** ಸ್ನೇಹರೂಪನಾದ, **ಕ್ಷಣಸೌಹೃದಂ** ಕ್ಷಣಕಾಲ ಸೌಹಾರ್ದವುಳ್ಳ **ಕಾಮಿನಂ** ಕಾಮಿಯಾದವನನ್ನು **ಇಂದ್ರಿಯಾರಾಮಂ** ಇಂದ್ರಿಯಗಳನ್ನು ಸುಖಪಡಿಸುವವನನ್ನು, **ಉತ್ಸೃಜ್ಯ** ಬಿಟ್ಟು **ಸ್ವಾಮಿನಂ** ಸ್ವಾಮಿಯನ್ನು (ತಂದೆಯನ್ನು) **ದುಃಖಿತಾ** ದುಃಖಿತಳಾಗಿ, **ಯಯೌ** ಹೊಂದಿದಳು.

**ತಾತ್ಪರ್ಯ-** ದುಷ್ಟ ಮನಸ್ಸುಳ್ಳ, ಸ್ನೇಹರೂಪನಾದ ಕ್ಷಣಮಾತ್ರ ಸೌಹಾರ್ದವುಳ್ಳ ಕಾಮಿಯಾದ ಸುಖದಲ್ಲಿ ಅತಿಸಕ್ತನಾದ ಇಂದ್ರಿಯಗಳನ್ನು ಸುಖಪಡಿಸುವನನ್ನು ಬಿಟ್ಟು ಸ್ವಾಮಿಯಾದ ತಂದೆಯನ್ನು ದುಃಖಿತಳಾಗಿ ಸೇರಿದಳು. ॥೮॥

**ಸೋಽಪಿ ಚಾನುಗತಃ ಸ್ತ್ರೈಣಃ ಕೃಪಣಸ್ತಾಂ ಪ್ರಸಾದಿತುಮ್ ।**
**ಕುರ್ವನ್ನಿಲಿಬಿಲಾಕಾರಂ ನಾಶಕ್ನೋತ್ಪಥಿ ಸಂಧಿತುಮ್ ॥೯॥**

**ಕೃಪಣಃ** ಕೃಪಣನಾದ, **ಸ್ತ್ರೈಣಃ** ಸ್ತ್ರೀಲೋಲನಾದ, **ಸಃ** ಅವನಾದರೂ **ತಾಂ** ಅವಳನ್ನು, **ಪ್ರಸಾದಿತುಂ** ಪ್ರಸನ್ನೀಕರಿಸಲು, **ಅನುಗತಃ** ಹಿಂಬಾಲಿಸಿದನು. **ವಿಲಿಬಿಲಾಕಾರಂ** ಸೀತ್ಕಾರ ಶಬ್ದವನ್ನು, **ಪಥಿ** ಮಾರ್ಗದಲ್ಲಿ **ಕುರ್ವನ್** ಮಾಡುತ್ತಾ **ಸಂಧಿತುಂ** ಸಮಾಧಾನಗೊಳಿಸಲು **ನಾಶಕ್ನೋತ್** ಶಕ್ತನಾಗಲಿಲ್ಲ.

**ತಾತ್ಪರ್ಯ-** ಕೃಪಣನಾದ ಸ್ತ್ರೀಜಿತನಾದ ಆ ಗಂಡು ಆಡು ಅವಳನ್ನು ಹಿಂಬಾಲಿಸ್ತುತಾ, ಮಾರ್ಗದಲ್ಲಿ ಸೀತ್ಕಾರ ಮಾಡುತ್ತಾ ಬಹುಪ್ರಯತ್ನ ಮಾಡಿದರೂ ಅವಳನ್ನು ಸಂತೈಸಲು ಶಕ್ತನಾಗಲಿಲ್ಲ. ॥೯॥

**ತಸ್ಯ ತತ್ರ ದ್ವಿಜಃ ಕಶ್ಚಿದಜಸ್ವಾಮ್ಯಚ್ಛಿನದ್ರುಷಾ ।**
**ಲಂಬಂ ತಂ ವೃಷಣಂ ಭೂಯಃ ಸಂದಧೇಽರ್ಥಾಯ ಯೋಗವಿತ್॥೧೦॥**

**ಅಜಸ್ವಾಮೀ** ಹೆಣ್ಣು ಆಡಿಗೆ ಸ್ವಾಮಿಯಾದ **ಕಶ್ಚಿತ್** ಒಬ್ಬ **ದ್ವಿಜಃ** ಬ್ರಾಹ್ಮಣನು **ರುಷಾ** ಸಿಟ್ಟಿನಿಂದ **ತತ್ರ** ಅಲ್ಲಿ **ತಸ್ಯ** ಆ ಗಂಡು ಆಡಿನ **ಲಂಬಂ** ಜೋತು ಬಿದ್ದಿರುವ **ವೃಷಣಂ** ಗುಹ್ಯಂದ್ರಿಯವನ್ನು, **ಅಚ್ಛಿನತ್** ಶಸ್ತ್ರದಿಂದ ಕತ್ತರಿಸಿದನು. (ಬೇರೆ ಸ್ತ್ರೀಯೊಂದಿಗೆ ಸಂಭೋಗ ಸಾಮರ್ಥ್ಯವನ್ನು) **ಯೋಗವಿತ್** ಉಪಾಯವನ್ನು ತಿಳಿದ ಆತನು, **ಅರ್ಥಾಯ** ತನ್ನ ಮಗಳ ಸಂಭೋಗ ಲಕ್ಷಣ ಪ್ರಯೋಜನಕ್ಕಾಗಿ **ಭೂಯಃ** ಮತ್ತೆ **ಸಂದಧೇ** ಕೂಡಿಸಿದನು.

**ತಾತ್ಪರ್ಯ-** ಆ ಹೆಣ್ಣು ಆಡಿನ ತಂದೆಯಾದ ಒಬ್ಬ ಬ್ರಾಹ್ಮಣನು ಆ ಗಂಡು ಆಡಿನ ಲಂಬಾಯಮಾನವಾದ ಗುಹ್ಯೇಂದ್ರಿಯವನ್ನು ಶಸ್ತ್ರದಿಂದ ಕತ್ತರಿಸಿದನು. ಉಪಾಯವನ್ನು ತಿಳಿದ ಆತನು ತನ್ನ ಮಗಳಲ್ಲಿ ಮೈಥುನಲಕ್ಷಣ ಪ್ರಯೋಜನ-ಕ್ಕಾಗಿ ತನ್ನ ಯೋಗದಿಂದ ಸಮರ್ಥವನ್ನಾಗಿ ಮಾಡಿದನು. ॥೧೦॥

**ಸಂವೃದ್ಧವೃಷಣಃ ಸೋಽಪಿ ಹ್ಯಜಯಾ ಕೂಪಲಬ್ಧಯಾ ।**
**ಕಾಲಂ ಬಹುತಿಥಂ ಭದ್ರೇ ಕಾಮ್ಯೈರ್ನಾದ್ಯಾಪಿ ತುಷ್ಯತಿ ॥೧೧॥**

**ಸಂವೃದ್ಧವೃಷಣಃ** ವೃದ್ಧಿ ಹೊಂದಿದ ಗುಹ್ಯೇಂದ್ರಿಯ ಉಳ್ಳ, **ಸಃ ಅಪಿ** ಅವನಾದರೂ, **ಕೂಪಲಬ್ಧಯಾ** ಕೂಪದಲ್ಲಿ ದೊರೆತ **ಅಜಯಾ** ಆ ಹೆಣ್ಣು ಆಡಿನಿಂದ ಕೂಡಿಕೊಂಡು **ಬಹುತಿಥಂ** ಅನೇಕ ದಿನಗಳವರೆಗೂ **ರಮಮಾಣೋಽಪಿ** ರಮಿಸಿದರೂ ಸಹ, **ಅದ್ಯಾಪಿ** ಈಗಲೂ ಸಹ, **ಕಾಮ್ಯೈಃ** ಕಾಮಗಳಿಂದ, **ನ ತುಷ್ಯತಿ** ತೃಪ್ತಿಯನ್ನು ಹೊಂದಿರುವುದಿಲ್ಲ.

**ತಾತ್ಪರ್ಯ-** ಮಂಗಳಕರಳೇ! ಆತನ ಗುಹ್ಯೇಂದ್ರಿಯವು ಪುನಃ ವೃದ್ಧಿ ಹೊಂದಲು, ಕೂಪದಲ್ಲಿ ದೊರೆತ ಹೆಣ್ಣು ಆಡಿನೊಂದಿಗೆ ಬಹುಕಾಲ ರಮಿಸಿದರೂ ಸಹ ಈಗಲೂ ತೃಪ್ತಿಯನ್ನು ಹೊಂದಿರುವುದಿಲ್ಲ. ॥೧೧॥

**ತಥಾಹಂ ಕೃಪಣಃ ಸುಭ್ರೂ ಭವತ್ಯಾಃ ಪ್ರೇಮಯಂತ್ರಿತಃ ।**
**ಆತ್ಮಾನಂ ನಾಭಿಜಾನಾಮಿ ಮೋಹಿತಸ್ತವ ಮಾಯಯಾ ॥೧೨॥**

**ಸುಭ್ರೂ** ಸುಂದರ ಹುಬ್ಬುಗಳು ಉಳ್ಳವಳೇ! **ತಥಾ** ಗಂಡು ಆಡಿನಂತೆಯೇ **ಕೃಪಣಃ** ಕೃಪಣನಾದ **ಅಹಂ** ನಾನು **ಭವತ್ಯಾಃ** ನಿನ್ನ **ಪ್ರೇಮಯಂತ್ರಿತಃ** ಪ್ರೇಮದಿಂದ ಪ್ರೇರಿತನಾಗಿ, **ತವ** ನಿನ್ನ **ಮಾಯಯಾ** ಶೃಂಗಾರವಿಲಾಸದಿಂದ, **ಮೋಹಿತಃ** ಮೋಹಿತನಾಗಿ, **ಆತ್ಮಾನಂ** ಪರಮಾತ್ಮನನ್ನು **ನಾಭಿಜಾನಾಮಿ** ತಿಳಿಯಲಿಲ್ಲ.

**ತಾತ್ಪರ್ಯ-** ಸುಂದರಿಯೇ! ಕೃಪಣನಾದ ನಾನು ನಿನ್ನ ಪ್ರೇಮದಿಂದ ಪ್ರೇರಿತನಾಗಿ, ನಿನ್ನ ಹಾವಭಾವದಿಂದ, ಮೋಹಿತನಾಗಿ, ಪರಮಾತ್ಮನನ್ನೂ ತಿಳಿಯಲಿಲ್ಲ. ||೧೨||

**ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ |**
**ನ ದುಹ್ಯಂತಿ ಮನಃ ಪ್ರೀತಿಂ ಪುಂಸಃ ಕಾಮಹತಸ್ಯ ಮೇ ||೧೩||**

**ಕಾಮಹತಸ್ಯ** ಕಾಮಪೀಡಿತನಾದ **ಪುಂಸಃ** ಪುರುಷನಾದ, **ಮೇ** ನನಗೆ **ಪೃಥಿವ್ಯಾಂ** ಭೂಮಂಡಲದಲ್ಲಿರುವ **ವ್ರೀಹಿಯವಂ** ಭತ್ತ, ಅಕ್ಕಿ, **ಹಿರಣ್ಯಂ** ಬಂಗಾರ **ಪಶವಃ** ಪಶುಗಳು, **ಸ್ತ್ರಿಯಃ** ಸ್ತ್ರೀಯರುಗಳು, **ಪ್ರೀತಿಂ** ತೃಪ್ತಿಯನ್ನು **ನ ದುಹ್ಯಂತಿ** ಪೂರ್ಣಗೊಳಿಸುವುದಿಲ್ಲ.

**ತಾತ್ಪರ್ಯ-** ಕಾಮಪೀಡಿತನಾದ ಪುರುಷನಾದ ನನಗೆ ಭೂಮಂಡಲದಲ್ಲಿರುವ ಭತ್ತ, ಅಕ್ಕಿ, ಬಂಗಾರ, ಪಶು, ಸ್ತ್ರೀಯರುಗಳು ಎಷ್ಟಿದ್ದರೂ ನನ್ನ ಮನಸ್ಸಿನ ತೃಪ್ತಿಯನ್ನು ಪಡಿಸುವುದಿಲ್ಲ. ||೧೩||

**ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ |**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ||೧೪||**

**ಕಾಮಃ** ಆಸೆಯು, **ಜಾತು** ಯಾವಾಗಲಾದರೂ, **ಕಾಮಾನಾಂ** ವಿಷಯ ಸುಖಗಳ, **ಉಪಭೋಗೇನ** ಉಪಭೋಗದಿಂದ, **ನ ಶಾಮ್ಯತಿ** ಶಾಂತವಾಗುವುದಿಲ್ಲ. **ಪ್ರತ್ಯುತ ಕೃಷ್ಣವರ್ತ್ಮಾ** ಅಗ್ನಿಯು, **ಹವಿಷಾ ಇವ** ತುಪ್ಪದಿಂದ ಹೇಗೋ ಹಾಗೆ **ಭೂಯಃ ಏವ** ಪುನಃ ಪುನಃ **ಅಭಿವರ್ಧತೇ** ವೃದ್ಧಿಯನ್ನು ಹೊಂದುತ್ತದೆ.

**ತಾತ್ಪರ್ಯ-** ಆಸೆ ಎಂಬುದು ಯಾವಾಗಲೂ ಉಪಭೋಗದಿಂದ ಶಾಂತವಾಗುವುದಿಲ್ಲ. ಹೇಗೆಂದರೆ ಹವಿಸ್ಸಿನಿಂದ ಅಗ್ನಿಯು ಶಾಂತವಾಗದಂತೆ ಆಸೆ ಶಾಂತವಾಗುವುದಿಲ್ಲ. ಅಷ್ಟೇ ಅಲ್ಲ ಬೆಳೆಯುತ್ತಲೇ ಹೋಗುವದು. ||೧೪||

ಹಾಗಾದರೆ ಸಾಧನವಿಲ್ಲದ್ದರಿಂದ ಮುಕ್ತಿಯೇ ಆಗದೇ ಹೋಗಬೇಕಾಗುವದು ಎಂಬ ಶಂಕೆಗೆ ಸಮಾಧಾನ ಹೇಳುವರು-

**ಯದಾ ನ ಕುರುತೇ ಭಾವಂ ಸರ್ವಭೂತೇಷ್ವಮಂಗಲಮ್ |**
**ಸಮದೃಷ್ಟೇಸ್ತದಾ ಪುಂಸಃ ಸರ್ವಾಃ ಸುಖಮಯಾ ದಿಶಃ ||೧೫||**

**ಯದಾ** ಯಾವಾಗ **ಸರ್ವಭೂತೇಷು** ಎಲ್ಲ ಪ್ರಾಣಿಗಳಲ್ಲಿ **ಅಮಂಗಲಂ** ಪಾಪಸಾಧನವಾದ **ಭಾವಂ** ಹಿಂಸಾರೂಪವಾದ ವೃತ್ತಿಯನ್ನು ಅಥವಾ

ರಾಗದ್ವೇಷಾದಿಗಳನ್ನು **ನ ಕುರುತೇ** ಮಾಡುವದಿಲ್ಲವೋ ಮತ್ತು **ಕುರುತೇ ಕು** ಕುತ್ಸಿತವಾದ **ರುತೇ** ಶಬ್ದಗಳಲ್ಲಿ **ಭಾವಂ** ಮನಸ್ಸನ್ನು **ನ ಕುರುತೇ** ಮಾಡುವದಿಲ್ಲವೋ ಆದ್ದರಿಂದಲೇ, **ತದಾ** ಆವಾಗ **ಸಮದೃಷ್ಟೇಃ** ಯಥೋಚಿತವಾಗಿ ಎಂದರೆ ಎಲ್ಲವೂ ಭಗವದಧೀನವೆಂದು ಆ ವಸ್ತುಗಳ ಯೋಗ್ಯತೆಗನುಸರಿಸಿ ಅವುಗಳನ್ನು ತಿಳಿದುಕೊಂಡ, **ಪುಂಸಃ** ಪುರುಷನಿಗೆ **ಸರ್ವಾಃ** ಎಲ್ಲ **ದಿಶಃ** ದಿಕ್ಕುಗಳು **ಸುಖಮಯಾಃ** ಸುಖವನ್ನು ಕೊಡುತ್ತವೆ. ।।೧೫।।

**ತಾತ್ಪರ್ಯ-** ಮುಪ್ಪಿನಿಂದಾಗಲಿ ಉಪವಾಸದಿಂದಾಗಲಿ ಸಾಮರ್ಥ್ಯ ಕಡಿಮೆ-ಯಾದಾಗ ವಿಷಯಾಭಿಲಾಷೆಯನ್ನು ಬಿಡುವದರಿಂದ ಮುಕ್ತಿಯಾಗಬಹುದಲ್ಲಾ? ಎಂದರೆ ಹೌದು. ಆಸೆಯನ್ನು ಬಿಟ್ಟರೆ ಮುಕ್ತಿಯಾಗುವದು ನಿಜ. ಆದರೆ ಆಸೆ ಬಿಡುವದೇ ಕಷ್ಟ. ಆದ್ದರಿಂದ ಜ್ಞಾನದಿಂದಲೇ ಆಸೆಯನ್ನು ಬಿಡಬೇಕು ಎಂದು.

**ಯಾ ದುಸ್ತ್ಯಜಾ ದುರ್ಮತಿಭಿರ್ಜೀರ್ಯತೋ ಯಾ ನ ಜೀರ್ಯತೇ ।**
**ತಾಂ ತೃಷ್ಣಾಂ ದುಃಖನಿವಹಾಂ ಶರ್ಮಕಾಮೋ ದ್ರುತಂ ತ್ಯಜೇತ್ ।।೧೬।।**

**ಯಾ** ಯಾವ ವಿಷಯಾಭಿಲಾಷೆಯು **ದುರ್ಮತಿಭಿಃ** ವಿಷಯಾಸಕ್ತವಾದ್ದರಿಂದ ದೂಷಿತವಾದ ಬುದ್ಧಿ ಉಳ್ಳವರಿಂದ, **ದುಸ್ತ್ಯಜಾ** ಬಿಡಲಸಾಧ್ಯವಾದುದು ಮತ್ತು **ಯಾ** ಯಾವ ಆಸೆಯು, **ಜೀರ್ಯತಃ** ವಯಸ್ಸಿನಿಂದಾಗಲಿ ಅನಶನದಿಂದಾಗಲಿ ಮುಪ್ಪನ್ನು ಹೊಂದಿದವನಿಗೂ, **ನ ಜೀರ್ಯತೇ** ಕಡಿಮೆಯಾಗುವದಿಲ್ಲವೋ **ತಾಂ** ಅಂಥ **ದುಃಖನಿವಹಾಂ** ದುಃಖಗಳ ಸಮೂಹಕ್ಕೆ ಕಾರಣವಾದ, **ತೃಷ್ಣಾಂ** ಆಸೆಯನ್ನು, **ಶರ್ಮಕಾಮಃ** ನಿತ್ಯಸುಖರೂಪಮೋಕ್ಷಾಪೇಕ್ಷಿಯು, **ದ್ರುತಂ** ಶೀಘ್ರವಾಗಿ **ತ್ಯಜೇತ್** ಬಿಡಬೇಕು. (ಬಿಡುವ ಉಪಾಯವನ್ನು ಮಾಡಬೇಕು).

**ತಾತ್ಪರ್ಯ-** ಸಾಮಾನ್ಯವಾಗಿ ವಿಷಯತೃಷ್ಣೆಯು ಬಿಡಲಸಾಧ್ಯವು. ಎಂಥ ಮುಪ್ಪು ಬಂದರೂ ತೊಲಗಲಾರದ್ದು. ಅನೇಕ ದುಃಖಕಾರಣವು. ಇಂಥ ಆಸೆಯನ್ನು ಸುಖಾರ್ಥಿಯು ತ್ಯಜಿಸಲು ಪ್ರಯತ್ನಿಸಬೇಕು. ಭಗವಂತನ ಜ್ಞಾನ ಒಂದೇ ಇದಕ್ಕೆ ಉಪಾಯವು. ।।೧೬।।

ವಿಷಯಸುಖವನ್ನು ಅಪೇಕ್ಷಿಸಿ ನಾನು ಶರ್ಮಿಷ್ಠೆಯನ್ನು ಸೇರಿದೆನೆಂದು ಶ್ರಮ ಹೊಂದಿದಿಯಷ್ಟೇ! ಮಧುರಭಾಷಿಣಿಯೇ! ಇದು ಇಂದ್ರಿಯಸ್ವಭಾವವು ಆಶ್ಚರ್ಯ ಪಡಬೇಡ ಎಂದು ಹೇಳುವನು -

**ಮಾತ್ರಾ ಸ್ವಸ್ರಾ ದುಹಿತ್ರಾ ವಾ ನಾವಿವಿಕ್ತಾಸನೋ ಭವೇತ್ ।**
**ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ।।೧೭।।**

**ಮಾತ್ರಾ** ತಾಯಿಯಿಂದ **ಸ್ವಸ್ರಾ** ತಂಗಿಯಿಂದ, **ದುಹಿತ್ರಾ ವಾ** ಮಗಳಿಂದಾಗಲಿ, **ಅವಿವಿಕ್ತಾಸನಃ** ಒಂದೇ ಆಸನ ಉಳ್ಳವನು, **ನ ಭವೇತ್** ಆಗಬಾರದು. ಜ್ಞಾನಿಯಾದವನಿಗೆ ಏಕಾಸನ ಏನು ಮಾಡೀತು? ಎಂದರೆ ಹೇಳುವನು. **ಬಲವಾನ್** ಬಲಿಷ್ಠವಾದ **ಇಂದ್ರಿಯಗ್ರಾಮಃ** ಇಂದ್ರಿಯಗಳ ಸಮೂಹಗಳು **ವಿದ್ವಾಂಸಮಪಿ** ಜ್ಞಾನಿಯನ್ನೂ ಸಹ **ಕರ್ಷತಿ** ತಡೆಯಲಾರದಂತೆ ಸೆಳೆಯುವವು.

**ತಾತ್ಪರ್ಯ-** ಸ್ತ್ರೀಸನ್ನಿಧಾನವು ಸರ್ವಥಾ ತ್ಯಾಜ್ಯವಾದುದು. ಬಲಿಷ್ಠವಾದ ಇಂದ್ರಿಯಗಳು ಎಂಥ ಜ್ಞಾನಿಯನ್ನಾದರೂ ವಿಷಯಗಳೆಡೆಗೆ ಸೆಳೆಯುವವು. ಕಾರಣ ತಾಯಿಯಾಗಲಿ ಮಗಳೇ ಆಗಲಿ ಯಾವುದೇ ಸ್ತ್ರೀಯೊಡನೆ ಏಕಾಂತ ಏಕಾಸನ ಮುಂತಾದವುಗಳನ್ನು ಸಂಪೂರ್ಣವಾಗಿ ಪ್ರಯತ್ನಪೂರ್ವಕ ಅವಶ್ಯ ಬಿಡಲೇಬೇಕು.

ವಿಷಯತೃಷ್ಣೆಯು ತಾನೇ (ಸ್ವಾಭಾವಿಕವಾಗಿ) ಹೋಗಲಾರದು ಎನ್ನುವಲ್ಲಿ ತನ್ನ ಅನುಭವವನ್ನೇ ಹೇಳುವನು-

**ಪೂರ್ಣಂ ವರ್ಷಸಹಸ್ರಂ ಮೇ ವಿಷಯಾನ್ಸೇವತೋಽಸಕೃತ್ ।**
**ತಥಾಽಪಿ ಚಾನುಸವನಂ ತೃಷ್ಣಾ ತೇಷೂಪಜಾಯತೇ ॥೧೮॥**

**ಅಸಕೃತ್** ನಿತ್ಯವೂ ಅನೇಕ ಸಲ, **ವಿಷಯಾನ್** ವಿಷಯಗಳನ್ನು **ಸೇವತಃ** ಅನುಭವಿಸುತ್ತಿರುವ **ಮೇ** ನನಗೆ **ವರ್ಷಸಹಸ್ರಂ** ಸಾವಿರ ವರ್ಷಗಳು **ಪೂರ್ಣಂ** ಪೂರ್ತಿಗೊಂಡವು. **ತಥಾಪಿ ಚ** ಹೀಗಿದ್ದರೂ ಸಹ **ತೇಷು** ವಿಷಯಗಳಲ್ಲಿ **ತೃಷ್ಣಾ** ಆಸೆಯು **ಉಪಜಾಯತೇ** ಉಂಟಾಗುತ್ತಿದೆ.

**ತಾತ್ಪರ್ಯ-** ಒಂದು ಸಾವಿರ ವರ್ಷವೂ ಪುನಃ ಪುನಃ ವಿಷಯಗಳನ್ನು ಅನುಭವಿಸಿದೆನು. ಇಂದಿಗೂ ತೃಪ್ತಿ ಉಂಟಾಗಿಲ್ಲ. ನಿತ್ಯವೂ ವಿಷಯಗಳಲ್ಲಿ ಅಭಿಲಾಷೆಯು ಹುಟ್ಟುತ್ತಲೇ ಇದೆ. ॥೧೮॥

ಈ ರೀತಿ ವಿಚಾರ ಮಾಡಿ ಕೊನೆಯ ನಿರ್ಣಯ ಹೇಳುವನು.

**ತಸ್ಮಾದೇತಾಮಹಂ ತ್ಯಕ್ತ್ವಾ ಬ್ರಹ್ಮಣ್ಯಾಧಾಯ ಮಾನಸಮ್ ।**
**ನಿರ್ದ್ವಂದ್ವೋ ನಿರಹಂಕಾರಶ್ಚರಿಷ್ಯಾಮಿ ಮೃಗೈಃ ಸಹ ॥೧೯॥**

**ತಸ್ಮಾತ್** ಆದ್ದರಿಂದ **ಏತಾಂ** ಈ **ತೃಷ್ಣಾಂ** ಆಶೆಯನ್ನು, **ತ್ಯಕ್ತ್ವಾ** ಬಿಟ್ಟು, **ಬ್ರಹ್ಮಣಿ** ಭಗವಂತನಲ್ಲಿ, **ಮಾನಸಂ** ಮನಸ್ಸನ್ನು **ಆಧಾಯ** ಇಟ್ಟು, **ನಿರ್ದ್ವಂದ್ವಃ** ಛಳಿ ಬಿಸಿಲು ಮುಂತಾದವುಗಳ ಭಯರಹಿತನಾಗಿ **ನಿರಹಂಕಾರಃ** ನಾನು ನನ್ನದು ಎಂಬ ಅಹಂಕಾರ ಮಮಕಾರ ಇಲ್ಲದವನಾಗಿ **ಮೃಗೈಃ** ಜಿಂಕೆಗಳಿಂದ ಸಹ ಕೂಡಿಕೊಂಡು

**ಚರಾಮಿ** ಸಂಚರಿಸಿವೆನು. ವನದಲ್ಲಿ ವಾಸ ಮಾಡುವೆನು. ಎಂದು ಭಾವವು. ಮೃಗಯಂತೇ ತತ್ವಂ ಇತಿ ಮೃಗಾಃ ಜ್ಞಾನಿನಃ ತೈಃ **ಚರಿಷ್ಯಾಮಿ** ತತ್ತ್ವವನ್ನು ಹುಡುಕುವ ಜ್ಞಾನಿಗಳೊಡನೆ ತಪವಗೈಯ್ಯುವೆನು ಹೀಗೂ ಅರ್ಥವಿದೆ.

**ತಾತ್ಪರ್ಯ-** ವಿಷಯಾಭಿಲಾಷೆಯು ಸುಲಭವಾಗಿ ಹೋಗುವದಿಲ್ಲ. ಅನುಭವಿಸುತ್ತ ಹೋದಂತೆ ಹೆಚ್ಚುತ್ತಲೇ ಹೋಗುವದು. ಕಾರಣ ಇದನ್ನು ಕಳೆದುಕೊಳ್ಳಲು ಒಂದೇ ಒಂದಾದ ಉಪಾಯ ಭಗವಂತನಲ್ಲಿ ಮನಸ್ಸಿಟ್ಟು ಆಶೆಯನ್ನು ತೊರೆದು ಛಳಿ ಮಳೆ ಬಿಸಿಲು ಎನ್ನದೆ ಅಹಂಕಾರ ಮಮಕಾರವಿಲ್ಲದೆ ಜ್ಞಾನಿಗಳೊಡನೆ ವನದಲ್ಲಿ ತಪಸ್ಸನ್ನು ಮಾಡುವೆನು. ॥೧೯॥

ಕಣ್ಣಿಗೆ ಕಾಣುವ ಐಹಿಕ ಸುಖ, ಕೇಳಲ್ಪಡುವ ಸ್ವರ್ಗಸುಖವನ್ನು ತ್ಯಾಗಮಾಡಿ ಕಾಣದಿರುವ, ಕೇಳದಿರುವ ಸುಖಕ್ಕಾಗಿ ಯಾವ ಬುದ್ಧಿವಂತನು ಪ್ರಯತ್ನಿಸಿಯಾನು? ಅರಣ್ಯದಲ್ಲಿ ಕಷ್ಟಪಟ್ಟಾನು? ಎಂದರೆ ಹೇಳುವನು-

**ದೃಷ್ಟಂ ಶ್ರುತಮಸದ್ವಿದ್ವಾನ್ನಾನುಧ್ಯಾಯೇನ್ನ ಸಂವಿಶೇತ್ ।**
**ಸಂಸೃತಿಂ ಚಾತ್ಮನಾಶಂ ಚ ತತ್ರ ವಿದ್ವಾನ್ ಸ ಆತ್ಮದೃಕ್ ॥೨೦॥**

**ದೃಷ್ಟಂ** ರಾಜ್ಯ ಮೊದಲಾದ ವೈಭವವು, **ಶ್ರುತಂ** ಸ್ವರ್ಗಾದಿಗಳು ಇವೆರಡು **ಅಸತ್** ಅಸ್ಥಿರವೆಂದು, **ವಿದ್ವಾನ್** ತಿಳಿದು, **ತತ್** ಐಹಿಕ ಅಮುಷ್ಮಿಕ ವಿಷಯಗಳನ್ನು **ನ ಅನುಧ್ಯಾಯೇತ್** ಚಿಂತಿಸಬಾರದು. **ನ ಸಂವಿಶೇತ್** ಭೋಗ ರೂಪವಾದ ಪ್ರವೇಶ ಮಾಡಕೂಡದು. ಏಕೆಂದರೆ, **ತತ್ರ** ವಿಷಯ ಚಿಂತನ ಭೋಗಗಳನ್ನು ಮಾಡಿದಾಗ, **ಸಂಸೃತಿಂ** ಸಂಸಾರವನ್ನು **ಆತ್ಮನಾಶಂ** ಸ್ವರೂಪ ಜ್ಞಾನನಾಶವನ್ನು **ವಿದ್ವಾನ್** (ಉಂಟಾಗುವದೆಂದು) ತಿಳಿದು **ಆತ್ಮದೃಕ್** ಜ್ಞಾನಿಯಾದವನು ವಿಷಯಚಿಂತನ ಭೋಗಗಳನ್ನು ಮಾಡಬಾರದು. ಅಥವಾ ಯಾರು ವಿಷಯ ಚಿಂತನದಿಂದಾಗುವ ಹಾನಿಯನ್ನು ತಿಳಿಯುವವರೋ **ಸಃ** ಅವರು ಆತ್ಮಜ್ಞಾನಿಯೆನಿಸುವರು.

**ತಾತ್ಪರ್ಯ-** ಐಹಿಕವಾದ ರಾಜ್ಯ ಆಮುಷ್ಮಿಕ ಸ್ವರ್ಗ ಇವೆಲ್ಲ ಅನಿತ್ಯವೆಂದು ತಿಳಿದು ವಿಷಯಗಳನ್ನು ಚಿಂತಿಸಬಾರದು. ಅನುಭವಿಸಬಾರದು. ವಿಷಯಗಳನ್ನು ಧ್ಯಾನ ಮಾಡಿದರೆ ಆಸಕ್ತಿ ಉಂಟಾಗಿ ಸಂಸಾರಕ್ಕೆ ಕಾರಣವಾಗುವದು, ಸ್ವರೂಪಜ್ಞಾನವಾಗಲಾರದು. ಕಾರಣ ವಿಷಯಗಳನ್ನು ಚಿಂತಿಸಬಾರದು. ಹೀಗೆ ತಿಳಿದವನೇ ಆತ್ಮಜ್ಞಾನಿ ಎನಿಸುವನು. ॥೨೦॥

**ಶ್ರೀಶುಕ ಉವಾಚ-**

**ಇತ್ಯುಕ್ತ್ವಾ ನಾಹುಷೋ ಜಾಯಾಂ ತದೀಯಂ ಪೂರವೇ ವಯಃ ।**
**ದತ್ವಾ ಸ್ವಾಂ ಜರಸಂ ತಸ್ಮಾದಾದದೇ ವಿಗತಸ್ಪೃಹಃ ॥೨೧॥**

**ವಿಗತಸ್ಪೃಹಃ** ತೃಷಾರಹಿತನಾದ **ನಾಹುಷಃ** ನಹುಷನ ಮಗನಾದ ಯಯಾತಿಯು **ಜಾಯಾಂ** ಹೆಂಡತಿಯನ್ನು ಕುರಿತು, **ಇತಿ** ಹಿಂದೆ ಹೇಳಿದ ಪ್ರಕಾರ **ಉಕ್ತ್ವಾ** ಹೇಳಿ **ಪೂರವೇ** ಪುರುವಿಗೆ **ತದೀಯಂ** ಅವನ **ವಯಃ** ಯೌವ್ವನವನ್ನು **ದತ್ವಾ** ಕೊಟ್ಟು **ತಸ್ಮಾತ್** ಅವನಿಂದ **ಸ್ವಾಂ** ತನ್ನ **ಜರಸಂ** ಮುಪ್ಪನ್ನು, **ಆದದೇ** ಸ್ವೀಕರಿಸಿದನು.

**ತಾತ್ಪರ್ಯ-** ವೈರಾಗ್ಯವನ್ನು ಹೊಂದಿದ ಯಯಾತಿಯು ಹೆಂಡತಿಗೆ ಹಿಂದೆ ಹೇಳಿದಂತೆ ವಿಷಯತ್ಯಾಗವು ಸುಲಭವಲ್ಲವೆಂದು ಹೇಳಿ ಪೂರುವಿಗೆ ಅವನ ಯೌವ್ವನವನ್ನು ಕೊಟ್ಟು ತನ್ನ ಮುಪ್ಪನ್ನು ತೆಗೆದು ಕೊಂಡನು. ॥೨೧॥

**ದಿಶಿ ದಕ್ಷಿಣಪೂರ್ವಸ್ಯಾಂ ದ್ರುಹ್ಯುಂ ದಕ್ಷಿಣತೋ ಯದುಮ್ ।**
**ಪ್ರತೀಚ್ಯಾಂ ತುರ್ವಸುಂ ಚಕ್ರೇ ಉದೀಚ್ಯಾಮನುಮೀಶ್ವರಮ್ ॥೨೨॥**

**ದಕ್ಷಿಣಪೂರ್ವಸ್ಯಾಂ ದಿಶಿ** ಆಗ್ನೇಯದಿಕ್ಕಿಗೆ **ದ್ರುಹ್ಯುಂ** ದ್ರುಹ್ಯುವನ್ನು **ದಕ್ಷಿಣತಃ** ದಕ್ಷಿಣದಿಕ್ಕಿಗೆ **ಯದುಂ** ಯದುವನ್ನು **ಪ್ರತೀಚ್ಯಾಂ** ಪಶ್ಚಿಮದಿಕ್ಕಿಗೆ **ತುರ್ವಸುಂ** ತುರ್ವಸುವನ್ನು **ಉದೀಚ್ಯಾಂ** ಉತ್ತರ ದಿಕ್ಕಿಗೆ **ಅನುಂ** ಅನುವನ್ನು, **ಈಶ್ವರಂ** ರಾಜನನ್ನಾಗಿ **ಚಕ್ರೇ** ಮಾಡಿದನು.

**ತಾತ್ಪರ್ಯ-** ಆಗ್ನೇಯ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಿಗೆ ಕ್ರಮವಾಗಿ ದ್ರುಹ್ಯು, ಯದು, ತುರ್ವಸು, ಅನು ಇವರನ್ನು ರಾಜರನ್ನಾಗಿ ಮಾಡಿದನು. ತನ್ನ ಆಜ್ಞೆಯನ್ನು ಮೀರಿದ್ದರೂ ಹಿರಿಯನೆಂಬ ದಾಕ್ಷಿಣ್ಯದಿಂದ ಮೊದಲು ದ್ರುಹ್ಯುವನ್ನು ಹೇಳಿರುವರು. ಇನ್ನು ಇವರಿಗೆ ಯಯಾತಿಯು ತನ್ನ ಮಾತನ್ನು ನಿರಾಕರಿಸಿದಾಗ ಶಾಪ ಕೊಟ್ಟದ್ದು ಅಖಂಡಭೂಮಂಡಲಾಧಿಪತ್ಯ ಬೇಡಯಂದಷ್ಟೇ. ಆದ್ದರಿಂದ ವಿರೋಧವಿಲ್ಲ.

ಇನ್ನು ಇಲ್ಲಿ ಒಂದು ಸಂದೇಹವು ಬರುವದು. ಶ್ರೇಷ್ಠಪುತ್ರ (ದೇವಯಾನಿಯ) ನಾದ ಯದು ಇರುವಾಗ ಚಿಕ್ಕವನಿಗೆ ಅಖಂಡಭೂಮಂಡಲಾಧಿಪತ್ಯ ಹೇಗೆ ಕೊಟ್ಟನು? ಮತ್ತು ಶುಕ್ರಾಚಾರ್ಯರು ತಮ್ಮ ದೌಹಿತ್ರನಿಗೆ ರಾಜ್ಯವಿಲ್ಲದ್ದನ್ನು ಹೇಗೆ ಸಹನ ಮಾಡಿದರು? ಎಂದು. ಇದಕ್ಕೆ ಆದಿಪರ್ವ ಭಾರತದಲ್ಲಿ ಕಥಾ ಸಂದರ್ಭದಿಂದ ಉತ್ತರ ಸಿಗುವದು. ಭಾರತ ಕಥಾ ಹೀಗಿದೆ-

ಯಯಾತಿ ರಾಜನು ದೇವಯಾನಿಯನ್ನು ವಿವಾಹವಾಗುವಾಗ ಅವಳ ತಂದೆಯಾದ ಶುಕ್ರಾಚಾರ್ಯರು ವೃಷಪರ್ವ ರಾಜನ ಮಗಳಾದ ಶರ್ಮಿಷ್ಠೆಯನ್ನು ತನ್ನ ಮಗಳ ಸೇವೆಗಾಗಿ ರಾಜನೊಂದಿಗೆ ಕಳುಹಿಸಿದರು. ಆಗ ಶರ್ಮಿಷ್ಠೆಯೊಡನೆ ಪತ್ನಿಯಂತೆ, ವ್ಯವಹಾರ ಮಾಡಬಾರದೆಂದು ಹೇಳಿದ್ದರು. ಆದರೂ ದೈವಾತ್

ಶರ್ಮಿಷ್ಠೆಯ ಸಂಬಂಧವಾಯಿತು. ಇದನ್ನು ತಿಳಿದು ದೇವಯಾನಿ ತಂದೆಗೆ ಹೇಳಿದಾಗ ಇವನಿಗೆ ಮುಪ್ಪು ಬರಲೆಂದು ಶಾಪಕೊಟ್ಟರು. ಆಗ ರಾಜನು ಇನ್ನೂ ನಿನ್ನ ಮಗಳೊಡನೆ ಸುಖಪಡುವ ಅಭಿಲಾಷೆ ಇರುವದೆಂದು ಪ್ರಾರ್ಥಿಸಿದಾಗ ತನ್ನ ಮಗಳಿಗಾಗಿ ಮುಪ್ಪನ್ನು ಯಾರಾದರೂ ತೆಗೆದುಕೊಂಡರೆ ನೀನು ಅವರ ಯೌವ್ವನದಿಂದ ಸುಖಿಸಬಹುದೆಂದು ಹೇಳಿದರು. ಆಗ ಯಯಾತಿಯು ನನಗೆ ವಿನಿಮಯರೂಪವಾಗಿ ಯಾರು ಯೌವ್ವನ ಕೊಡುವರೋ ಅವರೇ ರಾಜ್ಯಕ್ಕೆ ಅಧಿಕಾರಿಗಳಾಗಲು ತಾವು ಸಮ್ಮತಿಸಬೇಕೆಂದು ಬೇಡಿದನು. ಶುಕ್ರಾಚಾರ್ಯರು ಈ ಮಾತನ್ನು ಒಪ್ಪಿದರು. ನಂತರ ಮನೆಗೆ ಬಂದು ಯದು, ತುರ್ವಸು, ದ್ರುಹ್ಯು ಅನು ಇವರನ್ನು ಜರಾವಿನಿಮಯವಾಗಿ ಯೌವ್ವನ ಕೇಳಲು ಯಾರೂ ಒಪ್ಪಲಿಲ್ಲ. ಚಿಕ್ಕವನಾದ ಪೂರು ಮಾತ್ರ ತಂದೆಯ ಇಚ್ಛೆಯನ್ನು ಈಡೇರಿಸಿದನು. ಕಾರಣ ಇವನಿಗೆ ನ್ಯಾಯವಾಗಿಯೇ ರಾಜ್ಯ ದೊರೆಯಿತು. ಪೂರುವಿಗೆ ರಾಜ್ಯಾಭಿಷೇಕ ಮಾಡುವಾಗ್ಗೆ ಜನರು ಆಕ್ಷೇಪಿಸಿದಾಗ ರಾಜನು ಮಗನು ತನ್ನ ಕರ್ತವ್ಯವಾದ ತಂದೆಗೆ ಹಿತಬಗೆದು ಮಗನಾಗಿ ಉಳಿದರೆ ಮಾತ್ರ ರಾಜ್ಯಾಧಿಕಾರ. ಇವನೇ ನನಗೆ ಹಿತಮಾಡಿರುವನು. ಆ ಕಾರಣ ಇವನಿಗೇ ರಾಜ್ಯ. ಈ ಮಾತನ್ನು ಶುಕ್ರಾಚಾರ್ಯರು ಒಪ್ಪಿರುವರು ಎಂದು ಹೇಳಿರುವನು. ॥೨೨॥

**ಭೂಮಂಡಲಸ್ಯ ಸರ್ವಸ್ಯ ಪೂರುಮರ್ಹತ್ತಮಂ ವಿಶಾಮ್ ।**
**ಅಭಿಷಿಚ್ಯಾಗ್ರಜಾಂಸ್ತಸ್ಯ ವಶೇ ಸ್ಥಾಪ್ಯ ವನಂ ಯಯೌ ॥೨೩॥**

**ವಿಶಾಂ** ಪ್ರಜೆಗಳಿಗೆ **ಅರ್ಹತ್ತಮಂ** ಅತ್ಯಂತ ಪೂಜ್ಯನಾದ **ಪೂರುಂ** ಪೂರುವನ್ನು, **ಸಮಸ್ತಸ್ಯ** ಎಲ್ಲ, **ಭೂಮಂಡಲಸ್ಯ** ಭೂಮಂಡಲಕ್ಕೆ, **ಅಭಿಷಿಚ್ಯ** ಅಧಿಪತಿಯಾಗಿ ಅಭಿಷೇಕ ಮಾಡಿ, **ತಸ್ಯ ಅಗ್ರಜಾನ್** ಅವನ ಅಣ್ಣಂದಿರನ್ನು, **ತಸ್ಯ ವಶೇ** ಅವನ ಅಧೀನದಲ್ಲಿ **ಸ್ಥಾಪ್ಯ** ಇಟ್ಟು, **ವನಂ** ಅರಣ್ಯವನ್ನು ಕುರಿತು, **ಯಯೌ** ಹೋದನು.

**ತಾತ್ಪರ್ಯ-** ಪ್ರಜರಿಗೆ ಅತ್ಯಂತ ಪ್ರಿಯನಾದ ಯೋಗ್ಯನಾದ ಪೂರುವನ್ನು ಸಮಸ್ತ ಭೂಮಂಡಲಕ್ಕೆ ಒಡೆಯನನ್ನಾಗಿ ಪಟ್ಟಾಭಿಷೇಕ ಮಾಡಿ ಅವನ ಅಣ್ಣಂದಿರನ್ನು ಅವನ ಅಧೀನದಲ್ಲಿ ಇಟ್ಟು ಕೊಟ್ಟು ತಾನು ವನಕ್ಕೆ ತೆರಳಿದನು. ॥೨೩॥

**ಆಮ್ರೇಡಿತಂ ವರ್ಷಪೂಗಾನ್ ಷಡ್ವರ್ಗಂ ವಿಷಯೇಷು ಸಃ ।**
**ಕ್ಷಣೇನ ಮುಮುಚೇ ನೀಡಂ ಜಾತಪಕ್ಷ ಇವ ದ್ವಿಜಃ ॥೨೪॥**

**ಸಃ** ಯಯಾತಿಯು **ವರ್ಷಪೂಗಾನ್** ವರ್ಷಗಳ ಸಮೂಹವನ್ನು (ಅನೇಕ ವರ್ಷಗಳು) **ಆಮ್ರೇಡಿತಂ** ಶಬ್ದಾದಿ ವಿಷಯದಲ್ಲಿ ಅಭ್ಯಸ್ತವಾದ, **ಷಡ್‌ವರ್ಗಂ** ಆರು ಇಂದ್ರಿಯಗಳನ್ನು, **ಜಾತಪಕ್ಷಃ** ರೆಕ್ಕೆ ಹುಟ್ಟಿದ **ದ್ವಿಜಃ** ಪಕ್ಷಿಯು, **ನೀಡಂ ಇವ** ಗೂಡನ್ನು

ಬಿಡುವಂತೆ **ಕ್ಷಣೇನ** ಕ್ಷಣದಲ್ಲಿಯೇ **ಮುಮುಚೇ** ಬಿಟ್ಟನು, ವಿಷಯಗಳಿಂದ ತಿರುಗಿ ತೆಗೆದು ಭಗವಂತನಲ್ಲಿ ಇರಿಸಿದನು.

**ತಾತ್ಪರ್ಯ-** ಅನೇಕ ವರ್ಷಗಳಿಂದ ವಿಷಯದಲ್ಲಿ ಆಸಕ್ತವಾದ ಇಂದ್ರಿಯಗಳನ್ನು ಜ್ಞಾನೋದಯವಾದೊಡನೆ ರೆಕ್ಕೆ ಬಂದ ಹಕ್ಕಿ ಗೂಡನ್ನು ಬಿಡುವಂತೆ ಕ್ಷಣದಲ್ಲಿ ವಿಷಯದಿಂದ ಕಿತ್ತು ಭಗವಂತನಲ್ಲಿ ನೆಲಸಿದನು. ।।೨೪।।

**ಸ ತತ್ರ ನಿರ್ಮುಕ್ತಸಮಸ್ತಸಂಗ ಆತ್ಮಾನುಭೂತ್ಯಾ ವಿಧುತತ್ರಿಲಿಂಗಃ ।**
**ಪರೇಽಮಲೇ ಬ್ರಹ್ಮಣಿ ವಾಸುದೇವೇ ಲೇಭೇ ಗತಿಂ ಭಾಗವತೀಂ ಪ್ರತೀತಃ ।।**

**ಪ್ರತೀತಃ** ಪ್ರಖ್ಯಾತನಾದ, **ಸಃ** ಯಯಾತಿಯು, **ತತ್ರ** ವನದಲ್ಲಿ (**ಸ್ಥಿತಃ ಸನ್** ಇರುವವನಾಗಿ) **ನಿರ್ಮುಕ್ತಸಮಸ್ತಸಂಗಃ** ಬಿಡಲ್ಪಟ್ಟ ಎಲ್ಲ ದುಃಸಂಗ ಉಳ್ಳವನಾಗಿ, **ಆತ್ಮಾನುಭೂತ್ಯಾ** ತನ್ನ ಮತ್ತು ಪರಮಾತ್ಮನ ಜ್ಞಾನದಿಂದ, **ವಿಧುತತ್ರಿಲಿಂಗಃ ವಿಧುತ** ನಷ್ಟವಾದ, **ತ್ರಿಭಿಃ** ಸತ್ವಾದಿ ಗುಣಗಳಿಂದ ನಿರ್ಮಿತವಾದ, **ಲಿಂಗಂ** ಅಭಿಮಾನವುಳ್ಳ (ನಷ್ಟವಾದ ಅಭಿಮಾನ ಉಳ್ಳವನಾಗಿ) ಅಥವಾ ಹೋಗಲ್ಪಟ್ಟ ಆಧ್ಯಾತ್ಮಿಕ, ಆಧಿಭೌತಿಕ, ಆದಿದೈವಿಕ ತಾಪತ್ರಯಗಳು ಮತ್ತು ಲಿಂಗಶರೀರ ಉಳ್ಳವನಾಗಿ, **ಪರೇ** ಸರ್ವೋತ್ತಮನಾದ, **ಅಮಲೇ** ದೋಷರಹಿತನಾದ, **ಬ್ರಹ್ಮಣಿ** ಪೂರ್ಣನಾದ, **ವಾಸುದೇವೇ** ಪರಮಾತ್ಮನಲ್ಲಿ, **ಭಾಗವತೀಂ** ತನ್ನ ಯೋಗ್ಯತಾನುಸಾರ ವಿಭಾಗವುಳ್ಳ ಭೋಗವುಳ್ಳ, **ಗತಿಂ** ಪ್ರವೇಶ ರೂಪವಾದ ಮುಕ್ತಿಯನ್ನು **ಲೇಭೇ** ಹೊಂದಿದನು.

**ಬ್ರಹ್ಮಣಿ ಪ್ರತೀತಃ** ಹರಿಯ ಆರಾಧನೆಯಲ್ಲಿ ಕೋವಿದನಾದ ಹೀಗೂ ಅರ್ಥ ಮಾಡಬಹುದು. **ಭಾಗವತೀಂ** ಭಗವತ್ಸಂಬಂಧಿಯಾದ ಹೀಗೂ ಅರ್ಥ.

**ತಾತ್ಪರ್ಯ-** ಪ್ರಸಿದ್ಧನಾದ ಧ್ಯಾನಕುಶಲನಾದ ರಾಜನು ವನದಲ್ಲಿದ್ದು ಸರ್ವಸಂಗತ್ಯಾಗ ಮಾಡಿ ಭಗವಂತನ ಜ್ಞಾನದಿಂದ ತಾಪತ್ರಯಗಳನ್ನು ಅಭಿಮಾನವನ್ನು ಕಳೆದುಕೊಂಡು ಸರ್ವೋತ್ತಮನಾದ ದೋಷರಹಿತನಾದ ಭಗವಂತನ ಪ್ರಾಪ್ತಿರೂಪ ಮುಕ್ತಿಯನ್ನು ಹೊಂದಿದನು. ।।೨೫।।

**ಶ್ರುತ್ವಾ ಗಾಥಾಂ ದೇವಯಾನೀ ಮೇನೇ ಪ್ರಸ್ತೋಭಮಾತ್ಮನಃ ।**
**ಸ್ತ್ರೀಪುಂಸೋಃ ಸ್ನೇಹವೈಕ್ಲವ್ಯಾತ್ಪರಿಹಾಸಮಿವೋದಿತಮ್ ।।೨೬।।**

**ದೇವಯಾನೀ** ದೇವಯಾನಿಯು **ಸ್ತ್ರೀಪುಂಸೋಃ** ಸ್ತ್ರೀಪುರುಷರ, **ಸ್ನೇಹ-ವೈಕ್ಲವ್ಯಾತ್** ಸ್ನೇಹಭಂಗ ಭಯದಿಂದ **ಪರಿಹಾಸಂ ಇವ** ಹಾಸ್ಯದಂತೆ **ಉದಿತಂ** ಹೇಳಲ್ಪಟ್ಟ **ಏತಾಂ** ಈ **ಗಾಥಾಂ** ಕಥೆಯನ್ನು, **ಶ್ರುತ್ವಾ** ಕೇಳಿ, **ಆತ್ಮನಃ** ತನ್ನ **ಪ್ರಸ್ತೋಭಂ** ವಂಚನೆಯನ್ನು, **ಮೇನೇ** ತಿಳಿದಳು. (ಅಥವಾ ದೇವಯಾನಿಯು **ಪ್ರಸ್ತೋಭಂ**

ಆಡಿನ ಕಥಾರೂಪ ವಚನವನ್ನು ಕೇಳಿ ಸ್ತ್ರೀ ಪುರುಷರ ಸ್ನೇಹದಿಂದಾಗುವ ದುಃಖದ ಪರಿಹಾಸವನ್ನು ಹೇಳಿದನೆಂದು ತಿಳಿದಳು)

**ಸಾ ಸನ್ನಿವಾಸಂ ಸುಹೃದಾಂ ಪ್ರಪಾಯಾಮಿವ ಗಚ್ಛತಾಮ್ ।**
**ವಿಜ್ಞಾಯೇಶ್ವರತಂತ್ರಾಣಾಂ ಮಾಯಾವಿರಚಿತಂ ಪ್ರಭೋ ॥೨೭॥**

**ಸರ್ವತ್ರ ಸಂಗಮುತ್ಸೃಜ್ಯ ಸ್ವಪ್ನೌಪಮ್ಯೇನ ಭಾರ್ಗವೀ ।**
**ಕೃಷ್ಣೇ ಮನಃ ಸಮಾವೇಶ್ಯ ವ್ಯಧುನೋಲ್ಲಿಂಗಮಾತ್ಮನಃ ॥೨೮॥**

**ನಮಸ್ತುಭ್ಯಂ ಭಗವತೇ ವಾಸುದೇವಾಯ ವೇಧಸೇ ।**
**ಸರ್ವಭೂತಾಧಿವಾಸಾಯ ಶಾಂತಾಯ ಬೃಹತೇ ನಮಃ ॥೨೯॥**

**ಪ್ರಭೋ** ಪರೀಕ್ಷಿತನೇ, **ಭಾರ್ಗವೀ** ಭೃಗುಕುಲೋತ್ಪನ್ನಳಾದ **ಸಾ** ದೇವಯಾನಿಯು **ಈಶ್ವರತಂತ್ರಾಣಾಂ** ಭಗವದಧೀನರಾದ **ಸುಹೃದಾಂ** ಬಂಧುಗಳ, **ಮಾಯಾವಿರಚಿತಂ** ಈಶ್ವರೇಚ್ಛೆಯಿಂದ ನಿರ್ಮಿತವಾದ, **ಸನ್ನಿವಾಸಂ** ಸಂಬಂಧವನ್ನು (ಸಹವಾಸವನ್ನು) **ಪ್ರಪಾಯಾಂ** ಅರವಟ್ಟಿಗೆಯಲ್ಲಿ **ಗಚ್ಛತಾಂ ಇವ** ಹೋಗಿ ಬರುವವರ ಸಹವಾಸದಂತೆ **ವಿಜ್ಞಾಯ** ತಿಳಿದು, **ಸ್ವಪ್ನೌಪಮ್ಯೇನ** ಕನಸಿನಲ್ಲಿ ಕಂಡ ಪದಾರ್ಥಗಳಂತೆ ಅನಿತ್ಯವೆಂದು ತಿಳಿದು **ಸರ್ವತ್ರ** ಎಲ್ಲ ವಸ್ತುಗಳಲ್ಲಿ **ಸಂಗಂ** ಸ್ನೇಹವನ್ನು **ಉತ್ಸೃಜ್ಯ** ಬಿಟ್ಟು **ಕೃಷ್ಣೇ** ಹರಿಯಲ್ಲಿ **ಮನಃ** ಮನಸ್ಸನ್ನು, **ಸಮಾವೇಶ್ಯ** ಇಟ್ಟು **ಭಗವತೇ** ಷಡ್ಗುಣಪೂರ್ಣನಾದ **ವಾಸುದೇವಾಯ** ವಸುದೇವಪುತ್ರನಾದ **ವೇಧಸೇ** ಜ್ಞಾನಾತ್ಮಕನಾದ **ಸರ್ವಭೂತಾಧಿವಾಸಾಯ** ಸರ್ವಪ್ರಾಣಿ ಹೃದಯಸ್ಥನಾದ **ಶಾಂತಾಯ** ಸುಖರೂಪನಾದ **ಬೃಹತೇ** ಪೂರ್ಣನಾದ **ತುಭ್ಯಂ** ನಿನಗೆ **ನಮಃ** ನಮಸ್ಕಾರವು. ಹೀಗೆ **(ಜಪ್ತ್ವಾ)** ಜಪಿಸುತ್ತಾ **ಆತ್ಮನಃ** ತನ್ನ **ಲಿಂಗಂ** ಶರೀರವನ್ನು **ವ್ಯಧುನೋತ್** ತ್ಯಾಗಮಾಡಿದಳು.

**ತಾತ್ಪರ್ಯ-** ದೇವಯಾನಿಯು ಯಯಾತಿಯು ಹೇಳಿದ ಆಡಿದ ಕಥೆಯನ್ನು ಕೇಳಿ ಸ್ತ್ರೀ ಪುರುಷರ ಅತಿ ಸ್ನೇಹದಿಂದ ಉಂಟಾಗುವ ವ್ಯಥೆಯನ್ನೇ ಪರಿಹಾಸವಾಗಿ ಹೇಳಿರುವನೆಂದು ತಿಳಿದಳು. ಭಗವಂತನ ಅಧೀನರಾದ ಅವನ ಇಚ್ಛೆಯಿಂದಲೇ ಸಂಭವಿಸಿದ ಬಂಧುಗಳ ಸಹವಾಸವನ್ನು ನಾಲ್ಕು ರಸ್ತೆಗಳು ಸೇರುವಲ್ಲಿ ಸೇರಿದ ಜನರ ಸಂಗದಂತೆ ಎಂದು ತಿಳಿದು ಕನಸಿನಲ್ಲಿ ಕಂಡ ಪದಾರ್ಥಗಳಂತೆ ಅನಿತ್ಯವೆಂದು ತಿಳಿದು ಸರ್ವಸಂಗ ತ್ಯಾಗ ಮಾಡಿದಳು. ಕೃಷ್ಣನಲ್ಲಿ ಮನಸ್ಸಿಟ್ಟು ಪೂರ್ಣನಾದ ಜ್ಞಾನರೂಪನಾದ ಭಗವಂತನೇ ನಿನಗೆ ನಮಿಸುವೆನು ಎಂದು ಜಪಿಸುತ್ತಾ ತನ್ನ ದೇಹತ್ಯಾಗ ಮಾಡಿದಳು. ॥೨೭-೨೯॥

★ ॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಷೋಡಶೋಽಧ್ಯಾಯಃ ॥ ★

## ಅಥ ಸಪ್ತದಶೋಽಧ್ಯಾಯಃ

ಇಷ್ಟರ ವರೆಗೆ ಯಯಾತಿ ರಾಜನ ವೃತ್ತಾಂತವನ್ನು ನಿರೂಪಿಸಿ ಅವನ ಪ್ರೀತಿಪಾತ್ರನಾದ ಪುರುರಾಜನ ವಂಶವನ್ನು ನಿರೂಪಿಸಲು ಪ್ರತಿಜ್ಞೆ ಮಾಡುವರು.

**ಶ್ರೀಶುಕ ಉವಾಚ-**

**ಪುರೋರ್ವಂಶಂ ಪ್ರವಕ್ಷ್ಯಾಮಿ ಯತ್ರ ಜಾತೋಽಸಿ ಭಾರತ ।**
**ಯತ್ರ ರಾಜರ್ಷಯೋ ವಂಶ್ಯಾ ಬ್ರಹ್ಮವಂಶ್ಯಾಶ್ಚ ಜಜ್ಞಿರೇ ॥೧॥**

**ಹೇ ಭಾರತ** ಭರತ ಕುಲೋತ್ಪನ್ನನೇ, (ಪರೀಕ್ಷಿತನೇ) **ಯತ್ರ** ಯಾವ ಕುಲದಲ್ಲಿ **ಜಾತೋಽಸಿ** ನೀನು ಹುಟ್ಟಿದಿಯೋ, ಮತ್ತು **ಯತ್ರ ವಂಶ್ಯಾಃ** ಯಾವ ವಂಶದಲ್ಲಿ ಜನಿಸಿದ ಕೆಲವರು, **ರಾಜರ್ಷಯಃ** ರಾಜರ್ಷಿಗಳು **ಜಜ್ಞಿರೇ** ಆದರು **(ಕೇಚನ)** ಕೆಲವರು **ಬ್ರಹ್ಮವಂಶ್ಯಾಃ** ಬ್ರಹ್ಮಣ್ಯ ಹೊಂದಿದವರು **ಜಜ್ಞಿರೇ** ಆದರು. ಅಂಥ **ಪುರೋಃ** ಪುರುರಾಜನ **ವಂಶಂ** ವಂಶವನ್ನು **ಪ್ರವಕ್ಷ್ಯಾಮಿ** ಹೇಳುವೆನು.

**ತಾತ್ಪರ್ಯ-** ಎಲೋ ರಾಜನೇ! ನೀನು ಯಾವ ವಂಶದಲ್ಲಿ ಜನಿಸಿರುವಿಯೋ ಯಾವ ವಂಶದಲ್ಲಿ ಜನಿಸಿದ ಕೆಲವರು ರಾಜರ್ಷಿಗಳಾದರೋ ಇನ್ನು ಕೆಲವರು ಬ್ರಹ್ಮರ್ಷಿಗಳಾದರೋ ಅಂಥ ಪುರುವಂಶವನ್ನು ಹೇಳುವೆನು. ॥೧॥

**ಜನಮೇಜಯೋಽಭವತ್ಪೂರೋಃ ಪ್ರಚಿನ್ವಾಂಸ್ತತ್ಸುತಃ ಸ್ಮೃತಃ ।**
**ಪ್ರವೀರೋಽಥ ನಮಸ್ಯುರ್ವೈ ತಸ್ಮಾಚ್ಚಾರುಪದೋಽಭವತ್ ॥೨॥**

**ಪೂರೋಃ** ಪುರುವಿಗೆ **ಜನಮೇಜಯಃ** ಜನಮೇಜಯನು **ತತ್ಸುತಃ** ಜನಮೇಜಯನ ಮಗನು **ಪ್ರಚಿನ್ವಾನ್** ಪ್ರಚಿನ್ವಾನ್ ಎಂಬುವನು **ಸ್ಮೃತಃ** ಪ್ರಸಿದ್ಧನು. ಅಂಥ ಪ್ರಚಿನ್ವನ ನಂತರ ಎಂದರೆ ಅವನಿಂದ **ಪ್ರವೀರಃ** ಪ್ರವೀರನು **ವೈ** ಆ ಪ್ರವೀರನಿಂದ (**ತಸ್ಮಾತ್** ಎಂಬರ್ಥದಲ್ಲಿ ಅವ್ಯಯ) **ನಮಸ್ಯುಃ** ನಮಸ್ಯು ಎಂಬುವನು, **ತಸ್ಮಾತ್** ಆ ನಮಸ್ಯುವಿನಿಂದ, **ಚಾರುಪದಃ** ಚಾರುಪದನು **ಅಭವತ್** ಹುಟ್ಟಿದನು. ॥೨॥

**ತಸ್ಯ ಸುದ್ಯುರಭೂತ್ಪುತ್ರಸ್ತಸ್ಮಾದ್ಬಹುಗವಸ್ತತಃ ।**
**ಶಂಯಾತಿಸ್ತಸ್ಯ ಹಂಯಾತೀ ರೌದ್ರಾಶ್ವಸ್ತತ್ಸುತಃ ಸ್ಮೃತಃ ॥೩॥**

**ತಸ್ಯ** ಆ ಚಾರುಪದನಿಗೆ **ಸುದ್ಯುಃ** ಸುದ್ಯುವು **ಪುತ್ರಃ** ಮಗನು **ಅಭೂತ್** ಆದನು. **ತಸ್ಮಾತ್** ಆ ಸುದ್ಯುವಿನಿಂದ **ಬಹುಗವಃ** ಬಹುಗವನು **ತತಃ** ಆ ಬಹುಗವನಿಂದ **ಶಂಯಾತಿಃ** ಶಂಯಾತಿಯು **ತಸ್ಯ** ಶಂಯಾತಿಗೆ **ಹಂಯಾತಿಃ** ಹಂಯಾತಿಯು **ತತ್ಸುತಃ** ಹಂಯಾತಿಯ ಮಗನು, **ರೌದ್ರಾಶ್ವಃ** ರೌದ್ರಾಶ್ವನು (**ಪುತ್ರಃ ಅಭವತ್** ಎಂದು ಎಲ್ಲ ಕಡೆ ಅನ್ವಯ ಮಾಡಬೇಕು.)

**ಋತೇಯುಸ್ತಸ್ಯ ಕಕ್ಷೇಯುಃ ಸ್ಥಂಡಿಲೇಯುಃ ಕೃತೇಯುಕಃ ।**
**ಜಲೇಯುಃ ಸಂತನೇಯುಶ್ಚ ಧರ್ಮಸತ್ಯವ್ರತೇಯವಃ ॥೪॥**

**ದಶೈತೇಽಪ್ಸರಸಃ ಪುತ್ರಾ ವನೇಯುಶ್ಚಾವಮಃ ಸ್ಮೃತಃ ।**
**ಘೃತಾಚ್ಯಾಮಿಂದ್ರಿಯಾಣೀವ ಮುಖ್ಯಸ್ಯ ಜಗದಾತ್ಮನಃ ॥೫॥**

**ತಸ್ಯ** ರೌದ್ರಾಶ್ವನಿಗೆ **ಋತೇಯುಃ** ಋತೇಯು ಎಂಬುವನು **ತಸ್ಯ** ಆ ಋತೇಯುವಿಗೆ **ಕಕ್ಷೇಯುಃ** ಕಕ್ಷೇಯು ಎಂಬುವನು **ಸ್ಥಂಡಿಲೇಯುಃ** ಸ್ಥಂಡಿಲೇಯು **ಕೃತೇಯುಕಃ** ಕೃತೇಯುಕ **ಜಲೇಯುಃ** ಜಲೇಯು **ಸಂತನೇಯುಃ ಚ** ಸಂತನೇಯು ಎಂಬುವನು **ಧರ್ಮಸತ್ಯವ್ರತೇಯವಃ** ಧರ್ಮೇಯು, ಸತ್ಯೇಯು, ವ್ರತೇಯು, ವನೇಯು ಎಂಬುವರು **ಏತೇ ದಶ ಪುತ್ರಾಃ** ಈ ಹೆಸರಿನ ಹತ್ತು ಜನ ಮಕ್ಕಳು **ಘೃತಾಚ್ಯಾಂ ಅಪ್ಸರಸಃ** ಘೃತಾಚಿಯೆಂಬ ಅಪ್ಸರಾ ಸ್ತ್ರೀಯಲ್ಲಿ **(ಅಭವನ್)** ಆದರು. ಇವರಲ್ಲಿ **ವನೇಯುಃ** ವನೇಯುವು **ಅವಮಃ** ಕಿರಿಯವನು **ಜಗದಾತ್ಮನಃ** ಸಮಸ್ತ ಜಗತ್ತಿಗೆ ಪ್ರೇರಕರಾದ **ಮುಖ್ಯಸ್ಯ** ಮುಖ್ಯಪ್ರಾಣನಿಗೆ **ಇಂದ್ರಿಯಾಣೀವ** ಇಂದ್ರಿಯಗಳಂತೆ ತಂದೆಯ ಆಜ್ಞಾನುವರ್ತಿಗಳಾಗಿದ್ದರು.

**ತಾತ್ಪರ್ಯ-** ರೌದ್ರಾಶ್ವನಿಗೆ ಋತೇಯು ಎಂಬುವನು ಜನಿಸಿದನು. ಆ ಋತೇಯುವಿಗೆ ಕಕ್ಷೇಯು, ಸ್ಥಂಡಿಲೇಯು, ಕೃತೇಯುಕ, ಜಲೇಯು, ಸಂತನೇಯು, ಧರ್ಮೇಯು, ಸತ್ಯೇಯು, ವ್ರತೇಯು ಮತ್ತು ವನೇಯು ಎಂಬ ಹತ್ತುಜನ ಮಕ್ಕಳು ಘೃತಾಚೀ ಎಂಬ ಅಪ್ಸರಾಸ್ತ್ರೀಯಲ್ಲಿ ಜನಿಸಿದರು. ಇವರಲ್ಲಿ ವನೇಯುವು ಕಿರಿಯನಾಗಿದ್ದಾನೆ. ಮುಖ್ಯಪ್ರಾಣನಿಗೆ ಹತ್ತು ಇಂದ್ರಿಗಳು ಹೇಗೋ ಹಾಗೆ ತಮ್ಮ ತಂದೆಯಾದ ಋತೇಯುವಿನ ಆಜ್ಞಾಧಾರಕರಾಗಿ ಇವರೆಲ್ಲರೂ ಇದ್ದರು.

ಅಪ್ಸರಸಃ ಎಂಬಲ್ಲಿಯ ಷಷ್ಠೀವಿಭಕ್ತಿಯು ಸಪ್ತಮ್ಯರ್ಥದಲ್ಲಿ ಇದೆ. ಘೃತಾಚ್ಯಾಂ ಎಂಬ ಪದದೊಂದಿಗೆ ಅನ್ವಿತವಾಗುತ್ತದೆ.

**ಋತೇಯೋ ರಂತಿನಾರೋಽಭೂತ್ತ್ರಯಸ್ತಸ್ಯಾತ್ಮಜಾ ನೃಪ ।**
**ಸುಮತಿರ್ಧ್ರುವೋಽಪ್ರತಿರಥಃ ಕಣ್ವೋಽಪ್ರತಿರಥಾತ್ಮಜಃ ॥೬॥**

**ನೃಪ** ರಾಜನೇ! **ಋತೇಯೋಃ** ರೌದ್ರನ ಮೊದಲನೆ ಮಗನಾದ ಋತೇಯುವಿಗೆ **ರಂತಿನಾರಃ** ರಂತಿನಾರನು **ಅಭೂತ್** ಹುಟ್ಟಿದನು. **ತಸ್ಯ** ರಂತಿನಾರನಿಗೆ, **ಸುಮತಿಃ ಧ್ರುವಃ ಅಪ್ರತಿರಥಃ** ಸುಮತಿ, ಧ್ರುವ, ಅಪ್ರತಿರಥ ಎಂದು **ತ್ರಯಃ** ಮೂರುಜನ **ಆತ್ಮಜಾಃ** ಮಕ್ಕಳು ಆದರು **ಅಪ್ರತಿರಥಾತ್ಮಜಃ** ಮೂರನೆಯವನಾದ ಅಪ್ರತಿರಥನ ಮಗನು **ಕಣ್ವಃ** ಕಣ್ವನು. ॥೬॥

**ತಾತ್ಪರ್ಯ-** ರೌದ್ರನ ಮೊದಲನೆಯ ಮಗನಾದ ಋತೇಯುವಿಗೆ ರಂತಿನಾರನು ಮಗನಾದನು. ರಂತಿನಾರನಿಗೆ ಸುಮತಿ, ಧ್ರುವ, ಅಪ್ರತಿರಥ ಎಂಬ ಮೂರುಜನ ಮಕ್ಕಳಾದರು. ಅಪ್ರತಿರಥನಿಗೆ ಕಣ್ವ ಎಂಬ ಮಗನು ಜನಿಸಿದನು.

**ತಸ್ಯ ಮೇಧಾತಿಥಿಸ್ತಸ್ಮಾತ್ಪ್ರಸ್ಕಣ್ವಾದ್ಯಾ ದ್ವಿಜಾತಯಃ ।**
**ಪುತ್ರೋಽಭೂತ್ಸುಮತೇ ರೈಭ್ಯೋ ದುಷ್ಯಂತಸ್ತತ್ಸುತೋ ಮತಃ ॥೭॥**

**ತಸ್ಯ** ಆ ಕಣ್ವನಿಗೆ, **ಮೇಧಾತಿಥಿಃ** ಮೇಧಾತಿಥಿಯು, **ತಸ್ಮಾತ್** ಆ ಮೇಧಾತಿಥಿಯ ದೆಶೆಯಿಂದ, **ಪ್ರಸ್ಕಣ್ವಾದ್ಯಾಃ** ಪ್ರಸ್ಕಣ್ವ ಮೊದಲಾದ, **ದ್ವಿಜಾತಯಃ** ಬ್ರಾಹ್ಮಣರು, (**ಪುತ್ರಾಃ** ಮಕ್ಕಳು, **ಆಸನ್** ಆದರು) **ಸುಮತೇಃ** ರಂತಿನಾರನ ಮೊದಲನೇ ಮಗನಾದ ಸುಮತಿಯಿಂದ **ರೈಭ್ಯಃ** ರೈಭ್ಯನು **ಪುತ್ರಃ** ಮಗನು **ಅಭೂತ್** ಆದನು. **ತತ್ಸುತಃ** ರೈಭ್ಯನ ಮಗನು, **ದುಷ್ಯಂತಃ** ದುಷ್ಯಂತನು **ಮತಃ** ಸಮ್ಮತನು.

**ತಾತ್ಪರ್ಯ-** ಕಣ್ವನಿಗೆ ಮೇಧಾತಿಥಿ ಎಂಬ ಮಗನು ಜನಿಸಿದನು. ಆ ಮೇಧಾತಿಥಿಗೆ ಪ್ರಸ್ಕಣ್ವಮುಂತಾದ ಬ್ರಾಹ್ಮಣರು ಮಕ್ಕಳಾದರು. ರಂತಿನಾರದ ಮೊದಲಮಗನಾದ ಸುಮತಿಗೆ ರೈಭ್ಯನು ಜನಿಸಿದನು. ರೈಭ್ಯನಿಗೆ ದುಷ್ಯಂತನು ಮಗನಾದನು.

ಹಿಂದೆ ಹೇಳಿದಂತೆ ಕಣ್ವ ಮೊದಲಾದವರು ರಾಜವಂಶ್ಯರು. ಪ್ರಸ್ಕಣ್ವಾದಿಗಳು ಬ್ರಹ್ಮವಂಶ್ಯರು. ಮೇಧಾತಿಥಿ ಮೊದಲಾದವರು ವೇದದ್ರಷ್ಟಾರರು. ಕಣ್ವಃ ಮೇಧಾತಿಥಿಃ ಮೊದಲಾಗಿ ವೇದಪ್ರಸಿದ್ಧರು. ಮೊದಲನೆಯವನಾಗದಿದ್ದರೂ ಅಪ್ರತಿರಥನ ವಂಶವನ್ನು ಮೊದಲು ಹೇಳಿದ್ದು ಮೇಧಾತಿಥಿಃ ಮೊದಲಾದವರು ಬ್ರಾಹ್ಮಣರಾದ್ದರಿಂದ ಸುಮತಿ ಮೊದಲನೆಯವನಾದರೂ ಅವನ ಮಕ್ಕಳಿಂದ ಸನ್ಮಾನ್ಯರೆಂದು ತಿಳಿಸಲು ಎಂದು ತಿಳಿಯಬೇಕು. ॥೭॥

ದುಷ್ಯಂತನಿಗೆ ಶಂಕುಂತಲೆಯಲ್ಲಿ ಭರತನು ಜನಿಸಿದನೆಂದು ಹೇಳಲು ಪೂರ್ವ ಕಥಾವನ್ನು ಹೇಳುವರು -

**ದುಷ್ಯಂತೋ ಮೃಗಯಾಂ ಯಾತಃ ಕಣ್ವಾಶ್ರಮಪದಂ ಗತಃ ।**
**ತತ್ರಾಸೀನಾಂ ಸ್ವಪ್ರಭಯಾ ಮಂಡಯಂತೀಂ ರಮಾಮಿವ ॥೮॥**

**ವಿಲೋಕ್ಯ ಮುಮುಹೇ ಸದ್ಯೋ ದೇವಮಾಯಾಮಿವ ಸ್ತ್ರಿಯಮ್ ।**
**ಬಭಾಷೇ ತಾಂ ವರಾರೋಹಾಂ ಭಟೈಃ ಕತಿಪಯೈಃ ವೃತಃ ॥೯॥**

**ಕತಿಪಯೈಃ** ಕೆಲವು **ಭಟೈಃ** ಸೈನಿಕರಿಂದ **ವೃತಃ** ಕೂಡಿಕೊಂಡು **ಮೃಗಯಾಂ** ಬೇಟೆಗೆ **ಯಾತಃ** ಹೋದವನು ವನದಲ್ಲಿ ಸಂಚರಿಸುತ್ತಾ , **ಕಣ್ವಾಶ್ರಮಪದಂ** ಕಣ್ವ

ಋಷಿಗಳ ಆಶ್ರಮವಿರುವ ಸ್ಥಳಕ್ಕೆ, **ಗತಃ ಸನ್** ಬಂದವನಾಗಿ **ತತ್ರ** ಆಶ್ರಮದಲ್ಲಿ **ಸ್ವಪ್ರಭಯಾ** ಸ್ವಾಭಾವಿಕವಾದ ತನ್ನ ಕಾಂತಿಯಿಂದ **ರಮಾಂ ಇವ** ಲಕ್ಷ್ಮೀದೇವಿಯಂತೆ **ಮಂಡಯಂತೀಂ** ಆ ಆಶ್ರಮವನ್ನು ಅಲಂಕರಿಸಿರುವ (ಅಲ್ಲಿ ಇರುವ) **ದೇವಮಾಯಾಂ ಇವ** ಪರಮಾತ್ಮನ ಮಾಯೆಯಂತಿರುವ **ಸ್ತ್ರಿಯಂ** ಸ್ತ್ರೀಯಳನ್ನು (ಶಂಕುತಲೆ) **ವಿಲೋಕ್ಯ** ನೋಡಿ, **ಸದ್ಯಃ** ಕೂಡಲೇ **ಮುಮುಹೇ** ಮೋಹಗೊಂಡನು. **ವರಾರೋಹಾಂ** ಸುಂದರಿಯಾದ, **ತಾಂ** ಆ ಶಕುಂತಲೆಯನ್ನು ಕುರಿತು, **ಬಭಾಷೇ** ಮಾತನಾಡಿದನು.

**ತಾತ್ಪರ್ಯ-** ದುಷ್ಯಂತನು ಕೆಲವು ಭಟರನ್ನು ಕರೆದುಕೊಂಡು ಬೇಟೆಯಾಡಲು ವನಕ್ಕೆ ಹೋದನು. ಅನೇಕ ಮೃಗಗಳನ್ನು ಸಂಹರಿಸಿ ಆಯಾಸಗೊಂಡು ನೀರಡಿಸಿ ದೈವಾತ್ ಕಣ್ವಋಷಿಗಳ ಆಶ್ರಮವಿರುವ ವನಕ್ಕೆ ಒಬ್ಬನೇ ಬಂದನು. ಅಲ್ಲಿ ಲಕ್ಷ್ಮೀದೇವಿಯಂತೆ ಕಾಂತಿಯುತಳಾದ ದೇವಮಾಯೆಯಂತಿರುವ ಸ್ತ್ರೀಯನ್ನು ನೋಡಿ ಮೋಹಗೊಂಡನು. ಮತ್ತು ಅವಳನ್ನು ಮಾತನಾಡಿಸಿದನು. ||೯||

**ತದ್ದರ್ಶನಪ್ರಮುದಿತಃ ಸನ್ನಿವೃತ್ತಪರಿಶ್ರಮಃ |**
**ಪಪ್ರಚ್ಛ ಕಾಮಸಂತಪ್ತಃ ಪ್ರಹಸನ್ ಶ್ಲಕ್ಷ್ಣಯಾ ಗಿರಾ ||೧೦||**

**ತದ್ದರ್ಶನಪ್ರಮುದಿತಃ** ಸ್ತ್ರೀಯಳನ್ನು ನೋಡಿ ಸಂತುಷ್ಟನಾದ ಆದ್ದರಿಂದಲೇ **ಸನ್ನಿವೃತ್ತಪರಿಶ್ರಮಃ** ಹೋಗಲ್ಪಟ್ಟ ಮಾರ್ಗಾಯಾಸ ಉಳ್ಳವನಾಗಿ **ಕಾಮಸಂತಪ್ತಃ** ಕಾಮಪೀಡಿತನಾಗಿ, **ಪ್ರಹಸನ್** ನಗುತ್ತಾ **ಶ್ಲಕ್ಷ್ಣಯಾ** ಮಧುರವಾದ, **ಗಿರಾ** ವಚನಗಳಿಂದ **ಪ್ರಪಚ್ಛ** ಕೇಳಿದನು. ||೧೦||

**ತಾತ್ಪರ್ಯ-** ಶಕುಂತಲೆಯ ದರ್ಶನದಿಂದ ದುಷ್ಯಂತನು ಸಂತುಷ್ಟನಾದನು. ಅವಳ ದರ್ಶನದಿಂದ ತನ್ನೆಲ್ಲ ಶ್ರಮದ ಪರಿಹಾರ ಆಯಿತು. ಅವಳನ್ನು ನೋಡಿ ಕಾಮಪೀಡಿತನಾದ. ನಗುತ್ತಾ ಮಧುರವಾದ ವಚನಗಳಿಂದ ಶಕುಂತಲೆಯನ್ನು ಕೇಳಿದ.

ರಾಜನಿಗೆ ಸ್ವಾಗತ ಮಾಡಿ ಶಕುಂತಲೆಯು ಅವನ ಕುಲಾದಿಗಳನ್ನು ಕೇಳಿದ ನಂತರ ರಾಜನು ಮಾಡಿದ ಪ್ರಶ್ನೆಯನ್ನು ವಿವರಿಸುವರು.

**ಕಾ ತ್ವಂ ಕಮಲಗರ್ಭಾಭೇ ಕಸ್ಯಾಸಿ ಹೃದಯಂಗಮೇ |**
**ಕಿಂ ವಾ ಚಿಕೀರ್ಷಿತಂ ತ್ವತ್ರ ಭವತ್ಯಾ ವಿಜನೇ ವನೇ ||೧೧||**

**ಹೇ ಹೃದಯಂಗಮೇ** ಸುಂದರಿಯೇ, **ಕಮಲಗರ್ಭಾಭೇ** ಕಮಲದ ಉದರದಂತೆ ಕಾಂತಿ ಉಳ್ಳವಳೇ, **ತ್ವಂ** ನೀನು **ಕಾ** ಯಾರು? **ಕಸ್ಯಾಸಿ** ಯಾರ ಪುತ್ರಿಯು? **ವಿಜನೇ**

ಜನರಹಿತವಾದ, **ಅತ್ರ ವನೇ** ಈ ಅಡವಿಯಲ್ಲಿ, **ಭವತ್ಯಾ** ನಿನ್ನಿಂದ **ಚಿಕೀರ್ಷಿತಂ** ಮಾಡಲು ಇಚ್ಛಿಸಿದ್ದಾದರು, **ಕಿಂ** ಏನು? ಎಂದು ಪ್ರಶ್ನಿಸಿದನು.

**ತಾತ್ಪರ್ಯ-** ಹೇ ಮನೋಹರಳೇ! ನೀನು ಯಾರ ಮಗಳು? ಈ ನಿರ್ಜನಾರಣ್ಯದಲ್ಲಿ ನಿನಗೆ ಏನು ಕೆಲಸ? ಇಲ್ಲಿರಲು ಕಾರಣ ಏನೆಂದು ಮಧುರವಾದ ಮಾತುಗಳಿಂದ ಪ್ರಶ್ನಿಸಿದನು.

**ವ್ಯಕ್ತಂ ರಾಜನ್ಯತನಯಾಂ ವೇದ್ಮ್ಯಹಂ ತ್ವಾಂ ಸುಮಧ್ಯಮೇ ।**
**ನ ಹಿ ಚೇತಃ ಪೌರವಾಣಾಮಧರ್ಮೇ ರಮತೇ ಕ್ವಚಿತ್ ॥೧೨॥**

**ಹೇ ಸುಮಧ್ಯಮೇ** ಸುಂದರಳೇ, **ಪೌರವಾಣಾಂ** ಪುರುಕುಲೋತ್ಪನ್ನರ **ಚೇತಃ** ಮನಸ್ಸು **ಅಧರ್ಮೇ** ಪಾಪಕಾರ್ಯದಲ್ಲಿ **ಕ್ವಚಿತ್** ಎಂಥ ಆಪತ್ತಿನಲ್ಲಿಯೂ **ನ ರಮತೇ** ಆಸಕ್ತವಾಗುವದಿಲ್ಲ. (**ಮಚ್ಚೇತಃ ತ್ವಯಿ ರಮತೇ** ನನ್ನ ಮನಸ್ಸು ನಿನ್ನಲ್ಲಿ ಸಕ್ತವಾಗಿದೆ ಕಾರಣ) **ತ್ವಾಂ** ನಿನ್ನನ್ನು **ವ್ಯಕ್ತಂ** ಸ್ಪಷ್ಟವಾಗಿ **ರಾಜನ್ಯತನಯಾಂ** ಕ್ಷತ್ರಿಯ ಕುವರಿಯೆಂದು **ಅಹಂ** ನಾನು **ವೇದ್ಮಿ** ತಿಳಿದಿದ್ದೇನೆ.

**ತಾತ್ಪರ್ಯ-** ಹೇ ಸುಂದರಾಂಗಿಯೇ! ಪುರುವಂಶದಲ್ಲಿ ಜನಿಸಿದವರ ಮನಸ್ಸು ಎಂದೂ ಪಾಪಕಾರ್ಯದಲ್ಲಿ ಪ್ರವೃತ್ತವಾಗುವುದಿಲ್ಲ. ನನ್ನ ಮನಸ್ಸು ನಿನ್ನಲ್ಲಿ ಆಸಕ್ತವಾಗಿದೆ. ಕಾರಣ ನೀನು ನಿಶ್ಚಯವಾಗಿ ಕ್ಷತ್ರಿಯ ಕುವರಿಯೆಂದೇ ನಾನು ತಿಳಿದಿರುವೆನು ಎಂದು ಹೇಳಿದನು. ॥೧೦-೧೧-೧೨॥

ಆಗ ರಾಜನೇ! ಪ್ರೀತಿಯಿಂದ ರಾಜನ ಕುವರಿಯೆಂದು ನೀನು ಹೇಳಿದುದು ನಿಜವೇ ಎಂದು ಹೇಳುವಳು.

**ಶಕುಂತಲೋವಾಚ-**

**ವಿಶ್ವಾಮಿತ್ರಾತ್ಮಜೈವಾಹಂ ತ್ಯಕ್ತಾ ಮೇನಕಯಾ ವನೇ ।**
**ವೇದೈತದ್ಭಗವಾನ್ಕಣ್ವೋ ವೀರ ಕಿಂ ಕರವಾಮ ತೇ ॥೧೩॥**

**ಹೇ ವೀರ** ವೀರನೇ, **ಅಹಂ** ನಾನು, **ವಿಶ್ವಾಮಿತ್ರಾತ್ಮಜಾ ಏವ** ವಿಶ್ವಾಮಿತ್ರನ ಮಗಳೇ **ಮೇನಕಯಾ** ಮೇನಕೆಯಿಂದ ಸ್ವರ್ಗಕ್ಕೆ ಹೋಗುವಾಗ, **ವನೇ** ಅರಣ್ಯದಲ್ಲಿ **ತ್ಯಕ್ತಾ** ಬಿಡಲ್ಪಟ್ಟವಳು. **ಭಗವಾನ್ ಕಣ್ವಃ** ಪೂಜ್ಯರಾದ ಕಣ್ವರು, **ಏತತ್** ಈ ವಿಷಯವನ್ನು **ವೇದ** ತಿಳಿದಿರುವರು. **ವಯಂ** ನಾವು, **ತೇ** ನಿನಗೆ **ಕಿಂ ಕರವಾಮ** ಏನು ಮಾಡೋಣ (ನನ್ನಿಂದ ನಿನಗೇನಾಗಬೇಕು).

**ತಾತ್ಪರ್ಯ-** ಎಲೈ ವೀರನೇ! ನೀನು ಊಹಿಸಿದ್ದು ನಿಜವೇ. ನಾನು ವಿಶ್ವಾಮಿತ್ರ ರಾಜರ್ಷಿಗೆ ಮೇನಕೆ ಎಂಬ ಅಪ್ಸರೆಯಲ್ಲಿ ಹುಟ್ಟಿದವಳು. ನನ್ನ ತಾಯಿಯು ನನ್ನನ್ನು

ಬಾಲ್ಯದಲ್ಲಿಯೇ ಈ ವನದಲ್ಲಿ ಬಿಟ್ಟು ಸ್ವರ್ಗಕ್ಕೆ ತೆರಳಿದಳು, ಈ ಎಲ್ಲ ವೃತ್ತಾಂತವೂ ಆಶ್ರಮದಲ್ಲಿ ಇರುವ ಕಣ್ವಋಷಿಗಳಿಗೆ ಚೆನ್ನಾಗಿ ತಿಳಿಯುವುದು. ಅದು ಹಾಗಿರಲಿ. ನನ್ನಿಂದ ನಿನಗಾಗಬೇಕಾದುದೇನು? ಎಂದಳು. ॥೧೩॥

**ಆಸ್ಯತಾಮರವಿಂದಾಕ್ಷ ಗೃಹ್ಯತಾಮರ್ಹಣಂ ಚ ನಃ ।**
**ಭುಜ್ಯತಾಂ ಸಂತಿ ನೀವಾರಾ ಉಷ್ಯತಾಂ ಯದಿ ರೋಚತೇ ॥೧೪॥**

**ಅರವಿಂದಾಕ್ಷ** ಕಮಲಲೋಚನೇ, **ಆಸ್ಯತಾಂ** ನಿನ್ನಿಂದ ಕೂಡಲ್ಪಡಲಿ, **ನಃ** ನಮ್ಮ **ಅರ್ಹಣಂ** ಅರ್ಘ್ಯ ಮೊದಲಾದ ಪೂಜೆಯು **ಗೃಹ್ಯತಾಂ** ಸ್ವೀಕರಿಸಲ್ಪಡಲಿ, **ನೀವಾರಾಃ** ದೇವತೆಗಳ, ತೃಣಧಾನ್ಯ **ಸಂತಿ** ಇರುತ್ತವೆ. (ಅದರಿಂದ ಮಾಡಿದ ಅನ್ನ) **ಭುಜ್ಯತಾಂ** ಉಣ್ಣಲ್ಪಡಲಿ, **ಯದಿ ರೋಚತೇ** ಇಷ್ಟವಾದರೆ, **ಉಷ್ಯತಾಂ** ವಾಸಮಾಡೋಣವಾಗಲಿ.

**ತಾತ್ಪರ್ಯ-** ರಾಜನೇ! ಬಾ ಕುಳಿತು ಕೋ. ನಮ್ಮ ಸತ್ಕಾರವನ್ನು ಸ್ವೀಕರಿಸು. ಇಷ್ಟವಿದ್ದರೆ ಭೋಜನ ಮಾಡು. ದೇವತೆಗಳ ಧಾನ್ಯದಿಂದ ಮಾಡಿದ ಅನ್ನವಿದೆ. ಬೇಕಾದರೆ ಕೆಲವು ಕಾಲ ಇಲ್ಲಿಯೇ ವಾಸಮಾಡಬಹುದು. ॥೧೪॥

**ದುಷ್ಯಂತ ಉವಾಚ-**

**ಉಪಪನ್ನಮಿದಂ ಸುಭ್ರು ಜಾತಾಯಾಃ ಕುಶಿಕಾನ್ವಯೇ ।**
**ಸ್ವಯಂ ಹಿ ವೃಣುತೇ ರಾಜ್ಞಾಂ ಕನ್ಯಕಾಃ ಸದೃಶಂ ವರಮ್ ॥೧೫॥**

**ಸುಭ್ರು** ಸುಂದರಿಯೇ, **ಕುಶಿಕಾನ್ವಯೇ** ಕುಶಿಕನ ವಂಶದಲ್ಲಿ **ಜಾತಾಯಾಃ** ಹುಟ್ಟಿದ ನಿನಗೆ **ಇದಂ** ಈ ವಿಧ ಮಾತನಾಡುವದು, **ಉಪಪನ್ನಂ** ಯೋಗ್ಯವೇ ಆಗಿದೆ. **ರಾಜ್ಞಾಂ** ರಾಜರುಗಳ, **ಕನ್ಯಕಾಃ** ಕನ್ಯೆಯರು **ಸದೃಶಂ** ಅನುರೂಪನಾದ **ವರಂ** ವರನನ್ನು **ಸ್ವಯಂ** ತಾವೇ **ವೃಣುತೇ** ಆರಿಸುವರು ಎಂದನು.

**ತಾತ್ಪರ್ಯ-** ನನ್ನಿಂದ ಏನಾಗಬೇಕೆಂಬ ಮಾತಿನಿಂದ ಅವಳ ಅಭಿಪ್ರಾಯ ತಿಳಿದು ಮಾತನಾಡಿದನು. ಓ ಸುಂದರಿ! ಕುಶಿಕವಂಶದಲ್ಲಿ ಹುಟ್ಟಿದ ನಿನಗೆ ಈ ವಿನಯಾದಿ ಗುಣಗಳು ಸಹಜವಾಗಿಯೇ ಇರುವವು. ಇರಲಿ. ಲೋಕದಲ್ಲಿ ರಾಜಕನ್ಯೆಯರು ತಮಗೆ ಇಷ್ಟ ಬಂದ ಪತಿಯನ್ನು ತಾವೇ ವರಿಸಬಹುದು. ನೀನು ರಾಜಕನ್ಯೆಯಾದ್ದರಿಂದ ನಿನಗೆ ಇಷ್ಟವಾಗಿದ್ದರೆ ನನ್ನನ್ನು ವರಿಸಬಹುದಲ್ಲವೇ? ಎಂದು ಅವಳ ಇಂಗಿತವನ್ನು ತಿಳಿಯಲು ಎಂದನು. ॥೧೫॥

**ಶ್ರೀಶುಕ ಉವಾಚ-**

**ಓಮಿತ್ಯುಕ್ತೇ ಯಥಾಧರ್ಮಮುಪಯೇಮೇ ಶಕುಂತಲಾಮ್ ।**
**ಗಾಂಧರ್ವವಿಧಿನಾ ರಾಜಾ ದೇಶಕಾಲವಿಧಾನವಿತ್ ॥೧೬॥**

**ದೇಶಕಾಲವಿಧಾನವಿತ್** ಯಾವ ದೇಶದಲ್ಲಿ ಯಾವ ಕಾಲದಲ್ಲಿ ಏನು ಮಾಡಬೇಕೆಂಬ ಜ್ಞಾನವುಳ್ಳ, **ರಾಜಾ** ದುಷ್ಯಂತನು, **ಓಂ ಇತ್ಯುಕ್ತೇ** ನೀನೇ ನನಗೆ ಅನುರೂಪನಾದ್ದರಿಂದ ನಿನ್ನನ್ನು ಪತಿಯಾಗಿ ಸ್ವೀಕರಿಸಲು ಒಪ್ಪಿಗೆಯಿದೆ, ಎಂಬ ಅಭಿಪ್ರಾಯದಿಂದ ಶಕುಂತಲೆಯು ಓಂ ಎನ್ನಲು, **ಯಥಾಧರ್ಮಂ** ಧರ್ಮಾನುಸಾರ, **ಗಾಂಧರ್ವವಿಧಿನಾ** ಬ್ರಾಹ್ಮ, ರಾಕ್ಷಸ, ಗಾಂಧರ್ವ ಇವೇ ಮೊದಲಾದ ಅನೇಕ ವಿವಾಹ ವಿಧಾನಗಳಲ್ಲಿ ಒಂದಾದ ಗಾಂಧರ್ವವಿಧಿಯಿಂದ **ಶಕುಂತಲಾಂ** ಶಕುಂತಲೆಯನ್ನು **ಉಪಯೇಮೇ** ವಿವಾಹವಾದನು.

**ತಾತ್ಪರ್ಯ-** ಶಕುಂತಲೆಗೂ ಅವನಲ್ಲಿ ಮೋಹವಿದ್ದುದರಿಂದ ಆಕೆಯೂ ಹಾಗೆ ಆಗಲೆಂದು ಸಮ್ಮತಿಸಿದಳು. ದೇಶಕಾಲವಿಧಿಜ್ಞನಾದ ದುಷ್ಯಂತನು ಗಾಂಧರ್ವ ವಿಧಿಯಿಂದ ಅವಳನ್ನು ವಿವಾಹವಾದನು. ।।೧೬।।

**ಅಮೋಘವೀರ್ಯೋ ರಾಜರ್ಷಿರ್ಮಹಿಷ್ಯಾಂ ವೀರ್ಯಮಾದಧೇ ।**
**ಶ್ವೋಭೂತೇ ಸ್ವಪುರಂ ಯಾತಃ ಕಾಲೇನಾಸೂತ ಸಾ ಸುತಮ್ ।।೧೭।।**

**ಅಮೋಘವೀರ್ಯಃ** ವ್ಯರ್ಥವಾಗದಿರುವ ವೀರ್ಯ ಉಳ್ಳ, **ರಾಜರ್ಷಿಃ** ರಾಜ ಋಷಿಯಾದ ದುಷ್ಯಂತನು, **ಮಹಿಷ್ಯಾಂ** ಹೆಂಡತಿಯಾದ ಶಕುಂತಲೆಯಲ್ಲಿ **ವೀರ್ಯಂ ಆದಧೇ** ವೀರ್ಯಾಧಾನ ಮಾಡಿದನು. **ಶ್ವೋಭೂತೇ** ಮರುದಿನ ಬೆಳಿಗ್ಗೆ **ಸ್ವಪುರಂ** ತನ್ನ ಪಟ್ಟಣಕ್ಕೆ **ಯಾತಃ** ಹೋದನು. **ಕಾಲೇನ** ಕೆಲವು ದಿನಗಳಾದ ಮೇಲೆ, **ಸಾ** ಶಕುಂತಲೆಯು, **ಸುತಂ** ಮಗನನ್ನು **ಅಸೂತ** ಪ್ರಸವಿಸಿದಳು.

**ತಾತ್ಪರ್ಯ-** ಅಮೋಘವೀರ್ಯವುಳ್ಳ ರಾಜನು ಆ ರಾತ್ರಿ ಆಶ್ರಮದಲ್ಲಿ ಶಂಕುಲತೆಯೊಡನೆ ವಿಹರಿಸಿ ಬೆಳಿಗ್ಗೆ ತನ್ನ ಪಟ್ಟಣಕ್ಕೆ ತೆರಳಿದನು. ಈ ಕಡೆ ಶಕುಂತಲೆಯು ಕೆಲವು ದಿನಗಳಲ್ಲಿ ಮಗನನ್ನು ಹೆತ್ತಳು. ।।೧೭।।

**ಕಣ್ವಃ ಕುಮಾರಸ್ಯ ವನೇ ಚಕ್ರೇ ಸಮುದಿತಾಃ ಕ್ರಿಯಾಃ ।**
**ಬಧ್ವಾ ಮೃಗೇಂದ್ರಾಂಸ್ತರಸಾ ಕ್ರೀಡತಿ ಸ್ಮ ಸ ಬಾಲಕಃ ।।೧೮।।**

**ಕಣ್ವಃ** ಕಣ್ವಋಷಿಯು, **ಕುಮಾರಸ್ಯ** ಮಗುವಿಗೆ, **ಸಮುದಿತಾಃ** ವಿಧ್ಯುಕ್ತವಾದ, **ಕ್ರಿಯಾಃ** ಜಾತಕರ್ಮ ಮೊದಲಾದವುಗಳನ್ನು, **ಚಕ್ರೇ** ಮಾಡಿದರು. **ಸಃ ಬಾಲಕಃ** ಆ ಹುಡುಗನು, **ಮೃಗೇಂದ್ರಾನ್** ಸಿಂಹಗಳನ್ನು, **ಬಧ್ವಾ** ಕಟ್ಟಿ, **ತರಸಾ** ಬಲವಾಗಿ **ಕ್ರೀಡತಿ ಸ್ಮ** ಆಡುತ್ತಿದ್ದನು.

**ತಾತ್ಪರ್ಯ-** ಶಕುಂತಲೆಯ ಸಾಕು ತಂದೆಯಾದ ಕಣ್ವರು ಈ ಮಗುವಿಗೆ ವಿಧಾನಪೂರ್ವಕವಾಗಿ ಜಾತಕರ್ಮಾದಿಗಳನ್ನು ಮಾಡಿದರು. ಈ ಬಾಲಕನು

ಕ್ರಮವಾಗಿ ಮಹಾಬಲಿಷ್ಠನಾಗಿ ಸಿಂಹಗಳನ್ನು ಹಿಡಿದು ಕ್ರೀಡಿಸುತ್ತಾ ಆನಂದಿಸುತ್ತಿದ್ದನು. ।।೧೮।।

**ತಂ ದುರತ್ಯಯವಿಕ್ರಾಂತಮಾದಾಯ ಪ್ರಮದೋತ್ತಮಾ ।**
**ಹರೇರಂಶಾಂಶಸಂಭೂತಂ ಭರ್ತುರಂತಿಕಮಾಗಮತ್ ।।೧೯।।**

**ಪ್ರಮದೋತ್ತಮಾ** ಶಂಕುತಲೆಯು, **ಹರೇಃ** ಪರಮಾತ್ಮನ **ಅಂಶಃ** ಪದ್ಮನಾಭನು ಅವನ, **ಅಂಶೇನ** ಅಂಶದಿಂದ ಕೂಡಿದವನಾಗಿ, **ಸಂಭೂತಂ** ಹುಟ್ಟಿದ ಆದ್ದರಿಂದಲೇ **ದುರತ್ಯಯವಿಕ್ರಾಂತಂ** ಮೀರಲಸಾಧ್ಯವಾದ ಪರಾಕ್ರಮ ಉಳ್ಳ, **ತಂ** ಆ ಬಾಲಕನನ್ನು **ಆದಾಯ** ಕರೆದುಕೊಂಡು, **ಭರ್ತುಃ** ಪತಿಯಾದ ದುಷ್ಯಂತನ **ಅಂತಿಕೇ** ಸಮೀಪಕ್ಕೆ, **ಆಗಮತ್** ಬಂದಳು.

**ತಾತ್ಪರ್ಯ-** ರಾಜನೇ! ಈ ಬಾಲಕನು ಸಾಮಾನ್ಯನಲ್ಲ. ಪದ್ಮನಾಭನ ವಿಶೇಷ ಸನ್ನಿಧಾನ ಪಾತ್ರನು. ಆದ್ದರಿಂದಲೇ ಈ ವಿಧವಾದ ಧೈರ್ಯ ಪರಾಕ್ರಮಗಳು ಬಾಲ್ಯದಲ್ಲಿಯೇ ಇದ್ದವು. ಕೆಲವು ದಿನಗಳ ಮೇಲೆ ಶಕುಂತಲೆಯು ಆ ಬಾಲಕನನ್ನು ಕರೆದುಕೊಂಡು ತನ್ನ ಪತಿಯ ಬಳಿಗೆ ಬಂದಳು. ।।೧೯।।

**ಯದಾ ನ ಜಗೃಹೇ ರಾಜಾ ಭಾರ್ಯಾಪುತ್ರಾವನಿಂದಿತೌ ।**
**ಶೃಣ್ವತಾಂ ಸರ್ವಭೂತಾನಾಂ ಖೇ ವಾಗಾಹಾಶರೀರಿಣೀ ।।೨೦।।**

**ರಾಜಾ** ದುಷ್ಯಂತನು **ಅನಿಂದಿತೌ** ದೋಷರಹಿತರಾದ, **ಭಾರ್ಯಾಪುತ್ರೌ** ಹೆಂಡತಿ ಮತ್ತು ಮಗನನ್ನು, **ಯದಾ** ಯಾವಾಗ, **ನ ಜಗೃಹೇ** ಸ್ವೀಕರಿಸಲಿಲ್ಲವೋ, ಆಗ **ಸರ್ವಭೂತಾನಾಂ** ಎಲ್ಲರೂ **ಶೃಣ್ವತಾಂ** ಕೇಳುವಾಗ **ಖೇ** ಆಕಾಶದಲ್ಲಿ **ಅಶರೀರಿಣೀ ವಾಕ್** ದೇವತಾವಾಣಿಯು, **ಆಹ** ರಾಜನಿಗೆ ಗುಹ್ಯಭಾಷೆಯಿಂದ ಹೇಳಿತು.

**ತಾತ್ಪರ್ಯ-** ಇತ್ತ ದುಷ್ಯಂತನಿಗೆ ತಾನು ಬೇಟೆಗೆ ಹೋಗಿ ಶಕುಂತಲೆಯನ್ನು ಮದುವೆಯಾದುದು ಒಂದು ರಾತ್ರಿ ಅವಳೊಡನೆ ಇದ್ದುದು, ಅನೇಕ ಸ್ತ್ರೀಲೋಲುಪತೆ ರಾಜ್ಯ ಭೋಗಗಳಲ್ಲಿ ಮರೆತು ಹೋಗಿತ್ತು. ಕಾರಣ ಬಾಲಕನೊಡನೆ ಬಂದ ಆ ಬಾಲೆ ಶಕುಂತಲೆಯನ್ನು ಸ್ವೀಕರಿಸಲಿಲ್ಲ. ಹೀಗೆ ನಿರ್ದುಷ್ಟಳಾದ ಪತ್ನಿ-ಪುತ್ರರನ್ನು ನಿರಾಕರಿಸಿದಾಗ ಸಭೆಯಲ್ಲಿರುವ ಎಲ್ಲರೂ ಕೇಳುವಂತೆ ಆಕಾಶದಲ್ಲಿ ದೇವತಾವಾಣಿ ಕೇಳಿಸಿತು. ।।೨೦।।

ಅಶರೀರವಾಣಿಯನ್ನು ವಿವರಿಸುವರು.

**ಮಾತಾ ಭಸ್ತ್ರಾ ಪಿತುಃ ಪುತ್ರೋ ಯಸ್ಮಾಜ್ಜಾತಃ ಸ ಏವ ಸಃ ।**
**ಭರಸ್ವ ಪುತ್ರಂ ದೌಷ್ಯಂತಿಂ ಮಾವಮಂಸ್ಥಾಃ ಶಕುಂತಲಾಃ ।।೨೧।।**

**ಮಾತಾ** ತಾಯಿಯು, **ಭಸ್ತ್ರಾ** ಕಮ್ಮಾರನ ಮನೆಯಲ್ಲಿ ಅಗ್ನಿಯನ್ನು ಪ್ರಜ್ವಲಿಸಲು ಬೇರೆಡೆಯಿಂದ ಬಂದ ಗಾಳಿಯನ್ನು ಧರಿಸುವ ಚರ್ಮದ ಚೀಲವಿದ್ದಂತೆ, ತಂದೆಯಿಂದ ಆಧಾನ ಮಾಡಿದ ವೀರ್ಯವನ್ನು ಸ್ವೀಕರಿಸಿ ಕೈಕಾಲು ಮುಂತಾದ ದೇಹಾಕಾರವಾಗಿ ಪರಿಣಾಮ ಹೊಂದುವ ವೀರ್ಯಕ್ಕೆ ಪ್ರಥಮ ಆಧಾರಳಷ್ಟೇ. ಆದ್ದರಿಂದ ತಾಯಿಯ ಮಗನೆಂಬುದು ಔಪಚಾರಿಕವು, ಹಾಗಾದರೆ ಮುಖ್ಯವಾಗಿ ಯಾರ ಮಗನೆಂದರೆ ಹೇಳುವರು. **ಪಿತುಃ** ತಂದೆಯ, **ಪುತ್ರಃ** ಮಗನು, ಎನ್ನುವದೇ ಮುಖ್ಯವು ಏಕೆಂದರೆ? **ಯಸ್ಮಾತ್** ಯಾವಕಾರಣ **ಸಃ** ತಂದೆಯೇ, **ಪುತ್ರೋ ಜಾತಃ** ಮಗನಾಗಿ ಜನಿಸಿರುವನು, **ತಸ್ಮಾತ್** ಆದ್ದರಿಂದ, **ಸಃ** ಮಗನು, **ಪಿತುರೇವ** ತಂದೆಗೆ ಸಂಬಂಧಿಸಿದವನೇ ''ಆತ್ಮಾ ವೈ ಪುತ್ರನಾಮಾಸಿ'' ''ತಜ್ಜಾಯಾ ಜಾಯಾ ಭವತಿ ಯದಸ್ಯಾಂ ಜಾಯತೇ ಸಃ'' ಹೀಗೆ ತಾನೇ ಮಗನು, ಎಂತಲೂ ಮತ್ತು ಹೆಂಡತಿಯಲ್ಲಿ ಪುನಃ ಇವನೇ ಜನಿಸುವದರಿಂದಲೇ ಅವಳಿಗೆ ಜಾಯಾ ಎಂದು ಹೆಸರು. ಎಂದು ಹೇಳುವ ಶ್ರುತಿಗಳುಂಟು. ಆಗಲಿ ಈಗೇನು ಮಾಡುವದು ಎಂದರೆ ಹೇಳುವರು, **ದೌಷ್ಯಂತಿಂ** ದುಷ್ಯಂತನಾದ ನಿನ್ನ ಮಗನಾದ್ದರಿಂದಲೇ ದೌಷ್ಯಂತಿನಾಮಕನಾದ **ಪುತ್ರಂ** ಮಗನನ್ನು, **ಭರಸ್ವ** ರಕ್ಷಣೆ ಮಾಡು, **ಶಕುಂತಲಾಂ** ಶಕುಂತಲೆಯನ್ನು, **ಮಾ ಅವಮಂಸ್ಥಾಃ** ಸ್ವೈರಿಣಿಯೆಂದು ಅವಮಾನಗೊಳಿಸಬೇಡ.

ಮಗನಿಂದ ನನಗೇನು ಪ್ರಯೋಜನ? ಅವನಿಗೇನು ನನ್ನಿಂದ ಪ್ರಯೋಜನ? ಅವನನ್ನೇಕೆ ರಕ್ಷಿಸಬೇಕು? ಎನ್ನುವ ಶಂಕೆಗೆ ಉತ್ತರ ಹೇಳುವರು.

**ರೇತೋಧಾಃ ಪುತ್ರಂ ನಯತಿ ನರದೇವ ಯಮಕ್ಷಯಮ್ ।**
**ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ ॥೨೨॥**

**ಭೋ ನರದೇವ** ರಾಜನೇ! **ಪುತ್ರಂ** ಮಗನು, **ರೇತೋಧಾಃ** ರೇತೋಧಾರಕನಾದ ತಂದೆಯನ್ನು, **ಯಂ ಅಕ್ಷಯಂ** ಯಾವುದು ನಾಶರಹಿತವಾದ ಲೋಕವೋ ಅಂಥ ವೈಕುಂಠಾದಿ ಲೋಕಗಳನ್ನು, **ನಯತಿ** ಹೊಂದಿಸುವನು. **ತ್ವಂ ಚ** ನೀನೇ, **ಅಸ್ಯ ಗರ್ಭಸ್ಯ ಧಾತಾ** ಈ ಗರ್ಭವನ್ನು ಆಧಾನ ಮಾಡಿದವನು, ನಿನಗಾರು ಹೇಳಿದವರು ಎಂದರೆ **ಶಕುಂತಲಾ** ಶಕುಂತಲೆಯು **ಸತ್ಯಂ** ನಿಜವಾಗಿಯೇ, **ಆಹ** ನಿನಗೆ ಹೇಳಿರುವಳು.

ಅಥವಾ ಮಗನನ್ನು ಸ್ವೀಕರಿಸದಿದ್ದರೆ ಅನರ್ಥವಿದೆ ಎಂದು ಹೇಳುವರು.

**ರೇತೋಧಾಃ** ತಂದೆಯಾದ ನೀನು **ಪುತ್ರಂ** ಮಗನನ್ನು **ಯಮಕ್ಷಯಂ** ಮೃತ್ಯುಲೋಕವನ್ನು ಅಂದರೆ ಮೃತಪ್ರಾಯನನ್ನು, **ನಯತಿ** ಮಾಡುತ್ತೀ ನೀನು ಸ್ವೀಕಾರ ಮಾಡದಿದ್ದರೆ ಅವನನ್ನು ಕೊಂದಂತೆಯೇ, ಇದರಿಂದ ನಿನಗೆ ಪುತ್ರಹತ್ಯಾ

ದೋಷ ಬರುವುದು. ಕಾರಣ ಈ ಭಯದಿಂದಾದರೂ ಸ್ವೀಕಾರ ಮಾಡು. ನಾನು ತಂದೆಯೇ ಅಲ್ಲ ಎಂದರೆ ಹೇಳುವರು. **ತ್ವಂ ಚಾಸ್ಯ ಧಾತಾ** ಎಂದು ನೀನೇ ಈ ಗರ್ಭಾಧಾನ ಮಾಡಿದವನು.

ಅಥವಾ ಆಕಾಶವಾಣಿಯನ್ನು ಕೇಳಿ ಸ್ವೀಕರಿಸುವೆನು, ಮುಂದೇನು? ಎಂದರೆ ತಂದೆಯ ಕರ್ತವ್ಯ ಹೇಳುವರು. **ರೇತೋಧಾಃ** ತಂದೆಯು **ಯಮಕ್ಷಯಂ** ಯಮಯತಿ ಶಿಕ್ಷಿಸುತ್ತಾನೆ (ಶಿಷ್ಯನನ್ನು) ಕಾರಣ ಯಮ ಎಂದರೆ ಗುರು. 'ಕ್ಷಿ ನಿವಾಸಗತ್ಯೋಃ' ಎಂದು ಧಾತು ಇರುವುದರಿಂದ, ಕ್ಷಯಂ ನಿವಾಸವನ್ನು ನಯತಿ ಕರೊದೊಯ್ಯುತ್ತಾನೆ. ಕಾರಣ ನೀನು ಸಹ ಮಗನನ್ನು ಸ್ವೀಕರಿಸಿ ಗುರುಕುಲವಾಸ ಮಾಡಿಸಿ ಅವನನ್ನು ವಿದ್ಯಾವಿಶಾರದನನ್ನಾಗಿ ಮಾಡುವಿ, ಎಂದರ್ಥ. ನೀನೇ ಅವನ ತಂದೆ ಸಂಶಯ ಬೇಡ. ತ್ವಂ ಚಾಸ್ಯಧಾತಾ ಎಂದು ಹೇಳಿರುವರು.

ಅಥವಾ **ರೇತೋಧಾಃ** ತಂದೆಯು, **ಅಕ್ಷಯಂ ಅಗತಿಂ** ಮತ್ತೊಬ್ಬ ಆಧಾರ ಇಲ್ಲದಿರುವ **ಯಂ** ಯಾವ **ಪುತ್ರಂ** ಮಗನನ್ನು, **ನಯತಿ** ತನ್ನ ಆಶ್ರಮದಲ್ಲಿ ಇಟ್ಟುಕೊಳ್ಳುತ್ತಾನೋ, **ಸಃ ಪುತ್ರಃ** ಆ ಮಗನು ತಂದೆಯನ್ನು, **ಅಕ್ಷಯಂ** ನಾಶರಹಿತ ಲೋಕವನ್ನು ಕುರಿತು, **ನಯತಿ** ಕರೆದೊಯ್ಯುತ್ತಾನೆ. ಇವನು ಬೇರೇ ಗತಿ ಇಲ್ಲದವನು ಎನ್ನುವದನ್ನೇ, **ತ್ವಂ ಚಾಸ್ಯ ಧಾತಾ** ನೀನೇ ಧಾರಕನು. ಈ ಎಲ್ಲ ವಿಷಯದಲ್ಲಿ ಶಕುಂತಲೆಯ ಮಾತೇ ಪ್ರಮಾಣ ಎಂದು ಹೇಳುವರು. ಸತ್ಯಮಾಹ ಶಕುಂತಲಾ ಎಂದು.

ನರದೇವಯಮಕ್ಷಯಂ ಒಂದೇ ಪದ. ಇಹದಲ್ಲಿ ನರಕ್ಷಯಂ ತಾನೇ ಮೊದಲಾದ ಮನುಷ್ಯರ ಮನೆಯನ್ನು ಮತ್ತು ದೇವಕ್ಷಯಂ ವೈಕುಂಠವನ್ನು ಸತ್ಕರ್ಮಾನುಷ್ಠಾನ ಮಾಡಿಸಿ, ನಯತಿ ಹೊಂದಿಸುತ್ತಾನೆ ಗೃಹದಲ್ಲಿ ಪೋಷಿಸಿ ಸತ್ಕರ್ಮಾನುಷ್ಠಾನ ಮಾಡಿಸಿ ಸದ್ಗತಿ ಪ್ರಾಪಕನು ತಂದೆಯು. ಸ್ವೀಕರಿಸದಿದ್ದರೆ ಯಮಕ್ಷಯಂ, ನಯತಿ ಯಮಪಟ್ಟಣಕ್ಕೆ ಕಳಿಸಿದಂತೆಯೇ ಹೀಗೆ ಭಾವವು.

ರೇತೋಧಾಃ ಪುತ್ರಃ ನಯತಿ ಯಮಕ್ಷಯಾತ್, ಹೀಗೂ ಪಾಠವಿದೆ ಆಗ **ಪುತ್ರಃ** ಮಗನು, **ರೇತೋಧಾಃ** ತಂದೆಯನ್ನು, **ಯಮಕ್ಷಯಾತ್** ಯಮಲೋಕದಿಂದ **ನಯತಿ** ದಾಟಿಸುತ್ತಾನೆ. ಹೀಗೆ ಅರ್ಥ ''ಪುನ್ನಾಮ್ನೋ ನರಕಾದ್ಯಸ್ಮಾತ್ ಪಿತರಂ ತ್ರಾಯತೇ ಸುತಃ । ತಸ್ಮಾತ್ ಪುತ್ರ ಇತಿ ಪ್ರೋಕ್ತಃ ಸ್ವಯಮೇವ ಸ್ವಯಂಭುವಾ ॥ ''ಯಃ ಪುತ್ರಃ ಸಃ ರೇತೋಧಾತಾರಮಕ್ಷಯಂ ನಯತಿ'', ಹೀಗೆ ಸ್ಮೃತಿ-ಶ್ರುತಿಗಳು ಉಂಟು. ಹೀಗೆ ವಾಣಿ ಕೇಳಿ ಮಗನನ್ನು ಪತ್ನಿಯನ್ನು ಸ್ವೀಕರಿಸಿದನು.

ತಂದೆಯನ್ನು ನರಕದಿಂದ ಸಂರಕ್ಷಿಸುವವನು ಮಗನು. ಮಗನನ್ನು ಪೋಷಿಸಿ ಸನ್ಮಾರ್ಗದಲ್ಲಿಡುವದು ತಂದೆಯ ಕರ್ತವ್ಯವು. ಇಲ್ಲವಾದರೆ ದೋಷ ಬರುವದು. ಕಾರಣ ಸ್ವೀಕರಿಸು ಎಂಬ ಮಾತನ್ನು ಕೇಳಿ ಸ್ವೀಕರಿಸಿದನು. ಪುತ್ರಂ ಭರಸ್ವ ಎಂದು ಹೇಳಿದುದರಿಂದ ಭರತನೆಂದು ಹೆಸರಾಯಿತು. ಇವನು ಮೊದಲು ಎಲ್ಲ ಬಲಿಷ್ಠ ಪ್ರಾಣಿಗಳನ್ನು ದಮನ ಮಾಡುತ್ತಿದ್ದರಿಂದ ಸರ್ವದಮನ ಎಂದು ಹೆಸರು.

ರಾಜನು ಶಕುಂತಲೆಯನ್ನು ಸಹಸಾ ಸ್ವೀಕರಿಸಿದ್ದರೆ ಏಕಾಂತದಲ್ಲಿ ನಡೆದ ವಿವಾಹಾದಿಗಳನ್ನು ಅರಿಯದ ಜನರು ಸೌಂದರ್ಯ ಮೋಹಿತನಾಗಿ ಯಾವಳನ್ನೋ ಸ್ವೀಕರಿಸಿದನು ಹೀಗೆ ಅಪವಾದ ಬಂದಿತೆಂದು ಸ್ವೀಕರಿಸದಿರುವದು ಯೋಗ್ಯವೇ ಆಗಿದೆ. ಹೀಗೆ ಅಶರೀರವಾಣಿಯಾದಾಗ್ಗೆ ಮಂತ್ರಿ ಮೊದಲಾದವರಿಗೆ ಇಕೋ ದೇವವಾಣಿಯನ್ನು ಕೇಳಿರಿ ಎಂದಿದ್ದಾನೆ. ಈ ಕಾರಣವೇ ನಿನ್ನನ್ನು ಸ್ವೀಕರಿಸಲಿಲ್ಲ ಎಂದು ಶಕುಂತಲೆಯನ್ನು ಸಮಾಧಾನಗೊಳಿಸಿದ ವೃತ್ತಾಂತ, ಆದಿಪರ್ವದ ೧೦೦ ನೇ ಅಧ್ಯಾಯದಲ್ಲಿ ವಿಸ್ತಾರವಾಗಿದೆ. ಅಲ್ಲಿಯೇ ತಿಳಿಯಬೇಕು. ।।೨೨।।

**ಪಿತರ್ಯುಪರತೇ ಸೋಽಭೂಚ್ಚಕ್ರವರ್ತೀ ಮಹಾಯಶಾಃ ।**
**ಮಹಿಮಾ ಗೀಯತೇ ತಸ್ಯ ಹರೇರಂಶಭುವೋ ಭುವಿ ।।೨೩।।**

**ಪಿತರಿ** ತಂದೆಯು, **ಉಪರತೇ** ಮರಣ ಹೊಂದಲು, **ಮಹಾಯಶಾಃ** ಕೀರ್ತಿವಂತನಾದ, **ಸಃ** ಭರತನು (ಮತ್ವರ್ಥೇ ತಪ್ರತ್ಯಯಃ ಭರ ಇತಿ ಶಬ್ದಃ ಅಸ್ಯ ಇತಿ ಭರತಃ ಭರೇಣ ಹರಿಣಾ ತತತ್ವಾತ್ ಭರತಃ, ಭೂಮೇಃ ಭರಂ ಭರಣಂ ತನೋತಿ ಇತಿ ಭರತಃ, ಗುರುತ್ವರೂಪಭಾರೇಣ ತತತ್ವಾತ್ ಭರತಃ, ಶುಭೇ ರತತ್ವಾತ್ ಭರತಃ) **ಚಕ್ರವರ್ತೀ** ಆಜ್ಞಾಮಾತ್ರದಿಂದ ಧರ್ಮ ಅಧರ್ಮಗಳ ಶಾಸನ ಮಾಡುವವನು **ಅಭೂತ್** ಆದನು. **ಭುವಿ** ಜಗತ್ತಿನಲ್ಲಿ, **ಹರೇಃ** ನಾರಾಯಣನ, **ಅಂಶಭುವಃ** ಪದ್ಮನಾಭನಿಂದ (ಭವತೀತಿ ಭೂಃ) ಕೂಡಿಕೊಂಡು ಜನಿಸಿದ, **ತಸ್ಯ** ಭರತನ **ಮಹಿಮಾ** ಮಾಹಾತ್ಮ್ಯವು **ಗೀಯತೇ** ವರ್ಣಿಸಲ್ಪಡುತ್ತದೆ. ಋಗ್ವೇದದಲ್ಲಿ ವರ್ಣಿತವಾಗಿದೆ.

**ತಾತ್ಪರ್ಯ-** ದುಷ್ಯಂತನ ಕಾಲಾನಂತರದಲ್ಲಿ ಈ ಭರತನೇ ಚಕ್ರವರ್ತಿಯಾಗಿ ರಾಜ್ಯವನ್ನು ಪಾಲಿಸುತ್ತಾ ಮಹಾಕೀರ್ತಿಶಾಲಿಯಾದನು. ಇವನ ಮಹಿಮೆಯನ್ನು ಸಮಸ್ತ ಜಗತ್ತೇ ಕೊಂಡಾಡುವದು. ।।೨೩।।

**ಚಕ್ರಂ ದಕ್ಷಿಣಹಸ್ತೇಽಸ್ಯ ಪದ್ಮಕೋಶಶ್ಚ ಪಾದಯೋಃ ।**
**ಈಜೇ ಮಹಾಭಿಷೇಕೇಣ ಸೋಽಭಿಷಿಕ್ತೋಽಧಿರಾಟ್ ಪ್ರಭುಃ ।।೨೪।।**

ಇವನು ಪದ್ಮನಾಭಾಂಶ ಸಂಭೂತನೆಂಬಲ್ಲಿ ಲಕ್ಷಣ ಹೇಳುವರು. **ಅಸ್ಯ** ಇವನ **ದಕ್ಷಿಣಹಸ್ತೇ** ಬಲಗೈಯಲ್ಲಿ, **ಚಕ್ರಂ** ಚಕ್ರವು **ಪಾದಯೋಃ** ಕಾಲುಗಳಲ್ಲಿ, **ಪದ್ಮಕೋಶಃ** ಪದ್ಮರೇಖೆಯು ಇದ್ದವು, **ಸಃ** ಆ ಭರತನು, **ಮಹಾಭಿಷೇಕೇಣ** ಐಂದ್ರವೆಂಬ ಅಭಿಷೇಕದಿಂದ **ಅಭಿಷಿಕ್ತಃ ಸನ್** ಅಭಿಷಿಕ್ತನಾಗಿ **ಅಧಿರಾಟ್‌ಪ್ರಭುಃ** ರಾಜಾಧಿರಾಜರಿಗೆ ನಿಯಾಮಕನಾಗಿ **ಈಜೇ** ಯಜ್ಞ ಮಾಡಿದನು.

**ತಾತ್ಪರ್ಯ-** ಪದ್ಮನಾಭಾಂಶನಾದ ಇವನಿಗೆ ಕೈಯಲ್ಲಿ ಚಕ್ರರೇಖೆಯು, ಪಾದದಲ್ಲಿ ಪದ್ಮರೇಖೆಯು ಇದ್ದವು. ಇವನನ್ನು ದೀರ್ಘತಮನು ಐಂದ್ರವೆಂಬ ಮಹಾಭಿಷೇಕವಿಧಿಯಿಂದ ಅಭಿಷೇಕ ಮಾಡಿದನು. ಆ ಅಭಿಷೇಕ ಮಹಿಮೆಯಿಂದ ಎಲ್ಲ ಪೃಥ್ವಿಯನ್ನು ಗೆದ್ದನು. ತಿರುಗಿ ಬಂದು ಶುದ್ಧವಾದ ಕುದುರೆಗಳಿಂದ ಯಾಗ ಮಾಡಿದನು. ಕಪ್ಪಾದ ಬಿಳಿ ದಂತ ಉಳ್ಳ ಸುವರ್ಣಾಲಂಕೃತವಾದ ಒಂದು ನೂರು ಕೋಟಿ ಮೇಲೆ ಏಳುನೂರು ಆನೆಗಳನ್ನು ದಾನ ಮಾಡಿದನು.

ಈ ಯಾಗವನ್ನು ಮೃಷ್ಣಾರ ಎಂಬ ದೇಶದಲ್ಲಿ ಮಾಡಿದನು. ಮುಂತಾಗಿ ವೇದದಲ್ಲಿ ವರ್ಣಿತವಾಗಿದೆ. ಇದನ್ನೇ ಸಂಗ್ರಹವಾಗಿ ಮುಂದಿನ ಶ್ಲೋಕದಲ್ಲಿ ಹೇಳುವರು. ಋಷಿಮಂತ್ರಗಳನ್ನು ಸತ್ಯಧರ್ಮರ ಟಿಪ್ಪಣಿಯಲ್ಲಿ ನೋಡಬಹುದು.

**ಪಂಚಪಂಚಾಶತ್ಯೈರ್ಮೇಧ್ಯೈರ್ಗಂಗಾಯಾಮನು ವಾಜಿಭಿಃ ।**
**ದೀರ್ಘತಮಸಂ ಪುರೋಧಾಯ ಯಮುನಾಯಾಮನು ಪ್ರಭುಃ ॥೨೫॥**

**ಅಷ್ಟಸಪ್ತತಿ ಮೇಧ್ಯಾಶ್ವಾನ್ ಬಬಂಧ ಪ್ರದದೇ ವಸು ।**
**ಭರತಸ್ಯ ಹಿ ದೌಷ್ಯಂತೇರಗ್ನಿಃ ಸಾಚೀಗುಣೇ ಚಿತಃ ॥೨೬॥**

**ಪ್ರಭುಃ** ಭರತಚಕ್ರವರ್ತಿಯು, **ಗಂಗಾಯಾಂ ಅನು** ಗಂಗಾತೀರದಲ್ಲಿ **ಪಂಚಪಂಚಾಶತ್ಯೈಃ** ಐವತ್ತು ಐದು **ಮೇಧ್ಯೈಃ** ಯಜ್ಞಕ್ಕೆ ಯೋಗ್ಯವಾದ **ವಾಜಿಭಿಃ** ಕುದುರೆಗಳಿಂದ **ಈಜೇ** ಯಜ್ಞ ಮಾಡಿದನು. ಮತ್ತು **ದೀರ್ಘತಮಸಂ** ದೀರ್ಘತಮಸ-ನೆಂಬ ಋಷಿಯನ್ನು **ಪುರೋಧಾಯ** ಪುರೋಹಿತನನ್ನಾಗಿ ಮಾಡಿಕೊಂಡು **ಯಮುನಾಯಾಂ ಅನು** ಯಮುನಾತೀರದಲ್ಲಿ **ಅಷ್ಟಸಪ್ತತಿ** ಎಪ್ಪತ್ತೆಂಟು **ಮೇಧ್ಯಾಶ್ವಾನ್** ಯಾಗದ ಕುದುರೆಗಳನ್ನು **ಬಬಂಧ** ಕಟ್ಟಿದನು. ಆಗ **ವಸು** ರತ್ನರಾಶಿಯನ್ನೇ, **ಪ್ರದದೇ** ದಕ್ಷಿಣೆಯಾಗಿ ಕೊಟ್ಟನು, **ದೌಷ್ಯಂತೇಃ** ದುಷ್ಯಂತನ ಮಗನಾದ **ಭರತಸ್ಯ** ಭರತನಿಗೆ ಯಜ್ಞದಲ್ಲಿ, **ಅಗ್ನಿಃ** ಅಗ್ನಿಯು **ಸಾಚೀಗುಣೇ ಚಿತಃ (ಸಚಿವಗುಣಕೃತಃ)** ಸಹಾಯ ಮಾಡಿದನು. ಮಥನ ಮಾಡಿದಾಗ ಬೇಗ ಪ್ರಕಟವಾದನು.

**ತಾತ್ಪರ್ಯ-** ಭರತ ಚಕ್ರವರ್ತಿಯು ಗಂಗಾತೀರದಲ್ಲಿ ಐವತ್ತೈದು, ಮತ್ತು ಯಮುನಾ ತೀರದಲ್ಲಿ ಎಪ್ಪತ್ತೆಂಟು ಅಶ್ವಮೇಧಯಾಗಗಳನ್ನು ದೀರ್ಘತಮಸ್ಸರೆಂಬ ಋಷಿಗಳನ್ನಿಟ್ಟುಕೊಂಡು ಮಾಡಿದನು. ಆಗ ರತ್ನಗಳ ರಾಶಿಯನ್ನೇ ದಕ್ಷಿಣೆಯಾಗಿ ಕೊಟ್ಟನು. ಅಗ್ನಿಯು ಮಥನಕಾಲದಲ್ಲಿ ಬೇಗನೆ ಪ್ರಕಟವಾಗಿ ರಾಜನಿಗೆ ಸಹಾಯ ಮಾಡಿದನು. ||೨೬||

**ಸಹಸ್ರಂ ದ್ವಂದ್ವಶೋ ಯಸ್ಮಿನ್ ಬ್ರಾಹ್ಮಣಾ ಗಾ ವಿಭೇಜಿರೇ ।**
**ತ್ರಯಸ್ತ್ರಿಂಶಚ್ಛತಂ ಹ್ಯಶ್ವಾನ್ ಬಧ್ವಾ ವಿಸ್ಮಾಪಯನ್ನೃಪಾನ್ ।**
**ದೌಷ್ಯಂತಿರತ್ಯಗಾನ್ಮಾಯಾಂ ದೇವಾನಾಂ ಪುರುಮಾಯಯಾ ||೨೭||**

**ಯಸ್ಮಿನ್** ಯಾವ ಯಜ್ಞದಲ್ಲಿ, **ಬ್ರಾಹ್ಮಣಾಃ** ಬ್ರಾಹ್ಮಣರು, **ದ್ವಂದ್ವಶಃ ಸಹಸ್ರಂ** ಎರಡು ಎರಡು ಸಾವಿರ, **ಗಾಃ** ಆಕಳುಗಳನ್ನು **ವಿಭೇಜಿರೇ** ಹಂಚಿಕೊಂಡರು **ದೌಷ್ಯಂತಿಃ** ಭರತನು, **ತ್ರಯಸ್ತ್ರಿಂಶಚ್ಛತಂ** ಒಂದು ನೂರಾಮೂವತ್ಮೂರು (೧೩೩) **ಅಶ್ವಾನ್** ಕುದುರೆಗಳನ್ನು **ಬಧ್ವಾ** ಕಟ್ಟಿ, **ನೃಪಾನ್** ಮಿಕ್ಕ ರಾಜರನ್ನು, **ವಿಸ್ಮಾಪಯನ್** ಆಶ್ಚರ್ಯಗೊಳಿಸಿದನು. **ಪುರುಮಾಯಯಾ** ಮಹತ್ತರವಾದ ಮಹಿಮೆಯಿಂದ, **ದೇವಾನಾಂ** ದೇವತೆಗಳ **ಮಾಯಾಂ** ಭೋಗಾಭಿಲಾಷೆಯನ್ನು **ಅತ್ಯಗಾತ್** ಮೀರಿದನು. ಅವರ ಅಪೇಕ್ಷೆಗಿಂತ ಹೆಚ್ಚು ಪ್ರಧಾನ ಮಾಡಿದನು. ಅಥವಾ ಯಜ್ಞ ವಿಘ್ನಕಾರಿಯಾದ ಮಾಯೆಯನ್ನು ಮೀರಿದನು ಎಂದರ್ಥ. (ವಿಜಯಧ್ವಜೀಯ ಪ್ರಕಾರ).

**ತಾತ್ಪರ್ಯ-** ಭರತನು ಅನೇಕ ಆಕಳನ್ನು ದಾನಮಾಡಿದನು. ಬ್ರಾಹ್ಮಣರು ಎರಡೆರಡು ಸಾವಿರ ಆಕಳುಗಳನ್ನು ಹಂಚಿಕೊಂಡರು. ನೂರಾಮೂವತ್ಮೂರು ಕುದುರೆಗಳನ್ನು ಕಟ್ಟಿ ಯಾಗ ಮಾಡಿದನು. ಮಿಕ್ಕ ರಾಜರನ್ನು ಆಶ್ಚರ್ಯ ಚಕಿತರನ್ನಾಗಿ ಮಾಡಿದನು. ದೇವತೆಗಳಿಗೆ ಅಪೇಕ್ಷೆಗಿಂತ ಹೆಚ್ಚು ದಾನ ಮಾಡಿದನು. ಯಾವ ವಿಧ ದುಷ್ಟಮಾಯಾಶಕ್ತಿಗಳ ವಿಘ್ನವಿಲ್ಲದೆ ಯಾಗ ಪೂರ್ತಿ ಮಾಡಿದನು.

ಮೇಲಿನ ಶ್ಲೋಕಗಳಲ್ಲಿ ಶ್ರುತಿಪದಗಳನ್ನೇ ಅನುವಾದ ಮಾಡುತ್ತಾ ಬಂದಿದ್ದರಿಂದ ''ಚಿತಃ ಸಹಸ್ರಂ ವದ್ವಶಃ'' ಎಂದು ಪಾಠವಿರಬೇಕು.ದ್ವಂದ್ವಂಶಃ ಎನ್ನುವ ಪಾಠವು ಲೇಖಕಮಹಿಮಾ ಎಂದು ಸತ್ಯಧರ್ಮರು ಹೇಳಿರುವರು. ಶ್ರುತಿಯೂ ಹಾಗೆ ಇದೆ.

**ಸಾಚೀಗುಣೇ** ಸಮೀಚಿನವಾದ ದೇಶವಿಶೇಷದಲ್ಲಿ, **ಚಿತಃ** ಚಯನಗಳನ್ನು ಮಾಡಿದನು. ಸಹಸ್ರ ಬ್ರಾಹ್ಮಣರು **ವದ್ವಶಃ** ಪ್ರತಿಯೊಬ್ಬನೂ ಕೋಟಿ ಕೋಟಿ ಸಂಖ್ಯಾಕ ಆಕಳುಗಳನ್ನು ಹಂಚಿಕೊಂಡರು ಹೀಗೆ ಅರ್ಥ. ''ವದ್ವ'' ಎಂದರೆ ವೃಂದ ವೃಂದವೆಂದರೆ ನೂರು ಕೋಟಿ.

ಏಕಂ ದಶ ಶತಂ ಚೈವ ಸಹಸ್ರಮಯುತಂ ತಥಾ ।
ಲಕ್ಷಂ ಚ ನಿಯುತಂ ಚೈವ ಕೋಟಿರರ್ಬುದ ಏವ ಚ ॥

ವೃಂದಃ ಖರ್ವೋ ನಿಖರ್ವಶ್ಚ ಶಂಖಪದ್ಮೌ ಚ ಸಾಗರಃ ।
ಅಂತ್ಯಮಧ್ಯಂ ಪರಾರ್ಧಂ ಚ ದಶವೃದ್ಧ್ಯಾ ಯಥೋತ್ತರಮ್ ॥

ಶತಂ ಸಹಸ್ರಮಯುತಂ ನಿಯುತಂ ಪ್ರಯುತಂ ಮತಮ್ ।
ತ್ರಿಕೋಟಿರರ್ಬುದಮಿತಿ ಕ್ರಮಾದ್ದಶಗುಣೋತ್ತರಮ್ ॥

**ಮೃಗಾಂಶ್ಶುಕ್ಲದತಃ ಕೃಷ್ಣಾನ್ಹಿರಣ್ಯೇನ ಪರಿಷ್ಕೃತಾನ್ ।**
**ಅದಾತ್ಕರ್ಮಣಿ ಮೃಷ್ಣಾರೇ ನಿಯುತಾನಿ ಚತುರ್ದಶ ॥೨೮॥**

**ಮೃಷ್ಣಾರೇ** ಈ ಹೆಸರಿನ **ಕರ್ಮಣಿ** ಕರ್ಮವಿಶೇಷದಲ್ಲಿ ಅಥವಾ ಒಂದು ಕ್ಷೇತ್ರದಲ್ಲಿ **ಶುಕ್ಲದತಃ** ಬಿಳಿಯ ಹಲ್ಲುಗಳುಳ್ಳ (ಕೊರೇ ಹಲ್ಲು) **ಕೃಷ್ಣಾನ್** ಕಪ್ಪಾದ, **ಮೃಗಾನ್** ಆನೆಗಳನ್ನು, **ಹಿರಣ್ಯೇನ** ಬಂಗಾರದಿಂದ **ಪರಿಷ್ಕೃತಾನ್** ಅಲಂಕೃತವಾದವುಗಳನ್ನು **ಚತುರ್ದಶ** ಹದಿನಾಲ್ಕು **ನಿಯುತಾನಿ** ಒಂದು ಲಕ್ಷ ಅಥವಾ ಹತ್ತು ಲಕ್ಷ **ಮೃಗಾನ್** ಆನೆಗಳನ್ನು ಅಥವಾ ಕಪ್ಪು ಚುಕ್ಕೆಯ ಜಿಂಕೆಗಳನ್ನು **ಅದಾತ್** ಕೊಟ್ಟನು.

**ತಾತ್ಪರ್ಯ-** ಮೃಷ್ಣಾರ ಕ್ಷೇತ್ರದಲ್ಲಿ ತಾನು ಮಾಡಿದ ಯಜ್ಞ ರೂಪಕರ್ಮದಲ್ಲಿ ಹತ್ತು ಆನೆಗಳ ಹದಿನಾಲ್ಕು ಸಾವಿರವನ್ನು ದಾನ ಮಾಡಿದನು. (೧೪೦ ಕೋಟಿ).

**ಭರತಸ್ಯ ಮಹತ್ಕರ್ಮ ನ ಪೂರ್ವೇ ನಾಪರೇ ನೃಪಾಃ ।**
**ನೋದಾಯುರ್ನೈವ ಪ್ರಾಪ್ಸ್ಯಂತಿ ಬಾಹುಭ್ಯಾಂ ತ್ರಿದಿವಂ ಯಥಾ ॥೨೯॥**

**ಭರತಸ್ಯ** ಭರತನ **ಮಹತ್ಕರ್ಮ** ಅನೇಕ ಅಶ್ವಮೇಧ, ದಾನ ಮುಂತಾದ ಕಾರ್ಯವನ್ನು **ಪೂರ್ವೇ** ಹಿಂದಿನ **ನೃಪಾಃ** ರಾಜರು, **ನ ಉದಾಯುಃ** ಹೊಂದಿಲ್ಲ. **ಅಪರೇ** ಮುಂದಿನ, **ನೃಪಾಃ** ರಾಜರು, **ನ ಪ್ರಾಪ್ಸ್ಯಂತಿ** ಹೊಂದಲಾರರು. ಈಗಿನವರು ಹೊಂದುವದಿಲ್ಲವೆಂದೇನು ಹೇಳುವುದು? ದೃಷ್ಟಾಂತ ಹೇಳುವರು. **ತ್ರಿದಿವಂ** ಸ್ವರ್ಗವನ್ನು **ಬಾಹುಭ್ಯಾಂ** ಕೈಗಳಿಂದ **ಯಥಾ** ಹೇಗೆ **ನ** ಹೊಂದುವದಿಲ್ಲವೋ ಹಾಗೆ.

**ತಾತ್ಪರ್ಯ-** ರಾಜನೇ! ಭರತನಂತಹ ಅದ್ಭುತ ಕರ್ಮಗಳನ್ನು ಹಿಂದೆ ಯಾವ ರಾಜರು ಮಾಡಿಲ್ಲ. ಮುಂದೆಯೂ ಮಾಡುವವರಿಲ್ಲ. ಅಗ್ನಿಷ್ಟೋಮಾದಿಗಳಿಂದ ಹೊಂದಬೇಕಾದ ಸ್ವರ್ಗವನ್ನು ಕೇವಲ ಕೈ ಚಾಚಿ ಹೊಂದುವದು ಹೇಗೆ ಅಸಾಧ್ಯವೋ ಹಾಗೆ ಭರತನಂತೆ ಕೀರ್ತಿಯನ್ನು ಪಡೆದವರು ಹಿಂದೆ ಈಗ ಮುಂದೆಯೂ ಯಾರೂ ಸಿಕ್ಕಲಾರರು. ॥೨೯॥

**ಕಿರಾತಹೂಣಾನ್ಯವನಾನಂಧ್ರಾನ್ಕಂಕಾನ್ಕಷಾಂಶ್ಶಕಾನ್ ।**
**ಅಬ್ರಹ್ಮಣ್ಯಾನ್ ನೃಪಾಂಶ್ಚಾಹನ್ ಮ್ಲೇಚ್ಛಾನ್ದಿಗ್ವಿಜಯೇಽಖಿಲಾನ್ ॥೩೦॥**

**ದಿಗ್ವಿಜಯೇ** ದಿಕ್ಕುಗಳನ್ನು ಜಯಿಸುವ ಕಾಲದಲ್ಲಿ **ಅಖಿಲಾನ್** ಎಲ್ಲ **ಅಬ್ರಹ್ಮಣ್ಯಾನ್** ಬ್ರಾಹ್ಮಣ ವಿರೋಧಿಗಳಾದ, **ಕಿರಾತಾನ್** ಕಿರಾತಕರನ್ನು, **ಹೂಣಾನ್** ಹೂಣರನ್ನು, **ಯವನಾನ್** ಯವನರನ್ನು **ಅಂಧ್ರಾನ್** ಅಂಧ್ರರನ್ನು, **ಕಂಕಾನ್** ಕಂಕರನ್ನು, **ಕಷಾನ್** ಕಷರನ್ನು, **ಶಕಾನ್** ಶಕರನ್ನು **ಮ್ಲೇಚ್ಛಾನ್** ಮುಸಲ್ಮಾನರನ್ನು **ಅಹನ್** ಸಂಹರಿಸಿದನು. ಕಿರಾತ ಮೊದಲಾದವರು ಮುಸಲ್ಮಾನ ಜಾತಿಯ ಅವಾಂತರ ಪ್ರಭೇದಗಳೆಂದು ತಿಳಿಯಬೇಕು.

**ತಾತ್ಪರ್ಯ-** ಈ ಭರತನು ಬ್ರಾಹ್ಮಣಕುಲಕ್ಕೆ ಹಿಂಸಕರಾದ ಕಿರಾತರು, ಹೂಣರು ಯವನರು ಅಂಧ್ರರು, ಕಂಕರು, ಶಕರು, ಮ್ಲೇಚ್ಛರೇ ಮೊದಲಾದ ಹೀನ ಜಾತಿಯ ರಾಜರೆಲ್ಲರನ್ನು ಜಯಿಸಿ ಲೋಕಕ್ಷೇಮ ಉಂಟು ಮಾಡಿದನು. ॥೩೦॥

ಇನ್ನೊಂದು ಭರತನ ಪರಾಕ್ರಮವನ್ನು ಹೇಳುವರು.

**ಜಿತ್ವಾ ಪುರಾಽಸುರಾನ್ದೇವಾ ಯೇನ ಸ್ವೌಕಾಂಸಿ ಭೇಜಿರೇ ।**
**ದೇವಸ್ತ್ರಿಯೋ ರಸಾಂ ನೀತಾಃ ಪಣಿಭಿಃ ಪುನರಾಹರತ್ ॥೩೧॥**

**ಪುರಾ** ಹಿಂದೆ, **ದೇವಾಃ** ದೇವತೆಗಳು, **ಯೇನ** ಯಾವ ಭರತನ ಸಹಾಯದಿಂದ **ಅಸುರಾನ್** ದೈತ್ಯರನ್ನು, **ಜಿತ್ವಾ** ಗೆದ್ದು, **ಸ್ವ** ತಮ್ಮ **ಓಕಾಂಸಿ** ಮನೆಗಳನ್ನು, **ಭೇಜಿರೇ** ಹೊಂದಿದರೋ, **ಸಃ** ಆ ಭರತನು, **ಪಣಿಭಿಃ** ಪಣಿ ಎಂಬ ಹೆಸರಿನ ದೈತ್ಯರಿಂದ, **ರಸಾಂ** ರಸಾತಲಕ್ಕೆ **ನೀತಾಃ** ಒಯ್ಯಲ್ಪಟ್ಟ **ದೇವಸ್ತ್ರಿಯಃ** ದೇವತಾಸ್ತ್ರೀಯರನ್ನು **ಪುನಃ ಆಹರತ್** ತಿರುಗಿ ಕರೆತಂದನು.

**ತಾತ್ಪರ್ಯ-** ಭರತನು ದೇವತೆಗಳಿಗೆ ಯುದ್ಧದಲ್ಲಿ ಸಹಾಯ ಮಾಡಿದನು. ಮತ್ತು ದೈತ್ಯರು ರಸಾತಲಕ್ಕೆ ಕರೆದೊಯ್ದ ಸುರಸ್ತ್ರೀಯರನ್ನು ಮರಳಿ ಕರೆತಂದನು.

**ಸರ್ವಕಾಮಾನ್ದುದುಹತುಃ ಪ್ರಜಾನಾಂ ತಸ್ಯ ರೋದಸೀ ।**
**ಸಮಾಸ್ತ್ರಿನವಸಾಹಸ್ರೀರ್ದಿಕ್ಷು ಚಕ್ರಮವರ್ತಯತ್ ॥೩೨॥**

**ತಸ್ಯ** ಭರತನ (**ರಾಜ್ಯೇ** ರಾಜ್ಯದಲ್ಲಿ) **ರೋದಸೀ** ಭೂಮ್ಯಾಕಾಶಗಳು, **ಪ್ರಜಾನಾಂ** ಪ್ರಜೆಗಳ **ಸರ್ವಕಾಮಾನ್** ಎಲ್ಲ ಅಭೀಷ್ಟಗಳನ್ನು **ದುದುಹತುಃ** ಕರೆದವು. ರಾಜನು **ತ್ರಿನವಸಾಹಸ್ರೀಃ ಸಮಾಃ** ಇಪ್ಪತ್ತೇಳು ಸಾವಿರ ವರ್ಷಗಳು, **ದಿಕ್ಷು** ಸಮಸ್ತ ದಿಕ್ಕುಗಳಲ್ಲಿ, **ಚಕ್ರಂ** ಆಜ್ಞೆಯನ್ನು, **ಅವರ್ತಯತ್** ನಡೆಸಿದನು. (ಚಕ್ರಮಾಜ್ಞಾರಥಾಂಗಯೋಃ)

**ತಾತ್ಪರ್ಯ-** ಭರತನು ರಾಜ್ಯವಾಳುವಾಗ ಭೂಮಿ, ಆಕಾಶಗಳು ಪ್ರಜರಿಗೆ ಬೇಕಾದ ಕೋರಿಕೆಗಳೆಲ್ಲವನ್ನು ಒದಗಿಸುತ್ತಿದ್ದವು. ಅವನ ಆಜ್ಞೆಯು ಎಲ್ಲ ದಿಕ್ಕುಗಳಲ್ಲಿ ನಿರಂಕುಶವಾಗಿ ನಡೆಯುತ್ತಿತ್ತು . ಹೀಗೆ ಏಕಚಕ್ರಾಧಿಪತ್ಯದಿಂದ ಇಪ್ಪತ್ತೇಳು ಸಾವಿರ ವರ್ಷ ಭೂಮಂಡಲವನ್ನು ಪಾಲಿಸಿದನು. ||೩೨||

ಭರತನ ವೈರಾಗ್ಯದ ಪ್ರಕಾರವನ್ನು ಹೇಳುವರು.

**ಸ ಸಮ್ರಾಟ್ ಲೋಕಪಾಲಾನಾಮೈಶ್ವರ್ಯಮಧಿರಾಟ್ ಶ್ರಿಯಮ್ ।**
**ಚಕ್ರಂ ವಾ ಸ್ಖಲಿತಂ ಪ್ರಾಣಾನ್ಮೃಷೇತ್ಯುಪರರಾಮ ಹ ||೩೩||**

**ಸಃ ಸಮ್ರಾಟ್** ಆ ಭರತಚಕ್ರವರ್ತಿಯು **ಲೋಕಪಾಲಾನಾಂ** ಇಂದ್ರಾದಿ ದೇವತೆಗಳ **ಐಶ್ವರ್ಯಂ** ಸ್ವರ್ಗಾಧಿಪತ್ಯ ಮೊದಲಾದವುಗಳನ್ನು, **ಅಧಿರಾಟ್ಶ್ರಿಯಂ** ಸಾಮ್ರಾಜ್ಯಲಕ್ಷ್ಮಿಯನ್ನು, **ಅಸ್ಖಲಿತಂ** ಅಪ್ರತಿಹತವಾದ, **ಚಕ್ರಂ** ಸೈನ್ಯವನ್ನು (ಚಕ್ರಂ ಸೈನ್ಯೇ ಜಲಾವರ್ತೇ) **ಪ್ರಾಣಾನ್** ಇಂದ್ರಿಯಾದಿಗಳನ್ನು, **ಮೃಷಾ ಇತಿ** ನಶ್ವರವೆಂದು ತಿಳಿದು, **ಉಪರರಾಮ** ಉಪರತನಾದನು. ನಿಸ್ಪೃಹನಾದನು. ವಿರಕ್ತನಾದನು. **ಹ** ''ಆಬ್ರಹ್ಮಸ್ತಂಭಪರ್ಯಂತಮಸಾರಂಚಾಪ್ಯನಿತ್ಯಕಂ'' ಮುಂತಾದ ಪ್ರಮಾಣ ಸಿದ್ಧವು.

**ತಾತ್ಪರ್ಯ-** ಲೋಕಪಾಲಕರ ಎಲ್ಲವಿಧವಾದ ಐಶ್ವರ್ಯವು, ಸಾಮ್ರಾಜ್ಯ-ಲಕ್ಷ್ಮಿಯು, ಅಸ್ಖಲಿತವಾದ ಸೈನ್ಯವು, ಇಂದ್ರಿಯಾದಿಗಳು ಎಲ್ಲವೂ ನಶ್ವರ ಎಂದು ಭರತನು ತಿಳಿದನು. ವಿರಕ್ತನಾದನು. ||೩೩||

ಈಗ ಭರತನ ಸಂತಾನವನ್ನು ಹೇಳುವರು -

**ತಸ್ಯಾಸನ್ನೃಪ ವೈದರ್ಭ್ಯಃ ಪತ್ನ್ಯಸ್ತಿಸ್ರಃ ಸುಸಮ್ಮತಾಃ ।**
**ಜಘ್ನುಸ್ತ್ಯಾಗಭಯಾತ್ಪುತ್ರಾನ್ನಾನುರೂಪಾ ಇತೀರಿತೇ ||೩೪||**

**ತಸ್ಯ** ಭರತನಿಗೆ **ವೈದರ್ಭ್ಯಃ** ವಿದರ್ಭರಾಜನ ಮಕ್ಕಳಾದ, **ಸುಸಮ್ಮತಾಃ** ಕಾಂತಿಯಿಂದ ಆಚರಣೆಯಿಂದಲೂ ಸರ್ವಸಮ್ಮತರಾದ, **ತಿಸ್ರಃ** ಮೂರು ಜನ **ಪತ್ನ್ಯಃ** ಹೆಂಡಂದಿರು **ಆಸನ್** ಇದ್ದರು. (**ರಾಜ್ಞಾ** ರಾಜನಿಂದ) **ತೇ** ನಿನ್ನ **ಪುತ್ರಾಃ** ಮಕ್ಕಳು **ನ ಅನುರೂಪಾಃ** ನನಗೆ ಯೋಗ್ಯರಾಗಿಲ್ಲ, **ಇತಿ** ಹೀಗೆ **ಈರಿತೇ ಸತಿ** ಹೇಳಲ್ಪಡುತ್ತಿರಲು, **ತ್ಯಾಗಭಯಾತ್** ಈ ಮಕ್ಕಳ ದುಷ್ಟತನದಿಂದ ನಮ್ಮನ್ನು ರಾಜನು ಬಿಟ್ಟಾನು ಎಂಬ ಭಯದಿಂದ, **ಪುತ್ರಾನ್** ಮಕ್ಕಳನ್ನು **ಜಘ್ನುಃ** ಕೊಂದರು. (ವಿಷೌಷಧಿಗಳಿಂದ)

**ತಾತ್ಪರ್ಯ-** ಭರತನಿಗೆ ವಿದರ್ಭರಾಜಕುವರಿಯರಾದ ಮೂರು ಜನ ಹೆಂಡಂದಿರಿದ್ದರು. ಒಬ್ಬೊಬ್ಬರಿಗೆ ಒಂದೊಂದು ಮಗು ಜನಿಸಿತು. ಭರತನು ಮಕ್ಕಳಲ್ಲಿರುವ ದೋಷವನ್ನು ಕಂಡು ನನಗೆ ತಕ್ಕ ಮಕ್ಕಳಲ್ಲವೆಂದು ಹೇಳಿದನು. ಇದನ್ನು ಕೇಳಿ ಇವರ ದುಷ್ಟತನದಿಂದ ನಮ್ಮನ್ನು ಬಿಟ್ಟಾನು ಎಂಬ ಭಯದಿಂದ ವಿಷಪ್ರಯೋಗದಿಂದ ಸುಕುಮಾರರನ್ನು ಕೊಂದರು. ।।೩೪।।

**ತಸ್ಯೈವಂ ವಿತಥೇ ವಂಶೇ ತದರ್ಥಂ ಯಜತಃ ಸುತಮ್ ।**
**ಮರುತ್‌ಸ್ತೋಮೇನ ಮರುತೋ ಭರದ್ವಾಜಮುಪಾದದುಃ ।।೩೫।।**

**ತಸ್ಯ** ಭರತನ, **ವಂಶೇ** ಸಂತಾನವು, **ವಿತಥೇ** ನಷ್ಟವಾಗಲು, **ತದರ್ಥಂ** ಸಂತಾನಕ್ಕಾಗಿ, **ಮರುತ್‌ಸ್ತೋಮೇನ** ಮರುತ್‌ಸ್ತೋಮವೆಂಬ ಯಾಗದಿಂದ, **ಯಜತಃ** ಪೂಜಿಸತಕ್ಕ **ತಸ್ಯ** ಭರತನಿಗೆ ಪ್ರಸನ್ನರಾದ **ಮರುತಃ** ಮರುತ್‌ಗಳು, **ಭರದ್ವಾಜಂ** ಭರದ್ವಾಜನನ್ನು, **ಉಪಾದದುಃ** ಮಗನಾಗಿ ಕೊಟ್ಟರು. ।।೩೫।।

**ತಾತ್ಪರ್ಯ-** ಮರುತ್ತಗಳಿಗೆ ಭರದ್ವಾಜನ ಪ್ರಾಪ್ತಿ ಹೇಗೆ ಮತ್ತು ಈ ಹೆಸರು ಬರಲು ಕಾರಣವೇನು ಎಂದು ತಿಳಿಸಲು ಅವರ ಉತ್ಪತ್ತಿ ಕ್ರಮವನ್ನು ಹೇಳುವರು.

**ಅಂತರ್ವತ್ನ್ಯಾಂ ಭ್ರಾತೃಪತ್ನ್ಯಾಂ ಮೈಥುನಾಯ ಬೃಹಸ್ಪತಿಃ ।**
**ಪ್ರವೃತ್ತೋ ವಾರಿತೋ ಗರ್ಭಂ ಶಪ್ತ್ವಾ ವೀರ್ಯಮವಾಸೃಜತ್ ।।೩೬।।**

**ಭ್ರಾತೃಪತ್ನ್ಯಾಂ** ತನ್ನ ಅಣ್ಣನಾದ ಉಚಥ್ಯನ ಹೆಂಡತಿಯಾದ ಮಮತಾಳಿಂದ, **ಮೈಥುನಾಯ** ಸಂಗಮಾಡಲು, **ಪ್ರವೃತ್ತಃ** ಉದ್ಯುಕ್ತನಾದ **ಬೃಹಸ್ಪತಿಃ** ದೇವ ಗುರುವು, **ಅಂತರ್ವತ್ನ್ಯಾಂ** ಗರ್ಭಿಣಿಯಾದ ಮಮತಾಳಿಂದ, **ವಾರಿತಃ** ನಿವಾರಿತನಾಗಿ, **ಗರ್ಭಂ** ತನ್ನ ಪಾದದಿಂದ ಮಾರ್ಗವನ್ನು ತಡೆಯುವ ಗರ್ಭವನ್ನು **ಶಪ್ತ್ವಾ** ಕುರುಡನಾಗಿ ಹೋಗೆಂದು ಶಪಿಸಿ **ವೀರ್ಯಂ** ರೇತಸ್ಸನ್ನು ಬಲಾತ್ಕಾರದಿಂದ ಯೋನಿದ್ವಾರದಲ್ಲಿ **ಅವಾಸೃಜತ್** ಸೇಚನ ಮಾಡಿದನು.

**ತಾತ್ಪರ್ಯ-** ಬೃಹಸ್ಪತಿಗೆ ಉಚಥ್ಯನೆಂಬ ಅಣ್ಣನೊಬ್ಬನು. ಅವನಿಗೆ ಮಮತಾ ಎಂಬ ಮಡದಿಯಿದ್ದಳು. ಅವಳು ಗರ್ಭವತಿಯಾಗಿದ್ದಾಗ ಬೃಹಸ್ಪತಿಯು ಅವಳನ್ನು ಕಾಮಿಸಿ ಅವಳೊಡನೆ ಸಂಭೋಗಿಸುವುದಕ್ಕೆ ಯತ್ನಿಸಿದನು. ಆಗ ''ದೇವರಾಚ್ಚ ಸುತೋತ್ಪತ್ತಿಃ'' ಎಂದು ಇದ್ದರೂ ಗರ್ಭಿಣಿಯಾದ್ದರಿಂದ ಬೇಡವೆಂದಳು. ಆದರೂ ಬಲಾತ್ಕರಿಸಿದಾಗ ಒಳಗಿದ್ದ ಶಿಶುವೂ ನಿರಾಕರಣ ಮಾಡಿದಾಗ ನೀನು ದೀರ್ಘತಮಸ್ಸಿನಲ್ಲಿ ಪ್ರವೇಶಿಸಿ ಕುರುಡನಾಗು, ಎಂದು ಶಾಪ ಕೊಟ್ಟನು. ಅಲ್ಲದೆ ಬಲಾತ್ಕಾರವಾಗಿ ಆಕೆಯಲ್ಲಿ ವೀರ್ಯಾಧಾನ ಮಾಡಿದನು. ಆಗ ಶಿಶುವು ತನ್ನ

ಪಾದದಿಂದ ಬೃಹಸ್ಪತಿಯ ವೀರ್ಯವನ್ನು ಹೊರಗೆ ತಳ್ಳಿ ತಾನೂ ಹೊರಗೆ ಬಂದಿತು. ಮೊದಲಿನ ಮಗುವು ದೀರ್ಘತಮನೆಂದು ಹೆಸರು ಪಡೆಯಿತು. ಆ ಬೃಹಸ್ಪತಿಯ ವೀರ್ಯವು ಭೂಮಿಗೆ ಬಿದ್ದೊಡನೆ ಒಂದು ಗಂಡು ಮಗುವಾಯಿತು. ।।೩೬।।

ಮುಂದೇನಾಯಿತೆಂದು ಹೇಳುವರು.

**ತಂ ತ್ಯಕ್ತುಕಾಮಾಂ ಮಮತಾಂ ಭರ್ತುಸ್ತ್ಯಾಗವಿಶಂಕಿತಾಮ್ ।**
**ನಾಮನಿರ್ವಚನಂ ತಸ್ಯ ಶ್ಲೋಕಮೇತಂ ಜಗುಃ ಸುರಾಃ ।।೩೭।।**

**ಭರ್ತುಃ** ಗಂಡನಾದ ಉಚಥ್ಯನಿಂದ **ತ್ಯಾಗವಿಶಂಕಿತಾಂ** ತನ್ನನ್ನು ತ್ಯಾಗಮಾಡುವನೆಂದು ಶಂಕಿತಳಾಗಿ **ತಂ** ಬೃಹಸ್ಪತಿವೀರ್ಯಜಾತ ಶಿಶುವನ್ನು **ತ್ಯಕ್ತುಕಾಮಾಂ** ಬಿಡಲು ಇಚ್ಛಿಸಿದ, **ಮಮತಾಂ** ಮಮತಾಳನ್ನು ಕುರಿತು **ಸುರಾಃ** ದೇವತೆಗಳು **ತಸ್ಯ** ಆ ಮಗುವಿನ, **ನಾಮನಿರ್ವಚನಂ** ನಾಮಾರ್ಥವನ್ನೊಳ- ಗೊಂಡ **ಏತಂ** ಮುಂದಿನ **ಶ್ಲೋಕಂ** ಶ್ಲೋಕವನ್ನು **ಜಗುಃ** ಹೇಳಿದರು.

**ತಾತ್ಪರ್ಯ-** ಉಚಥ್ಯನ ಪತ್ನಿಯಾದ ಮಮತೆಯು ತನ್ನ ಪತಿಗೆ ಭಯಪಟ್ಟು ಬೃಹಸ್ಪತಿಯ ವೀರ್ಯದಿಂದ ಜನಿಸಿದ ಆ ಕುವರನನ್ನು ಬಿಟ್ಟು ಹೊರಡಲು ಸಿದ್ಧಳಾದಾಗ ದೇವತೆಗಳು ಆಕೆಯನ್ನು ಕುರಿತು ಹೀಗೆ ಹೇಳಿದರು. ।।೩೭।।

**ಮೂಢೇ ಭರದ್ವಾಜಮಿಮಂ ಭರದ್ವಾಜಂ ಬೃಹಸ್ಪತೇಃ ।**
**ತ್ರಾತಾ ತು ದುಃಖಾತ್ತ್ವಿತರೌ ಭರದ್ವಾಜಸ್ತತಸ್ತ್ವಯಮ್ ।।೩೮।।**

ಮೇಲಿನ ಶ್ಲೋಕದಲ್ಲಿ ಎರಡು ಭರದ್ವಾಜ ಶಬ್ದಗಳು ವ್ಯರ್ಥ ಪುನರುಕ್ತವೆಂತಲೂ ಬೃಹಸ್ಪತಿಪದವು ಅನನ್ವಿತವೆಂತಲೂ ತೋರುವದು. ನಾಮನಿರ್ವಚನವು ಸ್ಪಷ್ಟವಾಗಿ ತೋರುವುದಿಲ್ಲ ಕಾರಣ ಆಚಾರ್ಯರು ವ್ಯಾಖ್ಯಾನ ಮಾಡುವರು.

''ದ್ವಾಜಂ ಇಮಂ ಭರ'' ಇದರಿಂದ ಮೇಲಿನ ಭರದ್ವಾಜಂ ಎಂಬ ವಾಕ್ಯದಲ್ಲಿ ಭರ, ದ್ವಾ, ಜಂ, ಹೀಗೆ ಮೂರು ಪದಗಳು ಅವುಗಳಲ್ಲಿ ಪಂಚಮೀ ದ್ವಿವಚನಾಂತವಾದ ದ್ವಾಭ್ಯಾಂ ಎಂಬಲ್ಲಿ ''ಸುಪಾಂ ಸುಲುಕ್ ಸವರ್ಣೇ'' ಎಂಬ ಸೂತ್ರದಿಂದ ಭ್ಯಾಂ ಎಂಬ ಪಂಚಮಿ ವಿಭಕ್ತಿಗೆ, ಛಾಯಾಡ್ಯಾಡಾಯಾಜಾಲಃ ಡಾ ಆದೇಶ ಮಾಡಲಾಗಿ ದ್ವಾ ಎಂಬ ರೂಪವಾಗುವದು. ಈಗ **ಹೇ ಮೂಢೇ** ಮೂಢಳೇ **ತ್ವಂ** ನೀನು, **ದ್ವಾ ದ್ವಾಭ್ಯಾಂ** ಇಬ್ಬರ ದೆಶೆಯಿಂದ **ಜಂ** ಹುಟ್ಟಿದ **ಇಮಂ** ಈ ಮಗುವನ್ನು, **ಭರ** ರಕ್ಷಿಸು, ಇಬ್ಬರು ಯಾರೆಂದರೆ ತೋರಿಸುವರು. **ಉಚಥ್ಯಸ್ಯ** ಉಚಥ್ಯನ, **ಕ್ಷೇತ್ರೇ** ಹೆಂಡತಿಯಲ್ಲಿ **ಜ** ಹುಟ್ಟಿದವನು. ಮತ್ತು **ಬೃಹಸ್ಪತೇಃ** ಬೃಹಸ್ಪತಿಯ ವೀರ್ಯದಿಂದ **ಜಾತಃ** ಹುಟ್ಟಿದವನು. ಇತಿ ಹೀಗೆ **ದ್ವಯೋಃ**

ಮಮತಾ-ಬೃಹಸ್ಪತಿ ಇವರಿಬ್ಬರಿಂದ **ಜಾತತ್ವಾತ್** ಹುಟ್ಟಿದವನಾದ್ದರಿಂದ ದ್ವಾಜಃ ದ್ವಯೋಃ ಜಾತತ್ವಾತ್ ದ್ವಾಜಃ ತಂ ದ್ವಾಜಂ ಎಂದು ಅರ್ಥ. ಉಚಥ್ಯಭಾರ್ಯಾಳಲ್ಲಿ ಬೃಹಸ್ಪತಿ ವೀರ್ಯದಿಂದ ಜನಿಸಿದ್ದರಿಂದ ಉಚಥ್ಯಜ, ಬೃಹಸ್ಪತಿಜಶ್ಚ ಹೀಗೂ ಕೆಲವರು ವ್ಯಾಖ್ಯಾನ ಮಾಡಿರುವರು.

ಈಗ ಎರಡನೆ ಭರದ್ವಾಜ ಪದಕ್ಕೆ ಪುನರುಕ್ತಿ ಪರಿಹಾರ ಮಾಡಲು ಬೃಹಸ್ಪತಿ ಪದಕ್ಕೆ ವೈಯರ್ಥ್ಯ ಪರಿಹಾರ ಮಾಡಲು ಈ ಭರದ್ವಾಜ ಪದದಿಂದ ಅನ್ವಯ ತೋರಿಸುತ್ತಾ ವ್ಯಾಖ್ಯಾನ ಮಾಡುವರು.

''ಬೃಹಸ್ಪತೇರ್ವಾಜಃ ಪ್ರಜಾಸಂತತಿರ್ಯೇನ ಭೃತಾ ಬೃಹಸ್ಪತೇರ್ಭರದ್ವಾಜಃ'' ಇಲ್ಲಿ ಪ್ರಜಾ ವೈ ವಾಜಃ ಎಂದು ಶ್ರುತಿಯಿರುವುದರಿಂದ ವಾಜಶಬ್ದವು ಪ್ರಜಾಸಂತತಿ ವಾಚಕವಾಗಿದೆ. ಇದನ್ನು ಬುದ್ಧಿಯಿಂದ ಬೇರ್ಪಡಿಸಿ ಬೃಹಸ್ಪತೇಃ ಎನ್ನುವ ಪದದಿಂದ ಅನ್ವಯ ಮಾಡುವುದರಿಂದ ಬೃಹಸ್ಪತಿಪದವು ಅನನ್ವಿತವೆಂಬ ದೋಷವು ಪರಿಹೃತವಾಯಿತು. ಭರತ್ ವಾಜಃ ಯೇನ ಸಃ ಭರದ್ವಾಜಃ ಹೀಗೆ ವಿಗ್ರಹ (ನಿರ್ವಚನ) ತೋರಿಸಿದಂತಾಯಿತು. ಬೃಹಸ್ಪತೇಃ ಬೃಹಸ್ಪತಿಯ ವಾಜಃ ಪ್ರಜಾಸಂತತಿಯು ಯೇನ ಯಾರಿಂದ ಭೃತಾ ರಕ್ಷಿಸಲ್ಪಟ್ಟಿದೆಯೋ ಸಃ ಅವನು ಬೃಹಸ್ಪತಿಯ ಪ್ರಜಾಕಾರಕನು ಹೀಗೆ ತಾತ್ಪರ್ಯವಾಕ್ಯದ ಅರ್ಥವು. ಹೀಗೆ ಒಂದು ರೀತಿ ನಾಮನಿರ್ವಚನ ಮಾಡಿ ಪ್ರಕಾರಾಂತರದಿಂದ ನಾಮನಿರ್ವಚನ ಮಾಡುವ ಪ್ರಮಾಣವನ್ನೂ ಉದಾಹರಿಸುವರು. ''ಭರದ್ವಾಜೋ ಮರುದ್ಭಿಶ್ಚ ಭೃತೋ ಜಾತೋ ದ್ವಯೋರ್ಯತಃ'' ಇತಿ ಪಾದ್ಮೇ **ಯತಃ** ಯಾವ ಕಾರಣ **ಮರುದ್ಭಿಃ** ಮರುತ್ಸಂಜ್ಞಕ ದೇವತೆಗಳಿಂದ **ಭೃತಃ** ರಕ್ಷಿತನು ಮತ್ತು **ದ್ವಯೋಃ** ಇಬ್ಬರಿಂದ **ಜಾತಃ** ಹುಟ್ಟಿದನು ಕಾರಣ ಭರದ್ವಾಜನು. ಭೃತತ್ವಾತ್ ಭರಃ ಸ ಚಾಸೌ ದ್ವಾಜಶ್ಚ ಭರದ್ವಾಜಃ ಹೀಗೆ ನಿರ್ವಚನ. ಮೂಲಭಾಗವತ ಶ್ಲೋಕಾರ್ಥ.

**ಹೇ ಮೂಢೇ** ಮೂಢಳಾದ ಮಮತೆಯೇ, **ದ್ವಾಜಂ** ನಿನ್ನಲ್ಲಿ ಬೃಹಸ್ಪತಿಯಿಂದ ಜನಿಸಿದ **ಇಮಂ** ಈ ಮಗುವನ್ನು **ಭರ** ರಕ್ಷಿಸು, **ಬೃಹಸ್ಪತೇಃ** ಬೃಹಸ್ಪತಿಯ **ವಾಜಂ** ಸಂತತಿಯನ್ನು **ಭರತ್** ರಕ್ಷಿಸುವ **ಪಿತರೌ** ತಂದೆ-ತಾಯಿಗಳಾದ ನಿನ್ನನ್ನು ಬೃಹಸ್ಪತಿಯನ್ನು **ದುಃಖಾತ್** ದುಃಖದಿಂದ **ತ್ರಾತಾ** ರಕ್ಷಿಸುವವನು. ಇದು ಭರ ಶಬ್ದದ ಅರ್ಥವೇ, **ತತಃ** ಈ ಕಾರಣದಿಂದಲೂ **ಅಯಂ** ಇವನು **ಭರದ್ವಾಜಃ** ಭರದ್ವಾಜನು. ಅಂತೂ ೧) ಬೃಹಸ್ಪತಿಯ ಪ್ರಜಾಸಂತತಿಕಾರಕನು ೨) ಮರುತ್ತರಿಂದ ರಕ್ಷಿತನು. ಇಬ್ಬರಿಂದ ಹುಟ್ಟಿರುವನು ೩) ತಂದೆ ತಾಯಿಯರನ್ನು ರಕ್ಷಿಸುವ ಪ್ರಜನು ದ್ವಾಜಂಭರಯೆಂದು ಹೇಳಿಸಿಕೊಂಡವನು ಹೀಗೆ ಅರ್ಥಮಾಡಿದಂತಾಯಿತು.

ಯಾತೌ ಯದುಕ್ತ್ವಾ ಪಿತರೌ ಎಂಬ ಪಾಠವಿದ್ದಾಗ, **ಪಿತರೌ** ತಂದೆ ತಾಯಿಗಳು, **ಯದುಕ್ತ್ವಾ** ಯಾವುದನ್ನು ಹೇಳಿ, **ಯಾತೌ** ಹೋದರೋ **ತತಃ** ಆದ್ದರಿಂದ **ಅಯಂ** ಇವನು **ಭರದ್ವಾಜಃ** ಭರದ್ವಾಜನು. ಹೀಗೆ ಅರ್ಥ ಎಂದರೆ ಪರಸ್ಪರರು ತ್ವಂ ದ್ವಾಜಂ ಭರ ಎಂದು ಹೇಳಿ ಇಬ್ಬರು ಬಿಟ್ಟು ಹೊರಟು ಹೋದರು. ಆಗ ಮರುತ್‌ಗಳು ರಕ್ಷಿಸಿದರು, ಹೀಗೆ ಭಾವವು. ।।೩೮।।

**ಚೋದ್ಯಮಾನಾ ಸುರೈರೇವಂ ಮತ್ವಾ ತಂ ದೇವಮಾತ್ಮಜಮ್ ।**
**ನ್ಯಸೃಜನ್ಮರುತೋಽಭಿಭ್ರನ್ ದತ್ತೋಽಯಂ ವಿತಥೇಽನ್ವಯೇ ।।೩೯।।**

**ಸಾ** ಮಮತೆಯು **ಸುರೈಃ** ದೇವತೆಗಳಿಂದ **ಏವಂ** ಮೇಲೆ ಹೇಳಿದಂತೆ, **ಚೋದ್ಯಮಾನಾಪಿ** ರಕ್ಷಿಸು ಎಂದು ಪ್ರೇರಿತಳಾದರೂ, **ದೇವಂ** ಪ್ರಕಾಶ-ಮಾನನಾದ, **ತಂ ಆತ್ಮಜಂ** ಆ ಮಗುವನ್ನು **ದೇವಂ ಮತ್ವಾ** ಬೃಹಸ್ಪತಿಯನ್ನು ಮಗನಾಗಿ ಜನಿಸಿದವನೆಂದು ತಿಳಿದು, **ವ್ಯಸೃಜತ್** ಬಿಟ್ಟಳು. ಆಗ **ಮರುತಃ** ದೇವತೆಗಳು **ಅಭಿಭ್ರನ್** ರಕ್ಷಿಸಿದರು. **ಅನ್ವಯೇ** ಭರತನ ವಂಶವು **ವಿತಥೇ** ನಿಂತಾಗ **ಅಯಂ** ಇವನು **ದತ್ತಃ** ಕೊಡಲ್ಪಟ್ಟನು. ಇವನಿಗೆ ಭರತನ ದತ್ತು ಪುತ್ರನಾದ ಮೇಲೆ ವಿತಥನೆಂದು ಹೆಸರಾಯಿತು.

**ತಾತ್ಪರ್ಯ-** ಉಚಥ್ಯಪತ್ನಿಯಾದ ಮಮತೆಯು ತನ್ನ ಪತಿಗೆ ಭಯಪಟ್ಟು ಬೃಹಸ್ಪತಿಗೆ ಜನಿಸಿದ ಮಗುವನ್ನು ಬಿಟ್ಟು ಹೊರಟಾಗ ದೇವತೆಗಳು, ಮೂಢಳೇ! ಇಬ್ಬರಿಗೆ ಜನಿಸಿದ ಈ ಮಗುವನ್ನು ರಕ್ಷಿಸು, ಬಿಟ್ಟು ಹೋಗಬೇಡ ಎಂದು ಹೇಳಿದರೂ, ಮಮತೆಯು ಒಪ್ಪದೇ ಬೃಹಸ್ಪತಿಗೆ ನೀನೇ ರಕ್ಷಿಸು, ಎಂದಳು. ಅವನು ಇವಳಿಗೆ ಅದೇ ಮಾತನ್ನು ಹೇಳಿದನು. ದ್ವಾಜಂ ಭರ ಎಂದು. ಹೀಗೆ ಇಬ್ಬರೂ ಜಗಳವಾಡಿ ಕುವರನನ್ನು ಅಲ್ಲಿಯೇ ಬಿಟ್ಟು ಹೋದರು. ಹೀಗೆ ತಂದೆ ತಾಯಿಗಳಿಂದ ತ್ಯಜಿಸಿದ ಮಗುವನ್ನು ಮರುತ್ತುಗಳು ರಕ್ಷಿಸುತ್ತಿದ್ದರು. ಭರತನ ವಂಶವು ನಿಲ್ಲುವ ಸಂದರ್ಭದಲ್ಲಿ ಇವನನ್ನು ಭರತನಿಗೆ ಮಗನಾಗಿ ಕೊಟ್ಟರು ವಿತಥವಾದ (ವಿಚ್ಛಿನ್ನ) ವಂಶಕ್ಕೆ ದತ್ತನಾದ್ದರಿಂದ ಇವನಿಗೆ ವಿತಥ ಎಂದು ಹೆಸರಾಯಿತು. ತದೇವಮಾತ್ಮಜಂ ಎಂಬಲ್ಲಿ, ವಿತಥಮಾತ್ಮಜಂ ಎಂಬ ಪಾಠವಿದ್ದಾಗ ತಥಾ ದೀರ್ಘತಮನಂತೆ ಅಲ್ಲ. ವಿರುದ್ಧ ವಿತಥ ಜಾರಜನೆಂಬ ಅರ್ಥ. ।।೩೭।।

**।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಸಪ್ತದಶೋಽಧ್ಯಾಯಃ ।।**

★★★

## ಅಥ ಅಷ್ಟಾದಶೋಽಧ್ಯಾಯಃ

ಪೂರುವಿನಿಂದ ಹದಿನೇಳನೇಯವನಾದ ದೌಷ್ಯಂತಿ (ಭರತ)ಯ ವಂಶವನ್ನು ನಿರೂಪಿಸುವರು.

**ವಿತಥಸ್ಯ ಸುತಾನ್ಮನ್ಯೋಃ ಬೃಹತ್ಕ್ಷೇತ್ರೋ ಜಯಸ್ತತಃ ।**
**ಮಹಾವೀರ್ಯೋ ನರೋ ಗರ್ಗಃ ಸಂಕೃತಿಸ್ತು ನರಾತ್ಮಜಃ ॥೧॥**

**ತತಃ** ಮರುತ್‌ಗಳ ಸಖ್ಯವಾದ ನಂತರ, **ವಿತಥಸ್ಯ** ಭರತನ ದತ್ತು ಮಗನಾದ ಭರದ್ವಾಜನ **ಸುತಾತ್** ಮಗನಾದ, **ಮನ್ಯೋಃ** ಮನ್ಯುವಿಗೆ **ಬೃಹತ್ಕ್ಷೇತ್ರಃ** ಬೃಹತ್ ಕ್ಷೇತ್ರನು, **ಜಯಃ** ಜಯನು **ಮಹಾವೀರ್ಯಃ** ಮಹಾವೀರ್ಯನು, **ನರಃ** ನರನು, **ಗರ್ಗಃ** ಗರ್ಗನು ಹೀಗೆ ಐದು ಜನ ಮಕ್ಕಳು. **ಸಂಕೃತಿಸ್ತು** ಸಂಕೃತಿಯಾದರೂ **ನರಾತ್ಮಜಃ** ನರನ ಮಗನು **ಇತಿ** ಎಂದು (ಛಲಾರಿ ಪ್ರಕಾರ ಅರ್ಥ. ಸತ್ಯಧರ್ಮರ ಪ್ರಕಾರ ವಿತಥನಿಗೆ ಮನ್ಯು, ಮನ್ಯುವಿಗೆ ಬೃಹತ್ಕ್ಷೇತ್ರ ಬೃಹತ್ಕ್ಷೇತ್ರನಿಗೆ ಜಯ ಜಯನಿಗೆ ಮಹಾವೀರ್ಯ, ನರ, ಗರ್ಗ ಈ ರೀತಿಯವರು ಕುವರರು.) ನರನಿಗೆ ಸಂಕೃತಿ ಎಂದು ಇನ್ನು ಹರಿವಂಶದಲ್ಲಿ ''ಸ ಚಾಪಿ ವಿತಥಃ ಪುತ್ರಾನ್ ಜನಯಾಮಾಸ ಪಂಚ ವೈ । ಸುಹೋತ್ರಂ ಚ ಸುಹೋತಾರಂ ಗಯಂ ಗರ್ಗಂ ತಥೈವ ಚ । ಕಪಿಲಂ ಚ ಮಹಾತ್ಮಾನು...'' ಎಂದು ಹೇಳಿದ್ದು ಮನ್ಯುವನ್ನು ಬಿಟ್ಟು ಐದು ಜನ ಮಕ್ಕಳು ಎಂಬ ಅಭಿಪ್ರಾಯದಿಂದ, ಕಾರಣ ವಿರೋಧವಿಲ್ಲ.

**ತಾತ್ಪರ್ಯ-** ವಿತಥನಿಗೆ ಮನ್ಯುವು ಅವನಿಗೆ ಐದು ಜನರೆಂದಾಗಲಿ, ಅಥವಾ ಬೃಹತ್ಕ್ಷೇತ್ರ ಆತನಿಂದ ಜಯ, ಇತನಿಗೆ ಮೂರು ಜನ ಮಕ್ಕಳು. ಇವರಲ್ಲಿ ನರನಿಗೆ ಸಂಕೃತಿ ಎಂಬ ಮಗನು ಜನಿಸಿದನು. ॥೧॥

**ಗುರುಶ್ಚ ರಂತಿದೇವಶ್ಚ ಸಂಕೃತೇಃ ಪಾಂಡುನಂದನ ।**
**ರಂತಿದೇವಸ್ಯ ಹಿ ಯಶ ಇಹಾಮುತ್ರ ಚ ಗೀಯತೇ ॥೨॥**

**ಹೇ ಪಾಂಡುನಂದನ** ಪರೀಕ್ಷಿತನೇ! **ಸಂಕೃತೇಃ** ಸಂಕೃತಿಗೆ **ಗುರುಃ** ಗುರುವು **ರಂತಿದೇವಃ** ರಂತಿದೇವನು ಹೀಗೆ ಇಬ್ಬರು ಮಕ್ಕಳು. ಇವರಲ್ಲಿ ರಂತಿದೇವನ ಮಹಾತ್ಮ್ಯವು ಭಗವನ್ಮಹಿಮೆಯಿಂದ ಕೂಡಿದುದರಿಂದ ಹೇಳುವರು. **ರಂತಿದೇವಸ್ಯ** ರಂತಿದೇವನ, **ಯಶಃ** ಕೀರ್ತಿಯು, **ಇಹ** ಭೂಲೋಕದಲ್ಲಿ **ಅಮುತ್ರ ಚ** ಪರಲೋಕದಲ್ಲಿಯೂ ಸಹ **ಗೀಯತೇ** ಗಾನ ಮಾಡಲ್ಪಡುತ್ತದೆ.

**ತಾತ್ಪರ್ಯ-** ನರನ ಮಗನಾದ ಸಂಕೃತಿಗೆ ಗುರು ಮತ್ತು ರಂತಿದೇವರೆಂಬ ಇಬ್ಬರುಪುತ್ರರು. ಇವರಲ್ಲಿ ರಂತಿದೇವನ ಕೀರ್ತಿಯು ಇಹಲೋಕ ಪರಲೋಕಗಳಲ್ಲಿ

ಹರಡಿತ್ತು . ಕೇವಲ ರಣರಂಗದಲ್ಲಿ ಶತ್ರುಗಳನ್ನು ಜಯಿಸಿದ ಕೀರ್ತಿ ಅಷ್ಟೇ ಅಲ್ಲ. ಬಹಳ ದಾನಶೂರನೂ ಸಹ ಎಂಬ ಕೀರ್ತಿಯು ಇವನದು. ಇವನ ಮನೆಗೆ ಬರುವ ಅತಿಥಿ ಅಭ್ಯಾಗತರನ್ನು ಉಪಚರಿಸಲು ಕೇವಲ ಅಡಿಗೆಯವರು ಎರಡು ಸಾವಿರ ಜನರಿದ್ದರು. ವೇದಾಧ್ಯಯನ ಮಾಡಿದವನು. ಧರ್ಮದಿಂದ ರಾಜ್ಯಪಾಲನೆ ಮಾಡುತ್ತಾ ಶತ್ರುಗಳನ್ನು ಸಹ ವಶ ಮಾಡಿಕೊಂಡಿದ್ದನು. ಮುಂತಾಗಿ ಇವನ ಮಹಿಮೆ ದ್ರೋಣಪರ್ವದಲ್ಲಿ ಷೋಡಶರಾಜಕೀಯದಲ್ಲಿ ವರ್ಣಿತವಾಗಿದೆ. ।।೨।।

**ವೀತವಿತ್ತಸ್ಯ ದದತೋ ಲಬ್ಧಂ ಲಬ್ಧಂ ಬುಭುಕ್ಷತಃ ।**
**ನಿಷ್ಕಿಂಚನಸ್ಯ ಧೀರಸ್ಯ ಸಕುಟುಂಬಸ್ಯ ಸೀದತಃ** ।।೩।।

**ಲಬ್ಧಂ ಲಬ್ಧಂ** ದೈವಿಕವಾಗಿ ದೊರೆತ ಐಶ್ವರ್ಯವನ್ನು **ದದತಃ** ಯಾಚಕರಿಗೆ ದಾನ ಮಾಡುವ ಆದ್ದರಿಂದ **ವೀತವಿತ್ತಸ್ಯ** ದರಿದ್ರನಾದ, **ನಿಷ್ಕಿಂಚನಸ್ಯ** , ಏನೂ ಇಲ್ಲದವನ ಅಥವಾ ಉದಾರಿಯಾದ, **ಧೀರಸ್ಯ** ಬುದ್ಧಿಯಿಂದ ಹರಿಯಲ್ಲಿ ರಮಿಸುವ **ಸಕುಟುಂಬಸ್ಯ** ಕುಟುಂಬಸಹಿತನಾದ, **ಬುಭುಕ್ಷತಃ** ಹಸಿದ ಆದ್ದರಿಂದಲೇ **ಸೀದತಃ** ಶಿಥಿಲಾಂಗನಾದ ರಾಜನಿಗೆ ।।೩।।

**ವ್ಯತೀಯುರಷ್ಟಚತ್ವಾರಿಂಶದಹಾನ್ಯಪಿಬತಃ ಕಿಲ ।**
**ಘೃತಪಾಯಸಸಂಯಾವಂ ತೋಯಂ ಪ್ರಾತರುಪಸ್ಥಿತಮ್** ।।೪।।

**ಅಪಿಬತಃ** ನೀರನ್ನು ಸಹ ಕುಡಿಯದಿರುವವನಿಗೆ **ಅಷ್ಟಚತ್ವಾರಿಂಶದಹಾನಿ** ನಲವತ್ತೆಂಟು ದಿನಗಳು, **ವ್ಯತೀಯುಃ ಕಿಲ** ಕಳೆದವಷ್ಟೇ. **ಘೃತಪಾಯಸ-ಸಂಯಾವಂ** ತುಪ್ಪ ಪಾಯಸ, ಗೋಧಿಯ ಅನ್ನವು, **ತೋಯಂ** ನೀರು **ಪ್ರಾತಃ** ಬೆಳಿಗ್ಗೆ **ಉಪಸ್ಥಿತಂ** ಪ್ರಾಪ್ತವಾಯಿತು. ಘೃತಂ ಚ ಪಾಯಸಂ ಚ ಸಂಯಾವಂ ಚ ಘೃತಪಾಯಸಸಂಯಾವಂ ಎಂದು ದ್ವಂದ್ವ ಏಕವದ್ಭಾವ. ।।೪।।

**ಕೃಚ್ಛ್ರಪ್ರಾಪ್ತಕುಟುಂಬಸ್ಯ ಕ್ಷುತ್ತೃಡ್ಭ್ಯಾಂ ಜಾತವೇಪಥೋಃ ।**
**ಅತಿಥಿರ್ಬ್ರಾಹ್ಮಣಃ ಕಾಲೇ ಭೋಕ್ತುಕಾಮಸ್ಯ ಚಾಗಮತ್** ।।೫।।

**ಕೃಚ್ಛ್ರಪ್ರಾಪ್ತಕುಟುಂಬಸ್ಯ** ಕಷ್ಟವನ್ನು ಹೊಂದಿದ ಕುಟುಂಬ ಉಳ್ಳ **ಕ್ಷುತ್ತೃಡ್ಭ್ಯಾಂ** ಹಸಿವೆ, ನೀರಡಿಕೆಯಿಂದ **ಜಾತವೇಪಥೋಃ** ನಡುಕ ಹುಟ್ಟಿದ **ಭೋಕ್ತುಕಾಮಸ್ಯ ಸತಃ** ಪಾಯಸಾದಿಗಳನ್ನು ತಿನ್ನಲಿಚ್ಛಿಸುವಾಗ, **ಕಾಲೇ** ತತ್ಕಾಲದಲ್ಲಿ **ಅತಿಥಿಃ ಬ್ರಾಹ್ಮಣಃ** ಅನಾಹುತ ಬ್ರಾಹ್ಮಣನು, **ಆಗಮತ್** ಬಂದನು. ।।೫।।

**ತಸ್ಮೈ ಸಂವ್ಯಭಜತ್ಸೋಽನ್ನಮಾಹೃತ್ಯ ಶ್ರದ್ಧಯಾಽನ್ವಿತಃ ।**
**ಹರಿಂ ಸರ್ವತ್ರ ಸಂಪಶ್ಯನ್ ಸ ಭುಕ್ತ್ವಾ ಪ್ರಯಯೌ ದ್ವಿಜಃ** ।।೬।।

**ಸಃ** ಆ ರಂತಿದೇವನು, **ಸರ್ವತ್ರ** ಈ ಬ್ರಾಹ್ಮಣ ಮೊದಲಾದ ಎಲ್ಲ ಪದಾರ್ಥದಲ್ಲಿ, **ಹರಿಂ** ಪರಮಾತ್ಮನನ್ನು, **ಸಂಪಶ್ಯನ್** ವ್ಯಾಪ್ತನಾಗಿದ್ದಾನೆ ಎಂದು ತಿಳಿದು, **ಶ್ರದ್ಧಯಾ ಅನ್ವಿತಃ ಸನ್** ಶ್ರದ್ಧೆಯಿಂದ ಕೂಡಿದವನಾಗಿ, **ಅನ್ನಂ** ಅನ್ನವನ್ನು, **ಆಹೃತ್ಯ** ತಂದು **ತಸ್ಮೈ** ಆ ಬ್ರಾಹ್ಮಣನಿಗೆ **ಸಂವ್ಯಭಜತ್** ವಿಭಾಗ ಮಾಡಿಕೊಟ್ಟನು. **ಸಃ ದ್ವಿಜಃ** ಆ ಬ್ರಾಹ್ಮಣನು **ಭುಕ್ತ್ವಾ** ಭೋಜನ ಮಾಡಿ **ಪ್ರಯಯೌ** ಹೊರಟು ಹೋದನು.

**ತಾತ್ಪರ್ಯ-** ಈ ರಂತಿದೇವನು ದೈವಾಧೀನವಾಗಿ ತನಗೆ ಲಭಿಸಿದ ಧನ ಸಮೃದ್ಧಿಯಿಂದ ಧನವಂತನಾಗಿದ್ದರೂ, ಎಲ್ಲವನ್ನು ಯಾಚಕರಿಗೆ ಕೊಟ್ಟು ದರಿದ್ರನಾದನು. ಆಗಾಗ ದೈವಲಬ್ಧವಾದ ಆಹಾರದಿಂದಲೇ ಉದರಂಭರಣ ಮಾಡುತ್ತಿದ್ದನು. ಅಲ್ಲದೆ ಇವನು ಕುಟುಂಬಿಯು ಹೌದು. ಆಗಾಗ ಲಭಿಸಿದುದನ್ನು ಯಾಚಕರಿಗೆ ಕೊಡುತ್ತಾ ಕೊನೆಗೆ ತನಗೂ ತನ್ನ ಕುಟುಂಬಕ್ಕೂ ಆಹಾರವಿಲ್ಲದೇ ಕೃಶನಾಗಿ ದಿನಗಳನ್ನು ಕಳೆಯುತ್ತಿದ್ದನು. ಇಷ್ಟಿದ್ದರೂ ಧೈರ್ಯಗೆಡದೇ ಜಿತೇಂದ್ರಿಯ-ನಾಗಿಯೇ ಇದ್ದನು. ಒಮ್ಮೆ ಈತನಿಗೆ ಜಲಪಾಲನಕ್ಕೂ ಅವಕಾಶವಿಲ್ಲದೇ ತನ್ನ ಕುಟುಂಬದೊಡನೆ ನಾಲ್ವತ್ತೆಂಟು ದಿನ ಉಪವಾಸ ಕಳೆಯುವ ಪ್ರಸಂಗ ಬಂದಿತು. ಆಗ ಅವನಿಗೆ ಹಸಿವೆ ಬಾಯಾರಿಕೆಗಳಿಂದ ದೇಹವು ನಡುಗಲಾರಂಭಿಸಿತು. ಆ ಮೇಲೆ ಮರುದಿನ ಬೆಳಿಗ್ಗೆ ದೈವಾತ್ ತುಪ್ಪ, ಪಾಯಸ, ಗೋಧಿ ಅನ್ನ, ನೀರು, ಲಭಿಸಿತು. ತನ್ನ ಕುಟುಂಬದೊಡನೆ ಭೋಜನ ಮಾಡಲು ಸಿದ್ಧನಾಗುವಷ್ಟರಲ್ಲಿ ಒಬ್ಬ ಬ್ರಾಹ್ಮಣನು ಇವನ ಮನೆಗೆ ಅತಿಥಿಯಾಗಿ ಬಂದನು.

ಎಲ್ಲೆಡೆಯಲ್ಲಿ ಭಗವಂತನನ್ನೇ ಕಾಣುವ ರಂತಿದೇವನು ಶ್ರದ್ಧೆಯಿಂದ ಬ್ರಾಹ್ಮಣನಿಗೆ ಪಾಯಸಾನ್ನವನ್ನು ಸ್ವಲ್ಪ ಭಾಗ ಕೊಟ್ಟನು. ಆ ಬ್ರಾಹ್ಮಣನು ಅದನ್ನು ಭುಂಜಿಸಿ ತೃಪ್ತನಾಗಿ ತೆರಳಿದನು. ||೩-೬||

**ಅಥಾನ್ಯೋ ಭೋಕ್ಷ್ಯಮಾಣಸ್ಯ ವಿಭಕ್ತಸ್ಯ ಮಹೀಪತೇಃ |**
**ವಿಭಕ್ತಂ ವ್ಯಭಜತ್ತಸ್ಮೈ ವೃಷಲಾಯ ಹರಿಂ ಸ್ಮರನ್ ||೭||**

**ಅಥ** ಅನಂತರ **ವಿಭಕ್ತಸ್ಯ** ಬ್ರಾಹ್ಮಣನಿಗೆ ವಿಭಾಗ ಮಾಡಿಕೊಟ್ಟು ಉಳಿದ ಅನ್ನಶೇಷವನ್ನು **ಭೋಕ್ಷ್ಯಮಾಣಸ್ಯ** ಭೋಜನ ಮಾಡಲು, ಇಚ್ಛಿಸುವ **ಮಹೀಪತೇಃ** ರಾಜನಿಗೆ **ಅನ್ಯಃ** ಮತ್ತೊಬ್ಬ ಶೂದ್ರ ಅತಿಥಿಯು **(ಆಗಮತ್)** ಬಂದನು. **ತಸ್ಮೈ ವೃಷಲಾಯ** ಆ ಶೂದ್ರನಿಗೆ, **ಹರಿಂ** ಪರಮಾತ್ಮನನ್ನು **ಸ್ಮರನ್** ಸ್ಮರಿಸುತ್ತಾ (ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ಎಂದು ಪ್ರಮಾಣವಿರುವದರಿಂದ ಯಾರಿಗೆ ಕೊಟ್ಟರೂ ಹರಿಗೆ ಅರ್ಪಿಸಿದಂತೆಯೆಂದು ಸ್ಮರಣಪೂರ್ವಕವಾಗಿ) **ವಿಭಕ್ತಂ** ಮೊದಲು ವಿಭಾಗ ಮಾಡಿ ಉಳಿದ ಭಾಗವನ್ನು **ವ್ಯಭಜತ್** ವಿಭಾಗ ಮಾಡಿ ಕೊಟ್ಟನು. ||೭||

**ತಾತ್ಪರ್ಯ-** ಬ್ರಾಹ್ಮಣನಿಗೆ ಅನ್ನದಾನ ಮಾಡಿದ ಮೇಲೆ ಉಳಿದ ಆಹಾರವನ್ನು ಸ್ವೀಕರಿಸಲು ರಂತಿದೇವನ ಕುಟುಂಬವು ಸಿದ್ಧವಾಯಿತು. ಈ ಸಂದರ್ಭದಲ್ಲಿ ಬಂದಿರುವ ಅತಿಥಿಯು ಶೂದ್ರನಾಗಿದ್ದ. ಪರಮಾತ್ಮ ಆತನಲ್ಲಿಯೂ ಶ್ರೀಹರಿಯು ಸನ್ನಿಹಿತನಾಗಿದ್ದಾನೆ ಎಂದು ಭಾವಿಸಿದ. ವಿಭಕ್ತವಾದ ಅನ್ನವನ್ನು ಆತನಿಗೆ ನೀಡಿದ.

**ಯಾತೇ ಶೂದ್ರೇ ತಮಭ್ಯಾಗಾದತಿಥಿಃ ಶ್ವಭಿರಾವೃತಃ ।**
**ರಾಜನ್ ಮೇ ದೀಯತಾಮನ್ನಂ ಸಗಣಾಯ ಬುಭುಕ್ಷತೇ ॥೮॥**

**ಶೂದ್ರಃ** ಶೂದ್ರನು **ಯಾತೇ ಸತಿ** ಹೋಗುತ್ತಿರಲು **ಶ್ವಭಿಃ** ನಾಯಿಗಳಿಂದ, **ಆವೃತಃ** ಸುತ್ತುಗಟ್ಟಲ್ಪಟ್ಟ **ಅತಿಥಿಃ** ಇನ್ನೊಬ್ಬ ಶೂದ್ರ ಅತಿಥಿಯು **ತಂ** ರಂತಿರಾಜನನ್ನು ಕುರಿತು, **ಅಭ್ಯಾಗಾತ್** ಬಂದನು. **ರಾಜನ್** ರಾಜನೇ **ಬುಭುಕ್ಷತೇ** ಹಸಿದಿರುವ, **ಸಗಣಾಯ** ನಾಯಿಯ ಸಮೂಹದಿಂದ ಕೂಡಿದ **ಮೇ** ನನಗೆ **ಅನ್ನಂ** ಅನ್ನವು **ದೀಯತಾಂ** ನಿನ್ನಿಂದ ಕೊಡಲ್ಪಡಲಿ ಎಂದನು. ॥೮॥

**ತಾತ್ಪರ್ಯ-** ಶ್ರೂದ್ರನ್ನು ಅನ್ನ ಪಡೆದು ತೃಪ್ತನಾಗಿ ಹೋದ. ನಂತರ ಉಳಿದ ಅನ್ನವನ್ನು ಸ್ವೀಕರಿಸಲು ರಾಜನು ಉಪಕ್ರಾಂತನಾದ. ಅಷ್ಟರಲ್ಲಿ ಮತ್ತೊಬ್ಬ ಅತಿಥಿಯು ಬಂದ. ಆತ ನಾಯಿಗಳಿಂದ ಕೂಡಿಕೊಂಡು ಬಂದಿದ್ದ. ನನ್ನ ನಾಯಿಗಳೂ ಹಸಿದಿವೆ. ನಾನೂ ಹಸಿದಿದ್ದೇನೆ. ಎಲ್ಲರಿಗೂ ಅನ್ನವನ್ನು ನೀಡೆಂದ.

**ಸ ಆತಿಥ್ಯಾವಶಿಷ್ಟಂ ಯದ್ಬಹುಮಾನಪುರಃಸರಮ್ ।**
**ತಚ್ಚ ದತ್ವಾ ನಮಶ್ಚಕ್ರೇ ಶ್ವಭ್ಯಃ ಶ್ವಪತಯೇ ವಿಭುಃ ॥೯॥**

**ಸಃ ವಿಭುಃ** ಆ ರಂತಿದೇವನು, **ಆತಿಥ್ಯಾವಶಿಷ್ಟಂ** ಬ್ರಾಹ್ಮಣ ಮತ್ತು ವೃಷಲ ಆತಿಥ್ಯ ಮಾಡಿ ಉಳಿದಿದ್ದ **ಯತ್** ಯಾವದೋ, **ತತ್ ಚ** ಅದನ್ನು ಸಹ, **ಬಹುಮಾನಪುರಸ್ಸರಂ** ಸತ್ಕಾರಪೂರ್ವಕವಾಗಿ, **ದತ್ವಾ** ಕೊಟ್ಟು, **ಶ್ವಭ್ಯಃ** ನಾಯಿಗಳಿಗೆ, **ಶ್ವಪತಯೇ** ನಾಯಿಯ ಒಡೆಯನಿಗೆ **ನಮಃ ಚಕ್ರೇ** ನಮಸ್ಕಾರ ಮಾಡಿದನು. (ಅಂತರ್ಗತ ಹರಿಗೆ ನಮಿಸಿದನು)

'ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ । ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥' ಹೀಗೆ ಪ್ರಮಾಣಾನುಸಾರ ಎಂದು ತಿಳಿಯಬೇಕು.

**ತಾತ್ಪರ್ಯ-** ಬ್ರಾಹ್ಮಣ ಮತ್ತು ಶೂದ್ರನಿಗೆ ಅನ್ನವನ್ನು ನೀಡಿದ ಮೇಲೆ ಉಳಿದ ಅನ್ನವನ್ನು ನಾಯಿಗಳಿಗೆ ಮತ್ತು ನಾಯಿಗಳ ಒಡೆಯನಿಗೆ ಬಹುಮಾನಪೂರ್ವಕವಾಗಿ ನೀಡಿದ. ನಾಯಿಗಳಲ್ಲಿ, ಶ್ವಪತಿಯಲ್ಲಿ ಅಂತರ್ಯಾಮಿಯಾದ ಪರಮಾತ್ಮನಿಗೆ ನಮಸ್ಕರಿಸಿದ.

ಇಲ್ಲಿ ಸಗಣಾಯ ಎಂದು ಶ್ವಾನಗಣಗಳಿಗೆ ಅಪ್ರಾಧಾನ್ಯ ಹೇಳಿದ್ದರು. ಮೊದಲು ನಾಯಿಗೆ ಆಮೇಲೆ ಒಡೆಯನಿಗೆ ನಮಸ್ಕಾರ ಮಾಡಲು ಏನು ಕಾರಣವೆಂದರೆ ಶ್ವಪತಿಗೆ (ಒಡೆಯನಿಗೆ) ಅನ್ನವನ್ನು ಕೊಡುವಾಗ ಅವನಿಗಿಂತ ಮುಂಚೆ ನಾಯಿಗಳು ಬೇಗನೆ ಅನ್ನದಲ್ಲಿ ಬಾಯಿ ಹಾಕಿದ್ದರಿಂದ ಅವುಗಳ ಅಂತರ್ಗತ ಭಗವಂತನಿಗೆ ಮೊದಲು ನಮನವು. ಆದ್ದರಿಂದ ಕ್ರಮ ಬಿಟ್ಟಂತೆ ಅಲ್ಲ. ಅವುಗಳ ಅಪ್ರಾಧಾನ್ಯವು ಹೋಗಲಿಲ್ಲ. ಶ್ವಭ್ಯಃ ಶ್ವಪತಯೇ ಅನ್ನಂ ದತ್ವಾ ಹರಯೇ ನಮಃ ಚಕ್ರೇ, ಹೀಗೂ ಅನ್ವಯ ಮಾಡಬಹುದು. ಈಗಲೂ ನಾಯಿಗೇಕೆ ಮುಂಚೆ ಅನ್ನದಾನ ಎಂಬ ಪ್ರಶ್ನೆಗೆ ಅದೇ ಉತ್ತರ. ಇವನು ಅವನಿಗೆ ಮುಂಚೆ ಕೊಟ್ಟರೂ ನಾಯಿಗಳು ಅವಸರವಾಗಿ ಅನ್ನಕ್ಕೆ ಬಾಯಿಹಾಕಿದವು. ||೯||

**ಪಾನೀಯಮಾತ್ರಮುಚ್ಛೇಷಂ ತತ್ರೈಕಪರಿತರ್ಪಣಮ್ ।**
**ಪಾಸ್ಯತಃ ಪುಲ್ಕಸೋಽಭ್ಯಾಗಾದಪೋ ದೇಹ್ಯಶುಭಸ್ಯ ಮೇ ||೧೦||**

**ತತ್ರ** ಘೃತಾದಿಗಳಲ್ಲಿ **ಏಕಪರಿತರ್ಪಣಂ** ಒಬ್ಬನಿಗೆ ಮಾತ್ರ ಸಾಲುವಷ್ಟು ಅದೂ ಸಹ ಒಂದೇ ಸಲ ತೃಪ್ತಿಯಾಗುವಷ್ಟು, ಹೀಗೂ ಅರ್ಥ. ಅಥವಾ **ಏಕಸ್ಯಾಪಿ ಪರಿವರ್ಜಿತಂ ತರ್ಪಣಂ ಯೇನ ತತ್** ಒಬ್ಬನಿಗೂ ಪೂರ್ಣ ತೃಪ್ತಿಯನ್ನು ಉಂಟುಮಾಡದ, **ಪಾನೀಯಮಾತ್ರಂ** ನೀರೊಂದೇ, **ಉಚ್ಛೇಷಂ** ಉಳಿದಿತ್ತು . ಅದನ್ನು **ಪಾಸ್ಯತಃ** ಕುಡಿಯಲಿಚ್ಛಿಸುವ ಇವನನ್ನು ಕುರಿತು **ಪುಲ್ಕಸಃ** ನೀಚಜಾತಿಯವನು, ಮಾಂಸಭಕ್ಷಕನು (ಬ್ರಾಹ್ಮಣನಿಗೆ ಕ್ಷತ್ರಿಯ ಜಾತಿಯ ಸ್ತ್ರೀಯಲ್ಲಿ ಜನಿಸಿದವನು) **ಅಶುಭಸ್ಯ ಮೇ** ಅಮಂಗಲ ಆಚಾರ ಉಳ್ಳ ನನಗೆ, **ಅಪಃ** ನೀರನ್ನು **ದೇಹಿ** ಕೊಡಿರಿ **(ಇತಿ ಬ್ರುವನ್)** ಹೀಗೆ ಹೇಳುತ್ತಾ **ಅಭ್ಯಾಗಾತ್** ಯಾಚಕನಾಗಿ ಬಂದನು. ||೧೦||

**ತಾತ್ಪರ್ಯ-** ಅನ್ನವನ್ನೆಲ್ಲ ಅತಿಥಿಗಳಿಗೆ ಹಂಚಿಯಾಯಿತು. ನೀರು ಮಾತ್ರ ಉಳಿದಿತ್ತು . ಅದು ಕೂಡಾ ಒಬ್ಬರಿಗೆ ಮಾತ್ರ ಕುಡಿಯವಷ್ಟು ಉಳಿದಿತ್ತು . ಅದನ್ನು ಕುಡಿಯಲು ತೊಡಗಿದಾಗ ಪುಲ್ಕಸನೊಬ್ಬ ಬಂದ. ನಾನು ಅಶುಭ. ನನಗೆ ತುಂಬ ನೀರಡಿಕೆಯಾಗುತ್ತಿದೆ. ನೀರನ್ನು ನೀಡಿರಿ ಎಂದು ಯಾಚಿಸಿದ.

**ತಸ್ಯಾತಿಕರುಣಾಂ ವಾಚಂ ನಿಶಮ್ಯ ವಿಪುಲಶ್ರಮಮ್ ।**
**ಕೃಪಯಾ ಭೃಶಸಂತಪ್ತ ಇದಮಾಹಾಮೃತಂ ವಚಃ ||೧೧||**

**ತಸ್ಯ** ಆ ಪುಲ್ಕಸನ, **ಅತಿಕರುಣಾಂ** ಅತ್ಯಂತ ಕರುಣಾಜನಕವಾದ, **ವಾಚಂ** ಮಾತನ್ನು, **ನಿಶಮ್ಯ** ಕೇಳಿ, **ವಿಪುಲಶ್ರಮಂ** ಬಹಳ ಶ್ರಮ ಹೊಂದಿದವನನ್ನು, **ನಿಶಮ್ಯ** ನೋಡಿ (ವಿಪುಲಶ್ರಮಾಂ ಎಂದು ಪಾಠವಿದ್ದಾಗ ನೀರಡಿಕೆಯ ಶ್ರಮದಿಂದ ಕೂಡಿದ, ವಾಚಂ ಮಾತನ್ನು ಹೀಗೆ ಅನ್ವಯ) **ಕೃಪಯಾ** ದಯೆಯಿಂದ **ಭೃಶಂ**

ಬಹಳವಾಗಿ **ಸಂತಪ್ತಃ** ದುಃಖಿತನಾಗಿ, **ಇದಂ** ಮುಂದೆ ಹೇಳುವ, **ಅಮೃತಂ** ಶ್ರವಣ ಮಾತ್ರದಿಂದ ತೃಪ್ತಿಕರವಾದ್ದರಿಂದ ಅಮೃತದಸದೃಶವಾದ, **ವಾಚಂ** ಮಾತನ್ನು, **ಆಹ** ಆಡಿದನು. ||೧೧||

**ತಾತ್ಪರ್ಯ-** ಪುಲ್ಕಸನ ಮಾತನ್ನು ಕೇಳಿ ರಂತಿದೇವನಲ್ಲಿ ಕರುಣೆಯು ಕಟ್ಟೆಯೊಡೆಯಿತು. ಆತನ ಧ್ವನಿಯಲ್ಲಿ ಅಷ್ಟು ದುಃಖ ಇತ್ತು. ಅದನ್ನು ನೋಡಿದ ಕೂಡಲೇ ರಂತಿದೇವ ಸಂತಪ್ತನಾದ. ಅಮೃತದಂತೆ ಆಪ್ಯಾಯಮಾನವಾದ ಮಾತುಗಳನ್ನಾಡಿದ.

**ನ ಕಾಮಯೇಽಹಂ ಗತಿಮೀಶ್ವರಾಣಾಂ**
**ಮಹದ್ಧಿಯುಕ್ತಾಮಪುನರ್ಭವಂ ಚ ।**
**ಆರ್ತಿಂ ಪ್ರಪದ್ಯೇಽಖಿಲದೇಹಭಾಜಾ-**
**ಮಂತಸ್ಥಿತಾಂ ಯೇನ ಭವಂತ್ಯದುಃಖಾಃ ||೧೨||**

**ಅಹಂ** ನಾನು **ಮಹದ್ಧಿಯುಕ್ತಾಂ** ಅಗಣಿತ ಸಿದ್ಧಿಯನ್ನು ಹೊಂದಿದ **ಈಶ್ವರಾಣಾಂ** ಯೋಗೀಶ್ವರರು ಹೊಂದುವ, **ಗತಿಂ** ಅಣಿಮಾದ್ಯಷ್ಟೈಶ್ವರ್ಯ- ವನ್ನಾಗಲೀ ಮಹರಾದಿ ಲೋಕಗಳನ್ನಾಗಲಿ **ನ ಕಾಮಯೇ** ಇಚ್ಛಿಸುವುದಿಲ್ಲ. **ಅಪುನರ್ಭವಂ ಚ** ಮೋಕ್ಷವನ್ನು ಸಹ, **ನ ಕಾಮಯೇ** ಇಚ್ಛಿಸುವದಿಲ್ಲ. ಆದರೆ, **ಯೇನ** ಯಾವುದರಿಂದ (**ದೇಹಭಾಜಃ** ಜನರು) **ಅದುಃಖಾಃ** ನಾನು ಕೊಟ್ಟ ನೀರಿನಿಂದ ಹಸಿವೆ ನೀರಡಿಕೆಗಳ ನಿಮಿತ್ತ ದುಃಖರಹಿತರೂ, **ಭವಂತಿ** ಆಗುತ್ತಾರೆ. **ತೇನ** ಅಂಥ ಅವರ ಅಪೇಕ್ಷಿತ ಪ್ರದಾನದಿಂದ **ಅಖಿಲದೇಹಭಾಜಾಂ** ಎಲ್ಲ ಪ್ರಾಣಿಗಳ **ಅಂತಸ್ಥಿತಾಂ** ಒಳಗಿರುವ **ಆರ್ತಿಂ** ದುಃಖವನ್ನು **ಪ್ರಪದ್ಯೇ** ಹೊಂದುವೆನು. ||೧೨||

**ತಾತ್ಪರ್ಯ-** ನಾನು ಅಗಣಿತಸಿದ್ಧಿಯುಕ್ತವಾದ ಯೋಗೀಶ್ವರರಿಂದ ಪಡೆಯಲು ಸಾಧ್ಯವಾದ ಅಷ್ಟೈರ್ವರ್ಯವನ್ನು ಬೇಡುವುದಿಲ್ಲ. ಮುಕ್ತಿಯನ್ನೂ ಬಯಸುವುದಿಲ್ಲ. ಸಜ್ಜನರ ದುಃಖಮೋಚನವನ್ನು ಮಾತ್ರ ನಾನು ಬಯಸುತ್ತೇನೆ. ಅದಕ್ಕಾಗಿ ಅವರ ಕಷ್ಟವನ್ನು ಪಡೆಯಬೇಕೆಂದು ಮಾತ್ರ ನಾನು ಬಯಸುತ್ತೇನೆ.

ಉಳಿದಿರುವದು ನೀರೊಂದೇ ಆದ್ದರಿಂದ ರಾಜನು ನೀರು ಕೊಟ್ಟರೆ ಆಗುವ ಪ್ರಯೋಜನವನ್ನು ಇಲ್ಲವಾದರೆ ಆಗುವ ಅನರ್ಥವನ್ನು ಅನ್ವಯ ವ್ಯತಿರೇಕದಿಂದ ಹೇಳುವನು.

**ಕ್ಷುತ್ತೃಟ್‌ಶ್ರಮೋ ಗಾತ್ರಪರಿಶ್ರಮಶ್ಚ**
**ದೈನ್ಯಂ ಕ್ಲಮಃ ಶೋಕವಿಷಾದಮೋಹಾಃ ।**

**ಸರ್ವೇ ನಿವೃತ್ತಾಃ ಕೃಪಣಸ್ಯ ಜಂತೋ**
**ರ್ಜಿಜೀವಿಷೋರ್ಜೀವಜಲಾರ್ಪಣೇನ** ॥೧೩॥

**ಕೃಪಣಸ್ಯ** ದರಿದ್ರನಾದ, **ಜಂತೋಃ** ಮನುಷ್ಯನಿಗೆ, **ಜೀವಜಲಾರ್ಪಣೇನ** ಜೀವಯತಿ ಇತಿ ಜೀವಂ ತಚ್ಚ ತಜ್ಜಲಂ ಚ ಹೀಗೆ ವಿಗ್ರಹ. ಬದುಕಲು ಕಾರಣವಾದ ನೀರನ್ನು ಕೊಡುವುದರಿಂದ, **ಜಿಜೀವಿಷೋಃ** ಪರಕೀಯರ ದುಃಖವು ಹೋಗಿ ಆ ದುಃಖವು ನನಗಿರಲಿ ಎಂದು ಬದುಕಲಿಚ್ಛಿಸುವವನಿಗೆ, **ಕ್ಷುತ್ತೃಟ್‌ಶ್ರಮಃ** ಹಸಿವೆ ನೀರಡಿಕೆಯಿಂದಾಗುವ ಒಳಗಿನ ಶ್ರಮ, **ಗಾತ್ರಪರಿಶ್ರಮಃ ಚ** (ಗಾತ್ರಪರಿಭ್ರಮಃ ಎಂದು ಪಾಠವಿರುವದು) ಹೊರಗೆ ತೋರಿ ಬರುವ ದೇಹ ನಡುಗುವದೇ ಮುಂತಾದ ಶ್ರಮವು **ಕ್ಲಮಃ** ಆಸಲ್ಯವು, **ದೈನ್ಯಂ** ದೀನತೆಯು, **ಶೋಕವಿಷಾದಮೋಹಾಃ ಶೋಕ** ಅಂತರ್ದುಃಖ, ವಿಷಾದ ಹೊರಗೆ ಕಣ್ಣೀರುಡುವದೇ ಮುಂತಾದ ದುಃಖ, ಮೋಹ ಮಾನಸಿಕ ಚಿಂತೆಯು, **ಸರ್ವೇ** ಈ ಎಲ್ಲ ವಿಧ ದುಃಖಗಳು **ನಿವೃತ್ತಾಃ ಭವಂತಿ** ಹೊರಟು ಹೋಗುವವು ಕಾರಣ, ಅವಶ್ಯವಾಗಿ ಪುಲ್ಕಸನಿಗೆ ನೀರು ಕೊಡಲೇಬೇಕು. ಎಂದು ಭಾವವು.

**ತಾತ್ಪರ್ಯ-** ಜಲದಾನದಿಂದ ತೃಷಿತನಾದವನು ತೃಪ್ತನಾಗುತ್ತಾನೆ. ಅವನ ಬಳಲಿಕೆ ಎಲ್ಲವೂ ದೂರವಾಗುತ್ತದೆ. ಇಲ್ಲದಿದ್ದರೇ ತೃಷೆಯು ಅಧಿಕವಾಗಿ ಆತ ಕಷ್ಟಕ್ಕೆ ಸಿಲುಕುತ್ತಾನೆ. ಆದ್ದರಿಂದ ಜಲದಾವನ್ನು ಮಾಡಲೇಬೇಕು. ಹೀಗಾಗಿ ದರಿದ್ರನಾದ, ಕಷ್ಟಕ್ಕೆ ಸಿಲುಕಿದ ಈ ಪುಲ್ಕಸನಿಗೆ ಜಲದಾನವನ್ನು ಮಾಡುತ್ತೇನೆ. ಆತನ ಕಷ್ಟವನ್ನು ಪರಿಹರಿಸುತ್ತೇನೆ. ಎಂಬುದಾಗಿ ರಂತಿದೇವನು ವಿಚಾರಿಸಿದನು.

ಇದರಿಂದ ನೀರಡಿಸಿದವನಿಗೆ ನೀರು ಕೊಟ್ಟರೆ ಕೊಟ್ಟವನಿಗೆ ನೀರಡಿಕೆ ಹೋಗುವದು ಇಲ್ಲವಾದರೆ ಇಲ್ಲ. ಹೀಗೆ ಅನ್ವಯವ್ಯತಿರೇಕ ತಿಳಿಯಬೇಕು.

**ಏವಂ ಪ್ರಭಾಷ್ಯ ಪಾನೀಯಂ ಮ್ರಿಯಮಾಣಃ ಪಿಪಾಸಯಾ ।**
**ಪುಲ್ಕಸಾಯಾದದಾದ್ಧೀರೋ ನಿಸರ್ಗಕರುಣೋ ನೃಪಃ** ॥೧೪॥

**ನಿಸರ್ಗಕರುಣಃ** ಸ್ವಾಭಾವಿಕ ದಯಾಳುವಾದ, **ನೃಪಃ** ರಾಜನು, **ಏವಂ** ಈ ರೀತಿ **ಪ್ರಭಾಷ್ಯ** ಮಾತಾಡಿ, **ಪಿಪಾಸಯಾ** ನೀರಡಿಕೆಯಿಂದ, **ಮ್ರಿಯಮಾಣಃ ಅಪಿ** ಸಾಯುವಂತಾಗಿದ್ದರೂ ಪುಲ್ಕಸನೂ ಸಹ ನೀರಡಿಕೆಯಿಂದ ಬಹಳ ಬಳಲಿರುವನೆಂದು ತಿಳಿದು **ಧೀರಃ** ದೇವರು ನನ್ನನ್ನು ರಕ್ಷಿಸುವನೆಂಬ ಧೈರ್ಯದಿಂದ **ಪುಲ್ಕಸಾಯ** ಬಂದ ನೀಚಜಾತಿಯ ಮನುಷ್ಯನಿಗೆ **ಪಾನೀಯಂ** ನೀರನ್ನು **ಅದದಾತ್** ಕೊಟ್ಟನು. ॥೧೪॥

**ತಾತ್ಪರ್ಯ-** ರಂತಿದೇವನು ಸ್ವಾಭಾವಿಕವಾಗಿಯೇ ಕರುಣೆಯಾಗಿದ್ದ. ಆದ್ದರಿಂದ ಈ ರೀತಿಯಾಗಿ ಮಾತನಾಡಿದ. ಬಂದಿರುವ ಅತಿಥಿಯು ನೀರಡಿಗೆಯಿಂದ ಸಾಯುವಂತಾಗಿದ್ದ. ಯದ್ಯಪಿ ತಾನು ಕೂಡಾ ಅದೇ ಪರಿಸ್ಥಿತಿಯಲ್ಲಿ ಇದ್ದ. ಆದರೂ ತನ್ನನ್ನು ಭಗವಂತ ರಕ್ಷಿಸುತ್ತಾನೆ ಎಂಬ ಭರವಸೆ ಭಕ್ತನಾದ ರಾಜನಿಗೆ ಇತ್ತು. ಹೀಗಾಗಿ ಆ ನೀರನ್ನು ದಾನ ಮಾಡಿದ. ಪುಲ್ಕಸನ ಪ್ರಾಣಗಳನ್ನು ಪರಿರಕ್ಷಿಸಿದ.

**ತಸ್ಯ ತ್ರಿಭುವನಾಧಿಶಾಃ ಫಲದಾಃ ಫಲಮಿಚ್ಛತಾಮ್ ।**
**ಆತ್ಮಾನಂ ದರ್ಶಯಾಂಚಕ್ರುರ್ಮಾಯಾಂ ವಿಷ್ಣುವಿನಿರ್ಮಿತಾಮ್ ॥೧೫॥**

**ತಸ್ಯ** ರಂತಿದೇವನಿಗೆ, **ಫಲಂ** ಅಭೀಷ್ಟಗಳನ್ನು **ಇಚ್ಛತಾಂ** ಇಚ್ಛಿಸುವ ಜನರಿಗೆ **ಫಲದಾಃ** ಅಭೀಷ್ಟಪ್ರದರಾದ **ತ್ರಿಭುವನಾಧೀಶಾಃ** ಮೂರು ಲೋಕಕ್ಕೆ ಒಡೆಯರಾದ ಬ್ರಹ್ಮಾದಿ ದೇವತೆಗಳು, **ವಿಷ್ಣುವಿನಿರ್ಮಿತಾಂ** ಭಗವಂತನಿಂದ ನಿರ್ಮಿತವಾದ, **ಮಾಯಾಂ** ಬ್ರಾಹ್ಮಣ ವೃಷಲ, ಶ್ವ, ಶ್ವಪತಿ, ಪುಲ್ಕಸ ಮುಂತಾದ ರೂಪ ಧರಿಸುವ ತಮ್ಮ ಶಕ್ತಿಯನ್ನು, **ದರ್ಶಯಾಮಾಸುಃ** ತೋರಿಸಿದರು **ಚ** ಮತ್ತು **ಆತ್ಮಾನಂ** ತಮ್ಮನ್ನು **ದರ್ಶಯಾಂಚಕ್ರುಃ** ತೋರಿಸಿದರು. ।।೧೫।।

**ತಾತ್ಪರ್ಯ-** ಬಂದ ಅತಿಥಿಗಳೆಲ್ಲರೂ ಮೂರ್ಲೋಕದ ಒಡೆಯರಾದ ಬ್ರಹ್ಮಾದಿದೇವತೆಗಳಾಗಿದ್ದರು. ಸ್ವಯಂ ಶ್ರೀಹರಿಯೇ ರಂತಿದೇವನ ಪರೀಕ್ಷೆಗಾಗಿ ಈ ವಿಧವಾದ ಶಕ್ತಿಯನ್ನು ಪ್ರಕಟಗೊಳಿಸಿದ್ದ. ಬ್ರಾಹ್ಮಣ ವೃಷಲ, ಶ್ವ ಶ್ವಪತಿ ಪುಲ್ಕಸ ಮುಂತಾದ ರೂಪವನ್ನು ತಮ್ಮ ತಮ್ಮ ಶಕ್ತಿಯಿಂದ ಬ್ರಹ್ಮಾದಿದೇವತೆಗಳು ಧರಿಸಿದ್ದರು. ಈ ಶಕ್ತಿಯನ್ನು ರಂತಿದೇವನಿಗೆ ಪ್ರದರ್ಶನ ಮಾಡಿದರು. ಅಲ್ಲದೇ ತಮ್ಮ ತಮ್ಮ ರೂಪವನ್ನೂ ರಂತಿದೇವನಿಗೆ ತೋರಿಸಿದರು.

**ಸ ವೈ ತ್ಯೇಭ್ಯೋ ನಮಸ್ಕೃತ್ಯ ನಿಃಸಂಗೋ ವಿಗತಸ್ಪೃಹಃ ।**
**ವಾಸುದೇವೇ ಭಗವತಿ ಭಕ್ತ್ಯಾ ಚಕ್ರೇ ಮನಃ ಪರಮ್ ॥೧೬॥**

**ನಿಃಸಂಗಃ** ಕುಟುಂಬದಲ್ಲಿ ಅತ್ಯಂತ ಆಸಕ್ತಿ ಇಲ್ಲದ ಆದ್ದರಿಂದಲೇ, **ವಿಗತಸ್ಪೃಹಃ** ಅವರ ರಕ್ಷಣೆಗಾಗಿ ಬಹಳ ದ್ರವ್ಯಾದಿಗಳ ಆಶೆಯಿಲ್ಲದಿರುವ **ಸಃ** ರಾಜನು, **ತೇಭ್ಯಃ** ಬಂದ ಬ್ರಾಹ್ಮಣಾದಿಗಳಿಗೆ **ನಮಸ್ಕೃತ್ಯ** ನಮಸ್ಕಾರ ಮಾಡಿ, **ಭಗವತಿ** ಷಡ್ಗುಣಸಂಪನ್ನನಾದ **ವಾಸುದೇವೇ** ಪರಮಾತ್ಮನಲ್ಲಿ, **ಭಕ್ತ್ಯಾ** ಭಕ್ತಿಯಿಂದ **ಪರಂ ಮನಃ ಚಕ್ರೇ** ಅನನ್ಯ ಸಾಧಾರಣ ಮನಸ್ಸನ್ನು ಧಾರಣ ಮಾಡಿದನು. ಅವರನ್ನು ಏನೂ ಕೇಳಲಿಲ್ಲ.

**ತಾತ್ಪರ್ಯ-** ರಂತಿದೇವನಿಗೆ ಕುಟುಂಬದಲ್ಲಿ ಅತಿಯಾದ ಆಸಕ್ತಿ ಇರಲಿಲ್ಲ. ಹೀಗಾಗಿ ದ್ರವ್ಯಾದಿಗಳ ಅಪೇಕ್ಷೆಯೂ ಅವನಿಗೆ ಇರಲಿಲ್ಲ. ಆದ್ದರಿಂದ

ರಾಜ ಬಂದಿರುವ ಬ್ರಾಹ್ಮಣರು ಮುಂತಾದವರಿಗೆ ನಮಸ್ಕರಿಸಿದ. ಬಂದ ಆ ಬ್ರಾಹ್ಮಣಾದಿಗಳಲ್ಲಿ ಷಡ್ಗುಣಪರಿಪೂರ್ಣನಾದ ಪರಮಾತ್ಮನ ಪೂಜೆಯನ್ನು ಭಕ್ತಿಯಿಂದ ಮಾಡಿದ.

ಗತಾ ಸ್ಪೃಹಾ ಯೇಭ್ಯಃ ತೈಃ ವಿಶಿಷ್ಟಃ ವಿಗತಸ್ಪೃಹಃ ಎಂದರೆ ಅವನ ಕುಟುಂಬದವರು ದುರಾಶೆಯಿಲ್ಲದವರಾಗಿದ್ದರು. ಆದ್ದರಿಂದಲೇ ಇವನು ನಿಸ್ಪೃಹನಾಗಲು ಸಾಧ್ಯವಾಯಿತು. ॥೧೬॥

**ಈಶ್ವರಾಲಂಬನಂ ಚಿತ್ತಂ ಕುರ್ವತೋಽನನ್ಯರಾಧಸಃ ।**
**ಮಾಯಾ ಗುಣಮಯೀ ರಾಜನ್ ಸ್ವಪ್ನವತ್ಪ್ರತ್ಯಲೀಯತ ॥೧೭॥**

**ರಾಜನ್** ಪರೀಕ್ಷಿತನೇ, **ಚಿತ್ತಂ** ಮನಸ್ಸನ್ನು, **ಈಶ್ವರಾಲಂಬನಂ** ಈಶ್ವರ ವಿಷಯವನ್ನಾಗಿ, **ಕುರ್ವತಃ** ಮಾಡಿದ **ಅನನ್ಯರಾಧಸಃ** (ಅನ್ಯೇನ ರಾಧಃ ಯಸ್ಯ ಸಃ) ಸ್ವತಂತ್ರನಾದ ಹರಿಯಿಂದಲೇ ಮೋಕ್ಷರೂಪ ಸಿದ್ಧಿ ಉಳ್ಳವನು ಅಥವಾ ಮತ್ತೊಬ್ಬರಿಂದ ಸಿದ್ಧಿಯಿಲ್ಲದಿರುವ (ನ ವಿದ್ಯತೇ ಅನ್ಯಸ್ಮಾತ್ ರಾಧಃ ಯಸ್ಯ ಸಃ) ರಂತಿದೇವನಿಗೆ, **ಗುಣಮಯೀ** ಗುಣತ್ರಯಾತ್ಮಕವಾದ **ಮಾಯಾ** ಸಂಸಾರವು **ಸ್ವಪ್ನವತ್** ಸ್ವಪ್ನದಂತೆ **ಪ್ರತ್ಯಲೀಯತ** ನಷ್ಟವಾಯಿತು. ಸಂಸಾರವು ಇದ್ದರೂ ನಷ್ಟ ಪ್ರಾಯವಾಗಿದ್ದಿತು. ॥೧೭॥

**ತಾತ್ಪರ್ಯ-** ಹೇ ಪರೀಕ್ಷಿತನೇ! ರಂತಿದೇವನು ತನ್ನ ಮನಸ್ಸನ್ನು ಈಶ್ವರನಿಗೆ ಸಮರ್ಪಿಸಿದ್ದ. ಮತ್ತೊಬ್ಬರಿಂದ ಸಿದ್ಧಿಯನ್ನು ಬಯಸುತ್ತಿರಲಿಲ್ಲ. ಶ್ರೀಹರಿಯಿಂದಲೇ ಮುಕ್ತಿಯನ್ನು ಬಯಸುವವನಾಗಿದ್ದ. ಆ ಮಹಾನುಭಾವನಿಗೆ ಈ ಸಂಸಾರವು ನಷ್ಟಪ್ರಾಯವಾಗಿತ್ತು . ಹೀಗಾಗಿ ಏನನ್ನೂ ಬೇಡಲಿಲ್ಲ.

**ತತ್ಪ್ರಸಂಗಾನುಭಾವೇನ ರಂತಿದೇವಾನುವರ್ತಿನಃ ।**
**ಅಭವನ್ಯೋಗಿನಃ ಸರ್ವೇ ನಾರಾಯಣಪರಾಯಣಾಃ ॥೧೮॥**

**ತತ್ಪ್ರಸಂಗಾನುಭಾವೇನ** ಕಥಾಪ್ರಸಂಗದ ಅಭಿಪ್ರಾಯದಿಂದ (ಬಹುತರ ಸಹವಾಸದ ಪ್ರಭಾವದಿಂದ) **ರಂತಿದೇವಾನುವರ್ತಿನಃ** ರಂತಿದೇವನ ಅನುಯಾಯಿ-ಗಳಾದ, **ಸರ್ವೇ** ಎಲ್ಲ **ಯೋಗಿನಃ** ಯೋಗಿಗಳು, **ನಾರಾಯಣ ಪರಾಯಣಾಃ** ಭಗವಂತನಲ್ಲಿ ಆಸಕ್ತರು, **ಅಭವನ್** ಆದರು.

**ತಾತ್ಪರ್ಯ-** ರಂತಿದೇವ ವಿರಕ್ತನಾಗಿದ್ದ. ದೇಹದಲ್ಲಿ ದೇಹಾನುಬಂಧಿ ಗಳಲ್ಲಿಯೂ ಮಮತೆಯನ್ನು ಬಿಟ್ಟ. ಐಹಿಕ ಆಮುಷ್ಮಿಕ ಸುಖಗಳನ್ನು ಆಸೆ ಪಡದೇ ಮನಸ್ಸನ್ನು ವಾಸುದೇವನಲ್ಲಿ ನೆಲೆಗೊಳಿಸಿದ. ಈ ರೀತಿಯಾದ

ಭಗವದಾರಾಧನೆಯಿಂದ ತ್ರಿಗುಣಾತ್ಮಕವಾದ ಸಂಸಾರ ಮಾಯೆಯು ಕನಸಿನಂತೆ ಕರಗಿಹೋಯಿತು. ರಾಜನೇ! ಈ ರಂತಿದೇವನನ್ನು ಅನುಸರಿಸುತ್ತಿದ್ದವರೆಲ್ಲರೂ ಆತನ ಸಹವಾಸದಿಂದ ಭಗವದ್ಭಕ್ತರಾಗಿ ಪುರುಷಾರ್ಥ ಸಾಧನೆ ಮಾಡಿಕೊಂಡರು. ಈವನೂ ಉತ್ತಮಗತಿ ಹೊಂದಿದನು. ||೧೮||

ಇಲ್ಲಿಯವರೆಗೆ ರಂತಿದೇವನ ವಂಶವನ್ನು ನಿರೂಪಿಸಿದರು. ಈಗ ಭರತನ ಮೊಮ್ಮಗನು ಮನ್ಯುವು ಆ ಮನ್ಯುವಿನ ಐದನೆಯ ಮಗನಾದ ಗರ್ಗನ ವಂಶವನ್ನು ಹೇಳುವರು.

**ಗರ್ಗಾಚ್ಛಿನಿಸ್ತತೋ ಗಾರ್ಗ್ಯಾತ್ ಕ್ಷತ್ರಾದ್ಬ್ರಹ್ಮ ಹ್ಯವರ್ತತ |**
**ದುರಿತಕ್ಷಯೋ ಮಹಾವೀರ್ಯಾತ್ತಸ್ಯ ತ್ರಯ್ಯಾರುಣಿಃ ಕವಿಃ |**
**ಪುಷ್ಕರಾರುಣಿರಿತ್ಯತ್ರ ಯೇ ಬ್ರಾಹ್ಮಣಗತಿಂ ಗತಾಃ ||೧೯||**

**ಗರ್ಗಾತ್** ಗರ್ಗನ ದೆಶೆಯಿಂದ **ಶಿನಿಃ** ಶಿನಿಯು, **ಗಾರ್ಗ್ಯಾತ್** ಗರ್ಗನ ಮಗನಾದ **ಕ್ಷತ್ರಾತ್** ಕ್ಷತ್ರಿಯನಾದ **ತತಃ** ಆ ಶಿನಿಯಿಂದ **ಬ್ರಹ್ಮ** ಬ್ರಾಹ್ಮಣ ಕುಲವು, **ಅವರ್ತತ** ಉಂಟಾಯಿತು. ಮನ್ಯುವಿನ ಮಗ ಮಹಾವೀರ್ಯನ ವಂಶವನ್ನು ಹೇಳುವರು. **ಮಹಾವೀರ್ಯಾತ್** ಮಹಾವೀರ್ಯನಿಂದ, **ದುರಿತಕ್ಷಯಃ** ದುರಿತಕ್ಷಯನು, **ತಸ್ಯ** ದುರಿತಕ್ಷಯನಿಗೆ, **ಅತ್ರ** ಕ್ಷತ್ರಿಯವಂಶದಲ್ಲಿಯೇ ಯಾರು **ಬ್ರಾಹ್ಮಣಗತಿಂ** ಬ್ರಾಹ್ಮಣರೂಪವನ್ನು, **ಗತಾಃ** ಹೊಂದಿದರೋ, **ತೇ** ಅಂಥ **ತ್ರಯ್ಯಾರುಣಿಃ, ಕವಿಃ, ಪುಷ್ಕರಾರುಣಿಃ** ತ್ರಯ್ಯಾರುಣಿ, ಕವಿ, ಪುಷ್ಕರಾರುಣಿ ಇತಿ ಹೀಗೆ ಮೂರು ಜನ ಮಕ್ಕಳು ಜನಿಸಿದರು. ಕ್ಷತ್ರಿಯ ಕುಲದಲ್ಲಿ ಜನಿಸಿದರೂ ಬ್ರಾಹ್ಮಣರಾದರು ಎಂದರ್ಥ. ||೧೯||

**ತಾತ್ಪರ್ಯ–** ಗರ್ಗನಿಗೆ ಶಿನಿಯು ಜನಿಸಿದನು. ಕ್ಷತ್ರಿಯನಾದ ಈ ಶಿನಿಯಿಂದ ಬ್ರಾಹ್ಮಣಕುಲವು ಉಂಟಾಯಿತು. ಈಗ ಮನ್ಯುವಿನ ಮೂರನೆಯ ಮಗನಾದ ಮಹಾವೀರ್ಯನ ವಂಶವನ್ನು ನಿರೂಪಿಸುವರು. ಮಹಾವೀರ್ಯನಿಂದ ದುರಿತಕ್ಷಯನು ಜನಿಸಿದನು. ಈ ದುರಿತಕ್ಷಯನಿಗೆ ಕ್ಷತ್ರಿಯವಂಶದಲ್ಲಿಯೇ ಯಾರು ಬ್ರಾಹ್ಮಣ್ಯವನ್ನು ಪಡೆದರೋ ಅಂಥ ತ್ರೈಯ್ಯಾರುಣಿ, ಕವಿ ಮತ್ತು ಪುಷ್ಕರಾರುಣಿ ಎಂಬ ಮೂರು ಜನ ಮಕ್ಕಳಾದರು.

ಮನ್ಯುವಿನ ಹಿರಿಯಮಗನ ವಂಶವನ್ನು ಹೇಳುವರು.

**ಬೃಹತ್ಕ್ಷೇತ್ರಸ್ಯ ಹೋತ್ರೋಽಸ್ಮಾದ್ಧಸ್ತೀ ಯದ್ಧಸ್ತಿನಾಪುರಮ್ ||೨೦||**

**ಬೃಹತ್ಕ್ಷೇತ್ರಸ್ಯ** ಬೃಹತ್ಕ್ಷೇತ್ರನಿಗೆ **ಹೋತ್ರಃ** ಹೋತ್ರನೆಂಬ ಮಗನು **ಅಸ್ಮಾತ್** ಹೋತ್ರನಿಂದ, **ಯತ್** (ಅವ್ಯಯ) ಯಾರಿಂದ, **ಹಸ್ತಿನಾಪುರಂ** ಹಸ್ತಿನಾಪಟ್ಟಣವು **(ನಿರ್ಮಿತಂ)** ನಿರ್ಮಾಣ ಮಾಡಲ್ಪಟ್ಟಿತೋ ಅಂಥಾ, **ಹಸ್ತೀ** ಹಸ್ತೀ ಎಂಬುವನು ಜನಿಸಿದನು. ॥೨೦॥

**ತಾತ್ಪರ್ಯ-** ಮನ್ಯುವಿನ ಹಿರಿಯ ಮಗನಾದ ಬೃಹತ್ಕ್ಷೇತ್ರನಿಗೆ ಹೋತ್ರನು. ಹೋತ್ರನಿಗೆ ಹಸ್ತಿನಾಪುರವನ್ನು ನಿರ್ಮಾಣ ಮಾಡಿದ ಹಸ್ತೀ ಎಂಬುವನು ಜನಿಸಿದರು.

**ಅಜಮೀಢೋ ದ್ವಿಮೀಢಶ್ಚ ಪುರಮೀಢಶ್ಚ ಹಸ್ತಿನಃ ।**
**ಅಜಮೀಡಸ್ಯ ವಂಶ್ಯಾಃ ಸ್ಯುಃ ಪ್ರಿಯಮೇಧಾದಯೋ ದ್ವಿಜಾಃ ॥೨೧॥**

**ಹಸ್ತಿನಃ** ಹಸ್ತಿಗೆ ಅಜಮೀಡ, ದ್ವಿಮೀಢ, ಪುರಮೀಢರೆಂದು ಮೂರು ಜನ ಮಕ್ಕಳು. **ಅಜಮೀಢಸ್ಯ** ಅಜಮೀಢನ, **ವಂಶೇ** ವಂಶದಲ್ಲಿಯೂ, **ಪ್ರಿಯ-ಮೇಧಾದಯಃ** ಪ್ರಿಯಮೇಧನೇ ಮೊದಲಾದವರು, **ದ್ವಿಜಾಃ** ಬ್ರಾಹ್ಮಣರು, **ಸ್ಯುಃ** ಆದರು. ॥೨೧॥

**ತಾತ್ಪರ್ಯ-** ಅಜಮೀಢನಿಗೆ ಪ್ರಿಯಮೇಧಾದಿಗಳು ಜನಿಸಿದರು. ಇವರೂ ಕೂಡಾ ಬ್ರಾಹ್ಮಣರಾದರು.

ಅಜಮೀಢನಿಗೆ ವಂಶಪ್ರವರ್ತಕನಾದ ಇನ್ನೊಬ್ಬ ಮಗನಿದ್ದನು ಎಂದು ಹೇಳುವರು.

**ಅಜಮೀಢಾದ್ ಬೃಹದಿಷುಸ್ತಸ್ಯ ಪುತ್ರೋ ಬೃಹದ್ಧನುಃ ।**
**ಬೃಹತ್ಕಾಯಸ್ತತಸ್ತಸ್ಯ ಪುತ್ರ ಆಸೀತ್ ಬೃಹದ್ರಥಃ ॥೨೨॥**

**ಅಜಮೀಢಾತ್** ಅಜಮೀಢನಿಂದ, **ಬೃಹದಿಷುಃ** ಬೃಹದಿಷುವು, **ತಸ್ಯ** ಬೃಹದಿಷುವಿಗೆ, **ಬೃಹದ್ಧನುಃ** ಬೃಹದ್ಧನುವು, **ಪುತ್ರಃ** ಮಗನು **ತತಃ** ಬೃಹದ್ಧನುವಿನಿಂದ **ಬೃಹತ್ಕಾಯಃ** ಬೃಹತ್ಕಾಯನು, **ತಸ್ಯ** ಬೃಹತ್ಕಾಯನಿಗೆ **ಬೃಹದ್ರಥಃ** ಬೃಹದ್ರಥನು **ಪುತ್ರಃ** ಮಗನು **ಆಸೀತ್** ಆದರು. ॥೨೨॥

**ತಾತ್ಪರ್ಯ-** ಅಜಮೀಢನಿಗೆ ವಂಶಪ್ರವರ್ತಕನಾದ ಬೃಹದಿಷು ಎನ್ನುವ ಇನ್ನೊಬ್ಬ ಮಗನಿದ್ದನು. ಈ ಬೃಹದಿಷುವಿಗೆ ಬೃಹದ್ಧನುವು, ಬೃಹದ್ಧನುವಿಗೆ ಬೃಹತ್ಕಾಯನು, ಬೃಹತ್ಕಾಯನಿಗೆ ಬೃಹದ್ರಥರೆಂದು ಮಕ್ಕಳಾದರು.

**ತತ್ಸುತೋ ವಿಶದಸ್ತಸ್ಯ ಶ್ಯೇನಜಿತ್ಸಮಜಾಯತ ।**
**ರುಚಿರಾಶ್ವೋ ಧೃಢಹನುಃ ಕಾಶ್ಯೋ ವತ್ಸಶ್ಚ ತತ್ಸುತಾಃ ॥೨೩॥**

**ತತ್ಸುತಃ** ಬೃಹದ್ರಥನ ಮಗನು, **ವಿಶದಃ** ವಿಶದನು, **ತಸ್ಯ** ವಿಶದನಿಗೆ, **ಶ್ಯೇನಜಿತ್** ಶ್ಯೇನಜಿತನು, **ಸಮಜಾಯತ** ಹುಟ್ಟಿದನು. **ತತ್ಸುತಾಃ** ಶ್ಯೇನಜಿತನ ಮಕ್ಕಳು **ರುಚಿರಾಶ್ವಃ** ರುಚಿರಾಶ್ವನು **ದೃಢಹನುಃ** ದೃಢಹನುವು **ಕಾಶ್ಯಃ** ಕಾಶ್ಯ ಎಂಬುವನು **ವತ್ಸಃ** ವತ್ಸನು ಹೀಗೆ ನಾಲ್ಕು ಜನರು. ।।೨೩।।

**ತಾತ್ಪರ್ಯ-** ಬೃಹದ್ರಥನಿಗೆ ವಿಶದನು, ವಿಶದನಿಗೆ ಶ್ಯೇನಜಿತನು, ಅವತರಿಸಿ-ದರು. ಶ್ಯೇನಜಿತನಿಗೆ ರುಚಿರಾಶ್ವ, ದೃಢಹನು, ಕಾಶ್ಯ, ವತ್ಸರೆಂದು, ನಾಲ್ವರು ಜನಿಸಿದರು.

**ರುಚಿರಾಶ್ವಸುತೋ ಯಾಜಃ ಪೃಥುಸೇನಸ್ತದಾತ್ಮಜಃ ।**
**ಪಾರಸ್ತತ್ತನಯೋ ನೀಪಸ್ತಸ್ಯ ಪುತ್ರಶತಂ ತ್ವಭೂತ್ ।।೨೪।।**

**ರುಚಿರಾಶ್ವಸುತಃ** ಶ್ಯೇನಜಿತನ ಮೊದಲ ಮಗನಾದ ರುಚಿರಾಶ್ವನ ಮಗನು **ಯಾಜಃ** ಯಾಜನು, **ತದಾತ್ಮಜಃ** ಯಾಜನ ಮಗನು, **ಪೃಥುಸೇನಃ** ಪೃಥುಸೇನನು, **ತತ್ತನಯಃ** ಪೃಥುಸೇನನ ಮಗನು, **ಪಾರಃ** ಪಾರನು, **ತಸ್ಯ** ಪಾರನಿಗೆ **ನೀಪಃ** ನೀಪನು, **ತನಯಃ** ಮಗನು. **ತಸ್ಯ** ನೀಪನಿಗೆ **ಪುತ್ರಶತಂ** ನೂರು ಮಕ್ಕಳು **ಅಭೂತ್** ಆದರು. ।।೨೪।।

**ತಾತ್ಪರ್ಯ-** ರುಚಿರಾಶ್ವನ ಮಗನು ಯಾಜನು. ಯಾಜನಿಗೆ ಪೃಥುಸೇನನು ಪೃಥುಸೇನನಿಗೆ ಪಾರನು ಹುಟ್ಟಿದರು. ಪಾರನ ಪುತ್ರನು ನೀಪನು. ಈ ನೀಪನಿಗೆ ನೂರು ಮಕ್ಕಳು ಜನಿಸಿದರು.

**ಅಣುಹೋ ನಾಮ ಯಸ್ತೇಷಾಂ ಜ್ಯೇಷ್ಠೋ ಸತ್ಯಾತ್ಮಕೋ ನೃಪ ।**
**ಸಂಕೃತ್ವ್ಯಾಂ ಶುಕಕನ್ಯಾಯಾಂ ಬ್ರಹ್ಮದತ್ತಮಜೀಜನತ್ ।।೨೫।।**

**ನೃಪ** ರಾಜನೇ! **ತೇಷಾಂ** ಆ ನೂರು ಮಕ್ಕಳಲ್ಲಿ, **ಯಃ ಜ್ಯೇಷ್ಠಃ** ಯಾವನು ಹಿರಿಯವನೋ, **ಸತ್ಯಾತ್ಮಕಃ** ಸತ್ಯ ಭಗವಂತನಲ್ಲಿ, **ಆತ್ಮಕಃ** ಮನಸ್ಸುಳ್ಳವನು, **ಸಃ** ಆ **ಅಣುಹಃ** ಅಣುಹನು, **ಶುಕಕನ್ಯಾಯಾಂ** ವ್ಯಾಸರ ಮಕ್ಕಳಾದ ಶುಕಾಚಾರ್ಯರ ಮಗಳಾದ, **ಸಂಕೃತ್ವ್ಯಾಂ** ಸಂಕೃತ್ವೀ ಎಂಬುವಳಲ್ಲಿ, **ಬ್ರಹ್ಮದತ್ತಂ** ಬ್ರಹ್ಮದತ್ತನನ್ನು **ಅಜೀಜನತ್** ಪಡೆದನು.

**ತಾತ್ಪರ್ಯ-** ಈ ನೂರು ಮಕ್ಕಳಲ್ಲಿ ಜ್ಯೇಷ್ಠನಾದ ಪರಮಾತ್ಮನಲ್ಲಿ ಮನಸ್ಸುಳ್ಳ ಅಣುಹನು ಶುಕಾಚಾರ್ಯರ ಮಗಳಾದ ಸಂಕೃತ್ವಿಯಲ್ಲಿ ಬ್ರಹ್ಮದತ್ತನನ್ನು ಪಡೆದನು.

ವಿಷ್ವಕ್ಸೇನನಿಂದ ಉದಕ್ಸೇನನು. ಉದಕ್ಸೇನನಿಗೆ ಭಲ್ಲಾದನು ಇವರು ಅಜಮೀಢನ ಮಗನಾದ ಬೃಹದಿಷುವಿನ ವಂಶಜರು. ಹಸ್ತಿಯ ಎರಡನೇ

ಮಗನಾದ ದ್ವಿಮೇಢನಿಗೆ ಯವೀನರನು, ಈ ಯವೀನರನಿಗೆ ಕೃತಿಮಂತನು ಜನಿಸಿದನು. ಕೃತಿಮಂತನಿಗೆ ಸುಪಾರ್ಶ್ವನ ತಂದೆಯಾದ ಸತ್ಯಧೃತಿಯು ಜನಿಸಿದನು. ಸುಪಾರ್ಶ್ವನು ಸುಮತಿಯನ್ನು ಪಡೆದನು. ಸುಮತಿಯ ಮಗನು ಸಂತತಿಮಾನನು. ಸಂತತಿಮಾನನಿಂದ ಕೃತಿಯು ಸೃಷ್ಟನಾದನು. ಈ ಕೃತಿಯು ಹಿರಣ್ಯನಾಭರೆಂಬ ಮುನಿಗಳಿಂದ ಯೋಗಶಾಸ್ತ್ರವನ್ನು ಅಧ್ಯಯನ ಮಾಡಿ ಪ್ರಾಚ್ಯಸಾಮವೆಂಬ ಹನ್ನೆರಡು ಸಂಹಿತೆಗಳನ್ನು ಪಾಠ ಹೇಳಿದನು. ಕೃತಿಗೆ ಉಗ್ರಾಯುಧನು, ಉಗ್ರಾಯುಧನಿಗೆ ನೀಪನು ಜನಿಸಿದನು.

ಅನಂತರ ನೀಪನಿಗೆ ಕ್ಷೇಮ್ಯನು, ಕ್ಷೇಮ್ಯನಿಗೆ ಸುವೀರನು, ಸುವೀರನಿಗೆ ರಿಪುಂಜಯನು, ರಿಪುಂಜಯನಿಗೆ ಬಹತಿಥನು, ಜನಿಸಿದನು. ದ್ವಿಮೀಢನ ತಮ್ಮನಾದ ಪುರುಮೀಢನಿಗೆ ಮಕ್ಕಳಾಗಲಿಲ್ಲ. ಪ್ರಜಾರಹಿತನಾದನು. ಅಜಮೀಢನ ವಂಶದಲ್ಲಿ ಪ್ರಿಯಾಮೇಧಾದಿಗಳ ಕೆಲವರು ಬ್ರಾಹ್ಮಣರಾದರು. ಬೃಹದಿಷು ಮುಂತಾದ ಕೆಲವರು ಕ್ಷತ್ರಿಯರಾದರು ಎಂದು ಹೇಳಿದೆ. ಈಗ ಪುನಃ ಅವನ ವಂಶಾಂತರವನ್ನು ಹೇಳುವರು.

ಅಜಮೀಢನಿಗೆ ನಲಿನೀ ಎಂಬುವಳಲ್ಲಿ ನೀಲನು ಜನಿಸಿದನು. ನೀಲನ ಮಗನು ಶಾಂತಿಯು, ಶಾಂತಿಗೆ ಸುಶಾಂತಿಯು, ಜನಿಸಿದನು. ಸುಶಾಂತಿಯು ಪುರಾಜನನ್ನು ಪಡೆದನು. ಪುರಾಜನಿಗೆ ಅರ್ಕನು ಹುಟ್ಟಿದನು. ಅರ್ಕನ ಮಗನು ಹರ್ಮ್ಯಾಶ್ವನು ಈ ಹರ್ಮ್ಯಾಶ್ವನಿಗೆ ಮುದ್ಗಲ, ಯವೀನರ, ಬೃಹದಿಷು, ಕಾಂಪಿಲ್ಯ, ಸಂಜಯರೆಂದು ಐವರು ಪುತ್ರರು ಜನಿಸಿದರು. ಹರ್ಮ್ಯಾಶ್ವನು, ನನ್ನ ಮಕ್ಕಳು ಐದು ದೇಶಗಳನ್ನು ರಕ್ಷಣೆ ಮಾಡಲು ಅಲಂ ಎಂದರೆ ಸಮರ್ಥರು ಆದ್ದರಿಂದ ಇವರು ಪಂಚಾಲರು ಎಂದು ಹೇಳಿದನು.

ಮುದ್ಗಲನಿಂದ ಬ್ರಾಹ್ಮಣಕುಲವು **ಮೌದ್ಗಲ್ಯ** ಎಂಬ ಗೋತ್ರದಿಂದ ಪ್ರಸಿದ್ಧವಾಯಿತು. ಈ ಮುದ್ಗಲನಿಗೆ ಅವಳಿಗಳಾದ ದಿವೋದಾಸನೆಂಬ ಪುತ್ರನು, ಅಹಲ್ಯೆಯೆಂಬ ಪುತ್ರಿಯು ಜನಿಸಿದರು. ಈಅಹಲ್ಯೆಯಲ್ಲಿ ಗೌತಮರಿಂದ ಶತಾನಂದರು ಹುಟ್ಟಿದರು. ಶಂತಾನಂದರಿಗೆ ಅಸ್ತ್ರವಿದ್ಯಾಪಾರಂಗತನಾದ ಶತಧೃತಿಯು ಜನಿಸಿದನು. ಶತದೃತಿಯು ಶರದ್ವಾನನನ್ನು ಪಡೆದನು. ಶರದ್ವಾನನು ಊರ್ವಶೀಯನ್ನು ದರ್ಶನ ಮಾಡಿದನು. ದರ್ಶನಮಾತ್ರದಿಂದ ಹುಲ್ಲಿನಲ್ಲಿ ರೇತಸ್ಖಲನವಾಯಿತು. ರೇತಸ್ಸು ಸುಂದರವಾದ ಗಂಡು ಹೆಣ್ಣುಗಳು ಆಯಿತು. ಬೇಟೆಗಾಗಿ ಹೊರಟ ಶಂತನು ರಾಜನು ಆ ಅವಳಿಮಕ್ಕಳನ್ನು ನೋಡಿ ಕೃಪಾದಿಂದ ಸ್ವೀಕರಿಸಿದನು. ಆದ್ದರಿಂದ ಗಂಡುಮಗವು ಕೃಪನೆಂದು, ಹೆಣ್ಣು ಮಗುವು

ಕೃಪಿಯೆಂದು ಪ್ರಸಿದ್ಧವಾಯಿತು. ಈ ಕನ್ಯೆಯಾದ ಕೃಪಿಯು ದ್ರೋಣಾಚಾರ್ಯರ ಪತ್ನಿಯಾದಳು. ॥೧೯-೩೭॥

ವೇದವ್ಯಾಸರಿಂದ ಅರಣಿಯಲ್ಲಿ ಪ್ರಜ್ವಲಿಸುವ ಅಗ್ನಿಯಂತೆ ಜನಿಸಿದ ಪರಾಶರ ಕುಲೋತ್ಪನ್ನರಾದ ಶುಕಾಚಾರ್ಯರೆಂಬ ಮಹಾಕೀರ್ತಿಶಾಲಿಗಳು ಪೀರಿಣೀ ಎಂಬುವಳಲ್ಲಿ ಕೃಷ್ಣ, ಗೌರಪ್ರಭಾ, ಶಂಭು, ಭೂರಿಶ್ರುತ, ಜಯ ಮತ್ತು ಆರನೇಯವಳಾದ ಕೀರ್ತಿಮತಿ, ಯೋಗಿನೀ, ಯೋಗಮಾತಾ, ಅಣುಹನ ಪತ್ನಿಯಾದ ಬ್ರಹ್ಮದತ್ತನ ತಾಯಿಯಾದ ಕನ್ಯೆಯನ್ನು ಪಡೆದರು ಎಂದು ಹರಿವಂಶದಲ್ಲಿ ಹೇಳಿದೆ. ಸಾಕ್ಷಾತ್ ರುದ್ರಾವತಾರಿಯಾದವರಿಗೆ ಗೃಹಸ್ಥ ಮತ್ತು ಅವಧೂತತತ್ವಗಳು ''ಗಾರ್ಹಸ್ಥ್ಯಂ ಚ ಯತಿತ್ವಂ ಚ ದೇವೇಷ್ವೇಕತ್ವಮಾಗತಂ'' ಎಂಬ ಪ್ರಮಾಣಾನುಸಾರ ವಿರುದ್ಧವಲ್ಲ. **ಪಂಚಕನ್ಯಾಃ ಸ್ಮರೇನ್ನಿತ್ಯಂ** ಎಂದು ಅಹಲ್ಯಾದಿಗಳಿಗೆ ಕನ್ಯಾತ್ವವಿದ್ದಂತೆ. ॥೨೫॥

**ಯೋಗೇಶೋ ಗವಿ ಭಾರ್ಯಾಯಾಂ ವಿಶ್ವಕ್ಸೇನಮಧಾತ್ಸುತಮ್ ।**
**ಜೈಗೀಷವ್ಯೋಪದೇಶನ ಯೋಗತಂತ್ರಂ ಚಕಾರ ಹ ॥೨೬॥**

**ಯೋಗೇಶಃ** ಬ್ರಹ್ಮದತ್ತನು, **ಗವಿ ಭಾರ್ಯಾಯಾಂ** ಗೋ ಎಂಬ ಹೆಂಡತಿಯಲ್ಲಿ, **ವಿಷ್ವಕ್ಸೇನಂ ಸುತಂ** ವಿಷ್ವಕ್ಸೇನನೆಂಬ ಮಗನನ್ನು, **ಅಧಾತ್** ಪಡೆದನು. **ಜೈಗೀಷವ್ಯೋಪದೇಶೇನ** ಜೈಗೀಷವ್ಯರೆಂಬ ಯೋಗಿಗಳ ಉಪದೇಶದಿಂದ **ಯೋಗತಂತ್ರಂ** ಯೋಗಶಾಸ್ತ್ರವನ್ನು **ಚಕಾರ** ಮಾಡಿದನು. **ಹ** ಪ್ರಸಿದ್ಧವು.

**ತಾತ್ಪರ್ಯ-** ಬ್ರಹ್ಮದತ್ತನು ಗೋ ಎಂದು ಹೆಸರುಳ್ಳ ಪತ್ನಿಯಲ್ಲಿ ವಿಷ್ವಕ್ಸೇನನನ್ನು ಪಡೆದನು. ಈ ವಿಷ್ಕ್ಸೇನನು ಜೈಗೀಷವ್ಯ ಮುನಿಗಳ ಉಪದೇಶದಿಂದ ಯೋಗಶಾಸ್ತ್ರವನ್ನು ರಚಿಸಿದನು.

ಬೃಹದಾರಣ್ಯಕಭಾಷ್ಯದಲ್ಲಿ ''ಪಾರಾಶರ್ಯೋ ಜಾತುಕರ್ಣ್ಯಃ ಪರಾಶರ ಸುತಾವುಭೌ । ವಿಪ್ರಾಯಾಮೇವ ಭಾರ್ಯಾಯಾಂ ತೃತೀಯಃ ಕೃಷ್ಣ ಏವ ಚ'' ಎಂದು ಹೇಳಿದ್ದರಿಂದ ಪರಾಶರನ ಮಕ್ಕಳು ವ್ಯಾಸರ ಅಣ್ಣಂದಿರು ಎಂದು ತಿಳಿಯಬೇಕು. ಮತ್ತು ಶಿವಾವತಾರರು ಎಂದೂ ಹೇಳಿದೆ. ''ಶುಕಸ್ತಥಾ ಸದ್ಯೋಜಾತಃ ವಾಮದೇವಶ್ಚಾದ್ಯೋರಸ್ತತ್ಪುಮಾನಿತಿ ದುರ್ವಾಸಾ ದ್ರೌಣಿರೌರ್ವಶ್ಚ ಜೈಗೀಷವ್ಯಾದಿರೂಪಕಾಃ''.

**ಉದಕ್ಸೇನಸ್ತತಸ್ತಸ್ಮಾದ್ಭಲ್ಲಾದೋ ಬಾರ್ಹದೀಷವಃ ।**
**ಯವೀನರೋದ್ವಿಮೀಢಸ್ಯ ಕೃತಿಮಾಂಸ್ತತ್ಸುತಸ್ತತಃ ॥೨೭॥**

**ತತಃ** ವಿಷ್ವಕ್ಸೇನನಿಂದ, **ಉದಕ್ಸೇನಃ** ಉದಕ್ಸೇನನು, **ತಸ್ಮಾತ್** ಉದಕ್ಸೇನನಿಂದ, **ಭಲ್ಲಾದಃ** ಭಲ್ಲಾದನು, ಇವರು **ಬಾರ್ಹದಿಷವಃ** ಅಜಮೀಢನ ಎರಡನೇ ಮಗನಾದ ಬೃಹದೀಷುವಿನ ವಂಶಜರು, **ದ್ವಿಮೀಢಸ್ಯ** ಹಸ್ತಿಯ ಮಗನಾದ ದ್ವಿಮೇಢನಿಗೆ, **ಯವೀನರಃ** ಯವೀನರನು, **ತತ್ಸುತಃ** ಯವೀನರನ ಮಗನು, **ಕೃತಿಮಾನ್** ಕೃತಿಮಂತನು, **ತತಃ** ಕೃತಿಮಂತನಿಂದ. ।।೨೭।।

**ತಾತ್ಪರ್ಯ-** ವಿಷ್ವಕ್ಸೇನನಿಂದ ಉದಕ್ಸೇನನು. ಉದಕ್ಸೇನನಿಗೆ ಭಲ್ಲಾದನು ಇವರು ಅಜಮೀಢನ ಮಗನಾದ ಬೃಹದಿಷುವಿನ ವಂಶಜರು. ಹಸ್ತಿಯ ಎರಡನೇ ಮಗನಾದ ದ್ವಿಮೇಢನಿಗೆ ಯವೀನರನು, ಈ ಯವೀನರನಿಗೆ ಕೃತಿಮಂತನು ಜನಿಸಿದನು.

**ನಾಮ್ನಾ ಸತ್ಯಧೃತಿರ್ಯಸ್ಮಾತ್ ದೃಢನೇಮಿಃ ಸುಪಾರ್ಶ್ವಕೃತ್ ।**
**ಸುಪಾರ್ಶ್ವಾತ್ಸುಮತಿಸ್ತಸ್ಯ ಪುತ್ರಃ ಸಂತತಿಮಾಂಸ್ತತಃ ।।೨೮।।**

**ಯಸ್ಮಾತ್** ಯಾವಾತನಿಂದ, **ಸುಪಾರ್ಶ್ವಕೃತ್** ಸುಪಾರ್ಶ್ವನ ತಂದೆಯಾದ **ನಾಮ್ನಾ** ಹೆಸರಿನಿಂದ, **ಸತ್ಯಧೃತಿಃ** ಸತ್ಯಧೃತಿಯು ಜನಿಸಿದನು. **ಸುಪಾರ್ಶ್ವಾತ್** ಸುಪಾರ್ಶ್ವನಿಂದ, **ಸುಮತಿಃ** ಸುಮತಿಯು, **ತಸ್ಯ** ಸುಮತಿಗೆ **ಸಂತತಿಮಾನ್** ಸಂತತಿಮಾನನು, **ಪುತ್ರಃ** ಮಗನು. ।।೨೮।।

**ತಾತ್ಪರ್ಯ-** ಕೃತಿಮಂತನಿಗೆ ಸುಪಾರ್ಶ್ವನ ತಂದೆಯಾದ ಸತ್ಯಧೃತಿಯು ಜನಿಸಿದನು. ಸುಪಾರ್ಶ್ವನು ಸುಮತಿಯನ್ನು ಪಡೆದನು. ಸುಮತಿಯ ಮಗನು ಸಂತತಿಮಾನ್ ಎಂಬುವವನು.

**ಕೃತಿರ್ಹಿರಣ್ಯನಾಭಾದ್ಯೋ ಯೋಗಂ ಪ್ರಾಪ್ಯ ಜಗೌ ದ್ವಿಷಟ್ ।**
**ಸಂಹಿತಾಃ ಪ್ರಾಚ್ಯಸಾಮ್ನಾಂ ವೈ ನೀಪೋ ಹ್ಯೌಗ್ರಾಯುಧಸ್ತತಃ ।।೨೯।।**

**ತತಃ** ಸಂತತಿಮಂತನಿಂದ, **ಕೃತಿಃ** ಕೃತಿಯು **ಯಃ** ಯಾವ ಕೃತಿಯು, **ಹಿರಣ್ಯನಾಭಾತ್** ಹಿರಣ್ಯನಾಭನೆಂಬ ಋಷಿಯಿಂದ **ಯೋಗಂ** ಯೋಗಶಾಸ್ತ್ರವನ್ನು **ಪ್ರಾಪ್ಯ** ಹೊಂದಿ, **ಪ್ರಾಚ್ಯಸಾಮ್ನಾಂ** ಪ್ರಾಚ್ಯ ಸಾಮವೆಂಬ, **ದ್ವಿಷಟ್** ಹನ್ನೆರಡು, **ಸಂಹಿತಾಃ** ಸಂಹಿತೆಗಳನ್ನು, **ಜಗೌ** ಪಾಠ ಹೇಳಿದನು. **ತತಃ** ಕೃತಿಯಿಂದ, **ಉಗ್ರಾಯುಧಃ** ಉಗ್ರಾಯುಧನು, **ಔಗ್ರಾಯುಧಃ** ಉಗ್ರಾಯುಧನ ಮಗನು, **ನೀಪಃ** ನೀಪನು ಜನಿಸಿದನು. **ವೈ** ಪ್ರಸಿದ್ಧವು. ।।೨೯।।

**ತಾತ್ಪರ್ಯ-** ಸಂತತಿಮಾನನಿಂದ ಕೃತಿಯು ಜನಿಸಿದನು. ಈ ಕೃತಿಯು ಹಿರಣ್ಯನಾಭರೆಂಬ ಮುನಿಗಳಿಂದ ಯೋಗಶಾಸ್ತ್ರವನ್ನು ಅಧ್ಯಯನ ಮಾಡಿ

ಪ್ರಾಚ್ಯಸಾಮವೆಂಬ ಹನ್ನೆರಡು ಸಂಹಿತೆಗಳನ್ನು ಪಾಠ ಹೇಳಿದನು. ಕೃತಿಗೆ ಉಗ್ರಾಯುಧನು, ಉಗ್ರಾಯುಧನಿಗೆ ನೀಪನು ಜನಿಸಿದನು.

**ತಸ್ಯ ಕ್ಷೇಮ್ಯಃ ಸುವೀರೋಽಥ ಸುವೀರಸ್ಯ ರಿಪುಂಜಯಃ ।**
**ತತೋ ಬಹುತಿಥೋ ನಾಮ ಪುರುಮೀಢೋಽಪ್ರಜೋಽಭವತ್ ॥೩೦॥**

**ತಸ್ಯ** ನೀಪನಿಗೆ, **ಕ್ಷೇಮ್ಯಃ** ಕ್ಷೇಮ್ಯನು **ಅಥ** ನಂತರ, **ಸುವೀರಸ್ಯ** ಸುವೀರನಿಗೆ, **ರಿಪುಂಜಯಃ** ರಿಪುಂಜಯನು, **ತತಃ** ರಿಪುಂಜಯನಿಂದ, **ಬಹುತಿಥೋ ನಾಮ** ಬಹುತಿಥನೆಂಬುವನು ಜನಿಸಿದನು. **ಪುರುಮೀಢಃ** ದ್ವಿಮೀಢನ ತಮ್ಮನಾದ ಪುರುಮೀಢನು, **ಅಪ್ರಜಃ** ಪ್ರಜಾರಹಿತನು **ಅಭವತ್** ಆದನು. ॥೩೦॥

**ತಾತ್ಪರ್ಯ-** ಅನಂತರ ನೀಪನಿಗೆ ಕ್ಷೇಮ್ಯನು, ಕ್ಷೇಮ್ಯನಿಗೆ ಸುವೀರನು, ಸುವೀರನಿಗೆ ರಿಪುಂಜಯನು, ರಿಪುಂಜಯನಿಗೆ ಬಹುತಿಥನು ಜನಿಸಿದನು. ದ್ವಿಮೀಢನ ತಮ್ಮನಾದ ಪುರುಮೀಢನಿಗೆ ಮಕ್ಕಳಾಗಲಿಲ್ಲ. ಪ್ರಜಾರಹಿತನಾದನು.

ಅಜಮೀಢನ ವಂಶದಲ್ಲಿ ಪ್ರಿಯಮೇಧಾದಿಗಳು ಕೆಲವರು ಬ್ರಾಹ್ಮಣರಾದರು. ಬೃಹದೀಷು ಮುಂತಾದ ಕೆಲವರು ಕ್ಷತ್ರಿಯರಾದರು ಎಂದು ಹೇಳಿದೆ. ಅವನ ವಂಶಾಂತರವನ್ನು ಹೇಳುವರು.

**ನಲಿನ್ಯಾಮಜಮೀಢಸ್ಯ ನೀಲಃ ಶಾಂತಿಸ್ತು ತತ್ಸುತಃ ।**
**ಶಾಂತೇಃ ಸುಶಾಂತಿಸ್ತತ್ಪುತ್ರಃ ಪುರಾಜೋಽರ್ಕಸ್ತತೋಽಭವತ್ ॥೩೧॥**

**ಅಜಮೀಢಸ್ಯ** ಅಜಮೀಢನಿಗೆ, **ನಲಿನ್ಯಾಂ** ನಲಿನೀ ಎಂಬುವಳಲ್ಲಿ, **ನೀಲಃ** ನೀಲನು, **ತತ್ಸುತಃ** ನೀಲನ ಮಗನು, **ಶಾಂತಿಃ** ಶಾಂತಿಯು, **ಶಾಂತೇಃ** ಶಾಂತಿಯ ಮಗನು, **ಸುಶಾಂತಿಃ** ಸುಶಾಂತಿಯು, **ತತ್ಪುತ್ರಃ** ಸುಶಾಂತಿಯ ಮಗನು, **ಪುರಾಜಃ** ಪುರಾಜನು, **ತತಃ** ಪುರಾಜನಿಂದ, **ಅರ್ಕಃ** ಅರ್ಕನು **ಅಭವತ್** ಹುಟ್ಟಿದನು. ॥೩೧॥

**ತಾತ್ಪರ್ಯ-** ಅಜಮೀಢನಿಗೆ ನಲಿನೀ ಎಂಬುವಳಲ್ಲಿ ನೀಲನು ಜನಿಸಿದನು. ನೀಲನ ಮಗನು ಶಾಂತಿಯು, ಶಾಂತಿಗೆ ಸುಶಾಂತಿಯು ಜನಿಸಿದನು. ಸುಶಾಂತಿಯು ಪುರಾಜನನ್ನು ಪಡೆದನು. ಪುರಾಜನಿಗೆ ಅರ್ಕನು ಹುಟ್ಟಿದನು.

**ಹರ್ಮ್ಯಾಶ್ವಸ್ತತ್ಸುತಸ್ತಸ್ಯ ಪಂಚಾಸನ್ಮುದ್ಗಲಾದಯಃ ।**
**ಯವೀನರೋ ಬೃಹದಿಷುಃ ಕಾಂಪಿಲ್ಯಃ ಸಂಜಯಸ್ತತಃ ॥೩೨॥**

**ಹರ್ಮ್ಯಾಶ್ವಃ** ಹರ್ಮ್ಯಾಶ್ವನು, **ತತ್ಸುತಃ** ಅರ್ಕನ ಮಗನು, **ತಸ್ಯ** ಹರ್ಮ್ಯಾಶ್ವನಿಗೆ, **ಮುದ್ಗಲಾದಯಃ** ಮುದ್ಗಲನೇ ಮೊದಲಾದ **ಪಂಚ** ಐದು, **ಸುತಾಃ** ಮಕ್ಕಳು,

೧.ಯವೀನರ ೨.ಬೃಹದಿಷು, ೩.ಕಾಂಪಿಲ್ಯ . ೪.ಸಂಜಯ ಹೀಗೆ ಐದು ಜನ **ತತಃ** ಐದು ಜನ ಹುಟ್ಟಿದ ನಂತರ. ।।೩೨।।

**ತಾತ್ಪರ್ಯ-** ಅರ್ಕನ ಮಗನು ಹರ್ಮ್ಯಾಶ್ವನು. ಈ ಹರ್ಮ್ಯಾಶ್ವನಿಗೆ ಮುದ್ಗಲ, ಯವೀನರ, ಬೃಹದಿಷು, ಕಾಂಪಿಲ್ಯ, ಸಂಜಯರೆಂದು ಐವರು ಪುತ್ರರು ಜನಿಸಿದರು.

**ಹರ್ಮ್ಯಾಶ್ವಃ ಪ್ರಾಹ ಪುತ್ರಾ ಮೇ ಪಂಚಾನಾಂ ರಕ್ಷಣಾಯ ಹಿ ।**
**ವಿಷಯಾಣಾಮಲಿಮಿಮೇ ಇತಿ ಪಂಚಾಲಸಂಜ್ಞಿತಾಃ ।।೩೩।।**

**ಹರ್ಮ್ಯಾಶ್ವಃ** ಹರ್ಮ್ಯಾಶ್ವನು, **ಮೇ** ನನ್ನ **ಇಮೇ** ಈ **ಪುತ್ರಾಃ** ಮಕ್ಕಳು, **ಪಂಚಾನಾಂ** ಐದು ದೇಶಗಳ, **ರಕ್ಷಣಾಯ** ರಕ್ಷಣೆ ಮಾಡಲು, **ಅಲಂ** ಸಾಕು (ಸಮರ್ಥರು) **ಇತಿ** ಹೀಗೆ **ಪ್ರಾಹ** ಹೇಳಿದನು. ಕಾರಣ, **ಪಂಚಾಲಸಂಜ್ಞಿತಾಃ** ಪಂಚಾಲರೆಂದು ಹೆಸರುಳ್ಳವರಾದರು. ಮತ್ತು **ಪಂಚಾನಾಂ ವಿಷಯಾಣಾಂ ಸಕಾಶಾತ್** ಶಬ್ದಾದಿ ಐದು ವಿಷಯಗಳಿಂದ, **ರಕ್ಷಣಾಯ** ನನ್ನನ್ನು ರಕ್ಷಿಸಲು ಅಂದರೆ ಅವುಗಳಲ್ಲಿ ಮನಸ್ಸು ಹೋಗದಿರಲು, **ಅಲಂ** ಸಾಕು ಹೀಗೂ ಅರ್ಥ ಉಂಟು. ಈ ಕಾರಣವೂ ಪಂಚಾಲ ಎಂಬ ಹೆಸರು ಬರಲು ಕಾರಣವಾಯಿತು. ।।೩೩।।

**ತಾತ್ಪರ್ಯ-** ಹರ್ಮ್ಯಾಶ್ವನು, ನನ್ನ ಮಕ್ಕಳು **ಪಂಚ** ಐದು ದೇಶಗಳನ್ನು ರಕ್ಷಣೆ ಮಾಡಲು **ಅಲಂ** ಎಂದರೆ ಸಮರ್ಥರು ಆದ್ದರಿಂದ ಇವರು ಪಂಚಾಲರು.

**ಮುದ್ಗಲಾದ್ಬ್ರಹ್ಮನಿರ್ವೃತ್ತಂ ಗೋತ್ರಂ ಮೌದ್ಗಲ್ಯಸಂಜ್ಞಿತಮ್ ।**
**ಮಿಥುನಂ ಮುದ್ಗಲಾಚಾರ್ಯಾದ್ದಿವೋದಾಸಃ ಪುಮಾನಭೂತ್ ।।೩೪।।**

**ಅಹಲ್ಯಾ ಕನ್ಯಕಾ ಯಸ್ಯಾಂ ಶತಾನಂದಸ್ತು ಗೌತಮಾತ್ ।**
**ತಸ್ಯ ಶತಧೃತಿಃ ಪುತ್ರೋ ಧನುರ್ವೇದವಿಶಾರದಃ ।।೩೫।।**

**ಮುದ್ಗಲಾತ್** ಮುದ್ಗಲರಿಂದ **ಬ್ರಹ್ಮ** ಬ್ರಾಹ್ಮಣಕುಲವು, **ಮೌದ್ಗಲ್ಯಸಂಜ್ಞಿತಂ ಗೋತ್ರಂ** ಮೌದ್ಗಲ್ಯ ಗೋತ್ರವೂ, ಉಂಟಾಯಿತು. **ಮುದ್ಗಲಾಚಾರ್ಯಾತ್** ಹರ್ಮ್ಯಾಶ್ವನ ಮಗನಾದ ಮುದ್ಗಲನಿಂದ **ಮಿಥುನಂ** ಅವಳಿಯು **ಅಭೂತ್** ಉತ್ಪನ್ನವಾಯಿತು. **ಯಸ್ಯಾಂ** ಯಾವ ಇಬ್ಬರಲ್ಲಿ, **ದಿವೋದಾಸಃ** ದಿವೋದಾಸನು, **ಪುಮಾನ್** ಗಂಡು ಮಗುವು, **ಅಭೂತ್** ಆಗಿದ್ದನು. **ಅಹಲ್ಯಾ** ಅಹಲ್ಯೆಯು **ಕನ್ಯಕಾ** ಹೆಣ್ಣು ಮಗುವು ಆಗಿದ್ದಳು. **ಗೌತಮಾತ್** ಗೌತಮರಿಂದ **ಯಸ್ಯಾಂ** ಯಾವ ಅಹಲ್ಯೆಯಲ್ಲಿ **ಶತಾನಂದಃ** ಶತಾನಂದರು **ಜಾತಃ** ಹುಟ್ಟಿದರು. **ತಸ್ಯ** ಶತಾನಂದರಿಗೆ **ಶತಧೃತಿಃ** ಶತಧೃತಿಯು **ಪುತ್ರಃ** ಮಗನು. **ಧನುರ್ವೇದವಿಶಾರದಃ** ಅಸ್ತ್ರವಿದ್ಯಾಪಾರಂಗತನು. ।।೩೪-೩೫।।

**ತಾತ್ಪರ್ಯ-** ಮುದ್ಗಲನಿಂದ ಬ್ರಾಹ್ಮಣಕುಲವು **ಮೌದ್ಗಲ್ಯ** ಎಂಬ ಗೋತ್ರದಿಂದ ಪ್ರಸಿದ್ಧವಾಯಿತು. ಈ ಮುದ್ಗಲನಿಗೆ ಅವಳಿಗಳಾದ ದಿವೋದಾಸನೆಂಬ ಪುತ್ರನು, ಅಹಲ್ಯೆಯೆಂಬ ಪುತ್ರಿಯು ಜನಿಸಿದರು. ಈ ಅಹಲ್ಯೆಯಲ್ಲಿ ಗೌತಮರಿಂದ ಶತಾನಂದರು ಹುಟ್ಟಿದರು. ಶಂತಾನಂದರಿಗೆ ಅಸ್ತ್ರವಿದ್ಯಾಪಾರಂಗತನಾದ ಶತಧೃತಿಯು ಜನಿಸಿದನು.

**ಶರದ್ವಾಂಸ್ತತ್ಸುತೋ ಯಸ್ಮಾದುರ್ವಶೀದರ್ಶನಾತ್ ಕಿಲ ।**
**ಶರಸ್ತಂಬೇಽಪತದ್ರೇತೋ ಮಿಥುನಂ ತದಭೂಚ್ಛುಭಮ್ ॥೩೬॥**

**ತತ್ಸುತಃ** ಶತಧೃತಿಯ ಮಗನು **ಶರದ್ವಾನ್** ಶರದ್ವಾನನು **ಯಸ್ಮಾತ್** ಯಾವ ಶರದ್ವಾನನಿಂದ **ಊರ್ವಶೀದರ್ಶನಾತ್** ಊರ್ವಶಿಯನ್ನು ನೋಡೋಣದರಿಂದ **ರೇತಃ** ವೀರ್ಯವು **ಶರಸ್ತಂಬೇ** ಹುಲ್ಲಿನಲ್ಲಿ **ಅಪತತ್** ಬಿದ್ದಿತು. **ತತ್** ಆ ರೇತಸ್ಸು **ಶುಭಂ** ಸುಂದರವಾದ **ಮಿಥುನಂ** ಗಂಡು ಹೆಣ್ಣುಗಳ ದ್ವಂದ್ವವು **ಅಭೂತ್** ಆಯಿತು.

**ತಾತ್ಪರ್ಯ-** ಶತಧೃತಿಯು ಶರದ್ವಾನನನ್ನು ಪಡೆದನು. ಶರದ್ವಾನನು ಊರ್ವಶೀಯನ್ನು ದರ್ಶನ ಮಾಡಿದನು. ದರ್ಶನಮಾತ್ರದಿಂದ ಹುಲ್ಲಿನಲ್ಲಿ ರೇತಸ್ಸಿನ ಸ್ಖಲನವಾಯಿತು. ರೇತಸ್ಸು ಸುಂದರವಾದ ಗಂಡು ಹೆಣ್ಣುಗಳು ಆಯಿತು.

**ತದ್ದೃಷ್ಟ್ವಾ ಕೃಪಯಾಽಗೃಹ್ಣಾಚ್ಛಂತನುರ್ಮೃಗಯಾಂ ಚರನ್ ।**
**ಕೃಪಃ ಕುಮಾರಃ ಕನ್ಯಾ ಚ ದ್ರೋಣಪತ್ನ್ಯಭವತ್ಕೃಪೀ ॥೩೭॥**

**ಮೃಗಯಾಂ ಚರನ್** ಬೇಟೆಗಾಗಿ ಸಂಚರಿಸುತ್ತಾ **ಶಂತನುಃ** ಶಂತನು ರಾಜನು **ತತ್** ಆ ದ್ವಂದ್ವವನ್ನು **ದೃಷ್ಟ್ವಾ** ನೋಡಿ **ಕೃಪಯಾ** ದಯೆಯಿಂದ **ಅಗೃಹ್ಣಾತ್** ಸ್ವೀಕರಿಸಿದನು. ಕೃಪಾದಿಂದ ರಾಜನು ಸ್ವೀಕರಿಸಿದ್ದರಿಂದ **ಕುಮಾರಃ** ಗಂಡು ಕೂಸು **ಕೃಪಃ** ಕೃಪನೆಂದು **ಕನ್ಯಾ ಚ** ಹೆಣ್ಣು ಮಗು **ಕೃಪೀ** ಕೃಪೀ ಎಂದು **ಅಭವತ್** ಪ್ರಸಿದ್ಧಿ ಆದರು. ಆ ಕನ್ಯೆಯೂ **ದ್ರೋಣಪತ್ನೀ** ದ್ರೋಣಾಚಾರ್ಯರ ಹೆಂಡತಿಯು **ಅಭವತ್** ಆದಳು. ॥೩೭॥

**ತಾತ್ಪರ್ಯ-** ಬೇಟೆಗಾಗಿ ಹೊರಟ ಶಂತನು ರಾಜನು ಆ ಅವಳಿ ಮಕ್ಕಳನ್ನು ನೋಡಿ ಕೃಪಾದಿಂದ ಸ್ವೀಕರಿಸಿದನು. ಆದ್ದರಿಂದ ಗಂಡುಮಗವು ಕೃಪನೆಂದು, ಹೆಣ್ಣು ಮಗುವು ಕೃಪಿಯೆಂದು ಪ್ರಸಿದ್ಧವಾಯಿತು. ಈ ಕನ್ಯೆಯಾದ ಕೃಪಿಯು ದ್ರೋಣಾಚಾರ್ಯರ ಪತ್ನಿಯಾದಳು. ॥೩೭॥

**★ ॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಅಷ್ಟಾದಶೋಽಧ್ಯಾಯಃ ॥ ★**

## ಅಥ ಏಕೋನವಿಂಶೋಽಧ್ಯಾಯಃ

ಅಹಲ್ಯೆಯ ಸಂತತಿಯನ್ನು ಹೇಳಿ ಅವಳ ಸಹೋದರ ದಿವೋದಾಸನ ಸಂತತಿಯನ್ನು ಹೇಳುತ್ತಾರೆ.

**ಶ್ರೀ ಶುಕ ಉವಾಚ–**

**ಮಿತ್ರಾಯುಶ್ಚ ದಿವೋದಾಸಾಚ್ಚ್ಯವನಸ್ತತ್ಸುತೋ ನೃಪ ।**
**ಸುದಾಸಃ ಸಹದೇವೋಽಥ ಸೋಮಕೋ ಜಂತುಜನ್ಮಕೃತ್ ॥೧॥**

**ನೃಪ** ರಾಜನೇ, **ದಿವೋದಾಸಾತ್** ದಿವೋದಾಸನಿಂದ, **ಮಿತ್ರಾಯುಃ** ಮಿತ್ರಾಯುವು, **ತತ್ಸುತಃ** ಮಿತ್ರಾಯುಪುತ್ರನು, **ಚ್ಯವನಃ** ಚ್ಯವನಋಷಿಯು, **ತತ್ಸುತಃ** ಚ್ಯವನಪುತ್ರನು, **ಸುದಾಸಃ** ಸುದಾಸನು, **ತತ್ಸುತಃ** ಸುದಾಸನ ಮಗನು **ಸಹದೇವಃ** ಸಹದೇವನು, **ಅಥ** ನಂತರ ಸಹದೇವನಿಂದ, **ಜಂತುಜನ್ಮಕೃತ್** ಜಂತು ಎಂಬುವನ ತಂದೆಯಾದ, **ಸೋಮಕಃ** ಸೋಮಕನು ಜನಿಸಿದನು. ॥೧॥

**ತಾತ್ಪರ್ಯ–** ರಾಜಾ! ಮುದ್ಗಲ ದೌಹಿತ್ರಸಂತತಿಯನ್ನು ಕೇಳಿದಿಯಷ್ಟೇ. ಇನ್ನು ಆತನ ಪುತ್ರಸಂತತಿಯನ್ನು ಕೇಳು. ಮುದ್ಗಲನ ಮಗನಾದ ದಿವೋದಾಸನಿಂದ ಮಿತ್ರಾಯುವು, ಮಿತ್ರಾಯುವಿನಿಂದ ಚ್ಯವನ. ಚ್ಯವನನ ಮಗ ಸುದಾಸ. ಸುದಾಸನ ಮಗ ಸಹದೇವ. ಸಹದೇವನ ಮಗ ಸೋಮಕ. ಈ ಸೋಮಕನು ಜಂತು ಎಂಬುವನನ ತಂದೆಯಾಗಿದ್ದಾನೆ.

ಸೋಮಕನಿಗೆ ಅನೇಕ ಜನ ಮಕ್ಕಳಿದ್ದರು ಎಂದು ಹೇಳುವರು.

**ತಸ್ಯ ಪುತ್ರಶತಂ ತೇಷಾಂ ಯವೀಯಾನ್ ಪೃಷತಸ್ತತಃ ।**
**ದ್ರುಪದೋ ದ್ರೌಪದೀ ತಸ್ಯ ಧೃಷ್ಟದ್ಯುಮ್ನಾದಯಃ ಸುತಾಃ ॥೨॥**

**ತಸ್ಯ** ಸೋಮಕನಿಗೆ, **ಪುತ್ರಶತಂ** ನೂರು ಜನ ಮಕ್ಕಳು. **ತೇಷಾಂ** ಅವರಲ್ಲಿ ಜಂತುವು ಜ್ಯೇಷ್ಠನು, **ಯವೀಯಾನ್** ಚಿಕ್ಕವನು **ಪೃಷತಃ** ಪೃಷತನು, **ತತಃ** ಪೃಷತನಿಂದ, **ದ್ರುಪದಃ** ದ್ರುಪದನು **ತಸ್ಯ** ದ್ರುಪದನಿಗೆ **ದ್ರೌಪದೀ** ದ್ರೌಪದೀ ಎಂಬ ಮಗಳು. **ಧೃಷ್ಟದ್ಯುಮ್ನಾದಯಃ** ಧೃಷ್ಟದ್ಯುಮ್ನ ಮೊದಲಾದ **ಸುತಾಃ** ಮಕ್ಕಳು **ಅಭವನ್** ಆದರು. ॥೨॥

**ತಾತ್ಪರ್ಯ–** ಸೋಮಕನಿಗೆ ಜಂತು ಮೊದಲಾದ ನೂರು ಜನ ಮಕ್ಕಳು. ಇವರಲ್ಲಿ ಕಿರಿಯವನಾದ ಪೃಷತನಿಗೆ ದ್ರುಪದನೆಂಬ ಮಗನಾದನು. ಆ ದ್ರುಪದನಿಗೆ ಧೃಷ್ಟದ್ಯುಮ್ನ ಮೊದಲಾದ ಕೆಲವು ಪುತ್ರರು ದ್ರೌಪದಿ ಎಂಬ ಮಗಳು ಹುಟ್ಟಿದರು.

**ಧೃಷ್ಟದ್ಯುಮ್ನಾತ್ ಧೃಷ್ಟಕೇತುರ್ಹರ್ಮ್ಯಾಃ ಪಾಂಚಾಲಕಾ ಇಮೇ ।**
**ಯೋಽಜಮೀಢಸುತೋ ಹ್ಯನ್ಯಃ ಋಕ್ಷಾತ್ಸಂವರಣಸ್ತತಃ ॥೩॥**

**ಧೃಷ್ಟದ್ಯುಮ್ನಾತ್** ಧೃಷ್ಟದ್ಯುಮ್ನನಿಂದ, **ಧೃಷ್ಟಕೇತುಃ** ಧೃಷ್ಟಕೇತುವು ಜನಿಸಿದನು. **ಇಮೇ** ಇವರು **ಹರ್ಮ್ಯಾಃ** ಹರ್ಮ್ಯಾಶ್ವನ ವಂಶದವರು, ನಿಮಿತ್ತದಿಂದ ಪಂಚಾಲದ ವಂಶಜರು ಆದ್ದರಿಂದ, **ಪಾಂಚಾಲಕಾಃ** ಪಾಂಚಲಕರೆಂದೂ ಕರೆಯಲ್ಪಡುವರು. ಅಜಮೀಢನ ವಂಶಾಂತರವನ್ನು ಹೇಳುವರು. **ಅನ್ಯಃ** ಬೃಹದೀಷುವಿನಿಂದ ಭಿನ್ನನಾದ ಬೇರೆ ಹೆಂಡತಿಯಲ್ಲಿ ಜನಿಸಿದ **ಯಃ** ಯಾವ ಋಕ್ಷನೆಂಬವನೂ **ತತಃ ಋಕ್ಷಾತ್** ಋಕ್ಷನಿಂದ, **ಸಂವರಣಃ** ಸಂವರಣನು ಜನಿಸಿದನು.

**ತಾತ್ಪರ್ಯ-** ಧೃಷ್ಟದ್ಯುಮ್ನನಿಗೆ ಧೃಷ್ಟಕೇತುವೆಂಬ ಮಗನಾದನು. ಇವರೆಲ್ಲರೂ ಪಂಚಾಲರಲ್ಲಿ ಸೇರಿದ ಹರ್ಮ್ಯಾಶ್ವನ ವಂಶಜರು. ಪಾಂಚಾಲರೆಂದೇ ಪ್ರಖ್ಯಾತರಾದರು. ಅಜಮೀಢನಿಗೆ ಋಕ್ಷನೆಂಬ ಬೇರೊಬ್ಬ ಮಗನಿದ್ದನು. ಇವನಿಗೆ ಸಂವರಣನೆಂಬ ಪುತ್ರನು. ॥೩॥

**ತಪತ್ಯಾಂ ಸೂರ್ಯಕನ್ಯಾಯಾಂ ಕುರುಕ್ಷೇತ್ರಪತಿಃ ಕುರುಃ ।**
**ಪರೀಕ್ಷಿತ್ಸುಧನುರ್ಜಹ್ನುರ್ನಿಷಧಾಶ್ವಃ ಕುರೋಃ ಸುತಾಃ ॥೪॥**

**ತತಃ** ಸಂವರಣನಿಂದ **ಸೂರ್ಯಕನ್ಯಾಯಾಂ** ಸೂರ್ಯನ ಮಗಳಾದ **ತಪತ್ಯಾಂ** ತಪತಿ ಎಂಬ ಹೆಂಡತಿಯಲ್ಲಿ, **ಕುರುಕ್ಷೇತ್ರಪತಿಃ** ಕುರುಕ್ಷೇತ್ರಕ್ಕೆ ಒಡೆಯನಾದ **ಕುರುಃ** ಕುರುವು ಜನಿಸಿದನು. **ಪರೀಕ್ಷಿತ್** ಪರೀಕ್ಷಿತ್, **ಸುಧನುಃ** ಸುಧನು, **ಜಹ್ನುಃ** ಜಹ್ನು, **ನಿಷಧಾಶ್ವಃ** ನಿಷಧಾಶ್ವ ಹೀಗೆ ನಾಲ್ಕು ಜನ **ಕುರೋಃ** ಕುರುವಿನ **ಸುತಾಃ** ಮಕ್ಕಳು.

**ತಾತ್ಪರ್ಯ-** ಸಂವರಣನಿಗೆ ಸೂರ್ಯನ ಮಗಳಾದ ತಪತಿ ಎಂಬುವಳಲ್ಲಿ ಕುರುಕ್ಷೇತ್ರ ಪತಿಯಾದ ಕುರುರಾಜನು ಜನಿಸಿದನು. ಕುರುವಿಗೆ ಪರೀಕ್ಷಿತ್, ಸುಧನು, ಜಹ್ನು, ನಿಷಧಾಶ್ವರೆಂದು ನಾಲ್ಕು ಜನ ಮಕ್ಕಳು. ॥೪॥

**ಸುಹೋತ್ರೋಽಭೂತ್ಸುಧನುಷಶ್ಚ್ಯವನಸ್ತತ್ಸುತಃ ಕೃತೀ ।**
**ವಸುಸ್ತಸ್ಯೋಪರಿಚರೋ ಬೃಹದ್ರಥಮುಖಾಸ್ತತಃ ॥೫॥**

**ಸುಧನುಷಃ** ಸುಧನುಷನಿಗೆ, **ಸುಹೋತ್ರಃ** ಸುಹೋತ್ರನು, **ಅಭೂತ್** ಜನಿಸಿದನು. **ತತ್ಸುತಃ** ಸುಹೋತ್ರನ ಮಗನು, **ಚ್ಯವನಃ** ಚ್ಯವನನು. **ತತ್ಸುತಃ** ಚ್ಯವನನ ಮಗನು. **ಕೃತೀ** ಕೃತಿಯು, **ತಸ್ಯ** ಕೃತಿಗೆ, **ವಸುಃ** ವಸುವು, **ತತಃ** ವಸುವಿನಿಂದ, **ಉಪರಿಚರಃ** ಉಪರಿಚರನು, **ತತಃ** ಉಪರಿಚರನಿಂದ, **ಬೃಹದ್ರಥಮುಖಾಃ** ಬೃಹದ್ರಥ ಮೊದಲಾದವರು, ಜನಿಸಿದರು. ಇಲ್ಲಿ ಉಪರಿಚರನು ಸೋಮಪಾದನೆಂಬ ವಸು

ಇವನ ವೀರ್ಯದಿಂದಲೇ ಸತ್ಯವತಿ ವಿರಾಟರು ಜನಿಸಿದರು. ಸತ್ಯವತಿಯು ಮೀನಿನಿಂದ ಜನಿಸಿದಳು. ಆ ವಸುವಿನಿಂದಲೇ ಬೇರೆ ಬೇರೆ ಹೆಂಡತಿಯರಲ್ಲಿ ಬೃಹದ್ರಥ ಮೊದಲಾದವರು ಕುಶಾಂಬು ಮೊದಲಾದವರು ಜನಿಸಿದರು. ।।೫।।

**ತಾತ್ಪರ್ಯ-** ಇವರಲ್ಲಿ ಎರಡನೆಯವನಾದ ಸುಧನುವಿಗೆ ಸುಹೋತ್ರನೆಂಬ ಮಗನು ಸುಹೋತ್ರನಿಂದ ಮುಂದೆ ಪುತ್ರ ಪೌತ್ರ ಕ್ರಮದಿಂದ ಚ್ಯವನ, ಕೃತಿ, ಉಪರಿಚರವಸು ಎಂಬುವರು ಜನಿಸಿದರು. ಈ ಉಪರಿಚರವಸುವಿನಿಂದಲೇ ಸತ್ಯವತಿಯು ವಿರಾಟನೂ ಜನಿಸಿದರು. ಸತ್ಯವತಿಯು ಇವನ ವೀರ್ಯವನ್ನು ನುಂಗಿದ ಮೀನಿನಿಂದ ಜನಿಸಿದಳು. ಇವನಿಗೇ ಬೇರೆ ಬೇರೆ ಪತ್ನಿ[illegible]ಲ್ಲಿ ಬೃಹದ್ರಥ,

**ಕುಶಾಂಬುಮತ್ಸ್ಯಪ್ರತ್ಯಗ್ರವೇದಿಷಾದ್ಯಾಶ್ಚ ಚೇದಿಪಾಃ ।**
**ಬೃಹದ್ರಥಾತ್ಕುಶಾಗ್ರೋಽಭೂದೃಷಭಸ್ತಸ್ಯ ತತ್ಸುತಃ ।।೬।।**

**ಜಜ್ಞೇ ಸತ್ಯಹಿತೋಽಪತ್ಯಂ ಪುಷ್ಪವಾಂಸ್ತತ್ಸುತೋ ಜಹುಃ ।**

**ಕುಶಾಂಬುಮತ್ಸ್ಯಪ್ರತ್ಯಗ್ರವೇದಿಷಾದ್ಯಾಶ್ಚ** ಕುಶಾಂಬು, ಮತ್ಸ್ಯ, ಪ್ರತ್ಯಗ್ರ, ವೇದಿಷ ಮೊದಲಾದ **ಚೇದಿಪಾಃ** ಚೇದಿದೇಶಕ್ಕೆ ಒಡೆಯರಾದವರು ಸಹ, ಉಪರಿಚರ ವಸುವಿನಿಂದಲೇ ಜನಿಸಿದರು. **ಬೃಹದ್ರಥಾತ್** ಬೃಹದ್ರಥನಿಂದ **ಕುಶಾಗ್ರಃ** ಕುಶಾಗ್ರನು, **ಅಭೂತ್** ಹುಟ್ಟಿದನು. **ತಸ್ಯ** ಕುಶಾಗ್ರನಿಗೆ **ಋಷಭಃ** ಋಷಭನು, **ಜಜ್ಞೇ** ಹುಟ್ಟಿದನು. **ತತ್ಸುತಃ** ಋಷಭನ ಮಗನು, **ಸತ್ಯಹಿತಃ** ಸತ್ಯಹಿತನು, **ತಸ್ಯ** ಸತ್ಯಹಿತನಿಗೆ, **ಪುಷ್ಪವಾನ್** ಪುಷ್ಪವಾನನು, **ಅಪತ್ಯಂ** ಮಗನು **ತತ್ಸುತಃ** ಪುಷ್ಪವಾನನ ಮಗನು **ಜಹುಃ** ಜಹುವು. ।।೬।।

**ತಾತ್ಪರ್ಯ-** ಕುಶಾಂಬು, ಮತ್ಸ್ಯ, ಪ್ರತ್ಯಗ್ರ ಮೊದಲಾದ ಚೇದಿದೇಶಾಧಿಪತಿಗಳು ಜನಿಸಿದರು. ಇವರಲ್ಲಿ ಬೃಹದ್ರಥನಿಗೆ ಕುಶಾಗ್ರನು ಅವನಿಗೆ ಋಷಭನು ಋಷಭನಿಗೆ ಸತ್ಯಹಿತನು ಈತನಿಗೆ ಪುಷ್ಪವಂತನು ಅವನ ಮಗ ಜಹು ಹೀಗೆ ಹುಟ್ಟಿದರು.

ಬೃಹದ್ರಥನ ಒಬ್ಬ ಹೆಂಡತಿಯ ಸಂತಾನವನ್ನು ಹೇಳಿ ಇನ್ನೊಬ್ಬ ಹೆಂಡತಿಯ ಸಂತಾನವನ್ನು ಹೇಳುವರು.

**ಅನ್ಯಸ್ಯಾಮಪಿ ಭಾರ್ಯಾಯಾಂ ಶಕಲೇ ದ್ವೇ ಬೃಹದ್ರಥಾತ್ ।।೭।।**

**ಬೃಹದ್ರಥಾತ್** ಬೃಹದ್ರಥನಿಂದ, **ಅನ್ಯಸ್ಯಾಂ ಭಾರ್ಯಾಯಾಂ ಅಪಿ** ಬೇರೆ ಹೆಂಡತಿಯಲ್ಲಿ **ದ್ವೇ ಶಕಲೇ** ಒಂದೊಂದು ಕಣ್ಣು ಕಿವಿ, ಕಾಲು, ಮುಂತಾದ ಅವಯವ ಉಳ್ಳ ಎರಡು ತುಣುಕುಗಳು, (**ಉತ್ಪನ್ನೇ** ಹುಟ್ಟಿದವು.) ।।೭।।

**ತಾತ್ಪರ್ಯ-** ಬಹದ್ರಥನಿಗೆ ಬೇರೆ ಪತ್ನಿಯಲ್ಲಿ ಜನನಕಾಲದಲ್ಲಿಯೇ ಎರಡು ಭಾಗವಾಗಿ ಒಂದು ಶಿಶುವು ಹುಟ್ಟಿತು.

**ತೇ ಮಾತ್ರಾ ಬಹಿರುತ್ಸೃಷ್ಟೇ ಜರಯಾ ಚಾಭಿಸಂಧಿತೇ ।**
**ಜೀವ ಜೀವೇತಿ ಕ್ರೀಡಂತ್ಯಾ ಜರಾಸಂಧೋಽಭವತ್ಸುತಃ ॥೮॥**

**ಮಾತ್ರಾ** ತಾಯಿಯಿಂದ **ಉತ್ಸೃಷ್ಟೇ** ಎಸೆಯಲ್ಪಟ್ಟ **ತೇ** ಆ ತುಂಡುಗಳು **ಜೀವ ಜೀವ ಇತಿ ಕ್ರೀಡಂತ್ಯಾ** ಜೀವಿಸು ಜೀವಿಸು ಎಂದು ಕ್ರೀಡಿಸುವ **ಜರಯಾ** ಜರಾ ಎಂಬ ರಾಕ್ಷಸಿಯಿಂದ **ಅಭಿಸಂಧಿತೇ** ಕೂಡಿಸಲ್ಪಟ್ಟು **ಜರಾಸಂಧಃ** ಜರಾಸಂಧನೆಂಬ **ಸುತಃ** ಮಗನು **ಅಭವತ್** ಆದನು. ॥೮॥

**ತಾತ್ಪರ್ಯ-** ಆ ತುಂಡುಗಳೆರಡನ್ನೂ ನಿಷ್ಪ್ರಯೋಜನವೆಂದು ತಿಳಿದು ಹೊರಗೆ ಬಿಸಾಡಿದಳು. ಆ ರಾತ್ರಿಯಲ್ಲಿ ಜರೆಯೆಂಬ ರಾಕ್ಷಸಿಯೊಬ್ಬಳು ದಾರಿಯಲ್ಲಿ ತುಂಡುಗಳನ್ನು ಕಂಡು ಅವುಗಳನ್ನು ಜೋಡಿಸಿ ಜೀವ ಜೀವ ಬದುಕು ಬದುಕು ಎಂದು ಆಟವಾಡಿದಳು. ಹೀಗೆ ಜರೆಯೆಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ಆ ಶಿಶುವಿಗೆ ಜರಾಸಂಧನೆಂದೇ ಹೆಸರಾಯಿತು.

**ತತಶ್ಚ ಸಹದೇವೋಽಭೂತ್ಸೋಮಾಪಿರ್ಯಚ್ಛ್ರುತಶ್ರವಾಃ ।**
**ಪರೀಕ್ಷಿದನಪತ್ಯೋಽಭೂತ್ಸುರಥೋ ನಾಮ ಜಾಹ್ನವಃ ॥೯॥**

**ತತೋ ವಿದೂರಥಸ್ತಸ್ಮಾತ್ಸಾರ್ವಭೌಮಸ್ತತೋಽಭವತ್ ।**
**ಜಯತ್ಸೇನಸ್ತತ್ತನಯೋ ರಾಚೀಕೋಽತೋ ದ್ಯುಮಾನಭೂತ್ ॥೧೦॥**

**ತತಃ** ಜರಾಸಂಧನಿಂದ, **ಸಹದೇವಃ** ಸಹದೇವನು, **ಅಭೂತ್** ಹುಟ್ಟಿದನು. **ಯತ್** ಯಾವ ಸಹದೇವನಿಂದ, **ಸೋಮಾಪಿಃ** ಸೋಮಾಪಿಯು **ಯತ್** ಯಾವ ಸೋಮಾಪಿಯಿಂದ, **ಶ್ರುತಶ್ರವಾಃ** ಶ್ರುತಶ್ರವನು, **ಅಭೂತ್** ಆದನು. **ಪರೀಕ್ಷಿತ್** ಕುರುವಿನ ಹಿರಿಯ ಮಗನಾದ ಪರೀಕ್ಷಿತನು, **ಅನಪತ್ಯಃ** ಮಕ್ಕಳಿಲ್ಲದವನು, **ಅಭೂತ್** ಆದನು. **ಜಾಹ್ನವಃ** ಕುರುವಿನ ಮಗ ಜಹ್ನುವಿನ ಪುತ್ರನು, **ಸುರಥಃ ನಾಮ** ಸುರಥ ಎಂಬುವನು, (ಛಲಾರಿ ಪ್ರಕಾರ) (ಸತ್ಯಧರ್ಮರ ಪ್ರಕಾರ) ಸೋಮಾಪಿಯಿಂದ ಪರೀಕ್ಷಿತನು, ಜಾಹವಃ ಎಂದು ಪಾಠಾಂತರ ಇಟ್ಟುಕೊಂಡು, ಪುಷ್ಪವಾನನ ಮಗನಾದ ಜಹುನ ಮಗ ಜಾಹವನು, ಸುರಥನು ಜನಿಸಿದನು. ॥೯॥

**ತತಃ** ಜಹು ಅಥವಾ ಜಹ್ನುವಿನ ಮಗನಾದ ಸುರಥನಿಂದ, **ವಿದೂರಥಃ** ವಿದೂರಥನು, **ತಸ್ಮಾತ್** ವಿದೂರಥನಿಂದ, **ಸಾರ್ವಭೌಮಃ** ಸಾರ್ವಭೌಮನೆಂಬುವನು, **ತತಃ** ಸಾರ್ವಭೌಮನೆಂಬುವನಿಂದ, **ಜಯತ್ಸೇನಃ** ಜಯತ್ಸೇನನು

**ಅಭವತ್** ಹುಟ್ಟಿದನು. **ತತ್ತನಯಃ** ಜಯತ್ಸೇನನ ಮಗನು **ರಾಚೀಕಃ** ರಾಚೀಕನು **ಅತಃ** ರಾಚೀಕನಿಂದ **ದ್ಯುಮಾನ್** ದ್ಯುಮಂತನು **ಅಭೂತ್** ಹುಟ್ಟಿದನು. ।।೧೦।।

**ತಾತ್ಪರ್ಯ-** ಆ ಜರಾಸಂಧನಿಂದ ಸಹದೇವನು ಅವನಿಂದ ಸೋಮಾಪಿಯು, ಆತನಿಂದ ಶ್ರುತಶ್ರವನೂ ಹುಟ್ಟಿದರು. ಕುರುಪುತ್ರನಾದ ಪರಿಕ್ಷಿತ್ತಿಗೆ ಸಂತತಿಯಿಲ್ಲದೇ ಹೋಯಿತು. ಅವನ ತಮ್ಮ ಜಹ್ನುವಿನಿಂದ ಪುತ್ರಪೌತ್ರ ಪರಂಪರೆಯಾಗಿ ಸುರಥ, ವಿದೂರಥ, ಸಾರ್ವಭೌಮ, ಜಯತ್ಸೇನ, ರಾಚೀಕ, ದ್ಯುಮಂತ ಎಂಬುವವರು ಜನಿಸಿದರು.

**ತತಶ್ಚಾಕ್ರೋಧನಸ್ತಸ್ಮಾದ್ದೇವಾತಿಥಿರಮುಷ್ಯ ಚ ।**
**ಋಕ್ಷಸ್ತಸ್ಯ ದಿಲೀಪೋಽಭೂತ್ ಪ್ರತೀಪಸ್ತಸ್ಯ ಚಾತ್ಮಜಃ ।।೧೧।।**

**ತತಃ** ದ್ಯುಮಂತನಿಂದ, **ಅಕ್ರೋಧನಃ** ಅಕ್ರೋಧನನು, **ತಸ್ಮಾತ್** ಅಕ್ರೋಧನನಿಂದ, **ದೇವಾತಿಥಿಃ** ದೇವಾತಿಥಿಯು **ಅಮುಷ್ಯ** ದೇವಾತಿಥಿಗೆ **ಋಕ್ಷಃ** ಋಕ್ಷನು, **ತಸ್ಯ** ಋಕ್ಷನಿಗೆ **ದಿಲೀಪಃ** ದಿಲೀಪನು, **ಅಭೂತ್** ಹುಟ್ಟಿದನು. **ತಸ್ಯ** ದಿಲೀಪನಿಗೆ **ಪ್ರತೀಪಃ** ಪ್ರತೀಪನು, **ಆತ್ಮಜಃ** ಮಗನು. ।।೧೧।।

**ತಾತ್ಪರ್ಯ-** ನಂತರ ಕ್ರೋಧನ, ದೇವಾತಿಥಿ, ಋಕ್ಷ, ದಿಲೀಪ ಎಂಬುವವರು ಜನಿಸಿದರು. ದಿಲೀಪನಿಗೆ ಪ್ರತೀಪನು ಜನಿಸಿದನು.

**ದೇವಾಪಿಃ ಶಂತನುಸ್ತಸ್ಯ ಬಾಹ್ಲೀಕ ಇತಿ ಚಾತ್ಮಜಾಃ ।**
**ಪಿತೃರಾಜ್ಯಂ ಸಮುತ್ಸೃಜ್ಯ ದೇವಾಪಿಸ್ತು ವನಂ ಗತಃ ।।೧೨।।**

**ತಸ್ಯ** ಪ್ರತೀಪನಿಗೆ, **ದೇವಾಪಿಃ ಶಂತನುಃ ಬಾಹ್ಲೀಕಃ ಇತಿ** ದೇವಾಪಿ, ಶಂತನು, ಬಾಹ್ಲೀಕ ಎಂದು ಜನಿಸಿದರು. **ದೇವಾಪಿಃ ತು** ದೇವಾಪಿಯಾದರೋ ಚರ್ಮರೋಗ ಪೀಡಿತನಾದ್ದರಿಂದ **ಪಿತೃರಾಜ್ಯಂ** ತಂದೆಯ ರಾಜ್ಯವನ್ನು, **ಸಮುತ್ಸೃಜ್ಯ** ಪರಿತ್ಯಾಗ ಮಾಡಿ, **ವನಂ ಗತಃ** ತಪಸ್ಸಿಗಾಗಿ ವನಕ್ಕೆ ತೆರಳಿದನು. ಇವರಲ್ಲಿ ಶಂತನುವು ಪೂರ್ವದಲ್ಲಿ ವರುಣನು. ಬ್ರಹ್ಮಶಾಪದಿಂದ ಮಹಾಭಿಷೇಕ್ಕೆಂದು ಜನ್ಮ ತಾಳಿ ಈಗ ಶಂತನು ಆಗಿರುವನು. ಬಾಹ್ಲೀಕನು ಪೂರ್ವಜನ್ಮದಲ್ಲಿ ಪ್ರಹ್ಲಾದನು. ।।೧೨।।

**ತಾತ್ಪರ್ಯ-** ಆ ಪ್ರತೀಪನಿಗೆ ದೇವಾಪಿ ಶಂತನು, ಬಾಹ್ಲೀಕರೆಂಬ ಮೂರು ಮಕ್ಕಳು. ಇವರಲ್ಲಿ ದೇವಾಪಿಯು ರಾಜ್ಯ ಬೇಡವೆಂದು ತಪಸ್ಸಿಗಾಗಿ ವನಕ್ಕೆ ತೆರಳಿದನು.

**ಅಭವಚ್ಛಂತನೂ ರಾಜಾ ಪ್ರಾಙ್ ಮಹಾಭಿಷಸಂಜ್ಞಿತಃ ।**
**ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ಯೌವನಮೇತಿ ಸಃ ।।೧೩।।**

**ಪ್ರಾಕ್** ಪೂರ್ವದಲ್ಲಿ **ಮಹಾಭಿಷಸಂಜ್ಞಿತಃ** ಮಹಾಭಿಷಕ್ ಎಂದು ಹೆಸರಾದ **ಶಂತನುಃ** ಶಂತನುವು, **ರಾಜಾ** ರಾಜನು, **ಅಭವತ್** ಆದನು. ಶಂತನು ಶಬ್ದವನ್ನು ನಿರ್ವಚನ ಮಾಡುವರು. **ಸಃ** ಆ ಶಂತನುವು, **ಜೀರ್ಣಂ** ವೃದ್ಧನಾದ, **ಯಂ ಯಂ** ಯಾರು ಯಾರನ್ನು, **ಸ್ಪೃಶತಿ** ಮುಟ್ಟುತ್ತಾನೋ, **ಸಃ ಸಃ** ಅವನವನು, **ಯೌವನಂ** ಯೌವನವನ್ನು **ಏತಿ** ಹೊಂದುತ್ತಾನೆ. (**ಶಂ** ಸುಖಸಾಧನವಾದ **ತನುಃ** ಶರೀರವು **ಯೇನ** ಯಾವನಿಂದ **ಸಃ** ಅವನು ಶಂತನು.) ಹೀಗೆ ನಿರ್ವಚನ, ಶಂತಂ ಶಾಂತಿಂ ನಯತೀತಿ, ಶಂತನುಃ ಹೀಗೂ ನಿರ್ವಚನ. ।।೧೩।।

**ತಾತ್ಪರ್ಯ-** ಶಂತನುವೇ ರಾಜನಾದನು. ಈತನು ಪೂರ್ವಜನ್ಮದಲ್ಲಿ ಮಹಾಭಿಷಕ್ಕೆಂದು ಪ್ರಸಿದ್ಧನು. ತನ್ನ ಕೈಯಿಂದ ಮುಟ್ಟಿದ ಮುದುಕರನ್ನು ಯೌವ್ವನಶಾಲಿಗಳನ್ನಾಗಿ ಮಾಡುತ್ತಿದ್ದನು. ಶಾಂತಿಯನ್ನು ಸುಖವನ್ನು ಹೆಚ್ಚಿಸಿದ್ದರಿಂದ ಶಂತನುಯೆಂದು ಪ್ರಸಿದ್ಧಿಗೊಂಡನು.

**ಶಾಂತಿಮಾಪ್ನೋತಿ ಚೈವಾಗ್ರ್ಯಂ ಕರ್ಮಣಾ ತೇನ ಶಂತನುಃ ।**
**ಸಮಾ ದ್ವಾದಶ ತದ್ರಾಷ್ಟ್ರೇ ನ ವವರ್ಷ ಯದಾ ವಿಭುಃ ।।೧೪।।**

**ಕರ್ಮಣಾ** ತಾನು ಮಾಡಿದ ಸತ್ಕರ್ಮದಿಂದ **ಅಗ್ರ್ಯಂ** ಶ್ರೇಷ್ಠವಾದ **ಶಾಂತಿಂ** ಸುಖವನ್ನು **ಆಪ್ನೋತಿ** ಹೊಂದುತ್ತಾನೆ **ತೇನ** ಆ ಕಾರಣ **ಶಂತನುಃ** ಶಂತನು ಎಂದು ಹೆಸರು. **ಯದಾ** ಯಾವಾಗ **ವಿಭುಃ** ಇಂದ್ರನು **ತದ್ರಾಷ್ಟ್ರೇ** ಶಂತನುವಿನ ರಾಜ್ಯದಲ್ಲಿ **ದ್ವಾದಶ** ಹನ್ನೆರಡು **ಸಮಾಃ** ವರ್ಷದ ವರೆಗೆ **ನ ವವರ್ಷ** ಮಳೆ ಗರೆಯಲಿಲ್ಲವೋ **ತದಾ** ಆಗ **ಶಂತನುಃ** ಶಂತನುವು **ಬ್ರಾಹ್ಮಣಾನ್ ಅಪೃಚ್ಛತ್** ಬ್ರಾಹ್ಮಣರನ್ನು ಮಳೆಯಾಗದಿರಲು ಕಾರಣವನ್ನು ಕೇಳಿದನು. ।।೧೪।।

**ತಾತ್ಪರ್ಯ-** ಈ ಶಂತನುವಿನ ಸ್ಪರ್ಶದಿಂದ ಅಧಿಕವಾದ ಶಾಂತಿಯನ್ನು ಪಡೆಯುತ್ತಿದ್ದರು. ಈ ಶಂತನು ರಾಜ್ಯವನ್ನಾಳುತ್ತಿರುವಾಗ ಒಮ್ಮೆ ಹನ್ನೆರಡು ವರ್ಷ ಕ್ಷಾಮವು ಸಂಭವಿಸಿತು. ಆಗ ಬ್ರಾಹ್ಮಣರನ್ನು ಕರೆಯಿಸಿ ಪಾಪದ ಕಾರಣವೇನೆಂದು ವಿಚಾರಿಸಿದನು.

**ಶಂತನುರ್ಬ್ರಾಹ್ಮಣೈರುಕ್ತಃ ಪರೀವೇತ್ತಾಽಯಮಗ್ರಭುಕ್ ।**
**ರಾಜ್ಯಂ ದೇಹ್ಯಗ್ರಜಾಯಾಶು ಪುರರಾಷ್ಟ್ರವಿವೃದ್ಧಯೇ ।।೧೫।।**

**ಶಂತನುಃ** ಶಂತನುವು, **ಬ್ರಾಹ್ಮಣೈಃ** ಬ್ರಾಹ್ಮಣರಿಂದ, **ಅಯಂ** ಇವನು **ಪರಿವೇತ್ತಾ ಇತಿ ಉಕ್ತಃ** ಪರಿವೇತ್ತಾ ಎಂದು ಹೇಳಿಸಿ ಕೊಂಡನು. ಅಂದರೆ ''ದಾರಾಗ್ನಿಹೋತ್ರ-ಸಂಯೋಗಂ ಕುರುತೇ ಯೋಽಗ್ರಜೇ ಸ್ಥಿತೇ । ಪರಿವೇತ್ತಾ ಸ ಇತ್ಯುಕ್ತಃ ಪರಿವಿತ್ತಿಸ್ತು

ಪೂರ್ವಜಃ'' ಅಣ್ಣನು ಸರಿಯಾಗಿ ಬದುಕಿರುವಾಗ ಅವನಿಗಿಂತ ಮುಂಚೆಯೇ ಹೆಂಡತಿ ಮತ್ತು ಅಗ್ನಿಹೋತ್ರಾದಿಗಳನ್ನು ಯಾರು ಸ್ವೀಕರಿಸುವರೋ ಅವರು ಪರಿವೇತ್ತಾ ಎಂದು ಕರಿಸಿಕೊಳ್ಳುವನು. ಅಗ್ರಜನು ಪರಿವಿತ್ತಿ ಎನಿಸಿಕೊಳ್ಳುವನು. ಹೀಗೆ ಪ್ರಮಾಣವಿದ್ದದುರಿಂದ **ಅಗ್ರಭುಕ್** ಅಣ್ಣನಿರುವಾಗಲೇ ಅವನಿಗಿಂತ ಮೊದಲು ರಾಜ್ಯಭೋಗ ಮಾಡುತ್ತಿರುವನು, ಆದ್ದರಿಂದ ಇವನು ಪರಿವೇತ್ತಾ , ಈ ಅಧರ್ಮದಿಂದಲೇ ಮಳೆಯಾಗದಿರುವುದು. **ಪುರರಾಷ್ಟ್ರವಿವೃದ್ಧಯೇ** ಪಟ್ಟಣ ರಾಷ್ಟ್ರದ ಅಭಿವೃದ್ಧಿಗಾಗಿ **ಆಶು** ಶೀಘ್ರವಾಗಿ ಜನರು ನಾಶವಾಗುವುದರೊಳಗಾಗಿ **ಅಗ್ರಜಾಯ** ಅಣ್ಣನಾದ ದೇವಾಪಿಗೆ **ರಾಜ್ಯಂ** ರಾಜ್ಯವನ್ನು **ದೇಹಿ** ಕೊಡು. ।।೧೫।।

**ತಾತ್ಪರ್ಯ-** ಅದಕ್ಕೆ ಬ್ರಾಹ್ಮಣರು ಹೇಳಿದರು. ಇದಕ್ಕೆ ನೀನೇ ಕಾರಣ. ಏಕೆಂದರೆ ತನಗಿಂತಲೂ ಶ್ರೇಷ್ಠನಾದವನಿಗೆ (ಅಣ್ಣನಿಗೆ) ಮದುವೆ ಇಲ್ಲದಿರುವಾಗ ಮದುವೆಯಾಗುವುದು, ಅಗ್ನಿಹೋತ್ರ ಇಡುವದು, ರಾಜ್ಯಭಾರ ಮಾಡುವದು, ಇವುಗಳನ್ನು ಮಾಡಿದವನಿಗೆ ಪರಿವೇತ್ರ ಎಂದು ಹೆಸರು. ಈಗ ನಿನ್ನಣ್ಣ ದೇವಾಪಿಯು ಮದುವೆ ಇಲ್ಲದೆ ಅಡವಿಯಲ್ಲಿರುವಾಗ ನೀನು ರಾಜ್ಯಭಾರ ಮಾಡಿದ್ದರಿಂದ ದೋಷಿಯಾಗಿರುವೆ. ಕಾರಣ ಕ್ಷಾಮ ಉಟಾಗಿದೆ. ಈಗಲಾದರೂ ನಿನ್ನ ಅಣ್ಣನಿಗೆ ರಾಜ್ಯ ಒಪ್ಪಿಸಿದ ಪಕ್ಷದಲ್ಲಿ ರಾಜ್ಯವು ಸುಭಿಕ್ಷವಾಗುವದು ಎಂದು ಹೇಳಿದರು.

**ಏವಮುಕ್ತೋ ದ್ವಿಜೈರ್ಜ್ಯೇಷ್ಠಂ ಛಂದಯಾಮಾಸ ಸೋಽಬ್ರವೀತ್ ।**
**ತನ್ಮಂತ್ರಿಪ್ರಹಿತೈರ್ವಿಪ್ರೈರ್ವೇದಾದ್ವಿಭ್ರಂಶಿತೋ ಗಿರಾ ।।೧೬।।**

**ವೇದವಾದಾತಿವಾದಾನ್ವೈ ತತೋ ದೇವೋ ವವರ್ಷ ಹ ।**
**ದೇವಾಪಿರ್ಯೋಗಮಾಸ್ಥಾಯ ಕಲಾಪಗ್ರಾಮಮಾಸ್ಥಿತಃ ।।೧೭।।**

**ಏವಂ** ಈ ರೀತಿಯಾಗಿ, **ದ್ವಿಜೈಃ** ಬ್ರಾಹ್ಮಣರಿಂದ (ಹಿಂದೆ ಬ್ರಾಹ್ಮಣೈಃ ಎಂದು ಹೇಳಿ ಈಗ ದ್ವಿಜೈಃ ಅಂದದ್ದರಿಂದ ವೃದ್ಧರಾದ ಕ್ಷತ್ರಿಯರು ವೈಶ್ಯರೂ ಸಹ ಬೋಧನ ಮಾಡಿದರೆಂದು ಸೂಚಿಸಿರುವರು). **ಉಕ್ತಃ** ತಿಳಿಸಿ ಹೇಳಲ್ಪಟ್ಟ ಶಂತನುವು, **ಜ್ಯೇಷ್ಠಂ** ದೇವಾಪಿಯನ್ನು, **ಛಂದಯಾಮಾಸ** ಪ್ರಸನ್ನೀಕರಿಸಿದನು. ಅಂದರೆ ಪ್ರಜಾಪಾಲನೆ ಮಾಡುವುದು ಧರ್ಮವು. ಅದನ್ನು ತಾವು ಅವಶ್ಯ ಅನುಷ್ಠಾನ ಮಾಡಬೇಕು ಎಂದು ಕೇಳಿಕೊಂಡನು. ಪೂರ್ವದಲ್ಲಿಯೇ, **ತನ್ಮಂತ್ರಿಪ್ರಹಿತೈಃ** ಶಂತನುವು ಅಣ್ಣನ ಹತ್ತಿರ ಹೋಗುವುದಕ್ಕಿಂತ ಪೂರ್ವದಲ್ಲಿಯೇ ಶಂತನುವಿಗೆ ಹೇಳದಲೇ ತನ್ನ ಇಚ್ಛೆಯಿಂದಲೇ ಮಂತ್ರಿಯಾದ ಅಶ್ಮಕನಿಂದ ದೇವಾಪಿಯನ್ನು ಪಾಷಂಡನನ್ನಾಗಿ ಮಾಡಿ ರಾಜನಾಗಲು ಅನರ್ಹನಾಗುವಂತೆ ಮಾಡಿರೆಂದು ಕಳಿಸಲ್ಪಟ್ಟ. **ವಿಪ್ರೈಃ** ಬ್ರಾಹ್ಮಣರಿಂದ **ಗಿರಾ** ಪಾಷಂಡಮತದ ಮಾತುಗಳಿಂದ, **ವೇದಾತ್** ವೇದ ಹೇಳಿದ

ಸನ್ಮಾರ್ಗದಿಂದ **ವಿಭ್ರಂಶಿತಃಸನ್** ಪಾಷಂಡಮತ ಪ್ರವೇಶಮಾಡಿದ್ದರಿಂದ ಚ್ಯುತನಾಗಿ **ಸಃ** ದೇವಾಪಿಯು **ವೇದವಾದಾತಿವಾದಾನ್** ವೇದಸಿದ್ಧಾಂತಕ್ಕೆ ವ್ಯತಿರಿಕ್ತವಾದ ಅಥವಾ ವೇದಾರ್ಥಗಳ ನಿಂದಕವಾದ (ವೇದಗಳು ಪ್ರಮಾಣವಲ್ಲ ಅದರಲ್ಲಿ ಹೇಳಿದಂತೆ ನಡೆಯ ಬೇಕಾಗಿಲ್ಲ. ಪ್ರಜೆಗಳ ಪೀಡೆ ಮಾಡಬೇಕು ಮುಂತಾದ) ಮಾತುಗಳನ್ನು, **ಅಬ್ರವೀತ್** ಮಾತನಾಡಿದನು. ಆದರಿಂದ ದೇವಾಪಿಯು ಪತಿತನಾದ್ದರಿಂದ ಎಲ್ಲ ಬ್ರಾಹ್ಮಣರು ಇವನು ದೋಷಿಯು ರಾಜ್ಯವಾಳಲು ಅನರ್ಹನು. ಶಂತನುವೇ ಗುಣಿಯು, ರಾಜ್ಯಭಾರ ಮಾಡಲು ಯೋಗ್ಯನು ಎಂದು ಹೇಳಿ ಶಂತನುವನ್ನು ರಾಜನೆಂದು ಅಂಗೀಕರಿಸಿದರು. **ತತಃ** ದೇವಾಪಿಯು ಭ್ರಷ್ಟನಾದ ನಂತರ **ದೇವಃ** ದೇವೇಂದ್ರನು, **ವವರ್ಷ** ವೃಷ್ಟಿ ಸುರಿಸಿದನು. **ದೇವಾಪಿಃ** ದೇವಾಪಿಯು **ಕಲಾಪಗ್ರಾಮಂ** ಕಲಾಪವೆಂಬ ಊರನ್ನು, **ಆಸ್ಥಾಯ** ಹೊಂದಿ ಅಲ್ಲಿ ವಾಸ ಮಾಡಿ, **ಯೋಗಂ** ಭಗವಂತನ ಧ್ಯಾನವನ್ನು **ಆಶ್ರಿತಃ** ಆಶ್ರಯಿಸಿದನು. ||೧೬-೧೭||

**ತಾತ್ಪರ್ಯ-** ಇದನ್ನು ಕೇಳಿದೊಡನೆ ಶಂತನುವು ಕಾಡಿಗೆ ಹೋಗಿ ತನ್ನ ಅಣ್ಣನಾದ ದೇವಾಪಿಯ ಪಾದಗಳ ಮೇಲೆರಗಿ ರಾಜ್ಯವನ್ನು ಸ್ವೀಕರಿಸಬೇಕೆಂದು ಬಹಳವಾಗಿ ಪ್ರಾರ್ಥಿಸಿದನು. ಆದರೆ ಈ ರಾಜ್ಯಕ್ಕೆ ವೃದ್ಧಮಂತ್ರಿಯಾಗಿದ್ದ ಅಶ್ಮಕನೆಂಬುವನು ಧಾರ್ಮಿಕನಾದ ಶಂತುನುವಿಗೆ ರಾಜ್ಯ ಸ್ಥಿರಪಡಿಸುವುದಕ್ಕೋಸ್ಕರ ಶಂತನು ಅರಣ್ಯಕ್ಕೆ ಹೋಗುವ ಮೊದಲೇ ಕೆಲವು ಬ್ರಾಹ್ಮಣರನ್ನು ಕಳುಹಿಸಿ ಕಾಡಿನಲ್ಲಿರುವ ದೇವಾಪಿಗೆ ಪಾಷಂಡಮತವನ್ನು ಉಪದೇಶ ಮಾಡಿಸಿ ಅವನ ಬುದ್ಧಿಯನ್ನು ಕೆಡಿಸಿದ್ದರಿಂದ ದೇವಾಪಿಯು ಆ ಮತವನ್ನು ಅವಲಂಬಿಸಿ ವೇದಗಳನ್ನು ನಿರ್ಮಿಸಿದನು. ಆ ದೋಷದಿಂದ ರಾಜ್ಯಭಾರ ಮಾಡಲು ಅನರ್ಹನಾದನು. ಆಗ ಅನಿವಾರ್ಯವಾಗಿ ಶಂತನುವು ರಾಜ್ಯಕ್ಕೆ ತಿರುಗಿಬಂದನು. ಜ್ಯೇಷ್ಠನಿಗೆ ಅರ್ಹತೆ ಇಲ್ಲದಿರುವಾಗ ತಮ್ಮನು ರಾಜ್ಯವನ್ನು ವಹಿಸುವದು ಧರ್ಮವಾದ್ದರಿಂದ ದೋಷ ಬರಲಿಲ್ಲ. ಎಲ್ಲರೂ ಅವನನ್ನೇ ರಾಜನೆಂದು ಸ್ವೀಕರಿಸಿದರು. ಆಗ ದೇವತೆಗಳು ಮಳೆಗೈದರು. ದೇಶವು ಸುಭಿಕ್ಷವಾಯಿತು. ಇತ್ತ ದೇವಾಪಿಯು ಯೋಗವನ್ನು ಆಶ್ರಯಿಸಿ ಕಲಾಪಗ್ರಾಮದಲ್ಲಿ ವಾಸಮಾಡಿದನು.

**ಸೋಮವಂಶೇ ಕಲೌ ನಷ್ಟೇ ಕೃತಾದೌ ಸ್ಥಾಪಯಿಷ್ಯತಿ ।**
**ಬಾಹ್ಲೀಕಾತ್ಸೋಮದತ್ತೋಽಭೂದ್ಭೂರಿರ್ಭೂರಿಶ್ರವಾಸ್ತತಃ ||೧೮||**

**ಶಲಶ್ಚ ಶಂತನೋರಾಸೀದ್ಗಂಗಾಯಾಂ ಭೀಷ್ಮ ಆತ್ಮವಾನ್ ।**

**ಕಲೌ** ಕಲಿಯುಗದಲ್ಲಿ, **ಸೋಮವಂಶೇ** ಚಂದ್ರವಂಶವು, **ನಷ್ಟೇ ಸತಿ** ನಾಶವಾಗುತ್ತಿರಲು, **ಕೃತಾದೌ** ಕೃತಯುಗದ ಪ್ರಾರಂಭದಲ್ಲಿ, **ಸ್ಥಾಪಯಿಷ್ಯತಿ**

ತಾನು ಸೋಮವಂಶದಲ್ಲಿ ಹುಟ್ಟಿದವನಾದ್ದರಿಂದ ಹರಿಯ ಅನುಗ್ರಹದಿಂದ ಹರಿಯ ಪುತ್ರಪೌತ್ರಾದಿ ಕ್ರಮದಿಂದ ಸಂತತಿಯನ್ನು ಬೆಳೆಸಿ ಸೋಮವಂಶವನ್ನು ಸ್ಥಾಪಿಸುವನು. ''ವಿಷ್ಣೋಃ ಪ್ರಸಾದಾತ್ಸ ಯುಗೇ ಕೃತೇ ರಾಜಾ ಭವಿಷ್ಯತಿ'' ಹೀಗೆ ಹೇಳಿದೆ. **ಬಾಹ್ಲೀಕಾತ್** ಪ್ರತೀಪನ ಮೂರನೆಯ ಮಗನಾದ ಬಾಹ್ಲೀಕನಿಂದ, **ಸೋಮದತ್ತಃ** ಸೋಮದತ್ತನು, **ಅಭೂತ್** ಜನಿಸಿದನು. **ತತಃ** ಸೋಮದತ್ತನಿಂದ, **ಭೂರಿಃ ಭೂರಿಶ್ರವಾಃ ಶಲಃ ಚ** ಭೂರಿ, ಭೂರಿಶ್ರವ, ಶಲರೆಂಬ ಮೂರು ಮಕ್ಕಳು, **ಆಸನ್** ಆದರು. **ಶಂತನೋಃ** ಶಂತನುವಿಗೆ, **ಗಂಗಾಯಾಂ** ಗಂಗಾದೇವಿಯಲ್ಲಿ, **ಆತ್ಮವಾನ್** ಜಿತೇಂದ್ರಿಯನಾದ, **ಭೀಷ್ಮಃ** ಭೀಷ್ಮನು, **ಆಸೀತ್** ಹುಟ್ಟಿದನು. ।।೧೮।।

**ತಾತ್ಪರ್ಯ-** ಇವನು ಮುಂದೆ ಕಲಿಯುಗದಲ್ಲಿ ಚಂದ್ರವಂಶವು ನಷ್ಟವಾದಾಗ ಕೃತಯುಗದ ಆರಂಭದಲ್ಲಿ ವಂಶವನ್ನು ವಿಸ್ತಾರ ಮಾಡುವನು. ಪ್ರತೀಪನ ಮೂರನೆಯ ಮಗನಾದ (ಶಂತುವಿನ ತಮ್ಮನಾದ) ಬಾಹ್ಲೀಕನಿಗೆ ಸೋಮದತ್ತನೆಂಬ ಮಗನಾದನು. ಅವನಿಂದ ಭೂರಿ, ಭೂರಿಶ್ರವಸ್ಸು ಶಲರೆಂಬ ಮೂವರು ಪುತ್ರರು ಜನಿಸಿದರು. ಮತ್ತು ಶಂತನುವು ಬ್ರಹ್ಮಶಾಪದಿಂದ ಮನುಷ್ಯತ್ವವನ್ನು ಹೊಂದಿದ ಗಂಗೆಯನ್ನು ಮದುವೆಯಾಗಿ ಅವಳಲ್ಲಿ ಭೀಷ್ಮನೆಂಬ ಪುತ್ರನನ್ನು ಪಡೆದನು.

**ಸರ್ವಧರ್ಮವಿದಾಂ ಶ್ರೇಷ್ಠೋ ಮಹಾಭಾಗವತಃ ಕವಿಃ ।।೧೯।।**

**ವೀರಯೂಥಾಗ್ರಣೀರ್ಯೇನ ರಾಮೋಽಪಿ ಯುಧಿ ತೋಷಿತಃ ।**

ಭೀಷ್ಮನು, **ಸರ್ವಧರ್ಮವಿದಾಂ ಶ್ರೇಷ್ಠಃ** ಎಲ್ಲ ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠನು. **ಮಹಾಭಾಗವತಃ** ದೊಡ್ಡ ಭಗವದ್ಭಕ್ತನು, **ಕವಿಃ** ಜ್ಞಾನಿಯು, **ವೀರಯೂಥಾಗ್ರಣೀಃ** ವೀರರಾದ ಸೇನಾನಾಯಕನು, **ಯೇನ** ಯಾವ ಭೀಷ್ಮನಿಂದ **ರಾಮೋಽಪಿ** ಪರಶುರಾಮನೂ ಸಹ, **ಯುಧಿ** ಯುದ್ಧದಲ್ಲಿ, **ತೋಷಿತಃ** ಸಂತೋಷಗೊಂಡನು. ಇಲ್ಲಿ ಬಾಹ್ಲೀಕನ ಮಕ್ಕಳಾದ ಸೋಮದತ್ತ ಭೂರಿಶ್ರವ, ಶಲರಲ್ಲಿ ಸೋಮದತ್ತನು, ಪೂರ್ವದಲ್ಲಿ ಪತ್ರತಾಪನೆಂಬ ರುದ್ರನು, ಭೂರಿಯು ಪೂರ್ವದಲ್ಲಿ ಅಜೈಕಪಾತ್ ಎಂಬವನು. ಭೂರಿಶ್ರವನು ಅಹಿರ್ಬುಧ್ನ ಎಂಬುವನು, ಶಿವನೇ ಮೊದಲಾದ ಎಲ್ಲ ರುದ್ರರಿಂದ ಅವಿಷ್ಟನಾದ ಶಲನು ಪೂರ್ವದಲ್ಲಿ ವಿರೂಪಾಕ್ಷನು, ಭೀಷ್ಮನು ಪೂರ್ವದಲ್ಲಿ ದ್ಯು ಎಂಬ ವಸುವು ಹೀಗೆ ತಿಳಿಯಬೇಕು.

**ತಾತ್ಪರ್ಯ-** ರಾಜನೇ! ಈ ಭೀಷ್ಮನ ಮಹಿಮೆ ಅಪಾರವಾದುದು. ಈತನು ಬ್ರಹ್ಮಜ್ಞಾನಿಯಾಗಿ ಧರ್ಮಜ್ಞರಲ್ಲಿ ತಾನೇ ಶ್ರೇಷ್ಠನೆನಿಸಿಕೊಂಡನು. ಪರಮ ಭಾಗವತೋತ್ತಮನು, ವಿದ್ವಾಂಸನು, ವೀರಾಗ್ರಗಣ್ಯನು ಈತನು ತನ್ನ

ಪರಾಕ್ರಮದಿಂದ ಧನುರ್ವೇದ ಪ್ರವರ್ತಕನಾದ ಪರಶುರಾಮನನ್ನು ಯುದ್ಧದಲ್ಲಿ ಸಂತೋಷಪಡಿಸಿದನು.

**ಶಂತನೋರ್ದಾಶಕನ್ಯಾಯಾಂ ಜಜ್ಞೇ ಚಿತ್ರಾಂಗದಃ ಸುತಃ ॥೨೦॥**

**ಶಂತನೋಃ** ಶಂತನುವಿಗೆ, **ದಾಶಕನ್ಯಾಯಾಂ** ಅಂಬಿಗನಿಂದ ರಕ್ಷಿಸಲ್ಪಟ್ಟಿದ್ದರಿಂದ, ಅಂಬಿಗರ ರಾಜನ ಕುವರಿಯಾದ ಸತ್ಯವತಿಯಲ್ಲಿ, **ಚಿತ್ರಾಂಗದಃ** ಚಿತ್ರಾಂಗದನು **ಸುತಃ** ಮಗನಾಗಿ, **ಜಜ್ಞೇ** ಹುಟ್ಟಿದನು. ॥೨೦॥

**ತಾತ್ಪರ್ಯ-** ಶಂತನುಪತ್ನಿಯಾಗಿದ್ದ ಗಂಗಾದೇವಿಯು ಶಾಪಮುಕ್ತಳಾಗಿ ಇವನನ್ನು ಬಿಟ್ಟು ಹೋದ ಮೇಲೆ ಆ ಶಂತನುವು ಸತ್ಯವತಿಯೆಂಬ ಕನ್ಯೆಯನ್ನು ಪ್ರೀತಿಸಿ ಮದುವೆಯಾದನು. ಉಪರಿಚರನೆಂಬ ವಸುವಿನ ವೀರ್ಯವನ್ನು ನುಂಗಿದ್ದ ಒಂದಾನೊಂದು ಮತ್ಸ್ಯವು ಒಬ್ಬ ಬೇಸ್ತನ ಕೈಗೆ ಸಿಕ್ಕಿತು. ಅದರ ಹೊಟ್ಟೆಯನ್ನು ಸೀಳಿದಾಗ ಈ ಹೆಣ್ಣು ಕೂಸು ಸಿಕ್ಕಿತು. ಕಾರಣ ವಾಸವಿ ಮತ್ಸ್ಯಗಂಧಿ, ಯೋಜನಗಂಧಿ ಸತ್ಯವತಿ ಎಂದು ಹೆಸರಾಯಿತು. ಶಂತನುವಿಗೆ ಆ ಸತ್ಯವತಿಯಲ್ಲಿ ಚಿತ್ರಾಂಗದ, ವಿಚಿತ್ರವೀರ್ಯರೆಂಬ ಇಬ್ಬರು ಮಕ್ಕಳು ಆದರು.

**ವಿಚಿತ್ರವೀರ್ಯೋಽವರಜೋ ನಾಮ್ನಾ ಚಿತ್ರಾಂಗದೋ ಹತಃ ।**
**ಯಸ್ಯಾಂ ಪರಾಶರಾತ್ಸಾಕ್ಷಾದವತೀರ್ಣೋ ಹರೇಃ ಕಲಾ ॥೨೧॥**

**ವೇದಗುಪ್ತೌ ಮುನಿಃ ಕೃಷ್ಣೋ ಯತೋಽಹಮಿದಮಧ್ಯಗಾಮ್ ।**

**ವಿಚಿತ್ರವೀರ್ಯಃ** ವಿಚಿತ್ರವೀರ್ಯನು, **ಅವರಜಃ** ತಮ್ಮನು **ಚಿತ್ರಾಂಗದಃ** ಚಿತ್ರಾಂಗದನು **ನಾಮ್ನಾ ಹತಃ** ಕೊಲ್ಲಲ್ಪಟ್ಟನು. ಚಿತ್ರಾಂಗದನೆಂಬ ಗಂಧರ್ವನು ನನ್ನ ಹೆಸರು ನಿನಗೇಕೆ? ಎಂದು ಅದನ್ನು ತೆಗೆಯಲು ಹೇಳಿದನು. ಇವನು ಹೆಸರು ಬದಲಾಯಿಸಲು ಒಪ್ಪದಾದಾಗ ಯುದ್ಧವಾಗಿ ಗಂಧರ್ವನು ಶಂತನು ಮಗನ ಚಿತ್ರಾಂಗದನನ್ನು ಕೊಂದನು. **ಯಸ್ಯಾಂ** ಯಾವ ಸತ್ಯವತಿಯಲ್ಲಿ ಶಂತನು ಮದುವೆಗಿಂತ ಮುಂಚೆ, **ಪರಾಶರಾತ್** ಪರಾಶರ ಋಷಿಯಿಂದ, **ಸಾಕ್ಷಾತ್ ಹರೇಃ ಕಲಾ** ಸ್ವರೂಪಾಂಶನಾದ, **ಮುನಿಃ ಕೃಷ್ಣಃ** ಜ್ಞಾನಿಯಾದ ವ್ಯಾಸರು, **ವೇದಗುಪ್ತೌ** ವೇದ ರಕ್ಷಣೆಗಾಗಿ, **ಅವತೀರ್ಣಃ** ಅವತರಿಸಿದನು. **ಯತಃ** ಯಾವ ವ್ಯಾಸರಿಂದ, **ಅಹಂ** ಶುಕನಾದ ನಾನು, **ಇದಂ** ಭಾಗವತವನ್ನು **ಅಧ್ಯಗಾಂ** ಕಲಿತೆನು.

**ತಾತ್ಪರ್ಯ-** ಹಿರಿಯನಾದ ಚಿತ್ರಾಂಗದನು ಚಿತ್ರಾಂಗದನೆಂಬ ಗಂಧರ್ವನಿಂದ ಯುದ್ಧದಲ್ಲಿ ಹೆಸರಿನ ನೆಪದಿಂದ ಹತನಾದನು. ಈ ಸತ್ಯವತಿಯು ಶಂತನುವನ್ನು ವರಿಸುವುದಕ್ಕೆ ಮೊದಲೇ ಇವಳಲ್ಲಿ ಪೂಜ್ಯರಾದ ಪರಾಶರ ಋಷಿಗಳ ಸಂಬಂಧದಿಂದ

ಸಾಕ್ಷಾದ್ಭಗವದಂಶನಾದ ಬಾದರಾಯಣನು ಅವತರಿಸಿದನು. ವೇದವಿಭಾಗವನ್ನು ಮಾಡಿ ವ್ಯಾಸರೆಂದು ಪ್ರಸಿದ್ಧನಾದನು. ಇವನೇ ನನ್ನ ತಂದೆಯು. ಈತನಿಂದಲೇ ನಾನು ಈ ಭಾಗವತ ಪುರಾಣವನ್ನು ಅಭ್ಯಾಸ ಮಾಡಿದೆನು.

**ಹಿತ್ವಾ ಸ್ವಶಿಷ್ಯಾನ್ ಪೈಲಾದೀನ್ ಭಗವಾನ್ ಬಾದರಾಯಣಃ ॥೨೨॥**

**ಮಹ್ಯಂ ಪುತ್ರಾಯ ಶಾಂತಾಯ ಪರಂ ಗುಹ್ಯಮಿದಂ ಜಗೌ ।**

**ಭಗವಾನ್** ಷಡ್ಗುಣಸಂಪನ್ನರಾದ, **ಬಾದರಾಯಣಃ** ವೇದವ್ಯಾಸರು **ಸ್ವಶಿಷ್ಯಾನ್** ತಮ್ಮ ಶಿಷ್ಯರಾದ, **ಪೈಲಾದೀನ್** ಪೈಲ, ಜೈಮಿನಿ, ಸುಮಂತು, ಮೊದಲಾದವರನ್ನು **ಹಿತ್ವಾ** ಬಿಟ್ಟು **ಪುತ್ರಾಯ** ಮಗನಾದ, **ಶಾಂತಾಯ** ಭಗವದ್ಭಕ್ತನಾದ, **ಮಹ್ಯಂ** ನನಗೆ **ಪರಂ ಗುಹ್ಯಂ** ಅತ್ಯಂತ ಗೌಪ್ಯವಾದ, **ಇದಂ ಭಾಗವತಂ** ಭಾಗವತವನ್ನು, **ಜಗೌ** ಹೇಳಿದರು. ॥೨೨॥

**ತಾತ್ಪರ್ಯ-** ಆ ಮಹಾಮುನಿಯು ಪೈಲನೇ ಮೊದಲಾದ ತನ್ನ ಶಿಷ್ಯರನ್ನು ಬಿಟ್ಟು ಪುತ್ರನಾದ ನನ್ನಲ್ಲಿ ಕರುಣೆಯಿಂದ ಶಾಂತ್ಯಾದಿಗುಣಗಳಿಂದ ನಾನು ಉಪದೇಶಕ್ಕೆ ಯೋಗ್ಯನೆಂದು ಪರಮಗುಹ್ಯವಾದ ಭಾಗವತವನ್ನು ಉಪದೇಶಿಸಿದನು.

**ವಿಚಿತ್ರವೀರ್ಯೋಽಥೋವಾಹ ಕಾಶಿರಾಜಸುತೇ ಬಲಾತ್ ॥೨೩॥**

**ಸ್ವಯಂವರಾದುಪಾನೀತೇ ಅಂಬಿಕಾಂಬಾಲಿಕೇ ಉಭೇ ।**
**ತಯೋರಾಸಕ್ತಹೃದಯೋ ಗೃಹೀತೋ ಯಕ್ಷ್ಮಣಾ ಮೃತಃ ॥೨೪॥**

**ಅಥ** ಅನಂತರ **ವಿಚಿತ್ರವೀರ್ಯಃ** ಸತ್ಯವತಿಯ ಚಿಕ್ಕಮಗನು, **ಸ್ವಯಂವರಾತ್** ಸ್ವಯಂವರದಿಂದ **ಬಲಾತ್** ಭೀಷ್ಮನಿಂದ ತನ್ನ ಪರಾಕ್ರಮದಿಂದ **ಉಪಾನೀತೇ** ಕರೆತರಲ್ಪಟ್ಟ, **ಉಭೇ** ಉತ್ಕೃಷ್ಟಕಾಂತಿಯುಳ್ಳ, **ಕಾಶೀರಾಜಸುತೇ** ಕಾಶೀರಾಜ ಕುವರಿಯರಾದ, **ಅಂಬಿಕಾಂಬಾಲಿಕೇ** ಅಂಬಿಕಾ, ಅಂಬಾಲಿಕೆಯರನ್ನು **ಉವಾಹ** ಮದುವೆಯಾದನು. **ತಯೋಃ** ಆ ಸ್ತ್ರೀಯರಲ್ಲಿ **ಆಸಕ್ತಹೃದಯಃ** ಅತಿಸ್ನೇಹದಿಂದ ಕೂಡಿದ ಮನಸ್ಸುಳ್ಳವನಾಗಿ, **ಯಕ್ಷ್ಮಣಾ** ಕ್ಷಯರೋಗದಿಂದ **ಗೃಹೀತಃ** ಪೀಡಿತನಾಗಿ, **ಮೃತಃ** ಮರಣಹೊಂದಿದನು. ॥೨೩-೨೪॥

**ತಾತ್ಪರ್ಯ-** ಈ ಭೀಷ್ಮನು ಕಾಶೀರಾಜನ ಕುವರಿಯಾದ ಅಂಬಿಕೆ ಅಂಬಾಲಿಕೆಯರೆಂಬ ಕನ್ಯೆಯರ ಸ್ವಯಂವರಕಾಲದಲ್ಲಿ ಅವರನ್ನು ತನ್ನ ಪೌರುಷದಿಂದ ಸಾಧಿಸಿ ತಂದು ತನ್ನ ಮಲತಾಯಿಯ ಮಗನಾದ ವಿಚಿತ್ರವೀರ್ಯನಿಗೆ ಮದುವೆ ಮಾಡಿದನು. ವಿಚಿತ್ರವೀರ್ಯನು ಅವರಿಬ್ಬರಲ್ಲಿಯೂ ಅತ್ಯಂತ ಕಾಮಾಸಕ್ತನಾಗಿ

ಯಾವಾಗಲೂ ಅವರೊಡನೆ ಕ್ರೀಡಿಸುತ್ತಿದ್ದರಿಂದ ಕ್ಷಯರೋಗಪೀಡಿತನಾಗಿ ಮೃತ ಹೊಂದಿದನು.

**ಕ್ಷೇತ್ರೇಽಪ್ರಜಸ್ಯ ವೈ ಭ್ರಾತುಃ ಮಾತ್ರೋಕ್ತೋ ಬಾದರಾಯಣಃ ।**
**ಧೃತರಾಷ್ಟ್ರಂ ಚ ಪಾಂಡುಂ ಚ ವಿದುರಂ ಚಾಪ್ಯಜೀಜನತ್ ॥೨೫॥**

**ಕ್ಷೇತ್ರೇ ಅಪ್ರಜಸ್ಯ** ಸಂತಾನರಹಿತನಾದ, **ಭ್ರಾತ್ರೇ** ತಮ್ಮನಾದ ವಿಚಿತ್ರ-ವೀರ್ಯನ, **ಕ್ಷೇತ್ರೇ ಯೇ** ಹೆಂಡಂದಿರು ಯಾರೋ, **ತಯೋಃ** ಅವರಲ್ಲಿ **ಮಾತ್ರಾ** ತಾಯಿಯಾದ ಸತ್ಯವತಿಯಿಂದ, **ಉಕ್ತಃ** ಹೇಳಿಸಿಕೊಳ್ಳಲ್ಪಟ್ಟ, **ಬಾದರಾಯಣಃ** ವೇದವ್ಯಾಸದೇವರು ಕಣ್ಣು ಮುಚ್ಚಿಕೊಂಡು ಭಜಿಸಿದ ಅಂಬಿಕಾಳಲ್ಲಿ, **ಧೃತರಾಷ್ಟ್ರಂ** ಕುರುಡನಾದ ಧೃತರಾಷ್ಟ್ರನನ್ನು, ಭೀತಳಾಗಿ ಕಣ್ಣು ಬೆಳ್ಳಗೆ ಮಾಡಿ ಭಜಿಸಿದ ಅಂಬಾಲಿಕಾಳಲ್ಲಿ, **ಪಾಂಡುಂ** ಹೆಸರಿನಿಂದಲೂ ಬಣ್ಣದಿಂದಲೂ (ಬಿಳುಪಿನ) ಪಾಂಡುವನ್ನು ಅವರಿಬ್ಬರೂ ಹೆದರಿ ಬರದಿರುವಾಗ, ಭಕ್ತಿಯಿಂದ ಸೇವಿಸಿದ ದಾಸಿಯಲ್ಲಿ, **ವಿದುರಂ ಚ** ವಿದುರನನ್ನು **ಅಜೀಜನತ್** ಹುಟ್ಟಿಸಿದನು.

ಧೃತರಾಷ್ಟ್ರನು ಪೂರ್ವದಲ್ಲಿ ಧೃತರಾಷ್ಟ್ರನೆಂಬ ಗಂಧರ್ವನು. ಪಾಂಡುವು ಪರಾವಹನೆಂಬ ಮರುತ್, ವಿದುರನು ಯಮಧರ್ಮನು.

**ತಾತ್ಪರ್ಯ-** ಇದರಿಂದ ವಿಚಿತ್ರವೀರ್ಯನಿಗೆ ಸಂತತಿಯಿಲ್ಲದೆ ಹೋಯಿತು. ಆಗ ವೇದವ್ಯಾಸದೇವರು ತಾಯಿಯಾದ ಸತ್ಯವತಿಯ ಆಜ್ಞೆಯಿಂದ ತನ್ನ ಸಹೋದರ ಭಾರ್ಯೆಯಲ್ಲಿ ಪುತ್ರೋತ್ಪಾದನ ಮಾಡಿದರು. ಆದರೆ ಅಂಬಿಕೆಯು ಕಣ್ಣು ಮುಚ್ಚಿ (ಅವರ ತೇಜಸ್ಸನ್ನು ಸಹಿಸದೆ) ಸೇವಿಸಿದ್ದರಿಂದ ಕುರುಡನಾದ ಧೃತರಾಷ್ಟ್ರನು ಜನಿಸಿದನು. ಇನ್ನು ಅಂಬಾಲಿಕೆಯು ಭಯದಿಂದ ಕಣ್ಣು ಬೆಳ್ಳಗೆ ಮಾಡಿದ್ದರಿಂದ ಪಾಂಡುರಾಜನು ಬಿಳುಪು ಉಳ್ಳವನಾಗಿ ಜನಿಸಿದನು, ನಂತರ ದಾಸಿಯಲ್ಲಿ ವಿದುರನು ಜನಿಸಿದನು. ॥೨೫॥

**ಗಾಂಧಾರ್ಯಾಂ ಧೃತರಾಷ್ಟ್ರಸ್ಯ ಜಜ್ಞೇ ಸುತಶತಂ ನೃಪ ।**
**ತೇಷಾಂ ದುರ್ಯೋಧನೋ ಜ್ಯೇಷ್ಠೋ ದುಃಶಲಾ ಚಾಪಿ ಕನ್ಯಕಾ ॥೨೬॥**

**ಧೃತರಾಷ್ಟ್ರಸ್ಯ** ಧೃತರಾಷ್ಟ್ರನಿಗೆ, **ಗಾಂಧಾರ್ಯಾಂ** ಗಾಂಧಾರಿಯಲ್ಲಿ, **ಸುತಶತಂ** ನೂರು ಜನ ಮಕ್ಕಳು, **ಜಜ್ಞೇ** ಹುಟ್ಟಿದರು. **ನೃಪ** ರಾಜನೇ, **ತೇಷಾಂ** ಆ ನೂರು ಜನರಲ್ಲಿ, **ದುರ್ಯೋಧನಃ** ದುರ್ಯೋಧನನು, **ಜ್ಯೇಷ್ಠಃ** ಹಿರಿಯನು. ಇವನು ಪೂರ್ವದಲ್ಲಿ ಕಲಿಯು **ದುಃಶಲಾ** ದುಃಶಲಾ ಎಂಬ **ಕನ್ಯಕಾ** ಕನ್ಯೆಯೂ ಸಹ **ಜಜ್ಞೇ** ಹುಟ್ಟಿದಳು. (ನೂರಾ ಒಂದನೆಯವಳು). ॥೨೬॥

**ತಾತ್ಪರ್ಯ-** ಈ ಮೂವರಲ್ಲಿ ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ದುರ್ಯೋಧನನೇ ಮೊದಲಾದ ನೂರು ಪುತ್ರರು, ದುಶ್ಶಲಾ ಎಂಬ ಕನ್ಯೆಯು ಹುಟ್ಟಿದಳು. ಇವರಲ್ಲಿ ದುರ್ಯೋಧನನು ಹಿರಿಯನಾಗಿದ್ದಾನೆ.

**ಶಾಪಾನ್ಮೈಥುನರುದ್ಧಸ್ಯ ಪಾಂಡೋಃ ಕುಂತ್ಯಾಂ ಮಹಾರಥಾಃ ।**
**ಜಾತಾ ಧರ್ಮಾನಿಲೇಂದ್ರೇಭ್ಯೋ ಯುಧಿಷ್ಠಿರಮುಖಾಸ್ತ್ರಯಃ ॥೨೭॥**

**ನಕುಲಃ ಸಹದೇವಶ್ಚ ಮಾದ್ರ್ಯಾಂ ನಾಸತ್ಯದಸ್ರಯೋಃ ।**
**ದ್ರೌಪದ್ಯಾಂ ಪಂಚ ಪಂಚಭ್ಯಃ ಪುತ್ರಾಸ್ತೇ ಪಿತರೋಽಭವನ್ ॥೨೮॥**

**ಶಾಪಾತ್** ಸುರತಾಸಕ್ತ ಜಿಂಕೆಗಳಲ್ಲಿ ಹೆಣ್ಣು ಜಿಂಕೆಯನ್ನು ಇವನು ಬಾಣ ಹೊಡೆದು ಕೊಂದಾಗ ಗಂಡು ಜಿಂಕೆ ರೂಪದಲ್ಲಿರುವ ಕರ್ದಮ ಋಷಿಯು ನೀನೂ ಇದೇ ರೀತಿ ಸಾಯುವಿ ಎಂದು ಶಾಪ ಕೊಟ್ಟಿದ್ದರಿಂದ, **ಮೈಥುನರುದ್ಧಸ್ಯ** ತಡೆಯಲ್ಪಟ್ಟ ಸ್ತ್ರೀಸುಖವುಳ್ಳ (ಸ್ತ್ರೀಸಂಗಪರಿತ್ಯಾಗ ಮಾಡಿದ) **ಪಾಂಡೋಃ** ಪಾಂಡುರಾಜನ ಆಜ್ಞೆಯಿಂದ, **ಕುಂತ್ಯಾಂ** ಕುಂತೀದೇವಿಯಲ್ಲಿ, **ಧರ್ಮಾನಿಲೇಂದ್ರೇಭ್ಯಃ** ಯಮ-ಧರ್ಮ, ವಾಯು, ಇಂದ್ರರುಗಳ ದೆಶೆಯಿಂದ, **ಯುಧಿಷ್ಠಿರಮುಖಾಃ** ಧರ್ಮರಾಜ, ಭೀಮಸೇನ, ಅರ್ಜುನರೆಂಬ, ಮೂರು ಜನ **ಮಹಾರಥಾಃ** ಮಹಾರಥಿಕರಾದ, ಮಕ್ಕಳು, **ಜಾತಾಃ** ಹುಟ್ಟಿದರು. **ಅನಿಲೇಂದ್ರಧರ್ಮೇಭ್ಯಃ** ಎಂದು ಶ್ರೇಷ್ಠತೆ ಕ್ರಮವಾಗಿ ಹೇಳದೆ ವಾಯ್ವಾವೇಶವಿದೆಯೆಂದು ಸೂಚಿಸಿರುವರು. ''ಯಾಸ್ತಿಸ್ರಸ್ತಿಥಯಃ ಪುಣ್ಯಾಃ'' ಎಂಬುವಂತೆ ಇಲ್ಲಿ ಯುಧಿಷ್ಠಿರನೂ ಸಹ ಮೂರರಲ್ಲಿ ಸೇರಿದವನೇ, **ಮಾದ್ರ್ಯಾಂ** ಮಾದ್ರೀದೇವಿಯಲ್ಲಿ **ನಾಸತ್ಯದಸ್ರಯೋಃ** ಅಶ್ವಿನೀದೇವತೆಗಳಿಂದ, **ನಕುಲಃ ಸಹದೇವಃ ಚ** ನಕುಲ, ಸಹದೇವರು ಇಬ್ಬರು ಜನಿಸಿದರು. **ದ್ರೌಪದ್ಯಾಂ** ದ್ರೌಪದಿಯಲ್ಲಿ, **ಪಂಚಭ್ಯಃ** ಯುಧಿಷ್ಠಿರನೇ ಮೊದಲಾದ ಐದು ಜನರಿಂದ **ಪಂಚ** ಐದು ಜನ ಮಕ್ಕಳು, **ತೇ** ನಿನ್ನ **ಪಿತರಃ** ಕಕ್ಕಂದಿರು (ಚಿಕ್ಕಪ್ಪ ದೊಡ್ಡಪ್ಪರುಗಳು) **ಪಿತರಃ** ಪೂರ್ವಜನ್ಮದಲ್ಲಿ ತಂದೆಗಳಾದವರು **ಅಭವನ್** ಹುಟ್ಟಿದರು. ॥೨೮॥

**ತಾತ್ಪರ್ಯ-** ಪಾಂಡುಮಹಾರಾಜನು ಒಮ್ಮೆ ಬೇಟೆಯಾಡಲು ಹೋದಾಗ ಮೃಗರೂಪದಿಂದ ಕ್ರೀಡಿಸುತ್ತಿದ್ದ ಮುನಿದಂಪತಿಗಳನ್ನು ಕಂಡು ಅವುಗಳನ್ನು ನಿಜವಾದ ಮೃಗವೆಂದೇ ತಿಳಿದು ಪುರುಷಮೃಗವನ್ನು ತನ್ನ ಬಾಣದಿಂದ ಕೊಂದುಬಿಟ್ಟನು. ಇದರಿಂದ ಆ ಮಹರ್ಷಿ ಕರ್ದಮನು ತನ್ನಂತೆಯೇ ಸ್ತ್ರೀಯೊಡನೆ ಸಂಗಮಿಸಿದಾಗ ಮರಣಹೊಂದುವಂತೆ ಪಾಂಡುವಿಗೆ ಶಾಪವನ್ನು ಕೊಟ್ಟನು. ಆ ಶಾಪಭಯದಿಂದ ಪಾಂಡುರಾಜನು ತನ್ನ ಪತ್ನಿಯರೊಡನೆ ಸಂಗಮಿಸುವುದಕ್ಕೆ ಅವಕಾಶವಿರಲಿಲ್ಲ. ಆಗ ಪಾಂಡುರಾಜನ ಜ್ಯೇಷ್ಠಪತ್ನಿಯಾದ ಕುಂತಿಯು

ಪತಿಯ ಅನುಮತಿಯನ್ನು ಪಡೆದು ಯಮಧರ್ಮರಾಜನನ್ನು, ವಾಯುವನ್ನು, ದೇವೇಂದ್ರನನ್ನು, ಮೂರು ಮಂತ್ರಗಳಿಂದ ಉಪಾಸನೆ ಮಾಡಲು ಧರ್ಮರಾಜ, ಭೀಮ, ಅರ್ಜುನರು ಜನಿಸಿದರು. ಹಾಗೆಯೇ ಕಿರಿಯ ಹೆಂಡತಿಯಾದ ಮಾದ್ರಿದೇವಿಯು ತನ್ನಲ್ಲಿದ್ದ ಒಂದೇ ಮಂತ್ರದಿಂದ ಅಶ್ವಿನೀದೇವತೆಗಳನ್ನು ಉಪಾಸಿಸಿ ಅವರ ಅನುಗ್ರಹದಿಂದ ನಕುಲ ಸಹದೇವರನ್ನು ಅವಳಿ ಮಕ್ಕಳಾಗಿ ಪಡೆದಳು. ಈ ಐವರಿಗೂ ದ್ರೌಪದೀ ಎಂಬ ಪತ್ನಿಯಲ್ಲಿ ಒಬ್ಬೊಬ್ಬರಿಂದ ಒಬ್ಬೊಬ್ಬ ಪುತ್ರನು ಜನಿಸಿದನು. ಇವರಿಗೆ ಉಪಪಾಂಡವರೆಂದು ಕರೆಯುವರು.

ಯಾರಿಂದ ಯಾರು ಜನಿಸಿದರೆಂದು ಹೇಳುವರು.

**ಯುಧಿಷ್ಠಿರಾತ್ಪ್ರತಿವಿಂಧ್ಯಃ ಶ್ರುತಸೇನೋ ವೃಕೋದರಾತ್ ।**
**ಅರ್ಜುನಾಚ್ಛ್ರುತಕೀರ್ತಿಸ್ತು ಶತಾನೀಕಸ್ತು ನಾಕುಲಿಃ ॥೨೯॥**

**ಯುಧಿಷ್ಠಿರಾತ್** ಧರ್ಮರಾಜನಿಂದ, **ಪ್ರತಿವಿಂಧ್ಯಃ** ಪ್ರತಿವಿಂಧ್ಯನು, **ವೃಕೋದರಾತ್** ಭೀಮಸೇನನಿಂದ **ಶ್ರುತಸೇನಃ** ಶ್ರುತಸೇನನನು, **ಅರ್ಜುನಾತ್** ಅರ್ಜುನನಿಂದ, **ಶ್ರುತಕೀರ್ತಿಃ** ಶ್ರುತಕೀರ್ತಿಯು **ಶತಾನೀಕಃ** ಶತಾನೀಕನು **ನಾಕುಲಿಃ** ನಕುಲಪುತ್ರನು. ॥೨೯॥

**ತಾತ್ಪರ್ಯ-** ಇವರಲ್ಲಿ ಧರ್ಮನ ಮಗ ಪ್ರತಿವಿಂಧ್ಯ , ಭೀಮನಿಂದ ಶ್ರುತಸೇನ, ಅರ್ಜುನನಿಂದ ಶ್ರುತಕೀರ್ತಿ, ನಕುಲನಿಗೆ ಶತಾನೀಕ ಎಂಬ ಪುತ್ರರು ಜನಿಸಿದರು.

**ಸಹದೇವಸುತೋ ರಾಜನ್ ಶ್ರುತಕೀರ್ತಿಸ್ತಥಾಪರೇ ।**
**ಯುಧಿಷ್ಠಿರಾತ್ತು ಪೌರವ್ಯಾಂ ದೇವಕೋಽಥ ಘಟೋತ್ಕಚಃ ॥೩೦॥**

**ಭೀಮಸೇನಾತ್ ಹಿಡಿಂಬಾಯಾಂ ಕಾಲೀ ಶರ್ವಗತಂ ತತಃ ।**
**ಸಹದೇವಾತ್ಸುಹೋತ್ರಂ ತು ವಿಜಯಾಽಸೂತ ಪಾರ್ವತೀ ॥೩೧॥**

**ರಾಜನ್** ಪರೀಕ್ಷಿತನೇ, **ಸಹದೇವಸುತಃ** ಸಹದೇವನ ಮಗನು, **ಶ್ರುತಕೀರ್ತಿಃ** ಶ್ರುತಕೀರ್ತಿಯು **ತಥಾ** ಹಾಗೂ **ಅಪರೇ** ಇನ್ನೂ ಕೆಲವು ಮಕ್ಕಳು ಬೇರೆ ಬೇರೆ ಪತ್ನಿಯಲ್ಲಿ ಯುಧಿಷ್ಠಿರಾದಿಗಳಿಂದ ಜನಿಸಿದರು.

ಇದನ್ನೇ ವಿವರಿಸುವರು.

**ಯುಧಿಷ್ಠಿರಾತ್** ಧರ್ಮರಾಜನಿಂದ, **ಪೌರವ್ಯಾಂ** ಪೌರವೀ ಎಂಬುವಳಲ್ಲಿ **ದೇವಕಃ** ದೇವಕನು, ಅಲ್ಲದೇ ಧರ್ಮರಾಜನಿಗೆ ಶಿಶುಪಾಲನ ಸುತೆಯಾದ ದೇವಕಿ ಎಂಬ ಹೆಂಡತಿಯಲ್ಲಿ ಸುಹೋತ್ರನೆಂಬ ಮಗನು ಎಂದು ''ತಾತ್ಪರ್ಯನಿರ್ಣಯದಲ್ಲಿ''

ಹೇಳಿದೆ. **ಅಥ** ನಂತರ, **ಭೀಮಸೇನಾತ್** ಭೀಮಸೇನದೇವರಿಂದ, **ಹಿಡಿಂಬಾಯಾಂ** ಹಿಡಿಂಬಾಳಲ್ಲಿ, **ಘಟೋತ್ಕಚಃ** ಘಟೋತ್ಕಚನು ಹುಟ್ಟಿದನು. **ಕಾಲೀ** ಕಾಶೀರಾಜನ ಮಗಳಾದ ಇನ್ನೊಬ್ಬಳಾದ ಭೀಮಸೇನ ಪತ್ನಿಯಾದ ಭಾರತಿಯ ಅವತಾರಳಾದ ಕಾಲೀದೇವಿಯೂ **ತತಃ** ಭೀಮಸೇನನಿಂದ, **ಶರ್ವಗತಂ** ಶರ್ವತ್ರಾತನನ್ನು ಪಡೆದಳು. ಇವನು ಪೂರ್ವದಲ್ಲಿ ಸಮಾನವಾಯುವು. ರುದ್ರನಿಂದ ರಕ್ಷಿತನಾದ್ದರಿಂದ ಶರ್ವತ್ರಾತನೆಂದು ಹೆಸರು. **ಸಹದೇವಾತ್** ಸಹದೇವನಿಂದ **ವಿಜಯಾ** ವಿಜಯಾ ಎಂಬುವಳು ಇವಳಿಗೆ **ಪಾರ್ವತೀ** ಪಾರ್ವತೀ ಎಂಬ ಹೆಸರು. **ಸುಹೋತ್ರಂ** ಸುಹೋತ್ರನನ್ನು **ಅಸೂತ** ಪಡೆದಳು. ॥೩೦॥

**ತಾತ್ಪರ್ಯ-** ಸಹದೇವನಿಂದ ಶ್ರುತಕರ್ಮಾ ಹೀಗೆ ಜನಿಸಿದನು. ಈ ಐದು ಮಂದಿ ಸಂತಾನವಿಲ್ಲದೇ ಭಾರತಯುದ್ಧದ ಕೊನೆಯಲ್ಲಿ ಅಶ್ವತ್ಥಾಮನಿಂದ ಹತರಾದರು. ಪಂಚಪಾಂಡವರಿಗೆ ದ್ರೌಪದಿಯಲ್ಲಿ ಹುಟ್ಟಿದ ಈ ಐದೂ ಜನ ಮಕ್ಕಳಷ್ಟೇ ಅಲ್ಲದೆ ಇತರ ಪತ್ನಿಯರಲ್ಲಿಯೂ ಬೇರೆ ಬೇರೆ ಕೆಲವು ಮಕ್ಕಳು ಜನಿಸಿದರು. ಧರ್ಮರಾಜನಿಗೆ ಪೌರವೀ ಎಂಬವಳಲ್ಲಿ ದೇವಕನು, ಭೀಮನಿಗೆ ಹಿಡಿಂಬೆಯಲ್ಲಿ ಘಟೋತ್ಕಚನೂ, ಕಾಲೀ ಎಂಬುವಳಲ್ಲಿ ಶರ್ವಗತನೂ, ಸಹದೇವನಿಗೆ ವಿಜಯೆ ಎಂಬುವಳಲ್ಲಿ (ಇವಳಿಗೆ ಪಾರ್ವತೀ ಎಂದೂ ಹೆಸರು). ಸುಹೋತ್ರನೂ ಜನಿಸಿದರು.

**ಕರೇಣುಮತ್ಯಾಂ ನಕುಲೋ ನಿರಮಿತ್ರಂ ತಥಾರ್ಜುನಃ ।**
**ಇರಾವಂತಮುಲೂಪ್ಯಾಂ ವೈ ಸುತಾಯಾಂ ಬಭ್ರುವಾಹನಮ್ ॥೩೨॥**

**ಮಣಿಪೂರಪತೇಃ ಸೋಽಪಿ ತತ್ಪುತ್ರಃ ಪುತ್ರಿಕಾಸುತಃ ।**

**ನಕುಲಃ** ನಕುಲನು **ಕರೇಣುಮತ್ಯಾಂ** ಕರೇಣುಮತೀಯಲ್ಲಿ **ನಿರಮಿತ್ರಂ** ನಿರಮಿತ್ರನನ್ನು **ಅಜೀಜನತ್** ಹುಟ್ಟಿಸಿದನು. **ತಥಾ** ಹಾಗೂ **ಅರ್ಜುನಃ** ಅರ್ಜುನನು **ಉಲೂಪ್ಯಾಂ** ಉಲೂಪಿ ಎಂಬ ನಾಗಕನ್ಯೆಯಲ್ಲಿ **ಇರಾವಂತಂ** ಇರಾವಂತನನ್ನು ಪಡೆದನು, ಮತ್ತು **ಮಣಿಪೂರಪತೇಃಸುತಾಯಾಂ** ಮಣಲೂರಪತಿ (ಮಣಿಪೂರಪತಿ) ಯ ಮಗಳಾದ ಚಿತ್ರಾಂಗದೆಯಲ್ಲಿ **ಬಭ್ರುವಾಹನಂ** ಬಭ್ರುವಾಹನನನ್ನು **ಅಜೀಜನತ್** ಹುಟ್ಟಿಸಿದನು. **ಸಃ ಅಪಿ** ಬಭ್ರುವಾಹನನಾದರೂ **ಪುತ್ರಿಕಾಸುತಂ** ಪುತ್ರಿಕಾಪುತ್ರಧರ್ಮದಿಂದ ಉಂಟಾದವನು ಕಾರಣ **ತತ್ಪುತ್ರಃ** ಮಣಿಪೂರಪತಿಯು ಮಗನಾದನು, (ಇವಳಲ್ಲಿ ಜನಿಸುವ ಮಗುವು ಮಗನಾಗುವನು ಎಂದು ಕರಾರಿನಿಂದ ಕನ್ಯೆಯನ್ನು ಕೊಡುವುದು ಪುತ್ರಿಕಾಪುತ್ರಧರ್ಮ). ॥೩೨॥

**ತಾತ್ಪರ್ಯ-** ನಕುಲನಿಗೆ ಕರೇಣುಮತಿ ಎಂಬುವಳಲ್ಲಿ ನಿರಮಿತ್ರನೂ, ಅರ್ಜುನನಿಗೆ ಉಲೂಪಿಯಲ್ಲಿ (ನಾಗಕನ್ಯೆ) ಇರಾವಂತನು, ಮಣಲೂರ ಪತಿಯ ಮಗಳಾದ ಚಿತ್ರಾಂಗದೆಯಲ್ಲಿ (ಕ್ಷತ್ರಿಯಕನ್ಯೆ) ಬಭ್ರುವಾಹನನು ಜನಿಸಿದನು.

ಬಭ್ರುವಾಹನನು ಅರ್ಜುನನ ಮಗನಾಗಿದ್ದರೂ ತನ್ನ ಮಾತಾಮಹನಿಗೆ (ತಾಯಿ ತಂದೆ) ಮಣಲೂರಪತಿಯ ಪುತ್ರನೂ ಆಗಿದ್ದನು. ಕನ್ಯೆಯನ್ನು ಕೊಡುವಾಗಲೇ ಇವಳಲ್ಲಿ ಜನಿಸಿದ ಮಗನನ್ನು ಕೊಡಬೇಕೆಂಬ ಕರಾರು ಇದ್ದಿತು. ಇದಕ್ಕೆ ಪುತ್ರಿಕಾಪುತ್ರಧರ್ಮ ಎನ್ನುವರು.

**ತವ ತಾತಃ ಸುಭದ್ರಾಯಾಮಭಿಮನ್ಯುರಜಾಯತ ॥೩೩॥**

**ತವ** ನಿನ್ನ ತಂದೆಯಾದ **ಅಭಿಮನ್ಯುಃ** ಅಭಿಮನ್ಯುವು (ಪೂರ್ವದಲ್ಲಿ ಬುಧ) **ಸುಭದ್ರಾಯಾಂ** ಕೃಷ್ಣನ ತಂಗಿಯಾದ (ಪೂರ್ವದಲ್ಲಿ ತ್ರಿಜಟಾ) ಸುಭದ್ರೆಯಲ್ಲಿ **ಅಜಾಯತ** ಹುಟ್ಟಿದನು. ॥೩೩॥

**ತಾತ್ಪರ್ಯ-** ಸುಭದ್ರೆಯೆಂಬ (ಕೃಷ್ಣನ ತಂಗಿ) ಯಾದವಕನ್ಯೆಯಲ್ಲಿ ನಿನ್ನ ತಂದೆಯಾದ ಅಭಿಮನ್ಯುವು ಜನಿಸಿದನು.

**ಸರ್ವಾತಿರಥಜಿದ್ವೀರ ಉತ್ತರಾಯಾಂ ತತೋ ಭವಾನ್ ।**
**ಪರಿಕ್ಷೀಣೇಷು ಕುರುಷು ದ್ರೌಣೇರ್ಬ್ರಹ್ಮಾಸ್ತ್ರತೇಜಸಾ ॥೩೪॥**

**ತ್ವಂ ತು ಕೃಷ್ಣಾನುಭಾವೇನ ಸಜೀವೋ ಮೋಽಚಿತೋಽಂತಕಾತ್ ।**
**ತವೇಮೇ ತನಯಾಸ್ತಾತ ಜನಮೇಜಯಪೂರ್ವಕಾಃ ॥೩೫॥**

ಅಭಿಮನ್ಯುವಿನ ಪರಾಕ್ರಮವನ್ನು ಹೇಳುವರು- **ಸರ್ವಾತಿರಥಜಿತ್** ಎಲ್ಲ ಅತಿರಥರನ್ನು ಗೆದ್ದವನು, **ವೀರಃ** ಶೂರನೂ ಆದ ಅಭಿಮನ್ಯುವು ಹೀಗೆ ಹಿಂದಿನ ಶ್ಲೋಕದಲ್ಲಿ ಅನ್ವಯ ಮಾಡಬಹುದು.

**ತತಃ** ಅಭಿಮನ್ಯುವಿನಿಂದ, **ಉತ್ತರಾಯಾಂ** ವಿರಾಟಪುತ್ರಿಯಾದ ಉತ್ತರಾಳಲ್ಲಿ, **ಕುರುಷು** ಕೌರವರು, ಕುರುಕ್ಷೇತ್ರದಲ್ಲಿ **ಪರಿಕ್ಷೀಣೇಷು** ನಾಶ ಹೊಂದುತ್ತಿರಲು, **ದ್ರೌಣೇಃ** ಅಶ್ವತ್ಥಾಮರ, **ಬ್ರಹ್ಮಾಸ್ತ್ರತೇಜಸಾ** ಬ್ರಹ್ಮಾಸ್ತ್ರದ ತಾಪದಿಂದ, **ತ್ವಂ ತು** ನೀನಾದರೋ, **ಕೃಷ್ಣಾನುಭಾವೇನ** ಶ್ರೀಕೃಷ್ಣನ ಅನುಗ್ರಹದಿಂದ, **ಅಂತಕಾತ್** ಬ್ರಹ್ಮಾಸ್ತ್ರದಿಂದ ಬರಬೇಕಾದ ಮೃತ್ಯುವಿನಿಂದ, **ಸಜೀವಃ** ಜೀವಸಹಿತನಾಗಿ, **ಮೋಚಿತಃ** ಮುಕ್ತನಾದಿ **ತಾತ** ತಂದೆಯೇ (ಅಪ್ಪಾ ಕೂಸು ಎಂದಂತೆ ವಾತ್ಸಲ್ಯದಿಂದ ಕರೆದದ್ದು) **ಇಮೇ** ಈ **ಜನಮೇಜಯಪೂರ್ವಕಾಃ** ಜನಮೇಜಯ ಮೊದಲಾದವರು, **ತವ** ನಿನ್ನ, **ತನಯಾಃ** ಮಕ್ಕಳುಗಳು ಅವರನ್ನೇ ವಿವರಿಸುವರು.॥೩೪-೩೫॥

**ತಾತ್ಪರ್ಯ-** ಓ ಪರೀಕ್ಷಿತನೇ! ಅರ್ಜುನನಿಗೆ ಸುಭದ್ರೆಯಲ್ಲಿ ಜನಿಸಿದ ಅಭಿಮನ್ಯುವಿನಿಂದ ಉತ್ತರೆಯ ಗರ್ಭದಲ್ಲಿ ಜನಿಸಿದವನೇ ನೀನು. ಭಾರತ ಯುದ್ಧದಲ್ಲಿ ದುರ್ಯೋಧನ ಮೊದಲಾದ ಕೌರವರೆಲ್ಲರೂ ಸಂಹೃತರಾದ ಮೇಲೆ ಅಶ್ವತ್ಥಾಮನು ಆಗ ಉತ್ತರೆಯ ಗರ್ಭದಲ್ಲಿದ್ದ ನಿನ್ನನ್ನು ಕೊಲ್ಲುವುದಕ್ಕಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಶ್ರೀಕೃಷ್ಣನ ಕೃಪೆಯಿಂದ ಆ ಅಸ್ತ್ರತೇಜಸ್ಸಿನಿಂದ ಸಾಯದೇ ಬದುಕಿ ಬಂದೆ. ಈ ಜನಮೇಜಯ ಮುಂತಾದವರು ನಿನ್ನ ಮಕ್ಕಳಾಗಿದ್ದಾರೆ.

**ಶ್ರುತಸೇನೋ ಭೀಮಸೇನ ಉಗ್ರಸೇನಶ್ಚ ವೀರ್ಯವಾನ್ ।**
**ಜನಮೇಜಯಸ್ತ್ವಾಂ ವಿದಿತ್ವಾ ತಕ್ಷಕಾನ್ನಿಧನಂ ಗತಮ್** ।।೩೬।।

**ಸರ್ಪಾನ್ವೈ ಸರ್ಪಯಾಗಾಗ್ನೌ ಸ ಹೋಷ್ಯತಿ ರುಷಾನ್ವಿತಃ ।**
**ಕಾವಷೇಯಂ ಪುರೋಧಾಯ ತುರಂ ತುರಗಮೇಧಯಾ** ।।೩೭।।

**ಸಮಂತಾತ್ಪೃಥಿವೀಂ ಸರ್ವಾಂ ಜಿತ್ವಾ ಯಕ್ಷ್ಯತಿ ಚಾಧ್ವರೈಃ ।**

ಜನಮೇಜಯನ ಮಹಿಮೆಯನ್ನು ಹೇಳುವರು **ಜನಮೇಜಯಃ** ಜನಮೇಜಯನು **ತ್ವಾಂ** ನಿನ್ನನ್ನು ತಕ್ಷಕನೆಂಬ ಸರ್ಪದಿಂದ **ನಿಧನಂ** ಮರಣವನ್ನು **ಗತಂ** ಹೊಂದಿದವನನ್ನಾಗಿ **ವಿದಿತ್ವಾ** ತಿಳಿದು **ರುಷಾನ್ವಿತಃ** ಕೋಪಗೊಂಡವನಾಗಿ **ಸರ್ಪಯಾಗಾಗ್ನೌ** ಸರ್ಪಯಾಗ ವಿಷಯಕವಾದ ಅಗ್ನಿಯಲ್ಲಿ **ಸರ್ಪಾನ್** ಹಾವುಗಳನ್ನು **ಹೋಷ್ಯತಿ** ಹೋಮ ಮಾಡುವನು.

**ಸಃ** ಜನಮೇಜಯನು **ಕಾವಷೇಯಂ** ಕವಿಷೀ ಪುತ್ರನಾದ **ತುರಂ** ತುರನೆಂಬುವ-ನನ್ನು **ಪುರೋಧಾಯ** ಪುರೋಹಿತನನ್ನಾಗಿಟ್ಟುಕೊಂಡು **ಸರ್ವಾಂ** ಎಲ್ಲ **ಪೃಥಿವೀಂ** ಭೂಮಂಡಲವನ್ನು **ಜಿತ್ವಾ** ಗೆದ್ದು **ಸಮಂತಾತ್** ಎಲ್ಲಿ ಎಲ್ಲಿ ತೀರ್ಥಕ್ಷೇತ್ರಗಳಿವೆಯೋ ಅಲ್ಲೆಲ್ಲ ಕಡೆಗೆ **ತುರಗಮೇಧಯಾ** ಅಶ್ವಮೇಧದಿಂದ ಮತ್ತು **ಅಧ್ವರೈಃ** ಇನ್ನಿತರ ಯಾಗಗಳಿಂದ **ಯಕ್ಷ್ಯತಿ** ಹೋಮ ಮಾಡುವನು. ।।೩೬-೩೭।।

**ತಾತ್ಪರ್ಯ-** ನಿನಗೆ ಜನಮೇಜಯ ಉಗ್ರಸೇನ, ಶ್ರುತಸೇನ, ಭೀಮಸೇನ ಮತ್ತು ವೀರ್ಯವಂತ ಎಂಬ ಪುತ್ರರಿರುವರಷ್ಟೇ . ಇವರ ಮುಂದಿನ ವೃತ್ತಾಂತವನ್ನು ಹೇಳುವೆನು ಕೇಳು. ನಿನ್ನ ಜ್ಯೇಷ್ಠಪುತ್ರ ಜನಮೇಜಯನು ಮುಂದೆ ತಕ್ಷಕನೆಂಬ ಸರ್ಪದಿಂದ ನಿನಗುಂಟಾದ ಮರಣವನ್ನು ಕೇಳಿ ಕೋಪದಿಂದ ಲೋಕದಲ್ಲಿ ಹಾವುಗಳ ಹುಟ್ಟೇ ಇಲ್ಲದಂತೆ ಮಾಡಬೇಕೆಂದು ಸರ್ಪಯಾಗವನ್ನಾರಂಭಿಸಿ ಅನೇಕ ಸರ್ಪಗಳನ್ನು ಅಗ್ನಿಗೆ ಆಹುತಿಯನ್ನಾಗಿ ಮಾಡುವನು. ತುರನೆಂಬ ಮಹರ್ಷಿಯನ್ನು

ಪುರೋಹಿತನನ್ನಾಗಿಟ್ಟುಕೊಂಡು ಅಶ್ವಮೇಧಯಾಗವನ್ನಾರಂಭಿಸುತ್ತಾನೆ. ಸಮಸ್ತ ದಿಕ್ಕುಗಳನ್ನು ಜಯಿಸಿ ಅನೇಕ ಯಾಗಗಳಿಂದ ಭಗವಂತನನ್ನು ಆರಾಧಿಸುವನು.

**ತಸ್ಯ ಪುತ್ರಃ ಶತಾನೀಕೋ ಯಾಜ್ಞವಲ್ಕ್ಯಾತ್ತ್ರಯೀಂ ಪಠನ್ ।।೩೮।।**

**ಅಸ್ತ್ರಜ್ಞಾನಂ ಕ್ರಿಯಾಜ್ಞಾನಂ ಶೌನಕಾತ್ಪರಮೇಷ್ಯತಿ ।**
**ಸಹಸ್ರಾನೀಕಸ್ತತ್ಪುತ್ರಸ್ತತಶ್ಚೈವಾಶ್ವಮೇಧಜಃ ।।೩೯।।**

**ತಸ್ಯ** ಜನಮೇಜಯನಿಗೆ **ಶತಾನೀಕಃ** ಶತಾನೀಕನು **ಪುತ್ರಃ** ಮಗನು ಇವನು **ಕ್ರಿಯಾಜ್ಞಾನಂ** ಕರ್ಮವಿಷಯಕಜ್ಞಾನವನ್ನು **ಯಾಜ್ಞವಲ್ಕ್ಯಾತ್** ಯಾಜ್ಞವಲ್ಕ್ಯರಿಂದ **ತ್ರಯೀಂ** ವೇದವನ್ನು **ಪಠನ್** ಓದುವವನಾಗಿ **ಪರಂ** ಹರಿವಿಷಯಕ ಜ್ಞಾನವನ್ನು **ಶೌನಕಾತ್** ಶೌನಕರಿಂದ ಮತ್ತು **ಅಸ್ತ್ರಜ್ಞಾನಂ** ಅಸ್ತ್ರಗಳ ಜ್ಞಾನವನ್ನು **ಕೃಪಾತ್** ಕೃಪಾಚಾರ್ಯರಿಂದ **ಏಷ್ಯತಿ** ಹೊಂದಿದನು. ''ಕೃಪಾದಸ್ತ್ರಾಣ್ಯವಾಪ್ಸ್ಯೈಷಃ'' ಎಂದು ವಿಷ್ಣುಪುರಾಣದಲ್ಲಿ ಹೇಳಿದೆ. ಕೆಲವೆಡೆ ಜ್ಞಾನಂ ಕೃಪಾಚಾರ್ಯಾತ್ ಎಂದೇ ಪಾಠವಿದೆ. **ತತ್ಪುತ್ರಃ** ಶತಾನೀಕನ ಮಗನು **ಸಹಸ್ರಾನೀಕಃ** ಸಹಸ್ರಾನೀಕನು **ತತಃ** ಸಹಸ್ರಾನಿಕನಿಂದ ಉತ್ಪನ್ನನಾದ **ಅಶ್ವಮೇಧಜಃ** ಅಶ್ವಮೇಧನಿಂದ ಉತ್ಪನ್ನನಾದನು. ।।೩೮-೩೯।।

**ತಾತ್ಪರ್ಯ-** ಆ ಜನಮೇಜಯನಿಗೆ ಶತಾನೀಕ ಎಂಬ ಪುತ್ರನು ಜನಿಸುವನು. ಆತನು ಯಾಜ್ಞ್ಯವಲ್ಕ್ಯರಿಂದ ವೇದಗಳನ್ನು ಕೃಪಾಚಾರ್ಯರಿಂದ ಧನುರ್ವೇದ-ವನ್ನೂ, ಶೌನಕರಿಂದ ಪರಮಾತ್ಮಜ್ಞಾನವನ್ನೂ ಹೊಂದುವನು. ಈ ಶತಾನಿಕನಿಂದ ಪುತ್ರ ಪೌತ್ರಾದಿ ಕ್ರಮವಾಗಿ ಸಹಸ್ರಾನೀಕ, ಆತನಿಗೆ ಅಶ್ವಮೇಧಜ ಎಂಬ ಮಗನಾದನು.

**ವಿಸ್ರಂಭಕೃಷ್ಣಸ್ತಸ್ಯಾಪಿ ನೇಮಿಚಕ್ರಸ್ತು ತತ್ಸುತಃ ।**
**ಗಜಾಹ್ವಯೇ ಹೃತೇ ನದ್ಯಾ ಕೌಶಾಂಬ್ಯಾಂ ಸಾಧು ವತ್ಸ್ಯತಿ ।।೪೦।।**

**ವಿಸ್ರಂಭಕೃಷ್ಣಃ** ವಿಸ್ರಂಭಕೃಷ್ಣನು. **ತಸ್ಯಾಪಿ** ವಿಸ್ರಂಭಕೃಷ್ಣನಿಗೆ **ನೇಮಿಚಕ್ರಃ** ನೇಮಿಚಕ್ರನು **ತತ್ಸುತಃ** ನೇಮಿಚಕ್ರನ ಮಗನು **ಉಕ್ತಃ** ಉಕ್ತ ಎಂಬುವನು (ಮುಂದಿನ ಶ್ಲೋಕದಲ್ಲಿದೆ). **ನದ್ಯಾ** ಯಮುನಾನದಿಯಿಂದ **ಗಜಾಹ್ವಯೇ** ಹಸ್ತಿನಾಪಟ್ಟಣವು **ಹೃತೇ** ತೇಲಿ ಹೋಗುತ್ತಿರಲು **ಕೌಶಾಂಬ್ಯಾಂ** ಕೌಶಾಂಬಿ ನಗರದಲ್ಲಿ **ಸಾಧು** ಚೆನ್ನಾಗಿ **ವತ್ಸ್ಯತಿ** ವಾಸಮಾಡುವನು. ।।೪೦।।

**ತಾತ್ಪರ್ಯ-** ವಿಸ್ರಂಭಕೃಷ್ಣ, ನೇಮೀಚಕ್ರರೆಂಬುವನು ಜನಿಸುವರು. ಹಸ್ತಿನಾಪುರವು ಯಮುನಾಪ್ರವಾಹದಲ್ಲಿ ಮುಳುಗಿಹೋದ ಮೇಲೆ ಈ ನೇಮಿಚಕ್ರನು

ಕೌಶಾಂಬಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವನ್ನು ಪಾಲಿಸುವನು.

**ಉಕ್ತಸ್ತತಶ್ಚಿತ್ರರಥಸ್ತಸ್ಮಾಚ್ಛುಚಿರಥಃ ಸುತಃ ।**
**ತಸ್ಮಾಚ್ಚ ಧೃಷ್ಟಿಮಾಂಸ್ತಸ್ಯ ಸುಷೇಣೋಽಥ ಮಹೀಪತಿಃ ॥೪೧॥**

ನೇಮಿಚಕ್ರನ ಮಗನು ಉಕ್ತನು. **ತತಃ** ಉಕ್ತನಿಂದ **ಚಿತ್ರರಥಃ** ಚಿತ್ರರಥನು **ತಸ್ಮಾತ್** ಚಿತ್ರರಥನಿಂದ **ಶುಚಿರಥಃ** ಶುಚಿರಥನು **ತಸ್ಮಾತ್** ಶುಚಿರಥನಿಂದ **ಧೃಷ್ಟಿಮಾನ್** ಧೃಷ್ಟಿಮಂತನು **ತಸ್ಯ** ಧೃಷ್ಟಿಮಂತನಿಗೆ **ಸುಷೇಣಃ** ಸುಷೇಣನು **ಅಥ** ಸುಷೇಣನ ನಂತರ **ಮಹೀಪತಿಃ** ಮಹೀಪತಿ ಎಂಬುವ ಹೆಸರುಳ್ಳವನು ಜನಿಸಿದನು.

**ತಾತ್ಪರ್ಯ-** ಈತನಿಂದ ಪುತ್ರಪೌತ್ರಕ್ರಮದಿಂದ ಉಕ್ತ , ಚಿತ್ರರಥ, ಶುಚಿರಥ, ಧೃಷ್ಟಿಮಂತ, ಸುಷೇಣ, ಮಹೀಪತಿ ಎಂಬ ಹೆಸರುಳ್ಳವರು ಜನಿಸಿದರು.

**ಸುನೀಥಸ್ತಸ್ಯ ಭವಿತಾ ನೃಚಕ್ಷುರ್ಯತ್ಸುಖೀನಲಃ ।**
**ಪಾರಿಪ್ಲವಃ ಸುತಸ್ತಸ್ಮಾನ್ಮೇಧಾವೀ ಸುನಯಾತ್ಮಜಃ ॥೪೨॥**

**ಸುನೀಥಃ** ನಂತರ ಸುನೀಥನು **ಭವಿತಾ** ಆಗುವನು. **ತಸ್ಯ** ಸುನೀಥನಿಗೆ **ನೃಚಕ್ಷುಃ** ನೃಚಕ್ಷುವು, **ಯತ್** ಯಾವ ನೃಚಕ್ಷುವಿನಿಂದ **ಸುಖೀನಲಃ** ಸುಖೀನಲನು ಜನಿಸಿದನು. **ತಸ್ಮಾತ್** ಆ ಸುಖೀನಲನಿಂದ **ಪಾರಿಪ್ಲವಃ** ಪಾರಿಪ್ಲವನು **ತಸ್ಮಾತ್** ಪಾರಿಪ್ಲವನಿಂದ **ಸುನಯಃ** ಸುನಯನು **ತಸ್ಮಾತ್** ಸುನಯನಿಂದ **ಮೇಧಾವೀ** ಮೇಧಾವಿಯು **ಸುನಯಸ್ಯ ಆತ್ಮಜಃ** ಎಂದಿಟ್ಟುಕೊಂಡು ಮೇಲಿನದು ಸುನಯಃ ಆತ್ಮಜಃ ಯಸ್ಯ ಸಃ ಎಂದು ಮಾಡಿದ ಮೇಧಾವೀ ತಂದೆ ಸುನಯನ ಮಗನಾಗುವನು ಹೇಗಾದರೂ ಮಾಡಬಹುದು. ॥೪೨॥

**ತಾತ್ಪರ್ಯ-** ನೃಚಕ್ಷು, ಸುಖನೀಲ, ಪಾರಿಪ್ಲವ, ಮೇಧಾವಿ ಸುನಯರು ಕ್ರಮವಾಗಿ ಜನಿಸಿದ್ದಾರೆ.

**ನೃಪಂಜಯಸ್ತತೋ ದುರ್ವಸ್ತಿಮಿಸ್ತಸ್ಮಾಜ್ಜನಿಷ್ಯತೇ ।**
**ತತೋ ಬೃಹದ್ರಥಸ್ತಸ್ಮಾಚ್ಛತಾನೀಕಃ ಸುದಾಸಜಃ ॥೪೩॥**

**ತತಃ** ಮೇಧಾವಿಯಿಂದ **ನೃಪಂಜಯಃ** ನೃಪಂಜಯನು **ತತಃ** ನೃಪಂಜಯನಿಂದ **ದುರ್ವಃ** ದುರ್ವನು **ತಸ್ಮಾತ್** ದುರ್ವನಿಂದ **ತಿಮಿಃ** ತಿಮಿಯು **ಜನಿಷ್ಯತೇ** ಹುಟ್ಟುವನು **ತತಃ** ತಿಮಿಯಿಂದ **ಬೃಹದ್ರಥಃ** ಬೃಹದ್ರಥನು **ತಸ್ಮಾತ್** ಬೃಹದ್ರಥನಿಂದ **ಸುದಾಸಜಃ** ಸುದಾಸನ ಮಗನಾದ **ಶತಾನೀಕಃ** ಶತಾನೀಕನು (ಅಂದರೆ ಬೃಹದ್ರಥನಿಗೆ ಸುದಾಸ, ಸುದಾಸನಿಗೆ ಶತಾನೀಕ ಎಂದರ್ಥ). ॥೪೩॥

**ಶತಾನೀಕಾದ್ದುರ್ದಮನಸ್ತಸ್ಯಾಪತ್ಯಂ ಪ್ರಹೀತರಃ ।**
**ದಂಡಪಾಣಿರ್ನಿಮಿಸ್ತಸ್ಯ ಕ್ಷೇಮಕೋ ಭವಿತಾ ನೃಪಃ ॥೪೪॥**

**ಶತಾನೀಕಾತ್** ಶತಾನೀಕನಿಂದ **ದುರ್ದಮನಃ** ದುರ್ದಮನನು **ತಸ್ಯ** ದುರ್ದಮನನಿಗೆ **ಪ್ರಹೀತರಃ** ಪ್ರಹೀತರನು **ತಸ್ಯ** ಪ್ರಹೀತರನಿಗೆ **ದಂಡಪಾಣಿಃ** ದಂಡಧಾರಿಯಾದ **ನಿಮಿಃ** ನಿಮಿಚಕ್ರವರ್ತಿಯು **ತಸ್ಯ** ನಿಮಿಚಕ್ರವರ್ತಿಗೆ **ಕ್ಷೇಮಕಃ** ಕ್ಷೇಮಕನೆಂಬ **ನೃಪಃ** ರಾಜನು ಮಗನಾಗುವನು. ॥೪೪॥

**ಬ್ರಹ್ಮಕ್ಷತ್ರಸ್ಯ ವೈ ಯೋನಿರ್ವಂಶೋ ದೇವರ್ಷಿಸತ್ಕೃತಃ ।**
**ಕ್ಷೇಮಕಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ॥೪೫॥**

**ಬ್ರಹ್ಮಕ್ಷತ್ರಸ್ಯ** ಬ್ರಾಹ್ಮಣಕ್ಷತ್ರಿಯರಿಗೆ **ಯೋನಿಃ** ರಕ್ಷಕನಾದ **ದೇವರ್ಷಿಸತ್ಕೃತಃ** ದೇವತೆಗಳಿಂದ ಋಷಿಗಳಿಂದ ಪೂಜಿತನಾದ ಅಥವಾ ದೇವರ್ಷಿಗಳು ಯಾರಿಂದ ಪೂಜಿಸಲ್ಪಟ್ಟಿರುವರೋ ಆ **ವಂಶಃ** ಚಂದ್ರವಂಶವು **ಕ್ಷೇಮಕಂ ಪ್ರಾಪ್ಯ** ಕ್ಷೇಮಕನ ಪರ್ಯಂತ ಸಾಗಿ ಬಂದು **ಸಂಸ್ಥಾ** ಅವಸಾನವನ್ನು **ಕಲೌ** ಕಲಿಯುಗದಲ್ಲಿ **ಪ್ರಾಪ್ಸ್ಯತಿ** ಹೊಂದುತ್ತದೆ. ॥೪೫॥

**ತಾತ್ಪರ್ಯ-** ರಾಜನೇ! ಬ್ರಾಹ್ಮಣ, ಕ್ಷತ್ರಿಯ ಕುಲಗಳೆರಡಕ್ಕೂ ಉತ್ಪತ್ತಿ ಕಾರಣನಾಗಿ ಸಮಸ್ತ ದೇವತೆಗಳಿಂದಲೂ, ಋಷಿಗಳಿಂದಲೂ, ಆದರಿಸಲ್ಪಟ್ಟ ಈ ಚಂದ್ರವಂಶಕ್ಕೆ ಕ್ಷೇಮಕನೇ ಕೊನೆಯವನು. ಕಲಿಯುಗದಲ್ಲಿ ಚಂದ್ರವಂಶವು ಈತನೊಡನೆ ನಾಶವಾಗುವವು.

ಈ ವಂಶದ ಶ್ರವಣದಿಂದ ಲಭ್ಯವಾದ ಫಲ ಹೇಳುವರು.

**ಪಾಪಾನಿ ಕೀರ್ತನಾದೇಷಾಂ ವಿಲಯಂ ಯಾಂತಿ ಕೃತ್ಸ್ನಶಃ ।**

**ಏಷಾಂ** ಮೇಲೆ ಹೇಳಿದ ರಾಜರ **ಕೀರ್ತನಾತ್** ಚರಿತ್ರೆಯನ್ನು ಹೇಳಿ ಕೇಳುವದ-ರಿಂದ **ಕೃತ್ಸ್ನಶಃ** ಎಲ್ಲ ಪಾಪಾನಿ ಪಾಪಗಳು, **ವಿಲಯಂ** ನಾಶವನ್ನು **ಯಾಂತಿ** ಹೊಂದುತ್ತವೆ.

**ತಾತ್ಪರ್ಯ-** ದುರ್ದಮನ, ಪ್ರಹೀತರ, ದಂಡಪಾಣಿ, ನಿಮಿ, ಕ್ಷೇಮಕರ ಎಂಬುವರು ಜನಿಸುವರು. ಈ ರಾಜರ ಕಥೆಗಳನ್ನು ಕೇಳುವುದರಿಂದ ಸಮಸ್ತಪಾಪಗಳು ನಷ್ಟವಾಗುತ್ತವೆ.

**ಅಥ ಮಾಗಧರಾಜಾನೋ ಭಾವಿನೋ ಯೇ ವದಾಮಿ ತೇ ॥೪೬॥**

**ಅಥ** ಈಗ **ಭಾವಿನಃ** ಮುಂದೆ ಬರತಕ್ಕ **ಮಾಗಧಾಃ ಯೇ** ಯಾವ ಮಗಧ ದೇಶದ **ರಾಜಾನಃ** ರಾಜರುಗಳೋ **ತೇ** ಅವರನ್ನು **ತೇ** ನಿನಗೆ **ವದಾಮಿ** ಹೇಳುವೆನು. ॥೪೬॥

**ತಾತ್ಪರ್ಯ-** ಇನ್ನು ಮುಂದೆ ಹುಟ್ಟುವ ಮಾಗಧವಂಶದ ರಾಜರನ್ನು ತಿಳಿಸುವೆನು ಕೇಳು. ಜರಾಸಂಧನ ಮಗ ಸಹದೇವ, ಸಹದೇವನ ಮಗ ಸೋಮಾಪಿ. ಈತನಿಗೆ ಸುತಶ್ರವ. ಅವನಿಗೆ ಅಯುತಾಯು. ಆತನಿಗೆ ನಿರಮಿತ್ರ ಎಂಬ ಮಗನಾದನು.

ಹಿಂದೆ ಕುರುವಿಗೆ ನಾಲ್ಕು ಜನ ಮಕ್ಕಳು ಅವರಲ್ಲಿ ಜಹ್ನುವಿನ ವಂಶವನ್ನು ಕ್ಷೇಮಕನ ವರೆಗೆ ಹೇಳಿ ಕುರುಪುತ್ರ ಸುಧನುವಿನ ವಂಶವನ್ನು ಹಿಂದೆ ಹೇಳಿ ಮಿಕ್ಕಿದ್ದನ್ನು ಹೇಳುವರು.

**ಭವಿತಾ ಸಹದೇವಸ್ಯ ಸೋಮಾಪಿರ್ಯಚ್ಛ್ರುತಶ್ರವಾಃ ।**
**ತತೋಽಯುತಾಯುಸ್ತಸ್ಯಾಪಿ ನಿರಮಿತ್ರೋಽಥ ತತ್ಸುತಃ ॥೪೭॥**

ಕುರುಪುತ್ರ ಸುಧನು ಸುಧನುಪುತ್ರ ಬೃಹದ್ರಥ ಈತನ ಮಗನ ಸಹದೇವ, **ಸಹದೇವಸ್ಯ** ಸಹದೇವನಿಗೆ **ಸೋಮಾಪಿಃ** ಸೋಮಾಪಿಯು **ಯತ್** ಯಾವ ಸೋಮಾಪಿಯಿಂದ **ಶ್ರುತಶ್ರವಾಃ** ಶ್ರುತಶ್ರವನು **ತತಃ** ಶ್ರುತಶ್ರವಸನಿಂದಾ **ಅಯುತಾಯುಃ** ಅಯುತಾಯುವು **ತಸ್ಯ** ಅಯುತಾಯವಿಗೆ **ನಿರಮಿತ್ರಃ** ನಿರಮಿತ್ರನು **ಅಥ** ನಂತರ **ತತ್ಸುತಃ** ನಿರಮಿತ್ರನ ಮಗನು. ॥೪೭॥

**ಸುನಕ್ಷತ್ರಃ ಸುನಕ್ಷತ್ರಾದ್ ಬೃಹತ್ಸೇನೋಽಥ ಕರ್ಮಜಿತ್ ।**
**ತತಃ ಶ್ರುತಂಜಯೋ ವಿಪ್ರಃ ಶುಚಿಸ್ತಸ್ಯ ಭವಿಷ್ಯತಿ ॥೪೮॥**

**ಸುನಕ್ಷತ್ರಃ** ಸುನಕ್ಷತ್ರನು **ಸುನಕ್ಷತ್ರಾತ್** ಸುನಕ್ಷತ್ರನಿಂದ **ಬೃಹತ್ಸೇನಃ** ಬೃಹತ್ಸೇನನು. **ಅಥ** ಬೃಹತ್ಸೇನನಿಂದ **ಕರ್ಮಜಿತ್** ಕರ್ಮಜಿತನು **ತತಃ** ಕರ್ಮಜಿತನಿಂದ **ಶ್ರುತಂಜಯಃ** ಶ್ರುತಂಜಯನು **ತತಃ** ಶ್ರುತಂಜಯನಿಂದ **ವಿಪ್ರಃ** ವಿಪ್ರನೆಂಬುವನು **ತಸ್ಯ** ವಿಪ್ರನಿಗೆ **ಶುಚಿಃ** ಶುಚಿಯು **ಭವಿಷ್ಯತಿ** ಆಗುವನು. ॥೪೮॥

**ತಾತ್ಪರ್ಯ-** ನಂತರ ಸುನಕ್ಷತ್ರ, ಸುನಕ್ಷತ್ರನಿಂದ ಬೃಹತ್ಸೇನ, ಈತನಿಂದ ಕರ್ಮಜಿತ್, ಇತನಿಂದ ಶ್ರುತಂಜಯ, ಶ್ರುತಂಜಯನಿಂದ ವಿಪ್ರ, ವಿಪ್ರನಿಗೆ ಶುಚಿ ಎಂಬ ಮಗನು ಜನಿಸುತ್ತಾರೆ.

**ಕ್ಷೇಮೋಽಥ ಸುವ್ರತಸ್ತಸ್ಮಾದ್ಧರ್ಮಸತ್ರಃ ಶ್ರಮಸ್ತತಃ ।**
**ದೃಢಸೇನೋಽಥ ಸುಮತಿಃ ಸುಬಲೋ ಜನಿತಾ ತತಃ ॥೪೯॥**

**ಅಥ** ಶುಚಿಯ ನಂತರ, **ಕ್ಷೇಮಃ** ಕ್ಷೇಮನು, **ತಸ್ಮಾತ್** ಕ್ಷೇಮನಿಂದ **ಸುವ್ರತಃ** ಸುವ್ರತನು **ತಸ್ಮಾತ್** ಸುವ್ರತನಿಂದ **ಧರ್ಮಸತ್ರಃ** ಧರ್ಮಸತ್ರನು **ತತಃ** ಧರ್ಮಸತ್ರನಿಂದ **ಶ್ರಮಃ** ಶ್ರಮನು **ಅಥ** ಶ್ರಮನಿಂದ **ದೃಢಸೇನಃ** ದೃಢಸೇನನು **ಅಥ** ದೃಢಸೇನನಿಂದ **ಸುಮತಿಃ** ಸುಮತಿಯು **ತತಃ** ಸುಮತಿಯಿಂದ **ಸುಬಲಃ** ಸುಬಲನು **ಜನಿತಾ** ಆಗುವನು. ।।೪೯।।

**ತಾತ್ಪರ್ಯ-** ಕ್ಷೇಮ, ಸುವ್ರತ, ಧರ್ಮಸತ್ರ, ಶ್ರಮ, ಧೃಢಸೇನ, ಸುಮತಿ, ಸುಬಲರು ಜನಿಸುತ್ತಾರೆ.

**ಸುನೀಥಃ ಸತ್ಯಜಿದಥ ವಿಶ್ವಜಿದ್ಯದ್ರಿಪುಂಜಯಃ ।**
**ಬಾರ್ಹದ್ರಥಾಶ್ಚ ಭೂಪಾಲಾ ಭಾವ್ಯಾಃ ಸಾಹಸ್ರವತ್ಸರಮ್ ।।೫೦।।**

**ಅಥ** ಸುಬಲನಿಂದ **ಸುನೀಥಃ** ಸುನೀಥನು **ಅಥ** ಸುನೀಥನಿಂದ **ಸತ್ಯಜಿತ್** ಸತ್ಯಜಿತನು **ಅಥ** ಸತ್ಯಜಿತನಿಂದ **ವಿಶ್ವಜಿತ್** ವಿಶ್ವಜಿತನು **ಯತ್** ಯಾವಾತನಿಂದ **ರಿಪುಂಜಯಃ** ರಿಪುಂಜಯನು. ಈ ರೀತಿಯಾಗಿ **ಬಾರ್ಹದ್ರಥಾಃ** ಬೃಹದ್ರಥನ ವಂಶಜರಾದ **ಭೂಪಾಲಾಃ** ರಾಜರು **ಸಾಹಸ್ರವತ್ಸರಂ** ಸಾವಿರ ವರ್ಷ ಪರ್ಯಂತ **ಭಾವ್ಯಾಃ** ಆಗತಕ್ಕವರು ನಂತರ ಆಗ ತಕ್ಕವರನ್ನು ದ್ವಾದಶಸ್ಕಂಧದಲ್ಲಿ ಹೇಳುವರು.

**ತಾತ್ಪರ್ಯ-** ನಂತರ ಸುನೀಥ, ಸತ್ರಜಿತ್, ವಿಶ್ವಜಿತ್, ರಿಪುಂಜಯರು ಹುಟ್ಟುವರು. ಇವರೆಲ್ಲರೂ ಬೃಹದ್ರಥ ಸಂತತಿಯವರು ಒಂದು ಸಾವಿರ ವರ್ಷದವರೆಗೆ ಆಗುವವರು. ಮಿಕ್ಕಾದವರನ್ನು (ನಂತರ ಆಗುವವರನ್ನು) ದ್ವಾದಶ ಸ್ಕಂಧದಲ್ಲಿ ಹೇಳುವರು.

**।। ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಏಕೋನವಿಂಶೋಽಧ್ಯಾಯಃ ।।**

★★★

## ಅಥ ವಿಂಶೋಧ್ಯಾಯಃ

ಇಲ್ಲಿಯವರೆಗೆ ಯಯಾತಿಯ ಮಕ್ಕಳಲ್ಲಿ ಐದನೇಯವನಾದ ಪುರುವಿನ ವಂಶವನ್ನು ನಿರೂಪಿಸಿದರು. ಈಗ ನಾಲ್ಕನೇಯವನಾದ ಅನುವಿನ ವಂಶವನ್ನು ಪ್ರಾರಂಭಿಸುವರು.

**ಶ್ರೀಶುಕ ಉವಾಚ–**

**ಅನೋಃ ಸಭಾನರಶ್ಚಕ್ಷುಃ ಪರೇಕ್ಷುಶ್ಚ ತ್ರಯಃ ಸುತಾಃ ।**
**ಸಭಾನರಾತ್ಕಾಲನರಃ ಸಂಜಯಸ್ತತ್ಸುತಸ್ತತಃ ॥೧॥**

**ಜನಮೇಜಯಸ್ತಸ್ಯ ಪುತ್ರೋ ಮಹಾಶೀಲೋ ಮಹಾಮನಾಃ ।**
**ಉಶೀನರಸ್ತಿತಿಕ್ಷುಶ್ಚ ಮಹಾಮನಸ ಆತ್ಮಜೌ ॥೨॥**

**ಅನೋಃ** ಅನುವಿಗೆ **ಸಭಾನರಃ** ಸಭಾನರನು **ಚ** ಮತ್ತು **ಚಕ್ಷುಃ** ಚಕ್ಷುವು **ಚ** ಮತ್ತು **ಪರೇಕ್ಷುಃ** ಪರೇಕ್ಷುವು ಹೀಗೆ **ತ್ರಯಃ** ಮೂರು ಜನ **ಸುತಾಃ** ಮಕ್ಕಳು, **ಸಭಾನರಾತ್** ಸಭಾನರನಿಂದ **ಕಾಲನರಃ** ಕಾಲನರನು **ತತ್ಸುತಃ** ಕಾಲನರನ ಪುತ್ರನು **ಸಂಜಯಃ** ಸಂಜಯನು **ತತಃ** ಸಂಜಯನಿಂದ **ಜನಮೇಜಯಃ** ಜನಮೇಜಯನು **ತಸ್ಯ** ಜನಮೇಜಯನಿಗೆ **ಮಹಾಶೀಲಃ** ಮಹಾಶೀಲನು **ಪುತ್ರಃ** ಮಗನು, **ತತ್ಪುತ್ರಃ** ಮಹಾಶೀಲನ ಮಗನು **ಮಹಾಮನಾಃ** ಮಹಾಮನಸನು **ಉಶೀನರಃ** ಉಶೀನರನು **ಚ** ಮತ್ತು **ತಿತಿಕ್ಷುಃ** ತಿತಿಕ್ಷು ಇವರಿಬ್ಬರು **ಮಹಾಮನಸಃ** ಮಹಾಮನಸನ **ಆತ್ಮಜೌ** ಮಕ್ಕಳು. ॥೧-೨॥

**ತಾತ್ಪರ್ಯ–** ರಾಜನೇ! ಯಯಾತಿಯ ಐದು ಮಂದಿ ಮಕ್ಕಳಲ್ಲಿ ಐದನೆಯವನಾದ ಪೂರುವಿನ ಸಂತತಿಯನ್ನು ಹೇಳಿದೆನಷ್ಟೇ. ಇನ್ನು ನಾಲ್ಕನೆಯವನಾದ ಅನುವಿನ ವಂಶವನ್ನು ವಿವರಿಸುವೆನು ಕೇಳು. ಈ ಅನುವಿಗೆ ಸಭಾನರ, ಚಕ್ಷು, ಪರೇಕ್ಷು ಎಂದು ಮೂರು ಜನ ಮಕ್ಕಳು. ಸಭಾನರನಿಂದ ಕಾಲನರನು, ನಂತರ ಸಂಜಯನು, ಅವನಿಗೆ ಜನಮೇಜಯ ಇವನಿಂದ ಮಹಾಶೀಲ, ಮಹಾಮನಸ್ಸು, ಮಹಾಮನಸ್ಸಿಗೆ ಉಶೀನರ, ತಿತಿಕ್ಷು ಎಂದು ಈರ್ವರು ಕುವರರು. ॥

**ಶಿಬಿರ್ವರ್ನಃ ಕೃಮಿರ್ದಕ್ಷಶ್ಚತ್ವಾರೋಶೀನರಾತ್ಮಜಾಃ ।**
**ವೃಷದರ್ಭಃ ಸುವೀರಶ್ಚ ಮದ್ರಃ ಕೈಕಯ ಆತ್ಮಜಾಃ ॥೩॥**

**ಶಿಬೇಶ್ಚತ್ವಾರ ಏವಾಸಂಸ್ತಿತಿಕ್ಷೋಶ್ಚ ಪೃಷದ್ರಥಃ ।**
**ತತೋ ಹೇಮೋಽಥ ಸುತಪಾ ಬಲಿಃ ಸುತಪಸೋಽಭವತ್ ॥೪॥**

**ಶಿಬಿಃ, ವೇನಃ, ಕೃಮಿಃ, ದಕ್ಷಃ** ಇತಿ ಹೀಗೆ **ಚತ್ವಾರಃ** ನಾಲ್ಕು ಜನರು **ಉಶೀನರಾತ್ಮಜಾಃ** ಉಶೀನರರನ ಮಕ್ಕಳು. **ವೃಷದರ್ಭಃ, ಸುವೀರಃ ಮದ್ರಃ , ಕೈಕೇಯಃ ಇತಿ** ಹೀಗೆ **ಶಿಬೇಃ** ಉಶೀನರರನ ಹಿರಿಯ ಮಗನಾದ **ಶಿಬೇಃ ಆತ್ಮಜಾಃ** ಶಿಬಿಯ ಮಕ್ಕಳು **ಚತ್ವಾರಃ ಏವ** ನಾಲ್ಕು ಜನರೇ **ಆಸನ್** ಇದ್ದರು. **ತಿತಿಕ್ಷೋಃ** ಉಶೀನರರನ ತಮ್ಮನಾದ ತಿತಿಕ್ಷುವಿಗೆ **ಪೃಷದ್ರಥಃ** ಪೃಷದ್ರಥನು **ತತಃ** ಪೃಷದ್ರಥನಿಂದ **ಹೇಮಃ** ಹೇಮನು **ಅಥ** ನಂತರ **ಸುತಪಾಃ** ಸುತಪನು **ಸುತಪಸಃ** ಸುತಪನಿಂದ **ಬಲಿಃ** ಬಲಿಯು **ಅಭವತ್** ಜನಿಸಿದನು.

**ತಾತ್ಪರ್ಯ-** ಉಶೀನರರನಿಗೆ ಶಿಬಿ, ವೇನ, ಕೃಮಿ, ದಕ್ಷರೆಂಬ ನಾಲ್ಕು ಜನ ಪುತ್ರರು. ಇವರಲ್ಲಿ ಶಿಬಿಗೆ ವೃಷದರ್ಭ, ಸುವೀರ, ಮದ್ರ , ಕೈಕೇಯರೆಂಬ ನಾಲ್ಕು ಮಂದಿ ಮಕ್ಕಳು ಉಶೀನರರನ ತಮ್ಮನಾದ ತಿತಿಕ್ಷುವಿಗೆ ಪೃಷದ್ರಥನೆಂಬುವನು, ಇವನಿಗೆ ಹೇಮನು, ನಂತರ ಸುತಪನು, ಇವನಿಂದ ಬಲಿಯು ಜನಿಸಿದನು.

**ಅಂಗವಂಗಕಲಿಂಗಾದ್ಯಾಃ ಸುಹ್ಮಪುಂಡ್ರಾಂಧ್ರಸಂಜ್ಞಿತಾಃ ।**
**ಜಜ್ಞಿರೇ ದೀರ್ಘತಪಸೋ ಬಲೇಃ ಕ್ಷೇತ್ರೇ ಮಹೀಕ್ಷಿತಃ ॥೫॥**

**ಬಲೇಃ** ಬಲಿಯ **ಕ್ಷೇತ್ರೇ** ಹೆಂಡತಿಯಲ್ಲಿ **ದೀರ್ಘತಪಸಃ** ಮಮತಾಪುತ್ರನಾದ ದೀರ್ಘತಪಸನೆಂಬ ಋಷಿಯಿಂದ **ಅಂಗವಂಗಕಲಿಂಗಾದ್ಯಾಃ** ಅಂಗ, ವಂಗ, ಕಲಿಂಗರೇ ಮೊದಲಾದ (ಪ್ರಧಾನರಾದ) **ಸುಹ್ಮಪುಂಡ್ರಾಂಧ್ರಸಂಜ್ಞಿತಾಃ** ಸುಹ್ಮಪುಂಡ್ರ ಆಂಧ್ರರೆಂಬ ಹೆಸರಿನ **ಮಹೀಕ್ಷಿತಃ** ರಾಜರು **ಜಜ್ಞಿರೇ** ಜನಿಸಿದರು. ॥೫॥

**ತಾತ್ಪರ್ಯ-** ಬಲಿಯ ಅಪ್ಪಣೆಯಿಂದ ಅವನ ಪತ್ನಿಯಲ್ಲಿ ಮಮತೆಯ ಮಗನಾದ ದೀರ್ಘತಮಸನೆಂಬ ಋಷಿಯಿಂದ ಅಂಗ, ವಂಗ, ಕಲಿಂಗ, ಸುಹ್ಮ, ಪುಂಡ್ರ , ಆಂಧ್ರರೆಂಬ (ರಾಜರು) ಕುಮಾರರು ಹುಟ್ಟಿದರು.

**ಚಕ್ರುಃ ಸ್ವನಾಮ್ನಾ ವಿಷಯಾನ್ ಷಡಿಮಾನ್ ಪ್ರಾಚ್ಯಕಾನಿಹ ।**
**ಖನಪಾನೋಽಂಗತೋ ಜಜ್ಞೇ ತಸ್ಮಾದ್ದಿವಿರಥಸ್ತತಃ ॥೬॥**

**ಸುತೋ ಧರ್ಮರಥೋ ಯಸ್ಯ ಜಜ್ಞೇ ಮಿತ್ರರಥೋಽಪ್ರಜಃ ।**
**ರೋಮಪಾದ ಇತಿ ಖ್ಯಾತಸ್ತಸ್ಮೈ ದಶರಥಃ ಸಖಾ ॥೭॥**

**(ತೇ ಅಂಗಾದ್ಯಾಃ)** ಆ ಅಂಗ ಮೊದಲಾದವರು **ಷಟ್** ಆರು ರಾಜರುಗಳು **ಇಹ** ಭೂಮಿಯಲ್ಲಿ **ಸ್ವನಾಮ್ನಾ** ತಮ್ಮ ತಮ್ಮ ಹೆಸರುಗಳಿಂದ **ಪ್ರಾಚ್ಯಕಾನ್ ಇಮಾನ್** ಪೂರ್ವಾದಿ ದಿಕ್ಕುಗಳಲ್ಲಿರುವ **ವಿಷಯಾನ್** ದೇಶಗಳನ್ನು **ಚಕ್ರುಃ** ನಿರ್ಮಾಣ ಮಾಡಿದರು. ಪ್ರಸಿದ್ಧ ಮಾಡಿದರು. **ಅಂಗತಃ** ಅಂಗರಾಜನಿಂದ **ಖನಪಾನಃ** ಖನಪಾನನು, **ಜಜ್ಞೇ** ಹುಟ್ಟಿದನು. **ತಸ್ಮಾತ್** ಆ ಖನಪಾನನಿಂದ

**ದಿವಿರಥಃ** ದಿವಿರಥನು **ತತಃ** ದಿವಿರಥನಿಂದ **ಧರ್ಮರಥಃ** ಧರ್ಮರಥನೆಂಬ **ಸುತಃ** ಮಗನು **ಅಪ್ರಜಃ** ಗಂಡು ಸಂತಾನವಿಲ್ಲದವನು. **ಸಃ** ಧರ್ಮರಥನು **ಮಿತ್ರರಥಃ** ಮಿತ್ರರಥನೆಂದು ರೋಮಪಾದನಿಗೆ **ಸಖಾ** ಗೆಳೆಯನಾದ **ದಶರಥಃ** ರಾಮನ ತಂದೆಯಾದ ದಶರಥನು. ||೬-೭||

**ತಾತ್ಪರ್ಯ-** ಈ ಆರು ಜನರು ತಮ್ಮ ತಮ್ಮ ಹೆಸರಿನಿಂದ ಆರು ದೊಡ್ಡ ರಾಜ್ಯಗಳನ್ನು ನಿರ್ಮಿಸಿದರು. ಇವರಲ್ಲಿ ಅಂಗನಿಂದ ಪುತ್ರಪೌತ್ರಕ್ರಮದಿಂದ ಖನಪಾನ, ದಿವಿರಥ, ಧರ್ಮರಥ ಮಿತ್ರರಥರು ಜನಿಸಿದರು. ಮಿತ್ರರಥನಿಗೆ (ಗಂಡು) ಸಂತಾನವಿರಲಿಲ್ಲ. ಇವನಿಗೆ ರೋಮಪಾದನೆಂದೂ ಹೆಸರು. ಈತನು ಶ್ರೀರಾಮನ ತಂದೆ ದಶರಥನ ಪ್ರಿಯಮಿತ್ರನಾಗಿದ್ದನು.

**ಶಾಂತಾಂ ಸ್ವಕನ್ಯಾಂ ಪ್ರಾಯಚ್ಛದೃಷ್ಯಶೃಂಗ ಉವಾಹ ತಾಮ್ ।**
**ದೇವೇಽವರ್ಷತಿ ಯಂ ರಾಮಾ ಆನಿನ್ಯುರ್ಹರಿಣೀಸುತಮ್ ||೮||**

**ಸ್ವಕನ್ಯಾಂ** ತನ್ನ ಮಗಳಾದ **ಶಾಂತಾಂ** ಶಾಂತಾ ಎಂಬುವಳನ್ನು **ಪ್ರಾಯಚ್ಛತ್** ಕೊಟ್ಟನು. **ತಾಂ** ಆ ಶಾಂತಾಳನ್ನು **ಋಷ್ಯಶೃಂಗಃ** ಋಷ್ಯಶೃಂಗರು **ಉವಾಹ** ಮದುವೆ ಮಾಡಿಕೊಂಡರು. **ದೇವೇ** ದೇವೇಂದ್ರನು **ಅವರ್ಷತಿ ಸತಿ** ಹನ್ನೆರಡು ವರ್ಷ ಮಳೆಗರೆಯದಿರಲು **ರಾಮಾಃ** ಸುಂದರಿಯರು **ಯಂ** ಯಾವ **ಹರಿಣೀಸುತಂ** ಋಷ್ಯಶೃಂಗರನ್ನು **ಆನಿನ್ಯುಃ** ಕರೆದು ತಂದರು. ಕರೆದುತಂದ ಉಪಾಯವನ್ನು ಹೇಳುವರು. (**ಋಷ್ಯಸ್ಯ** ಸಾರಂಗದ ಶೃಂಗದಂತೆ ಶೃಂಗಂ ಯಸ್ಯ ಸಃ ಋಷ್ಯಶೃಂಗಃ)

**ತಾತ್ಪರ್ಯ-** ದಶರಥನು ತನ್ನ ಮಗಳಾದ ಶಾಂತಾ ಎಂಬುವಳನ್ನು ರೋಮಪಾದನಿಗೆ ದತ್ತು ಕೊಟ್ಟನು. ಈ ಶಾಂತೆಯನ್ನು ಋಷ್ಯಶೃಂಗನು ಮದುವೆಯಾದನು. ಋಷ್ಯಶೃಂಗನು ವಿಭಾಂಡಕನೆಂಬ ಋಷಿಗೆ ಊರ್ವಶಿ ದರ್ಶನದಿಂದ ಸ್ಖಲಿತವಾದ ವೀರ್ಯವನ್ನು ಹೆಣ್ಣು ಜಿಂಕೆ ಕುಡಿದು ಅದರಿಂದ ಜನಿಸಿದನು. (ಭಾರತ ವನಪರ್ವ ೧೧೧). ಒಮ್ಮೆ ರೋಮಪಾದನ ದೇಶದಲ್ಲಿ ಹನ್ನೆರಡು ವರ್ಷ ಮಳೆಯಾಗದಿರಲು ಕ್ಷಾಮ ಉಂಟಾಯಿತು. ಆಗ ಋಷ್ಯಶೃಂಗನನ್ನು ಪಟ್ಟಣಕ್ಕೆ ಕರೆತಂದರೆ ಸುವೃಷ್ಟಿಯಾಗುವದೆಂದು ಕೇಳಿ ಅವನನ್ನು ಮೋಹಗೊಳಿಸಿ ಕರೆತರುವುದಕ್ಕಾಗಿ ಕೆಲವು ಸ್ತ್ರೀಯರನ್ನು ಕಳಿಸಿದನು.

**ನಾಟ್ಯ (ವಾದ್ಯ) ಸಂಗೀತವಾದಿತ್ರೈರ್ವಿಭ್ರಮಾಲಿಂಗನಾರ್ಹಣೈಃ ।**
**ಸ ತು ರಾಜ್ಞೋಽನಪತ್ಯಸ್ಯ ನಿರೂಪ್ಯೇಷ್ಟಿಂ ಮರುತ್ವತಃ ||೯||**

**ನಾಟ್ಯ** ನರ್ತನ, **ವಾದ್ಯ** ಸಪ್ಪಳ ಮಾಡುವ ತಬಲ ಮೃದಂಗ ವಗೈರೆ (ಮುಂತಾದವು) **ಸಂಗೀತ** ಗಾನ, **ವಾದಿತ್ರೈಃ** ಕೊಳಲು ಮೊದಲಾದವುಗಳಿಂದ

**ವಿಭ್ರಮ** ಅಂಗವಿಲಾಸ ಆಲಿಂಗನ **ಅರ್ಹಣೈಃ** ಪುಷ್ಪ ಮೊದಲಾದವುಗಳಿಂದ **ಆನಿನ್ಯುಃ** ಕರೆ ತಂದರು. **ಅನಪತ್ಯಸ್ಯ** ಮಕ್ಕಳಿಲ್ಲದ **ರಾಜ್ಞಃ** ರೋಮಪಾದನಿಗೆ **ಮರುತ್ವತಃ** ಆ ಹೆಸರಿನ **ಇಷ್ಟಿಂ** ಯಜ್ಞವನ್ನು **ನಿರೂಪ್ಯ** ಮಾಡಿಸಿ **ಪ್ರಜಾಂ** ಮಕ್ಕಳನ್ನು **ಅದಾತ್** ಕೊಟ್ಟನು. **ಸಃ ತು** ಆ ಋಷ್ಯಶೃಂಗರಾದರೂ,

**ತಾತ್ಪರ್ಯ-** ಅವರು ತಮ್ಮ ಹಾವ ಭಾವ ವಿಲಾಸಗಳಿಂದ ಆಲಿಂಗನಾದಿಗಳಿಂದ ಅವನನ್ನು ವಶಮಾಡಿಕೊಂಡು ಅರಮನೆಗೆ ಕರೆತಂದರು. ಸಮೃದ್ಧ ಮಳೆಯಾಗಿ ಸುಭಿಕ್ಷವಾಯಿತು. ಸಂತುಷ್ಟನಾದ ರೋಮಪಾದನು ಶಾಂತಾಳನ್ನು ಕೊಟ್ಟು ವಿವಾಹ ಮಾಡಿದನು. ನಂತರ ಋಷ್ಯಶೃಂಗನು ಮಾವನಾದ ರೋಮಪಾದನಿಂದ ಪುತ್ರಕಾಮೇಷ್ಟಿಯಾಗವನ್ನು ಮಾಡಿಸಿ (ಮರುದ್ದೇವತಾಕ) ಅವನಿಗೆ ಸಂತಾನ-ವಾಗುವಂತೆ ಮಾಡಿದನು. ದಶರಥನಿಗೂ ಈ ಋಷ್ಯಶೃಂಗನೇ ಯಜ್ಞ ಮಾಡಿಸಿ ಸಂತಾನವಾಗುವಂತೆ ಮಾಡಿದನು.

**ಪ್ರಜಾಮದಾದ್ದಶರಥೋ ಯೇನ ಲೇಭೇಽಪ್ರಜಃ ಪ್ರಜಾಃ ।**
**ಚತುರಂಗೋ ರೋಮಪಾದಾತ್ಪೃಥುಲಾಕ್ಷಸ್ತು ತತ್ಸುತಃ ॥೧೦॥**

**ರೋಮಪಾದಾತ್** ರೋಮಪಾದನಿಂದ **ಚತುರಂಗಃ** ಚತುರಂಗನು **ತತ್ಸುತಃ** ಚತುರಂಗನ ಮಗನು **ಪೃಥುಲಾಕ್ಷಃ** ಪೃಥುಲಾಕ್ಷನು (**ಯೇನ** ಯಾವ ಋಷ್ಯಶೃಂಗನಿಂದ **ಅಪ್ರಜಾಃ** ಪ್ರಜಾರಹಿತನಾದ **ದಶರಥಃ** ದಶರಥನು **ಪ್ರಜಾಃ** ರಾಮನೇ ಮೊದಲಾದ ಪುತ್ರರನ್ನು **ಲೇಭೇ** ಹೊಂದಿದನು). ರೋಮಪಾದನು ಅನಾವೃಷ್ಟಿಯಿಂದ ಭಯಗೊಂಡಾಗ ಬ್ರಾಹ್ಮಣರು ವನದಲ್ಲಿರುವ ಋಷ್ಯಶೃಂಗರನ್ನು ಕರೆತಂದರೆ ವೃಷ್ಟಿ ಆಗುವದು ಎಂದು ಹೇಳಿದರು. ನಾನಾ ಪ್ರಯತ್ನದಿಂದ ಅವರನ್ನು ಕರೆತಂದನು. ಮಳೆಯಾಯಿತು ಸಂತೋಷಗೊಂಡ ರಾಜನು ತನ್ನ ಸಾಕು ಮಗಳು (ದಶರಥನ ಮಗಳು) ಶಾಂತಾಳನ್ನು ಕೊಟ್ಟು ವಿವಾಹ ಮಾಡಿದನು. ಈ ವಿಷಯ ಸಂಗ್ರಹರಾಮಾಯಾಣದಲ್ಲಿ ಇದೆ. **ಅನಾವೃಷ್ಟಿಭಯೋದ್ವಿಗ್ನೋ ವೃಷ್ಟಿಂ ಲಬ್ಧ್ವಾ ತತೋ ನೃಪ । ದಾಸ್ಯತ್ಯಯಂ ಮೌಲ್ಯಮಿವ ಶಾಂತಾನಾಮ್ನೀಂ ನಿಜಾತ್ಮಜಾಮ್** ॥

**ತಾತ್ಪರ್ಯ-** ರೋಮಪಾದನಿಗೆ ಇಷ್ಟಿಯ ಫಲ ರೂಪವಾಗಿ ಚತುರಂಗನೆಂಬ ಮಗನಾದನು. ಅವನ ಮಗನು ಪೃಥುಲಾಕ್ಷನು.

**ಬೃಹದ್ರಥೋ ಬೃಹತ್ಕರ್ಮಾ ಬೃಹದ್ಭಾನುಶ್ಚ ತತ್ಸುತಾಃ ।**
**ತತೋ ಬೃಹನ್ಮನಾಸ್ತಸ್ಮಾಜ್ಜಯದ್ರಥ ಉದಾಹೃತಃ ॥೧೧॥**

**ಬೃಹದ್ರಥಃ ಬೃಹತ್ಕರ್ಮಾ, ಬೃಹದ್ಭಾನುಃ**, ಈ ಮೂರು ಜನ, **ತತ್ಸುತಾಃ** ಪೃಥುಲಾಕ್ಷನ ಕುವರರು, **ತತಃ** ಹಿರಿಯನಾದ ಬೃಹದ್ರಥನಿಂದ **ಬೃಹನ್ಮನಾಃ**

ಬೃಹನ್ಮನಸನು, **ತಸ್ಮಾತ್** ಬೃಹನ್ಮನಸನಿಂದ, **ಜಯದ್ರಥಃ** ಜಯದ್ರಥನು **ಉದಾಹೃತಃ** ಹೇಳಲ್ಪಟ್ಟಿರುವವನು. ॥೧೧॥

**ತಾತ್ಪರ್ಯ-** ಈ ಪೃಥುಲಾಕ್ಷನಿಗೆ ಬೃಹದ್ರಥ, ಬೃಹತ್ಕರ್ಮ, ಬಹದ್ಭಾನುವೆಂಬ ಮೂರು ಮಕ್ಕಳಾದರು. ಇವರಲ್ಲಿ ಬೃಹದ್ರಥನಿಗೆ ಬೃಹನ್ಮನಸನು ಈತನಿಂದ ಜಯದ್ರಥನು ಮಗನಾಗಿ ಜನಿಸಿದನು.

**ವಿಜಯಸ್ತಸ್ಯ ಸಂಭೂತ್ಯಾಂ ತತೋ ಧೃತಿರಜಾಯತ ।**
**ತತೋ ಧೃತವ್ರತಸ್ತಸ್ಯ ಸತ್ಕರ್ಮಾಧಿರಥಸ್ತತಃ ॥೧೨॥**

**ತಸ್ಯ** ಜಯದ್ರಥನಿಗೆ **ವಿಜಯಃ** ವಿಜಯನು **ಸಂಭೂತ್ಯಾಂ** ಸಂಭೂತಿಯಲ್ಲಿ ಜನಿಸಿದನು. **ತತಃ** ವಿಜಯನಿಂದ **ಧೃತಿಃ** ಧೃತಿಯು **ಅಜಾಯತ** ಹುಟ್ಟಿದನು. **ತತಃ** ಧೃತಿಯಿಂದ **ಧೃತವ್ರತಃ** ಧೃತವ್ರತನು **ತಸ್ಯ** ಧೃತವ್ರತನಿಗೆ **ಸತ್ಕರ್ಮಾ** ಸತ್ಕರ್ಮಾ ಎಂಬುವನು **ತತಃ** ಸತ್ಕರ್ಮನಿಂದ **ಅಧಿರಥಃ** ಅಧಿರಥನು. ॥೧೨॥

**ತಾತ್ಪರ್ಯ-** ಜಯದ್ರಥನಿಗೆ ಸಂಭೂತಿಯೆಂಬುವಳಲ್ಲಿ ವಿಜಯನು, ವಿಜಯನಿಂದ ಧೃತಿಯು, ಧೃತಿಯಿಂದ ಧೃತವ್ರತನು ಈತನಿಂದ ಸತ್ಕರ್ಮನು, ಅವನಿಂದ ಅಧಿರಥನು ಜನಿಸಿದರು.

**ಯೋಽಸೌ ಗಂಗಾತಟೇ ಕ್ರೀಡನ್ ಮಂಜೂಷಾಂತರ್ಗತಂ ಶಿಶುಮ್ ।**
**ಕುಂತ್ಯಾಽಪವಿದ್ಧಂ ಕಾನೀನಮನಪತ್ಯೋಽಕರೋತ್ಸುತಮ್ ॥೧೩॥**

**ಅನಪತ್ಯಃ** ಮಕ್ಕಳಿಲ್ಲದ **ಯಃ ಅಸೌ** ಯಾವ ಈ ಅಧಿರಥನು, **ಗಂಗಾತಟೇ** ಗಂಗಾನದಿಯ ದಂಡೆಯಲ್ಲಿ **ಕ್ರೀಡನ್** ವಿಹರಿಸುವಾಗ, **ಕುಂತ್ಯಾ** ಕುತೀದೇವಿ-ಯಿಂದ **ಅಪವಿದ್ಧಂ** ಯಾರಿಗೂ ತಿಳಿಯದಂತೆ ಗಂಗೆಯಲ್ಲಿ ಬಿಡಲ್ಪಟ್ಟ **ಕಾನೀನಂ** ವಿವಾಹದಕ್ಕಿಂತ ಮುಂಚೆ ಸೂರ್ಯನಿಂದ ಕುಂತಿಯಲ್ಲಿ ಜನಿಸಿದ **ಮಂಜೂಷಾಂತ-ರ್ಗತಂ** ಪೆಟ್ಟಿಗೆಯಲ್ಲಿರುವ **ಶಿಶುಂ** ಮಗುವನ್ನು **ಸುತಂ** ಮಗನನ್ನಾಗಿ **ಅಕರೋತ್** ಮಾಡಿಕೊಂಡನು. ॥೧೩॥

**ತಾತ್ಪರ್ಯ-** ಅಧಿರಥನಿಗೆ ಸಂತಾನವಿರಲಿಲ್ಲ. ಆದರೆ ಇದೇ ಸಮಯಕ್ಕೆ ಸರಿಯಾಗಿ ಕುಂತಿದೇವಿಯು ತನ್ನ ಬಾಲ್ಯದಲ್ಲಿ ಸೂರ್ಯನ ಆರಾಧನೆಯಿಂದ ಮಗುವನ್ನು ಪಡೆದು ವಿವಾಹಕ್ಕೆ ಮೊದಲೇ ಮಗುವಾದ್ದರಿಂದ ಜನಾಪವಾದಕ್ಕೆ ಭಯಪಟ್ಟು ಯಾರಿಗೂ ತಿಳಿಯದಂತೆ ಪೆಟ್ಟಿಗೆಯಲ್ಲಿ ಶಿಶುವನ್ನು ವಸುವನ್ನು (ಧನ) ಇಟ್ಟು ಗಂಗೆಯಲ್ಲಿ ಬಿಟ್ಟಿದ್ದಳು. ಅದು ಪ್ರವಾಹದಲ್ಲಿ ತೇಲಿ ಬರುತ್ತಿರುವಾಗ ಅಲ್ಲಿಯೇ ಕ್ರೀಡಿಸುತ್ತಿರುವ ಅಧಿರಥನಿಗೆ ದೊರೆಯಿತು. ಆ ಶಿಶುವನ್ನು ಮಗನಂತೆ ಬೆಳೆಸಿದನು. ಇವನೇ ಕರ್ಣನು.

**ವೃಷಸೇನಃ ಸುತಸ್ತಸ್ಯ ಕರ್ಣಸ್ಯ ಜಗತೀಪತೇ ।**

**ಜಗತೀಪತೇ** ರಾಜನೇ! **ತಸ್ಯ ಕರ್ಣಸ್ಯ** ಆ ಅಧಿರಥನಿಂದ ಸಂರಕ್ಷಿತನಾದ ಕರ್ಣನಿಗೆ **ವೃಷಸೇನಃ** ವೃಷಸೇನನು **ಸುತಃ** ಮಗನು.

**ತಾತ್ಪರ್ಯ-** ಜಗತ್ಪತಿಯಾದ ಪರೀಕ್ಷಿತನೇ! ಈ ಕರ್ಣನಿಗೆ ವೃಷಸೇನ ಎಂಬ ಮಗನಾದನು.

ಇಲ್ಲಿಯವರೆಗೆ ಯಯಾತಿ ಮಗ ಅನುವಿನ ವಂಶಾವಳಿಯನ್ನು ಹೇಳಿ ಈಗ ದ್ರುಹ್ಯುವಿನ ವಂಶವನ್ನು ಹೇಳುವರು.

**ದ್ರುಹ್ಯೋಶ್ಚ ತನಯೋ ಬಭ್ರುಃ ಸೇತುಸ್ತಸ್ಯಾತ್ಮಜಸ್ತತಃ ॥೧೪॥**

**ದ್ರುಹ್ಯೋಃ** ದ್ರುಹ್ಯುವಿನ **ತನಯಃ** ಮಗನು **ಬಭ್ರುಃ** ಬಭ್ರುವು **ತಸ್ಯ** ಬಭ್ರುವಿನ **ಆತ್ಮಜಃ** ಮಗನು **ಸೇತುಃ** ಸೇತುವು **ತತಃ** ಸೇತುವಿನಿಂದ ॥೧೪॥

**ತಾತ್ಪರ್ಯ-** ರಾಜನೇ! ಯಯಾತಿಯ ಮೂರನೇ ಮಗ ದ್ರುಹ್ಯುವಿನ ವಂಶವನ್ನು ಹೇಳುವೆನು ಕೇಳು. ದ್ರುಹ್ಯುವಿಗೆ ಪುತ್ರ ಪರಂಪರೆಯಿಂದ ಬಭ್ರು-ಸೇತು ಎಂಬ ಮಕ್ಕಳಾದರು. ಆ ಸೇತುವಿನಿಂದ,

**ಆರಬ್ಧಸ್ತಸ್ಯ ಗಾಂಧಾರಸ್ತಸ್ಯ ಧರ್ಮಸ್ತತೋ ಧೃತಃ ।**
**ಧೃತಸ್ಯ ಕರ್ದಮಸ್ತಸ್ಮಾತ್ ಪ್ರಚೇತಾಃ ಪ್ರಾಚೇತಸಂ ಶತಮ್ ॥೧೫॥**

**ಆರಬ್ಧಃ** ಆರಬ್ಧನು **ತಸ್ಯ** ಆರಬ್ಧನಿಗೆ **ಗಾಂಧಾರಃ** ಗಾಂಧಾರನು **ತಸ್ಯ** ಗಾಂಧಾರನಿಗೆ **ಧರ್ಮಃ** ಧರ್ಮನು **ತತಃ** ಧರ್ಮನಿಂದ **ಧೃತಃ** ಧೃತನು **ಧೃತಸ್ಯ** ಧೃತನಿಗೆ **ಕರ್ದಮಃ** ಕರ್ದಮನು **ತಸ್ಮಾತ್** ಕರ್ದಮನಿಂದ **ಪ್ರಚೇತಾಃ** ಪ್ರಚೇತಸನು **ಪ್ರಾಚೇತಸಂ** ಪ್ರಚೇತಸನಿಂದ ಉತ್ಪನ್ನರಾದವರು **ಶತಂ** ನೂರು ಜನರು. ॥೧೫॥

**ತಾತ್ಪರ್ಯ-** (ಆ ಸೇತುವಿನಿಂದ) ಆರಬ್ಧ, ಗಾಂಧಾರ, ಧರ್ಮ, ಧೃತ, ಕರ್ದಮ, ಪ್ರಚೇತಸರೆಂಬುವರು ಜನಿಸಿದರು. ಪ್ರಚೇತಸನಿಗೆ ನೂರುಜನ ಮಕ್ಕಳು ಪ್ರಾಚೇತಸರೆಂದು ಪ್ರಸಿದ್ಧರು.

**ಮ್ಲೇಂಛಾಧಿಪತಯೋಽಭೂವನ್ ಉದೀಚೀಂ ದಿಶಮಾಶ್ರಿತಾಃ ।**

**ಉದೀಚೀಂ ದಿಶಂ** ಉತ್ತರ ದಿಕ್ಕನ್ನು **ಆಶ್ರಿತಾಃ** ಆಶ್ರಯಿಸಿದ ಇವರು **ಮ್ಲೇಂಛಾಧಿಪತಯಃ** ಮ್ಲೇಂಚ್ಛರ ದೊರೆಗಳು **ಅಭೂವನ್** ಆದರು.

**ತಾತ್ಪರ್ಯ-** ಇವರು ಉತ್ತರ ದಿಕ್ಕಿನಲ್ಲಿ ವಾಸಮಾಡಿ ಮ್ಲೇಂಛರಿಗೆ ಅಧಿಪತಿಗಳೆನಿಸಿಕೊಂಡರು.

ತುರ್ವಸು ವಂಶವನ್ನು ಹೇಳುವರು.

**ತುರ್ವಸೋಸ್ತು ಸುತೋ ವಹ್ನಿರ್ವಹ್ನೇರ್ಭಾಗೋಽಥ ಭಾನುಮಾನ್॥೧೬॥**

**ತುರ್ವಸೋಃ** ತುರ್ವಸುವಿಗೆ **ವಹ್ನಿಃ** ವಹ್ನಿಯು **ವಹ್ನೇಃ** ವಹ್ನಿಗೆ **ಭಾಗಃ** ಭಾಗನು **ಅಥ** ಭಾಗಾನಂತರ, **ಭಾನುಮಾನ್** ಭಾನುಮಂತನು. ॥೧೬॥

**ತಾತ್ಪರ್ಯ-** ಯಯಾತಿಯ ಎರಡನೆಯ ಮಗನಾದ ತುರ್ವಸುವಿನಿಂದ ಪುತ್ರ-ಪೌತ್ರಾನುಸಾರವಾಗಿ ವಹ್ನಿ, ಭಾಗ, ಭಾನುಮಂತ ಮಕ್ಕಳಾದರು.

**ನೃಭಾನುಸ್ತತ್ಸುತೋಽಸ್ಯಾಪಿ ಕರಂಧಮ ಉದಾರಧೀಃ ।**
**ಮರುತಸ್ತತ್ಸುತೋಽಪುತ್ರಃ ಪುತ್ರಂ ಪೌರವಮನ್ವಭೂತ್ ॥೧೭॥**

**ತತ್ಸುತಃ** ಭಾನುಮಂತನ ಮಗನು **ನೃಭಾನುಃ** ನೃಭಾನುವು, **ಅಸ್ಯ** ನೃಭಾನುವಿಗೆ **ಉದಾರಧೀಃ** ಉತ್ಕೃಷ್ಟಜ್ಞಾನವುಳ್ಳ **ಕರಂಧಮಃ** ಕರಂಧಮನು **ತತ್ಸುತಃ** ಕರಂಧಮನ ಪುತ್ರನು **ಮರುತಃ** ಮರುತನು, **ಅಪುತ್ರಃ** ಮಕ್ಕಳಿಲ್ಲದ್ದರಿಂದ **ಪೌರವಂ** ಪುರುವಂಶದಲ್ಲಿ ಉತ್ಪನ್ನನಾದ **ದುಷ್ಯಂತಂ** ದುಷ್ಯಂತನನ್ನು **ಪುತ್ರಂ** ಮಗನನ್ನಾಗಿ **ಅನ್ವಭೂತ್** ಪಾಲನೆಗಾಗಿ ಸ್ವೀಕರಿಸಿದನು. ॥೧೭॥

**ತಾತ್ಪರ್ಯ-** ನಂತರ ನೃಭಾನು, ಕರಂಧಮ, ಮರುತರೆಂಬುವರು ಜನಿಸಿದರು. ಈ ಮರುತನು ತನಗೆ ಸಂತಾನವಿಲ್ಲದುದರಿಂದ ಪೂರುವಿನ ಸಂತತಿಯಲ್ಲಿ ಹುಟ್ಟಿದ ದುಷ್ಯಂತನೆಂಬುವನನ್ನು ದತ್ತು ತೆಗೆದುಕೊಂಡನು.

**ದುಷ್ಯಂತಂ ಸ ಪುನರ್ಭೇಜೇ ಸ್ವಯಂ ಸಾಮ್ರಾಜ್ಯಕಾಮುಕಃ ।**

**ಸಃ** ದುಷ್ಯಂತನು, ಕೆಲವು ದಿನ ಮರುತನ ವಂಶದಲ್ಲಿ ಇದ್ದು **ಸಾಮ್ರಾಜ್ಯಕಾಮುಕಃ** ಹೊಸ ರಾಜ್ಯವನ್ನು ಅಪೇಕ್ಷಿಸಿ, **ಸ್ವಯಂ** ತಾನಾಗಿಯೇ **ದುಷ್ಯಂತಂ** ದುಷ್ಯಂತನನ್ನು **ಪುನಃ** ಮತ್ತೆ **ಭೇಜೇ** ಹೊಂದಿದನು. (ಈ ದತ್ತು ಹೋಗಿ ತಿರುಗಿ ಬಂದ ದುಷ್ಯಂತನು ಭರತನ ತಂದೆ ದುಷ್ಯಂತನಲ್ಲ. ಬೇರೆಯವನು ಎಂದು ಛಲಾರಿ ಪ್ರಕಾರ) ಸತ್ಯಧರ್ಮರ ಪ್ರಕಾರ ದತ್ತು ಹೋದವನು ದುಷ್ಯಂತನ ಪುತ್ರನೊಬ್ಬನು, **ಪುನಃ** ತನ್ನ ತಂದೆ ದುಷ್ಯಂತನನ್ನು ಹೊಂದಿದನು. ಈ ಪಕ್ಷದಲ್ಲಿ ಇಬ್ಬರು ದುಷ್ಯಂತರು ಬೇಕಿಲ್ಲ.

**ತಾತ್ಪರ್ಯ-** ಆದರೇನು ಈ ದುಷ್ಯಂತನು ರಾಜ್ಯದಾಸೆಯಿಂದ ಜನಕವಂಶಕ್ಕೇ ಸೇರಿಕೊಂಡನು. (ಈ ದುಷ್ಯಂತನು ಭರತನ ತಂದೆಯಲ್ಲ) ಕೆಲವರು ದತ್ತು ಬಂದವನೇ ಪುರುವಂಶಜನೊಬ್ಬನು. ಅವನು ತಂದೆಯಾದ ದುಷ್ಯಂತನನ್ನು ಸೇರಿದನು. ಹೀಗೂ ವ್ಯಾಖ್ಯಾನ ಮಾಡಿರುವರು.

(ಸ್ವಲ್ಪವಾದ್ದರಿಂದ) ಸೂಚೀಕಟಾಹನ್ಯಾಯದಿಂದ ದ್ರುಹ್ಯಾದಿಗಳ ವಂಶವನ್ನು ಹೇಳಿ ಬಹುಪುಣ್ಯಪ್ರದವಾದ ಬಹುಲವಾದ ಯಯಾತಿಯ ಜ್ಯೇಷ್ಠಪುತ್ರನಾದ ಯದುರಾಜನ ವಂಶವನ್ನು ಪ್ರಶಂಸಿಸುವರು.

**ಯಯಾತೇರ್ಜ್ಯೇಷ್ಠಪುತ್ರಸ್ಯ ಯದೋರ್ವಂಶಂ ನರರ್ಷಭ ॥೧೮॥**

**ವರ್ಣಯಾಮಿ ಮಹಾಪುಣ್ಯಂ ಸರ್ವಪಾಪಹರಂ ನೃಪ ।**
**ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪ್ಶೈರ್ವಿಮುಚ್ಯತೇ ॥೧೯॥**

**ಯತ್ರಾವತೀರ್ಣೋ ಭಗವಾನ್ ಪರಮಾತ್ಮಾ ನರಾಕೃತಿಃ ॥೨೦॥**

**ನರರ್ಷಭ** ಪುರುಷಶ್ರೇಷ್ಠನಾದ, **ನೃಪ** ರಾಜನೇ! **ಯತ್ರ** ಯಾವ ವಂಶದಲ್ಲಿ, **ಭಗವಾನ್** ಷಡ್ಗುಣಸಂಪನ್ನನಾದ, **ಪರಮಾತ್ಮಾ** ಶ್ರೀಹರಿಯು **ನರಾಕೃತಿಃ ಸನ್** ಮನುಷ್ಯನಂತೆ ದೇಹವನ್ನು ಸ್ವೀಕರಿಸಿ **ಅವತೀರ್ಣಃ** ಅವತರಿಸಿರುವನೋ, ಆದ್ದರಿಂದಲೇ **ಮಹಾಪುಣ್ಯಂ** ಬಹುಪುಣ್ಯಪ್ರದವಾದ **ಸರ್ವಪಾಪಹರಂ** ಸಮಸ್ತ ಪಾಪಪರಿಹಾರಕವಾದ **ಯಯಾತೇಃ** ಯಯಾತಿ ರಾಜನ **ಜ್ಯೇಷ್ಠಪುತ್ರಸ್ಯ** ಹಿರಿಯಮಗನಾದ, **ಯದೋಃ** ಯದುರಾಜನ ವಂಶವನ್ನು **ವರ್ಣಯಾಮಿ** ಹೇಳುವೆನು. **ನರಃ** ಮನುಷ್ಯನು, **ಯದೋಃ** ಯದುವಿನ, **ವಂಶಂ** ವಂಶವನ್ನು, **ಶ್ರುತ್ವಾ** ಕೇಳಿ, **ಸರ್ವಪಾಪ್ಶೈಃ** ಎಲ್ಲ ಪಾಪಗಳಿಂದ **ವಿಮುಚ್ಯತೇ** ಮುಕ್ತನಾಗುವನು.

ಎರಡು ಕ್ರಿಯೆಗಳಿಗೆ ಅಥವಾ ಅನೇಕಕ್ರಿಯೆಗಳಿಗೆ ಕರ್ತಾ ಒಬ್ಬನೇ ಎಂಬ ಅರ್ಥವನ್ನು ತಿಳಿಸಲು ಕ್ತ್ವಾ ಪ್ರತ್ಯಯವು ಪ್ರಯುಕ್ತವಾಗುತ್ತದೆ. ಉದಾಹರಣೆಗೆ ವಿಷ್ಣುಂ ನತ್ವಾಸ್ತೌತಿ ಎಂದು ಪ್ರಯೋಗಿಸಿದಾಗ ನಮನಕರ್ತಾ ಮತ್ತು ಸ್ತೋತ್ರಕರ್ತಾ ಭಿನ್ನರಲ್ಲ. ಕಿಂತು ಒಬ್ಬರೇ ಆಗಿದ್ದಾರೆ ಎಂದು ತಿಳಿದು ಬರುತ್ತದೆ.

ಆದರೇ ಪ್ರಕೃತ ''ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪ್ಶೈಃ ಪ್ರಮುಚ್ಯತೇ'' ಎಂಬಲ್ಲಿ ಶ್ರವಣವು ನರಕರ್ತೃಕವಾಗಿದೆ, ವಿಮೋಕ್ಷವು ಪಾಪಕರ್ತೃಕವಾಗಿದೆ ಹೀಗೆ ಸಮಾನಕರ್ತೃಕತ್ವವಿಲ್ಲದಿದ್ದರೂ ಕ್ತ್ವಾಪ್ರತ್ಯಯವು ಪ್ರಯುಕ್ತವಾಗಿದೆ. ಆದ್ದರಿಂದ ಸಮಾನಕರ್ತೃಕತ್ವವು ಕ್ತ್ವಾ ಪ್ರತ್ಯಯದ ಅರ್ಥವಲ್ಲ. ಭಿನ್ನಕರ್ತೃಕತ್ವವಿದ್ದರೂ ಕ್ತ್ವಾಪ್ರತ್ಯಯದ ಪ್ರಯೋಗವು ಸಾಧುವೇ ಆಗಿದೆ. ಸಮಾನಕರ್ತೃಕತ್ವವಿಲ್ಲದಿದ್ದರೂ ಕ್ತ್ವಾ ಪ್ರತ್ಯಯ ಬರುತ್ತದೆ ಎಂದು ತಿಳಿಯಬೇಕು. ॥೧೮-೧೯-೨೦॥

**ತಾತ್ಪರ್ಯ-** ಪರೀಕ್ಷಿತನೇ! ಇನ್ನು ಯಯಾತಿಯ ಜ್ಯೇಷ್ಠಕುಮಾರನಾದ ಯದುವಿನ ವಂಶವನ್ನು ಹೇಳುವೆನು ಕೇಳು. ಪರಮಪವಿತ್ರವಾದ ಈ ಯದುವಂಶ ಚರಿತ್ರೆಯನ್ನು ಕೇಳಿದ ಮಾತ್ರದಿಂದ ಮನುಷ್ಯನ ಸಮಸ್ತ ಪಾಪಗಳೂ ನೀಗುವವು. ಪರಮಾತ್ಮನಾದ ಶ್ರೀಹರಿಯು ಕೃಷ್ಣನೆಂಬ ಹೆಸರಿನಿಂದ ಮನುಷ್ಯನಾಗಿ ಅವತರಿಸಿದುದು ಈ ವಂಶದಲ್ಲಿ. ಕಾರಣ ಪರಮಪಾವನವಾದದ್ದು.

**ಯದೋಃ ಸಹಸ್ರಜಿತ್ ಕ್ರೋಷ್ಟಾ ನಲೋ ರಿಪುರಿತಿ ಶ್ರುತಾಃ ॥೨೦॥**

**ಚತ್ವಾರಃ ಸೂನವಸ್ತಸ್ಯ ಶತಜಿತ್ ಪ್ರಥಮಾತ್ಮಜಃ ।**
**ಮಹಾಹಯೋ ವೇಣುಹಯೋ ಹೈಯಶ್ಚೇತಿ ತತ್ಸುತಾಃ ॥೨೧॥**

**ಯದೋಃ** ಯದುರಾಜನಿಗೆ **ಸಹಸ್ರಜಿತ್** ಸಹಸ್ರಜಿತನು **ಕ್ರೋಷ್ಟಾ** ಕ್ರೋಷ್ಟಾ ಎಂಬುವನು **ನಲಃ** ನಲನು, **ರಿಪುಃ** ರಿಪುವು, **ಇತಿ** ಈ ರೀತಿ **ಚತ್ವಾರಃ** ನಾಲ್ಕು ಜನ **ಸೂನವಃ** ಮಕ್ಕಳು **ಶ್ರುತಾಃ** ಪ್ರಸಿದ್ಧರು. **ತಸ್ಯ** ಅವರಲ್ಲಿ **ಪ್ರಥಮಾತ್ಮಜಃ** ಸಹಸ್ರಜಿತನ ಮಗನು **ಶತಜಿತ್** ಶತಜಿತನು **ತತ್ಸುತಾಃ** ಶತಜಿತನ ಮಕ್ಕಳು **ಮಹಾಹಯಃ, ವೇಣುಹಯಃ, ಹೈಹಯಃ ಇತಿ** ಹೀಗೆ ಮೂರು ಜನ ಮಕ್ಕಳು. ॥೨೧॥

**ತಾತ್ಪರ್ಯ-** ಈ ವಶಾನುಕ್ರಮವು ಈ ರೀತಿ :- ಯದುವಿಗೆ ಸಹಸ್ರಜಿತ್, ಕ್ರೋಷ್ಟಾ, ನಲ, ರಿಪುವೆಂಬ ನಾಲ್ಕು ಪುತ್ರರಾದರು. ಇವರಲ್ಲಿ ಜ್ಯೇಷ್ಠನಾದ ಸಹಸ್ರಜಿತ್ತಿಗೆ ಶತಜಿತ್ತೆಂಬ ಪುತ್ರನು ಇವನಿಗೆ ಮಹಾಹಯ, ವೇಣುಹಯ, ಹೈಹಯ ಮೂರು ಮಕ್ಕಳು ಹುಟ್ಟಿದರು.

**ಧರ್ಮಸ್ತು ಹೈಹಯಸುತೋ ನೇತ್ರಃ ಕುಂತೇಃ ಪಿತಾ ತತಃ ।**
**ಸೋಹಂಜಿರಭವತ್ ಕುಂತೇರ್ಮಹಿಷ್ಮಾನ್ ಭದ್ರಸೇನಕಃ ॥೨೨॥**

**ಹೈಹಯಸುತಃ** ಹೈಹಯನ ಮಗನು, **ಧರ್ಮಃ** ಧರ್ಮನು **ತತಃ** ಧರ್ಮನಿಂದ **ಕುಂತೇಃ** ಕುಂತಿಯ, **ಪಿತಾ** ತಂದೆಯಾದ **ನೇತ್ರಃ** ನೇತ್ರನು ಅಂದರೆ ಧರ್ಮನಿಂದ ನೇತ್ರನು ನೇತ್ರನಿಂದ ಕುಂತಿಯು **ಕುಂತೇಃ** ಕುಂತಿಯಿಂದ **ಸೋಹಂಜಿಃ** ಸೋಹಂಜಿಯು **ಅಭವತ್** ಹುಟ್ಟಿದನು. ಸೋಹಂಜಿಯಿಂದ **ಮಹಿಷ್ಮಾನ್** ಮಹಿಷ್ಮಾನನು ಮಹಿಷ್ಮಾನನಿಂದ **ಭದ್ರಸೇನಕಃ** ಭದ್ರಸೇನನು. ॥೨೨॥

**ತಾತ್ಪರ್ಯ-** ಹೈಹಯನಿಗೆ ಧರ್ಮನು ಧರ್ಮನಿಂದ ನೇತ್ರನು ಹುಟ್ಟಿದನು. ಇವನಿಗೆ ಕುಂತಿ ಎಂಬ ಮಗನು ಈತನಿಗೆ ಸೋಹಂಜಿಯು ಸೋಹಂಜಿಗೆ ಮಹಿಷ್ಮಾನ್ ಇವನಿಗೆ ಭದ್ರಸೇನಕನು ಜನಿಸಿದನು.

**ದುರ್ಮದೋ ಭದ್ರಸೇನಸ್ಯ ಧನಕಃ ಕೃತವೀರ್ಯಕಃ ।**
**ಕೃತ್ಯಾಗ್ನಿಃ ಕೃತವರ್ಮಾ ಚ ಕೃತೌಜಾ ಧನಕಾತ್ಮಜಾಃ ॥೨೩॥**

**ಭದ್ರಸೇನಸ್ಯ** ಭದ್ರಸೇನನಿಗೆ **ದುರ್ಮದಃ** ದುರ್ಮದನು **ಧನಕಃ** ಧನಕನು ಹೀಗೆ ಇಬ್ಬರು ಮಕ್ಕಳು. **ಕೃತವೀರ್ಯಕಃ ಕೃತ್ಯಾಗ್ನಿಃ ಕೃತವರ್ಮಾ ಕೃತೌಜಾಃ** ಈ ನಾಲ್ವರು **ಧನಕಾತ್ಮಜಾಃ** ಧನಕನ ಮಕ್ಕಳು. (ಕೃತವೀರ್ಯಕಃ ಕೃತವೀರ್ಯ ಜನಕ ಎಂದರ್ಥ. ಕೃತವೀರ್ಯನ ಹೆಸರು) ॥೨೩॥

**ತಾತ್ಪರ್ಯ-** ನಂತರ ದುರ್ಮದನೆಂದು ಧನಕನೆಂದೂ ಇರ್ವರು ಪುತ್ರರು. ಧನಕನಿಗೆ, ಕೃತವೀರ್ಯ, ಕೃತ್ಯಾಗ್ನಿ, ಕೃತವರ್ಮ, ಕೃತೌಜಸರೆಂಬ ನಾಲ್ವರು ಪುತ್ರರಾದರು.

**ಅರ್ಜುನಃ ಕೃತವೀರ್ಯಸ್ಯ ಸಪ್ತದ್ವೀಪೇಶ್ವರೋಽಭವತ್ ।**
**ದತ್ತಾತ್ರೇಯಾದ್ಧರೇರಂಶಾತ್ ಪ್ರಾಪ್ತಯೋಗಮಹಾಗುಣಃ ॥೨೪॥**

**ಕೃತವೀರ್ಯಸ್ಯ** ಕೃತವೀರ್ಯನಿಗೆ **ಅರ್ಜುನಃ** ಕಾರ್ತವೀರ್ಯಾರ್ಜುನನು ಜನಿಸಿದನು. ಇವನು **ಹರೇಃ** ಪರಮಾತ್ಮನ **ಅಂಶಾತ್** ಸಾಕ್ಷಾದವತಾರವಾದ **ದತ್ತಾತ್ರೇಯಾತ್** ದತ್ತಾತ್ರೇಯನಿಂದ **ಪ್ರಾಪ್ತಯೋಗಮಹಾಗುಣಃ ಪ್ರಾಪ್ತ** ಹೊಂದಲ್ಪಟ್ಟ **ಯೋಗ** ಅಣಿಮಾದಿಗಳು ಮತ್ತು ಶೌರ್ಯಾದಿ ಮಹಾಗುಣಗಳುಳ್ಳವನಾಗಿ **ಸಪ್ತದ್ವೀಪೇಶ್ವರಃ** ಏಳು ದ್ವೀಪಗಳಿಗೆ ಒಡೆಯನು **ಅಭವತ್** ಆದನು.

**ತಾತ್ಪರ್ಯ-** ಕೃತವೀರ್ಯನಿಗೆ ಅರ್ಜುನನೆಂಬ ಮಗನು ಹುಟ್ಟಿ, ಸಪ್ತದ್ವೀಪಾಧಿಪತಿ ಎನಿಸಿಕೊಂಡನು. ಇವನೇ ಕಾರ್ತವೀರ್ಯಾರ್ಜುನನು, ಈತನು ಭಗವದವತಾರನಾದ ದತ್ತಾತ್ರೇಯನಿಂದ ಅಣಿಮಾದಿ ಯೋಗಸಿದ್ಧಿಯನ್ನು ಪಡೆದಿದ್ದನು.

ಈ ಮಹಾಗುಣಗಳನ್ನೇ ಹೇಳುವರು.

**ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ ।**
**ಯಜ್ಞದಾನತಪೋಯೋಗೈಃ ಶ್ರುತವೀರ್ಯಜಯಾದಿಭಿಃ ॥೨೫॥**

**ಪಾರ್ಥಿವಾಃ** ಇತರ ರಾಜರುಗಳು **ಯಜ್ಞದಾನತಪೋಯೋಗೈಃ** ಯಜ್ಞ, ದಾನ, ತಪಸ್ಸು, ಅಣಿಮಾದಿ ಯೋಗಗಳಿಂದ ಮತ್ತು **ಶ್ರುತವೀರ್ಯಜಯಾದಿಭಿಃ** ಶ್ರವಣ, ಪರಾಕ್ರಮ ಮತ್ತು ಶತ್ರುಗಳನ್ನು ಗೆಲ್ಲುವುದು ಇವುಗಳಿಂದ **ಕಾರ್ತವೀರ್ಯಸ್ಯ** ಕಾರ್ತವೀರ್ಯಾರ್ಜುನನ **ಗತಿಂ** ಸ್ಥಿತಿಯನ್ನು (ಸಾಮರ್ಥ್ಯವನ್ನು) **ನ ಯಾಸ್ಯಂತಿ** ಹೊಂದುವದಿಲ್ಲ. ॥೨೫॥

**ತಾತ್ಪರ್ಯ-** ಒಟ್ಟಿನಲ್ಲಿ ಹೇಳಬೇಕಾದರೆ ಲೋಕದಲ್ಲಿ ಯಜ್ಞ, ದಾನ, ತಪಸ್ಸು, ಯೋಗಸಿದ್ಧಿ, ಶಾಸ್ತ್ರಜ್ಞಾನ, ವೀರ್ಯ, ಜಯ ಮುಂತಾದ ಎಲ್ಲ ವಿಷಯದಲ್ಲಿ ಇವನಿಗೆ ಸಮಾನರಾದ ಬೇರೆ ರಾಜರು ಒಬ್ಬರೂ ಇರಲಿಲ್ಲ.

**ಪಂಚಾಶೀತಿಸಹಸ್ರಾಣಿ ಹ್ಯವ್ಯಾಹತಬಲಃ ಸಮಾಃ ।**
**ಅಕರೋದರ್ಜುನೋ ರಾಜ್ಯಂ ಹರಿಂ ಚೈವಾನ್ವಹಂ ಸ್ಮರನ್ ॥೨೬॥**

**ಅರ್ಜುನಃ** ಕಾರ್ತವೀರ್ಯಾರ್ಜುನನು **ಪಂಚಾಶೀತಿಸಹಸ್ರಾಣಿ ಸಮಾಃ** ಎಂಭತ್ತೈದು ಸಾವಿರ ವರ್ಷಗಳ ಕಾಲ **ಅವ್ಯಾಹತಬಲಃ** ಕುಂದದಿರುವ ಶರೀರಸಾಮರ್ಥ್ಯ ಉಳ್ಳವನಾಗಿ **ಅನ್ವಹಂ** ಪ್ರತಿದಿವಸ **ಹರಿಂ** ಪರಮಾತ್ಮನನ್ನು **ಸ್ಮರನ್** ಸ್ಮರಿಸುತ್ತಾ **ರಾಜ್ಯಂ** ರಾಜ್ಯಭಾರವನ್ನು **ಅಕರೋತ್** ಮಾಡಿದನು. ॥೨೬॥

**ತಾತ್ಪರ್ಯ-** ಎಂಭತ್ತೈದು ಸಾವಿರ ವರ್ಷಗಳ ವರೆಗೆ ನಿರಂಕುಶವಾದ ಪರಾಕ್ರಮದಿಂದ, ರಾಜ್ಯವನ್ನು ಆಳುತ್ತಾ , ಸರ್ವದಾ ಹರಿಧ್ಯಾನಪರನಾಗಿದ್ದನು.

ತಾನಷ್ಟೇ ವಿಷ್ಣುಸ್ಮರಣೆ ಮಾಡುತ್ತಿರಲಿಲ್ಲ, ಅವನ ಪ್ರಜೆಗಳೆಲ್ಲರೂ ವಿಷ್ಣುಸ್ಮರಣೆ ಮಾಡುತ್ತಿದ್ದರೆಂದು ಹೇಳುವರು, ಅಥವಾ ಭೋಗಕಾಲದಲ್ಲಿಯೂ ಹರಿಯ ಸ್ಮರಣೆಯನ್ನು ಬಿಡುತ್ತಿರಲಿಲ್ಲ ಎಂದು ಹೇಳುವರು.

**ಅನಷ್ಟವಿಷ್ಣುಸ್ಮರಣೋ ಬುಭುಜೇಽಕ್ಷಯ್ಯಷಡ್ವಸು ।**
**ತಸ್ಯ ಪುತ್ರಸಹಸ್ರಾಣಾಂ ಪಂಚೈವೋರ್ವರಿತಾ ಮೃಧೇ ॥೨೭॥**

**ಅನಷ್ಟವಿಷ್ಣುಸ್ಮರಣಃ** ಅವಿಚ್ಛಿನ್ನ ವಿಷ್ಣುಸ್ಮರಣ ಉಳ್ಳವನಾಗಿ ಅಥವಾ ನಷ್ಟಂ ವಿಷ್ಣುಸ್ಮರಣಂ ಯೇಷಾಂ ತೇ ನಷ್ಟವಿಷ್ಣುಸ್ಮರಣಾಃ ನ ವಿದ್ಯಂತೇ ನಷ್ಟವಿಷ್ಣುಸ್ಮರಣಾಃ ಯಸ್ಮಿನ್ ಸಃ ಅನಷ್ಟವಿಷ್ಣುಸ್ಮರಣಃ ಹೀಗೆ ವಿಗ್ರಹ ಮಾಡಿದರು. ವಿಷ್ಣುಸ್ಮರಣವಿಲ್ಲದವರಿಂದ ರಹಿತನಾಗಿ **ಷಡ್ವಸು** ಆರು ಇಂದ್ರಿಯಗಳಿಗೆ ವಿಷಯವಾದ ಸಂಪತ್ತನ್ನು **ಅಕ್ಷಯ್ಯಂ ಬುಭುಜೇ** ಅವ್ಯಾಹತವಾಗಿ ಅನುಭೋಗಿಸಿದನು. **ತಸ್ಯ** ಕಾರ್ತವೀರ್ಯಾರ್ಜುನನ **ಪುತ್ರಸಹಸ್ರಾಣಾಂ ಮಧ್ಯೇ** ಹತ್ತು ಸಾವಿರ ಮಕ್ಕಳುಗಳಲ್ಲಿ, **ಮೃಧೇ** ಯುದ್ಧದಲ್ಲಿ, **ಪಂಚ** ಐದು ಜನ **ಉರ್ವರಿತಾಃ** ಉಳಿದರು.

**ತಾತ್ಪರ್ಯ-** ಈಗಲೂ ಈತನ ನಾಮಸ್ಮರಣೆಯಿಂದ ಮನುಷ್ಯನಿಗೆ ಕಳೆದು ಹೋದ ವಸ್ತುಗಳು ದೊರೆಯುವವು. ಈತನು ಜೀವಿಸಿರುವವರೆಗೂ ಅಕ್ಷಯವಾದ ಇಂದ್ರಿಯಸುಖವನ್ನು ಹರಿಸ್ಮರಣಪೂರ್ವಕ ಅನುಭವಿಸಿದನು.

ಅವರ ಹೆಸರುಗಳನ್ನು ಹೇಳುವರು.

**ಜಯಧ್ವಜಃ ಶೂರಸೇನೋ ಋಷಭೋ ಮಧುರೂರ್ಜಿತಃ ।**
**ಜಯಧ್ವಜಾತ್ತಾಲಜಂಘಸ್ತಸ್ಯ ಪುತ್ರಶತಂ ತ್ವಭೂತ್ ॥೨೮॥**

**ಜಯಧ್ವಜಃ, ಶೂರಸೇನಃ, ಋಷಭಃ, ಮಧುಃ** ಮತ್ತು **ಊರ್ಜಿತಃ** ಹೀಗೆ ಐದು ಜನರು ಉಳಿದ ಮಕ್ಕಳು. **ಜಯಧ್ವಜಾತ್** ಜಯಧ್ವಜನ ದೆಸೆಯಿಂದ **ತಾಲಜಂಘಃ** ತಾಲಜಂಘ ಎಂಬುವನು ಹುಟ್ಟಿದನು. **ತಸ್ಯ** ಅವನಿಗೆ **ಪುತ್ರಶತಂ** ನೂರು ಜನ ಮಕ್ಕಳು **ಅಭೂತ್** ಆದರು. ॥೨೮॥

**ತಾತ್ಪರ್ಯ-** ಇವನಿಗೆ ಹತ್ತು ಸಾವಿರ ಜನ ಮಕ್ಕಳು ಇದ್ದರೂ ಉಳಿದವರು ಐದು ಜನ ಮಾತ್ರ.

**ಕ್ಷತ್ರಂ ಯತ್ತಾಲಜಂಘಾಖ್ಯಮೌರ್ವತೇಜೋಪಸಂಹೃಂತಮ್ ।**
**ತೇಷಾಂ ಜ್ಯೇಷ್ಠೋ ವೀತಿಹೋತ್ರೋ ವೃಷ್ಣಿಃ ಪುತ್ರೋ ಮಧೋಃ ಸ್ಮೃತಃ[೧] ॥**

**ಯತ್** ಯಾವ ನೂರುಜನ ಮಕ್ಕಳಿಗೆ ತಾಲಜಂಘನಿಂದ ಹುಟ್ಟಿದರಿಂದ ತಾಲಜಂಘರೆಂದೇ ಹೆಸರು. **ತತ್ ಕ್ಷತ್ರಂ** ತಾಲಜಂಘ ಎಂಬ ಕ್ಷತ್ರಿಯ ಕುಲವು, **ಔರ್ವತೇಜಸಾ** ಔರ್ವಮುನಿಯಿಂದ ಸಾಮರ್ಥ್ಯವನ್ನು ಪಡೆದ ಸಗರನಿಂದ **ಉಪಸಂಹೃತಂ** ಕೊಲ್ಲಲ್ಪಟ್ಟಿತು. **ತೇಷಾಂ** ಆ ತಾಲಜಂಘರಲ್ಲಿ **ಜ್ಯೇಷ್ಠ** ಹಿರಿಯನು **ವೀತಿಹೋತ್ರಃ** ವೀತಿಹೋತ್ರನು **ತಸ್ಯ** ವೀತಿಹೋತ್ರನಿಗೆ **ವೃಷ್ಣಿಪುತ್ರಃ** ವೃಷ್ಣಿಯೇ ಮಗನಾಗಿ ಉಳ್ಳ **ಮಧುಃ** ಮಧುವು, **ಸುತಃ** ಮಗನು ಪಾಠಾಂತರದಲ್ಲಿ **ತಸ್ಯ** ವೀತಿಹೋತ್ರನಿಗೆ **(ಮಧುಃ)** ಮಧುವು **ಮಧೋಃ** ಮಧುವಿಗೆ **ವೃಷ್ಣಿಃ** ವೃಷ್ಣಿಯು **ಸ್ಮೃತಃ** ಮಗನೆಂದು ಪ್ರಸಿದ್ಧನು. ॥೨೯॥

**ತಾತ್ಪರ್ಯ-** ಮಿಕ್ಕವರೆಲ್ಲ ಯುದ್ಧದಲ್ಲಿ ಪರಶುರಾಮನಿಂದ ಹತರಾದರು. ಉಳಿದವರು ಜಯಧ್ವಜ, ಶೂರಸೇನ, ಋಷಭ, ಮಧು, ಊರ್ಜಿತರೆಂಬುವರು. ಜಯಧ್ವಜನಿಂದ ತಾಲಜಂಘನು, ಇವನಿಗೆ ತಾಲಜಂಘರೆಂಬ ನೂರು ಜನ ಮಕ್ಕಳಾದರು.

**ತಸ್ಯ ಪುತ್ರಶತಂ ತ್ವಾಸೀದ್ವೃಷ್ಣಿಜ್ಯೇಷ್ಠಂ ಯತಃ ಕುಲಮ್ ।**
**ಮಾಧವಾ ವೃಷ್ಣಯೋ ರಾಜನ್ ಯಾದವಾಶ್ಚೇತಿ ಸಂಜ್ಞಿತಮ್ ॥೩೦॥**

**ತಸ್ಯ** ಮಧುವಿಗೆ **ವೃಷ್ಣಿಜ್ಯೇಷ್ಠಂ** ವೃಷ್ಣಿಯೇ ಹಿರಿಯವನಾಗಿ ಉಳ್ಳ, **ಪುತ್ರಶತಂ** ನೂರುಜನ ಮಕ್ಕಳು, **ಆಸೀತ್** ಇದ್ದರು. (ವೃಷ್ಣಿಯನ್ನು ಬಿಟ್ಟು ನೂರು ಜನ

---

೧ ವೃಷ್ಣಿಪುತ್ರೋ ಮಧುಃ ಸುತಃ । ಇತಿ ಪಾಠಾಂತರ

ಮಕ್ಕಳು) **ಯತಃ** ಯಾವ ಕಾರಣದಿಂದ ಮಧು, ವೃಷ್ಣಿ, ಯದುಗಳಿಂದ **ಇದಂ ಕುಲಂ** ಈ ಕುಲವು (ಉತ್ಪನ್ನವಾದದ್ದರಿಂದ) ಈ ಕುಲಸ್ಥರಾದ ಜನರು **ಮಾಧವಾಃ** ಮಾಧವರೆಂದು **ವೃಷ್ಣಯಃ** ವೃಷ್ಣಿಗಳೆಂದು **ಯಾದವಾಃ** ಯಾದವರುಗಳೆಂದು **ಸಂಜ್ಞಿತಾಃ** ಕರೆಸಿಕೊಳ್ಳಲ್ಪಟ್ಟರು. ಸಂಜ್ಞಿತಂ ಎನ್ನುವ ಪಾಠದಲ್ಲಿ ಕುಲಂ ಸಂಜ್ಞಿತಂ ಎಂದು ಅನ್ವಯ ಮಾಡಬೇಕು. ।।೩೦।।

**ತಾತ್ಪರ್ಯ-** ಅವರೆಲ್ಲರೂ ಔರ್ವ ಮಹಾಮುನಿ ತೇಜಸ್ಸಿನಿಂದ, ಸಗರನಿಂದ ಹತರಾದರು. ಇವರಲ್ಲಿ ಹಿರಿಯನಾದ ವೀತಿಹೋತ್ರನೆಂಬುವನಿಗೆ ಮಧು, ಮಧುವಿಗೆ ವೃಷ್ಣಿ ಎಂಬುವನು ಜನಿಸಿದನು. ಮತ್ತು ನೂರು ಜನ ಮಕ್ಕಳಾದರು. ಕಾರಣ ಇವರಿಗೆ ಮಾಧವರೆಂದು, ಯಾದವರೆಂದು ಹೆಸರಾದುದಲ್ಲದೇ ವೃಷ್ಣಿಯು ಜ್ಯೇಷ್ಠನಾದುದರಿಂದ ಇತರರಿಗೂ ವೃಷ್ಣಿಯೆಂದು ಹೆಸರಾಗಿ ಈ ಕುಲಕ್ಕೂ ವೃಷ್ಣಿಕುಲವೆಂದು ಪ್ರಸಿದ್ಧಿ ಉಂಟಾಯಿತು. ಯದುವಿನ ಶ್ರೇಷ್ಠ ಸಂತತಿ ಹೀಗಾಯಿತು.

ಯದುಪುತ್ರರಲ್ಲಿ ಮೊದನೆಯವನಾದ ಸಹಸ್ರಜಿತ್ ವಂಶವನ್ನು ಹೇಳಿ ಎರಡನೆಯವನಾದ ಕ್ರೋಷ್ಟುವಿನ ವಂಶವನ್ನು ವಿಸ್ತರಿಸುವರು.

**ಯದುಪುತ್ರಸ್ಯ ಚ ಕ್ರೋಷ್ಟೋಃ ಪುತ್ರೋ ವೃಜಿನವಾಂಸ್ತತಃ ।**
**ವಾಹಿತೋ[೧]ಽನುಶೇಕುರ್ವ್ಯೈ ತಸ್ಯ ಚಿತ್ರರಥಸ್ತತಃ ।।೩೧।।**

**ಯದುಪುತ್ರಸ್ಯ** ಯದುರಾಜನ ಮಗನಾದ, **ಕ್ರೋಷ್ಟೋಃ** ಕ್ರೋಷ್ಟುವಿಗೆ **ವೃಜಿನವಾನ್** ವೃಜಿನವಾಂಸನು, **ಪುತ್ರಃ** ಮಗನು, **ತತಃ** ವೃಜಿನವಾಂಸನಿಂದ **ವಾಹಿಃ** ವಾಹಿಯು, **ತತಃ** ವಾಹಿಯಿಂದ **ಅನುಶೇಕುಃ** ಅನುಶೇಕುವು, **ತಸ್ಯ** ಅನುಶೇಕುವಿಗೆ, **ಚಿತ್ರರಥಃ** ಚಿತ್ರರಥನು, **ತತಃ** ಎಂಬುವುದಕ್ಕೆ ಮುಂದಿನ ಶ್ಲೋಕದಿಂದ ಅನ್ವಯವು.

**ತಾತ್ಪರ್ಯ-** ಯದುವಿನ ಪುತ್ರನಾದ ಕ್ರೋಷ್ಟುವಿನಿಂದ, ಪುತ್ರ ಪೌತ್ರ ಕ್ರಮವಾಗಿ ವೃಜಿನವಂತ, ವಾಹಿ, ಅನುಶೇಕು, ಚಿತ್ರರಥ, ಆ ಚಿತ್ರರಥನಿಂದ,

**ಶಶಬಿಂದುರ್ಮಹಾಯೋಗೀ ಮಹಾಭೋಜೋ ಮಹಾನಭೂತ್ ।**
**ಚತುರ್ದಶ ಮಹಾರತ್ನಶ್ಚಕ್ರವರ್ತ್ಯಪರಾಜಿತಃ ।।೩೨।।**

**ತತಃ** ಚಿತ್ರರಥನಿಂದ **ಶಶಬಿಂದುಃ** ಶಶಬಿಂದುವು, **ಅಭೂತ್** ಹುಟ್ಟಿದನು. ಇವನಿಗೆ **ಮಹಾಭೋಜಃ** ಮಹಾಭೋಜನೆಂದು ಇನ್ನೊಂದು ಹೆಸರು. ಮತ್ತು **ಮಹಾಯೋಗೀ** ವಿಪುಲ ಅಣಿಮಾದಿ ಸಾಮರ್ಥ್ಯವುಳ್ಳವನು, **ಅಪರಾಜಿತಃ** ಶತ್ರುಗಳಿಂದ

---

೧ ವಾಹಿಸ್ಥಿತೋನುಶೇಕುರ್ವ್ಯೈ

ಸೋಲಿಲ್ಲದವನು, **ಚತುರ್ದಶ ಮಹಾರತ್ನಃ** ಹದಿನಾಲ್ಕು ಅನರ್ಘ್ಯರತ್ನಗಳುಳ್ಳವನು, **ಚಕ್ರವರ್ತೀ** ಸಮಸ್ತಭೂಮಂಡಲಕ್ಕೆ ಏಕೈಕ ಅಧಿಪತಿಯೂ ಆಗಿದ್ದನು. ಇಲ್ಲಿ ಚತುರ್ದಶರತ್ನಗಳೆಂದರೆ ಆ ಆ ಜಾತಿಗಳಲ್ಲಿ ಶ್ರೇಷ್ಠವಸ್ತುಗಳು ಅವುಗಳನ್ನು ಮಾರ್ಕಂಡೇಯಪುರಾಣದಲ್ಲಿ ವರ್ಣಿಸಿದ್ದಾರೆ.

**ಗಜವಾಜಿರಥಾಸ್ತ್ರೇಷುನಿಧಿಮಾಲಾಂಬರದ್ರುಮಾಃ ।**
**ಶಕ್ತಿಸಾಸಿಮಣಿಚ್ಛನ್ನವಿಮಾನಾನಿ ಚತುರ್ದಶ ॥**[೧]

ಅಥವಾ ಧರ್ಮಸಂಹಿತಾದಲ್ಲಿ ಹೇಳಿದಂತೆ

**ಚಕ್ರೋ ರಥೋ ಮಣಿಃ ಖಡ್ಗಶ್ಚರ್ಮ ರತ್ನಂ ಚ ಪಂಚಮಮ್ ।**
**ಕೇತುರ್ನಿಧಿಶ್ಚ ಸಪ್ತೈವ ಪ್ರಾಣಹೀನಾನಿ ಚಕ್ಷತೇ ।**

**ಭಾರ್ಯಾ ಪುರೋಹಿತಶ್ಚೈವ ಸೇನಾನೀ ರಥಕೃಚ್ಚ ಯಃ ।**
**ಪತ್ತ್ಯಶ್ವೌ ಕಲಭಶ್ಚೇತಿ ಪ್ರಾಣಿನಾಂ ಸಪ್ತ ಕೀರ್ತಿತಾಃ ।**
**ಚತುರ್ದಶೈತಾನಿ ರತ್ನಾನಿ ಸರ್ವೇಷಾಂ ಚಕ್ರವರ್ತಿನಾಮ್ ।**

''ಅಪರಾಜಿತಃ ಶತ್ರುಮದ್ವಿಭೂತೀರಭಿಧ್ಯಾಯನ್ ಶ್ರೀವತ್ಸಾಸ್ತ್ರವಿಭೂಷಿತಾಃ ಧ್ವಜಾತಪತ್ರವ್ಯಜನೈಃ ಸಹ ಭವೇದಪರಾಜಿತಃ'' ಎಂದು ಏಕಾದಶಸ್ಕಂಧದಲ್ಲಿ ಹೇಳಿದ ಲಕ್ಷಣ ಉಳ್ಳವನು ಅಪರಾಜಿತನು. ॥೩೨॥

**ತಾತ್ಪರ್ಯ-** ಹಿಂದೆ ಉಕ್ತನಾದ ಚಿತ್ರರಥನಿಂದ ಶಶಬಿಂದು ಎಂಬುವರು ಹುಟ್ಟಿದರು. ಈ ಶಶಬಿಂದುವು ಮಹಾಯೋಗಿ ಎನಿಸಿಕೊಂಡು ಮಹಾಮಹಿಮೆ-ಯುಳ್ಳವನಾಗಿ ಗುಣಗಳಲ್ಲಿ ತಾನೇ ಶ್ರೇಷ್ಠನೆನಿಸಿಕೊಂಡು ಚಕ್ರವರ್ತಿಯಾಗಿ ರಾಜ್ಯವನ್ನಾಳುತ್ತಿದ್ದನು. ಆಯಾ ಜಾತಿಯಲ್ಲಿ ಉತ್ತಮನೆನಿಸುವ ಹದಿನಾಲ್ಕು ಬಗೆಯ ಬಗೆಯ ರತ್ನಗಳಿಗೆ ತಾನೇ ಯಜಮಾನನಾಗಿದ್ದನು. ಈತನನ್ನು ಜಯಿಸತಕ್ಕವರು ರಾಜರು ಬೇರೊಬ್ಬರಿರಲಿಲ್ಲ. ॥೩೨॥

**ತಸ್ಯ ಪತ್ನೀಸಹಸ್ರಾಣಾಂ ದಶಾಸನ್ ಸುಮಹಾಯಶಾಃ ।**
**ದಶಲಕ್ಷಸಹಸ್ರಾಣಿ ಪುತ್ರಾಣಾಂ ತಾಸ್ವಜೀಜನತ್ ॥೩೩॥**

**ತಸ್ಯ** ಶಶಬಿಂದುವಿಗೆ, **ಪತ್ನೀಸಹಸ್ರಾಣಾಂ ದಶ** ಹತ್ತು ಸಾವಿರ ಹೆಂಡಂದಿರು **ಆಸನ್** ಇದ್ದರು. **ಸುಮಹಾಯಶಾಃ** ಕೀರ್ತಿಶಾಲಿಯಾದ, **ಸಃ** ಶಶಬಿಂದುವು, **ತಾಸು** ಆ ಪತ್ನಿಯರಲ್ಲಿ, **ಪುತ್ರಾಣಾಂ** ಮಕ್ಕಳ **ದಶಲಕ್ಷಸಹಸ್ರಾಣಿ** ಹತ್ತು ಲಕ್ಷ ಸಾವಿರಗಳನ್ನು,

---

೧ ಗಜವಾಜಿರಥಸ್ತ್ರೇಷುನಿಽಮೌಕ್ತಿಕವಿದ್ರುಮಾಃ ।
ಶಕ್ತಿಪಾಶಮಣಿಚ್ಛನ್ನವಿಮಾನಾನಿ ಚತುರ್ದಶ ॥ -ಛ.ವ್ಯಾ

**ಅಜೀಜನತ್** ಹುಟ್ಟಿಸಿದನು. ಅಂದರೆ ಒಬ್ಬೊಬ್ಬರಲ್ಲಿ ಒಂದೊಂದು ಲಕ್ಷದಂತೆ ಹತ್ತು ಸಾವಿರ ಲಕ್ಷ ಮಕ್ಕಳನ್ನು ಪಡೆದನು.(೧೦೦,೦೦,೦೦,೦೦೦ ಒಂದು ನೂರು ಕೋಟಿ) ಇವರಲ್ಲಿ ಪೃಥುಶ್ರವ ಮೊದಲಾದ ಆರು ಜನರು ಮುಖ್ಯರಾದವರು. ||೩೩||

**ತಾತ್ಪರ್ಯ-** ಈ ಶಶಬಿಂದುವಿಗೆ ಹತ್ತುಸಾವಿರ ಮಂದಿ ಪತ್ನಿಯರು, ಮಹಾಯಶಸ್ವಿಯಾದ ಈ ರಾಜನು ಆ ಪತ್ನಿಯರಲ್ಲಿ, ಒಬ್ಬೊಬ್ಬರಲ್ಲಿ ಒಂದು ಲಕ್ಷದಂತೆ, ನೂರುಕೋಟಿ ಜನ ಮಕ್ಕಳನ್ನು ಪಡೆದನು. ಆ ಮಕ್ಕಳಲ್ಲಿ ಪೃಥುಶ್ರವನೇ ಮೊದಲಾದ ಆರುಮಂದಿ ಪ್ರಧಾನರೆನಿಸಿಕೊಂಡರು.

**ತೇಷಾಂ ತು ಷಟ್ ಪ್ರಧಾನಾನಾಂ ಪೃಥುಶ್ರವಸ ಆತ್ಮಜಃ |**
**ಧರ್ಮೋ ನಾಮೋಶನಾಸ್ತಸ್ಯ ಹಯಮೇಧಶತಸ್ಯ ರಾಟ್ ||೩೪||**

**ತೇಷಾಂ** ಆ **ಷಟ್ ಪ್ರಧಾನಾನಾಂ** ಆರು ಜನ ಮುಖ್ಯಸ್ಥರಲ್ಲಿ ಹಿರಿಯನಾದ, **ಪೃಥುಶ್ರವಸಃ** ಪೃಥುಶ್ರವಸನ **ಆತ್ಮಜಃ** ಮಗನು, **ಧರ್ಮಃ ನಾಮ** ಧರ್ಮನೆಂಬುವನು. **ತಸ್ಯ** ಧರ್ಮನಿಗೆ, **ಹಯಮೇಧಶತಸ್ಯರಾಟ್** ನೂರು ಅಶ್ವಮೇಧವನ್ನು ಆಚರಿಸತಕ್ಕ **ಉಶನಾಃ** ಉಶನಾ ಎಂಬ ಮಗನು. ||೩೪||

**ತಾತ್ಪರ್ಯ-** ಜ್ಯೇಷ್ಠನಾದ ಪೃಥುಶ್ರವನಿಗೆ, ಧರ್ಮನು, ಅವನಿಗೆ ಉಶನಾ ಎಂಬುವನು ಮದನಾದನು. ಇವನು ನೂರು ಅಶ್ವಮೇಧವನ್ನು ಮಾಡಿದನು.

**ತತ್ಸುತೋ ರುಚಕಸ್ತಸ್ಯ ಪಂಚಾಸನ್ನಾತ್ಮಜಾಃ ಶೃಣು |**
**ಪುರುಜಿದ್ರುಕ್ಮರುಕ್ಮೇಷುಪೃಥುಜ್ಯಾಮಘಸಂಜ್ಞಿತಾಃ ||೩೫||**

**ತತ್ಸುತಃ** ಉಶನಾ ಎಂಬುವನ ಮಗನು, **ರುಚಕಃ** ರುಚಕನು, **ತಸ್ಯ** ರುಚಕನಿಗೆ, **ಪಂಚ** ಐದು ಜನ, **ಆತ್ಮಜಾಃ** ಮಕ್ಕಳು, **ಆಸನ್** ಇದ್ದರು. **ತಾನ್** ಅವರನ್ನು **ಶೃಣು** ಕೇಳು. **ಪುರುಜಿತ್, ರುಕ್ಮ, ರುಕ್ಮೇಷು, ಪೃಥು, ಜ್ಯಾಮಘ, ಸಂಜ್ಞಿತಾಃ** ಈ ಹೆಸರಿನವರು ಇದ್ದರು. ||೩೫||

**ತಾತ್ಪರ್ಯ-** ಈತನ ಮಗನು ರುಚಕನು. ಈತನಿಗೆ ಪುರುಜಿತ್, ರುಕ್ಮಿ, ರುಕ್ಮೇಷು, ಪೃಥು, ಜ್ಯಾಮಘರೆಂದು ಐದು ಜನ ಮಕ್ಕಳು ಆದರು.

**ಜ್ಯಾಮಘಸ್ತ್ವಪ್ರಜೋಽಪ್ಯನ್ಯಾಂ ಭಾರ್ಯಾಂ ಶೈಬ್ಯಾಪತಿರ್ಭಯಾತ್ |**
**ನಾವಿಂದಚ್ಛತ್ರುಭವನಾತ್ಕನ್ಯಾಂ ಭ್ರಷ್ಟಾಮಹಾರಷೀತ್ ||೩೬||**

**ಶೈಬ್ಯಾಪತಿಃ** ಶೈಬ್ಯಾ ಎಂಬುವಳ ಪತಿಯಾದ **ಜ್ಯಾಮಘಸ್ತು** ಜ್ಯಾಮಘನಾದರೂ **ಭಯಾತ್** ಪತ್ನಿಯ ಭಯದಿಂದ **ಅಪ್ರಜೋಽಪಿ** ಮಕ್ಕಳಾಗದಿದ್ದರೂ **ಅನ್ಯಾಂ**

**ಭಾರ್ಯಾಂ** ಬೇರೆ ಹೆಂಡತಿಯನ್ನು **ನ ಅವಿಂದತ್** ಹೊಂದಲಿಲ್ಲ. **ಭ್ರಷ್ಟಾಂ** ಯುದ್ಧದಲ್ಲಿ ಮಾರ್ಗಭ್ರಷ್ಟಳಾದ **ಕನ್ಯಾಂ** ಸ್ತ್ರೀಯನ್ನು **ಶತ್ರುಭವನಾತ್** ಶತ್ರುಗಳ ಮನೆಯಿಂದ **ಅಹಾರಷೀತ್** ಸಾಮರ್ಥ್ಯದಿಂದ ಕರೆತಂದನು. ||೩೬||

**ತಾತ್ಪರ್ಯ-** ಇವರಲ್ಲಿ ಜ್ಯಾಮಘನಿಗೆ ಶೈಬ್ಯಾ ಎಂಬ ಹೆಂಡತಿಯು. ಇವಳಿಗೆ ಸಂತಾನವಾಗಲಿಲ್ಲ. ಆದರೂ ಜ್ಯಾಮಘನು ಅವಳ ಭಯದಿಂದ ಬೇರೆ ಮದುವೆ ಮಾಡಿಕೊಂಡಿರಲಿಲ್ಲ. ಹೀಗಿರುವಾಗ ಈ ರಾಜನು ದಿಗ್ವಿಜಯಕ್ಕೆ ಹೊರಟು ಶತ್ರುಗಳನ್ನು ಜಯಿಸಿ ಅವರಲ್ಲಿದ್ದ ಸುಂದರಿಯಾದ ಒಬ್ಬ ಕನ್ಯೆಯನ್ನು ರಥದಲ್ಲಿ ಕುಳ್ಳಿರಿಸಿ ಕರೆತಂದನು.

**ರಥಸ್ಥಾಂ ತಾಂ ನಿರೀಕ್ಷ್ಯಾಹ ಶೈಬ್ಯಾ ಪತಿಮಮರ್ಷಿತಾ |**
**ಕೇಯಂ ಕುಹಕ ಮತ್‌ಸ್ಥಾನಂ ರಥಮಾರೋಪಿತೇತಿ ವೈ ||೩೭||**

**ಶೈಬ್ಯಾ** ಜ್ಯಾಮಘಪತ್ನಿಯು **ರಥಸ್ಥಾಂ** ರಥದಲ್ಲಿ ಕುಳಿತಿರುವ **ತಾಂ** ಸ್ತ್ರೀಯನ್ನು **ನಿರೀಕ್ಷ್ಯ** ನೋಡಿ **ಅಮರ್ಷಿತಾ** ಎರಡನೆಯ ಮದುವೆಗಾಗಿ ಕರೆತಂದಿರುವನೆಂಬ ಸಿಟ್ಟಿನಿಂದ **ಪತಿಂ** ಗಂಡನನ್ನು ಕುರಿತು **ಹೇ ಕುಹಕ** ಎಲೈ ದುಷ್ಟಬುದ್ಧಿಯೇ **ಮತ್ ಸ್ಥಾನಂ** ನನ್ನ ಸ್ಥಳವಾದ **ರಥಂ** ರಥವನ್ನು **ಆರೋಪಿತಾ** ಹತ್ತಿಸಲ್ಪಟ್ಟವಳು, **ಕಾ** ಯಾರು **ಇತಿ** ಹೀಗೆ **ಆಹ** ಮಾತನಾಡಿದಳು. ||೩೭||

**ತಾತ್ಪರ್ಯ-** ಹೆಂಡತಿಯಾದ ಶೈಬ್ಯೆಯು ಅದನ್ನು ಕಂಡು ಸಹಿಸಲಾರದೇ ಕೋಪದಿಂದ ಪತಿಯನ್ನು ಕುರಿತು ಎಲೈ ವಂಚಕನೇ, ನನ್ನ ಸ್ಥಾನದಲ್ಲಿ ಬೇರೊಬ್ಬ ಹೆಂಗಸನ್ನು ಕುಳ್ಳಿಸುವೆಯಾ? ಈ ರಥದ ಮೇಲೆ ಇವಳನ್ನು ಹೇಗೆ ಕೂಡಿಸಿದಿ ಎಂದು ಆರ್ಭಟಿಸಿದಳು.

**ಸ್ನುಷಾ ತವೇತ್ಯಭಿಹಿತಾ ಸ್ಮಯಂತೀ ಪತಿಮಬ್ರವೀತ್ |**
**ಅಹಂ ವಂಧ್ಯಾಽಸಪತ್ನೀ ಚ ಸ್ನುಷಾ ಯುಜ್ಯೇತ ಮೇ ಕಥಮ್ ||೩೮||**

ಆಗ ರಾಜನಿಂದ **ತವ** ನಿನ್ನ **ಸ್ನುಷಾ** ಸೊಸೆಯು **ಇತಿ** ಹೀಗೆ **ಅಭಿಹಿತಾ** ಹೇಳಿಸಿಕೊಳ್ಳಲ್ಪಟ್ಟ ಶೈಬ್ಯಾಳು **ಸ್ಮಯಂತೀ** ನಗುತ್ತಾ **ಅಹಂ** ನಾನು **ವಂಧ್ಯಾ** ಬಂಜೆಯು (ಮಕ್ಕಳಿಲ್ಲದವಳು) **ಅಸಪತ್ನೀ ಚ** ಸವತಿ ಇಲ್ಲದವಳು, ಇಂಥ **ಮೇ** ನನಗೆ **ಸ್ನುಷಾ** ಸೊಸೆಯು **ಕಥಂ ಯುಜ್ಯೇತ** ಹೇಗೆ ಯುಕ್ತಳಾದಾಳು **ಇತಿ** ಎಂದು **ಪತಿಂ** ಗಂಡನಿಗೆ **ಅಬ್ರವೀತ್** ಮಾತಾಡಿದಳು. ||೩೮||

**ತಾತ್ಪರ್ಯ-** ಅವಳ ಗರ್ಜನೆಗೆ ಭಯಪಟ್ಟು ರಾಜನು ಮೃದುವಾದ ವಾಕ್ಯದಿಂದ ಪ್ರಿಯೇ! ಇವಳು ನಿನ್ನ ಸವತಿಯಲ್ಲ. ನಿನ್ನ ಸೊಸೆಯೆಂದು ಭಾವಿಸು ಎಂದನು.

ಇದನ್ನು ಕೇಳಿ ಶೈಬ್ಯೆಯು ಕೋಪಸಹಿತ ಹಾಸ್ಯದಿಂದ ಪತಿಯನ್ನು ಕುರಿತು ಇದು ಹೇಗೆ ಒಪ್ಪತಕ್ಕ ಮಾತು. ಮೊದಲೇ ನಾನು ಬಂಜೆ. ನನಗೆ ಬೇರೆ ಸವತಿಯರೂ ಇಲ್ಲ. ಇವಳು ಹೇಗೆ ನನಗೆ ಸೊಸೆಯಾಗುವಳು. ಸುಳ್ಳಾಡಿ ನನ್ನನ್ನು ವಂಚಿಸುವೆಯಾ ಎಂದಳು.

**ಜನಯಿಷ್ಯಸಿ ಯಂ ರಾಜ್ಞಿ ತಸ್ಯೇಯಮುಪಪತ್ಸ್ಯತೇ ।**
**ಅನ್ವಮೋದಂತ ತದ್ವಿಶ್ವೇದೇವಾಃ ಪಿತರ ಏವ ಚ ॥೩೯॥**

**ಹೇ ರಾಜ್ಞಿ** ಎಲ್ಲೈ ರಾಣಿಯೇ! **ಯಂ** ಯಾವಾತನನ್ನು **ಜನಯಿಷ್ಯಸಿ** ಮುಂದೆ ಪಡೆಯುವೆಯೋ **ತಸ್ಯ** ಆ ಮಗನಿಗೆ **ಇಯಂ** ಇವಳು **ಉಪಪತ್ಸ್ಯತೇ** ಉಪಯೋಗವಾಗುವಳು ಎಂದು ಹೇಳಿದನು. **ತತ್** ಇವನು ಹೇಳಿದ ಆ ಮಾತನ್ನು ಇವನಿಂದ ಪೂರ್ವದಲ್ಲಿ ಆರಾಧಿತರಾದ **ವಿಶ್ವೇದೇವಾಃ** ವಿಶ್ವೇದೇವತೆಗಳು **ಪಿತರಶ್ಚ** ಪಿತೃದೇವತೆಗಳು (ಇವನ ಪ್ರಾಣ ಸಂಕಟ ನೋಡಿ) **ಅನ್ವಮೋದಂತ** ಹಾಗೆ ಆಗಲಿ ಎಂದು ಅನುಮೋದಿಸಿದರು. ॥೩೯॥

**ತಾತ್ಪರ್ಯ-** ಅದಕ್ಕೆ ರಾಜನು, ಎಲ್ಲೈ ಪ್ರಿಯೇ! ಈಗಲ್ಲದಿದ್ದರೂ ಮುಂದೆ ನಿನಗೆ ಪುತ್ರರು ಹುಟ್ಟಬಹುದಲ್ಲವೆ? ಆ ಮಗನಿಗೆ ಈ ಮಗಳನ್ನು ಮದುವೆ ಮಾಡುವೆನು ಎಂದನು. ಶೈಬ್ಯೆಯು ಸುಮ್ಮನಾದಳು. ಈ ರಾಜನು ಇದಕ್ಕೆ ಮೊದಲೇ ಬಹುಕಾಲದಿಂದ ಸಂತಾನಕ್ಕಾಗಿ ವಿಶ್ವೇದೇವತೆಗಳನ್ನು, ಪಿತೃದೇವತೆಗಳನ್ನು ಆರಾಧಿಸಿದ್ದನು. ಇವನ ಸಂಕಟ ನೋಡಿ ಅವರು ಅನುಗ್ರಹಿಸಿದರು.

**ಶೈಬ್ಯಾ ಗರ್ಭಮಧಾತ್ಕಾಲೇ ಕುಮಾರಂ ಸುಷವೇ ಶುಭಮ್ ।**
**ಸ ವಿದರ್ಭ ಇತಿ ಪ್ರೋಕ್ತ ಉಪಯೇಮೆ ಸ್ನುಷಾಂ ಸತೀಮ್ ॥೪೦॥**

**ಶೈಬ್ಯಾ** ಜ್ಯಾಮಘನ ಪತ್ನಿಯು **ಗರ್ಭಂ** ಗರ್ಭವನ್ನು **ಅಧಾತ್** ಧಾರಣ ಮಾಡಿದಳು. **ಕಾಲೇ** ಹತ್ತನೇ ತಿಂಗಳಲ್ಲಿ **ಶುಭಂ** ಸುಕುಮಾರನಾದ **ಕುಮಾರಂ** ಕುವರನನ್ನು **ಸುಷುವೇ** ಹೆತ್ತಳು. **ಸಃ** ಈ ಕುವರನು **ವಿದರ್ಭಃ ಇತಿ** ವಿದರ್ಭನೆಂದು **ಪ್ರೋಕ್ತಃ** ಕರೆಸಿಕೊಂಡನು. **ಸ್ನುಷಾಂ** ಮೊದಲೇ ಸೊಸೆಯೆಂದು ಹೇಳಲ್ಪಟ್ಟ **ಸತೀಂ** ಸ್ತ್ರೀಯನ್ನು **ಉಪಯೇಮೇ** ಮದುವೆಯಾದನು.

**ತಾತ್ಪರ್ಯ-** ಶೈಬ್ಯೆಯು ಗರ್ಭವತಿಯಾಗಿ ಸುಕುಮಾರನನ್ನು ಪಡೆದಳು. ಆ ಪುತ್ರನಿಗೆ ವಿದರ್ಭನೆಂದು ಹೆಸರು. ಇವನು ಮೊದಲೇ ತಂದೆಯು ಕರೆತಂದ ಸೊಸೆಯೆಂದು ಹೇಳಿದ ಕನ್ಯೆಯನ್ನು ವಿವಾಹವಾದನು. ॥೪೦॥

**★ ॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ವಿಂಶೋಽಧ್ಯಾಯಃ ॥ ★**

## ಅಥ ಏಕವಿಂಶೋಽಧ್ಯಾಯಃ

**ತಸ್ಯಾಂ ವಿದರ್ಭೋಽಜನಯತ್ಪುತ್ರೌ ನಾಮ್ನಾ ಕುಶಕ್ರಥೌ ।**
**ತೃತೀಯಂ ರೋಮಪಾದಂ ಚ ವೈದರ್ಭಂ ಕುಲನಂದನಮ್ ॥೧॥**

**ವಿದರ್ಭಃ** ವಿದರ್ಭನು, **ತಸ್ಯಾಂ** ಆ ಸ್ತ್ರೀಯಲ್ಲಿ, **ನಾಮ್ನಾ** ಹೆಸರಿನಿಂದ, **ಕುಶಕ್ರಥೌ** ಕುಶ, ಕ್ರಥರೆಂಬ, **ಪುತ್ರೌ** ಇಬ್ಬರು ಮಕ್ಕಳನ್ನು **ಅಜನಯತ್** ಹುಟ್ಟಿಸಿದನು. **ತೃತೀಯಂ** ಮೂರನೆಯವನಾದ, **ವೈದರ್ಭ್ಯಂ ಕುಲನಂದನಂ** ವಿದರ್ಭ ಕುಲಕ್ಕೆ ಆನಂದದಾಯಕನಾದ, **ರೋಮಪಾದಂ ಚ** ರೋಮಪಾದನನ್ನು ಸಹ, **ಅಜನಯತ್** ಹುಟ್ಟಿಸಿದನು. ॥೧॥

ತಾತ್ಪರ್ಯ ಃ- ರಾಜನೇ! ಈ ವಿದರ್ಭನಿಗೆ ಕುಶ, ಕ್ರಥ, ಎಂಬ ಮಕ್ಕಳಾದರು. ರೋಮಪಾದ ಮೂರನೆಯ ಮಗನು. ಈ ರೋಮಪಾದನು ವೈದರ್ಭಕುಲಕ್ಕೆ ಸಂತೋಷವನ್ನುಂಟು ಮಾಡಿದವನಾದನು. ॥೧॥

**ರೋಮಪಾದಸುತೋ ಬಭ್ರುರ್ಬಭ್ರೋಃ ಕೃತಿರಜಾಯತ ।**
**ಉಶಿಕಸ್ತತ್ಸುತಸ್ತಸ್ಮಾಚ್ಚೇದಿಶ್ಚೈದ್ಯಾದಯೋ ಯತಃ ॥೨॥**

**ರೋಮಪಾದಸುತಃ** ರೋಮಪಾದನ ಮಗನು, **ಬಭ್ರುಃ** ಬಭ್ರುವು, **ಬಭ್ರೋಃ** ಬಭ್ರುವಿಗೆ **ಕೃತಿಃ** ಕೃತಿ ಎಂಬುವನು **ಅಜಾಯತ** ಹುಟ್ಟಿದನು. **ತತ್ಸುತಃ** ಕೃತಿಯ ಮಗನು, **ಉಶಿಕಃ** ಉಶಿಕನು **ತಸ್ಮಾತ್** ಉಶಿಕನಿಂದ **ಯತಃ** ಯಾವನಿಂದ **ಚೈದ್ಯಾದಯಃ** ಶಿಶುಪಾಲ ಮೊದಲಾದವರು ಜನಿಸಿದರೋ ಅಂಥ **ಚೇದಿಃ** ಚೇದಿರಾಜನು (ದಮಘೋಷನು) ಉತ್ಪನ್ನನಾದನು. ॥೨॥

**ತಾತ್ಪರ್ಯ-** ಇವರಲ್ಲಿ ರೋಮಪಾದನಿಂದ ಬಭ್ರುವೂ ಅವನಿಂದ ಕೃತಿಯು ಜನಿಸಿದನು. ಕೃತಿಯಿಂದ ಉಶಿಕನೂ ಉಶಿಕನಿಂದ ಚೇದಿಯು (ದಮಘೋಷನು) ಜನಿಸಿದರು. ಈ ಚೇದಿಯಿಂದ ಶಿಶುಪಾಲನೇ ಮೊದಲಾದ ಚೇದಿದೇಶದ ರಾಜರು ಜನಿಸಿದರು. ॥೨॥

ಕುಶನಿಗೆ ಸಂತತಿ ಇಲ್ಲವಾದ್ದರಿಂದ ಕ್ರಥನ ವಂಶವನ್ನು ಹೇಳುವರು.

**ಕ್ರಥಸ್ಯ ಕುಂತಿಃ ಪುತ್ರೋಽಭೂದ್ವಲಸ್ತಸ್ಯಾಥ ನಿರ್ವೃತಿಃ ।**
**ತತೋ ದಶಾರ್ಹನಾಮಾಥ ತಸ್ಯ ವ್ಯೋಮಃ ಸುತಸ್ತತಃ ॥೩॥**

**ಕ್ರಥಸ್ಯ** ಕ್ರಥನಿಗೆ **ಕುಂತಿಃ** ಕುಂತಿಯು **ಪುತ್ರಃ** ಮಗನು **ಅಭೂತ್** ಆದನು. **ತಸ್ಯ** ಕುಂತಿಗೆ **ಬಲಃ** ಬಲನು **ಅಥ** ನಂತರ, **ನಿರ್ವೃತಿಃ** ನಿರ್ವೃತಿಯು **ತತಃ** ನಿರ್ವೃತಿಯಿಂದ

**ದಶಾರ್ಹನಾಮಾ** ದಶಾರ್ಹನೆಂಬುವನು **ಅಥ** ನಂತರ **ತಸ್ಯ** ದಶಾರ್ಹನಿಗೆ **ವ್ಯೋಮಃ** ವ್ಯೋಮನು **ಸುತಃ** ಮಗನು **ತತಃ** ವ್ಯೋಮನಿಂದ ।।೩।।

**ತಾತ್ಪರ್ಯ-** ವಿದರ್ಭಪುತ್ರನಾದ ಕ್ರಥನಿಗೆ ಕುಂತಿ ಎಂಬ ಮಗನಾದನು. ಹೀಗೆಯೇ ಕುಂತಿಯ ಸಂತತಿಯಲ್ಲಿ ಪುತ್ರಪೌತ್ರಕ್ರಮವಾಗಿ ಬಲಿ, (ವೃಷ್ಣಿ) ನಿರ್ವೃತಿ, ದಶಾರ್ಹ, ವ್ಯೋಮ ಎಂಬ ಮಕ್ಕಳಾದರು. ।।೩।।

**ಜೀಮೂತೋ ವಿಕೃತಿಸ್ತಸ್ಯ ಯಸ್ಯ ಭೀಮರಥಃ ಸುತಃ ।**
**ತತೋ ನವರಥಃ ಪುತ್ರೋ ಜಾತೋ ದಶರಥಸ್ತತಃ ।।೪।।**

**ತತಃ** ವ್ಯೋಮನಿಂದ, **ಜೀಮೂತಃ** ಜೀಮೂತನು, **ತಸ್ಯ** ಜೀಮೂತನಿಗೆ, **ವಿಕೃತಿಃ** ವಿಕೃತಿಯು, **ಯಸ್ಯ** ಯಾವ ವಿಕೃತಿಗೆ, **ಭೀಮರಥಃ** ಭೀಮರಥನು **ಸುತಃ** ಮಗನು, **ತಸ್ಯ** ಭೀಮರಥನಿಂದ, **ನವರಥಃ** ನವರಥನೆಂಬ **ಪುತ್ರಃ** ಮಗನು, **ಜಾತಃ** ಹುಟ್ಟಿದನು. **ತತಃ** ನವರಥನಿಂದ, **ದಶರಥಃ** ದಶರಥನು ಜನಿಸಿದನು (ಇವನು ರಾಮನ ತಂದೆಯಲ್ಲ) ದಶರಥನಿಂದ ಶಕುನಿಯು ಜನಿಸಿದನು. ।।೪।।

**ತಾತ್ಪರ್ಯ-** ವ್ಯೋಮನಿಂದ ಜೀಮೂತ, ಜೀಮೂತನಿಂದ ವಿಕೃತಿಯು ಜನಿಸಿದರು. ವಿಕೃತಿಯ ಮಗನೇ ಭೀಮರಥನು. ಭೀಮರಥನಿಗೆ ನವರಥನು ಜನಿಸಿದನು. ಆ ನವರಥನಿಂದ ದಶರಥನು ಜನಿಸಿದನು. ಈ ದಶರಥನು ರಾಮನ ತಂದೆಯಲ್ಲ. ।।೪।।

**ಕರಂಭಿಃ ಶಕುನೇಃ ಪುತ್ರೋ ದೇವರಾತಸ್ತದಾತ್ಮಜಃ ।**
**ದೇವಕ್ಷತ್ರಸ್ತತಸ್ತ ಸ್ಯ ಮಧುಃ ಕುಕ್ಕೂರಕಸ್ತತಃ ।।೫।।**

**ಶಕುನೇಃ** ಶಕುನಿಗೆ **ಕರಂಭಿಃ** ಕರಂಭಿಯು **ಪುತ್ರಃ** ಮಗನು **ತದಾತ್ಮಜಃ** ಕರಂಭಿಪುತ್ರನು **ದೇವರಾತಃ** ದೇವರಾತನು **ತತಃ** ದೇವರಾತನಿಂದ **ದೇವಕ್ಷತ್ರಃ** ದೇವಕ್ಷತ್ರನು **ಅಸ್ಯ** ದೇವಕ್ಷತ್ರನಿಗಾದರೂ **ಮಧುಃ** ಮಧುವು **ತತಃ** ಮಧುವಿನಿಂದ **ಕುಕ್ಕೂರಕಃ** ಕುಕ್ಕೂರಕನು ಈತನಿಗೆ ಅನು ಎಂಬ ಮಗನು. ।।೫।।

**ತಾತ್ಪರ್ಯ-** ದಶರಥನಿಂದ ಶಕುನಿಯು ಜನಿಸಿದನು. ಶಕುನಿಯಿಂದ ಕರಂಭಿ, ಇವನಿಂದ ದೇವರಾತ, ದೇವರಾತನಿಂದ ದೇವಕ್ಷತ್ರ , ಈತನಿಂದ ಮಧು ಎಂಬುವ ಮಕ್ಕಳಾದರು. ಮಧುವಿಗೆ ಕುಕ್ಕೂರಕ ಎಂಬ ಮಗನಾದನು. ।।೫।।

**ಪುರುಹೋತ್ರಸ್ತ ್ವನೋಃ ಪುತ್ರಸ್ತಸ್ಯಾಯುಃ ಸಾತ್ವತಸ್ತತಃ ।**
**ಭಜಮಾನೋऽಭಜಿರ್ದಿವ್ಯೋ ವೃಷ್ಣಿರ್ದೇವಾ ವೃಧೋಂಧಕಃ ।।೬।।**

**ಸತ್ವತಸ್ಯ ಸುತಾಃ ಸಪ್ತ ಮಹಾಭೋಜಶ್ಚ ಮಾರಿಷ ।**

**ಅನೋಃ** ಅನುವಿಗೆ **ಪುರುಹೋತ್ರಃ** ಪುರುಹೋತ್ರನು, **ಪುತ್ರಃ** ಮಗನು **ತಸ್ಯ** ಪುರುಹೋತ್ರನಿಗೆ **ಆಯುಃ** ಆಯುವು **ತತಃ** ಆಯುವಿನಿಂದ **ಸತ್ವತಃ** ಸತ್ವತನು, **ಹೇ ಮಾರೀಷ** ಆರ್ಯನೇ **ಸತ್ವತಸ್ಯ** ಸತ್ವತನಿಗೆ **ಭಜಮಾನಃ ಅಭಜಿಃ ದಿವ್ಯಃ ವೃಷ್ಣಿಃ ದೇವಾವೃಧಃ ಅಂಧಕಃ ಮಹಾಭೋಜಃ ಚ** ಈ ರೀತಿ **ಸಪ್ತ** ಏಳು **ಸುತಾಃ** ಮಕ್ಕಳು.

**ಭಜಮಾನಸ್ಯ ನಿಮ್ಲೋಚಿಃ ಕಿಂಕಣೋ ಧೃಷ್ಟಿರೇವ ಚ ॥೭॥**

**ಏಕಸ್ಯಾಮಾತ್ಮಜಾಃ ಪತ್ನ್ಯಾಮನ್ಯಸ್ಯಾಂ ಚ ತ್ರಯಃ ಸುತಾಃ ।**
**ಶತಾಜಿಚ್ಚ ಸಹಸ್ರಾಜಿದಯುತಾಜಿದಿತಿ ಪ್ರಭೋ ॥೮॥**

**ಪ್ರಭೋ** ರಾಜನೇ! **ಭಜಮಾನಸ್ಯ** ಸಾತ್ವಿಕನ ಹಿರಿಯ ಮಗನಾದ ಭಜಮಾನನಿಗೆ, **ಏಕಸ್ಯಾಂ ಪತ್ನ್ಯಾಂ** ಒಬ್ಬ ಹೆಂಡತಿಯಲ್ಲಿ, **ನಿಮ್ಲೋಚಿಃ ಕಿಂಕಣಃ ಧೃಷ್ಟಿಃ** ಈ ರೀತಿ **ಏವ ಚ ಆತ್ಮಜಾಃ** ಮೂವರು ಕುವರರು, **ಅನ್ಯಸ್ಯಾಂ ಚ** ಮತ್ತೊಬ್ಬ ಪತ್ನಿಯಲ್ಲಿ **ಶತಾಜಿತ್, ಸಹಸ್ರಾಜಿತ್, ಅಯುತಾಜಿತ್** ಇತಿ ಈ ರೀತಿ **ತ್ರಯಃ** ಮೂರು **ಸುತಾಃ** ಮಕ್ಕಳು ಒಟ್ಟು ಆರು ಜನ ಪುತ್ರರು. ॥೮॥

ಕುಕ್ಕೂರಕನಿಗೆ ಅನು ಎಂಬ ಮಗನಾದನು. ಅನುವಿಗೆ ಪುರುಹೋತ್ರ ಎಂಬ ಮಗನಾದನು. ಆ ಪುರುಹೋತ್ರನಿಗೆ ಆಯು ಎಂಬ ಮಗನಾದನು. ಆಯುವಿಗೆ ಸತ್ವತ ಎಂಬ ಮಗನಾದನು. ಈ ಸತ್ವತನಿಗೆ ಭಜಮಾನ, ಭಜಿ, ದಿವ್ಯ, ವೃಷ್ಣಿ, ದೇವಾವೃಧ, ಅಂಧಕ, ಮಹಾಭೋಜರೆಂಬ ಏಳು ಮಂದಿ ಮಕ್ಕಳು ಜನಿಸಿದರು.

**ತಾತ್ಪರ್ಯ-** ಸಾತ್ವಿಕನ ಹಿರಿಯ ಮಗನಾದ ಭಜಮಾನನಿಗೆ ಇಬ್ಬರು ಪತ್ನಿಯರು ಇದ್ದರು. ಒಬ್ಬಳಲ್ಲಿ ನಿಮ್ಲೋಚಿ, ಕಿಂಕಣ, ಧೃಷ್ಟಿ ಎಂಬ ಮೂವರು ಪುತ್ರರು ಆದರು. ಇನ್ನೊಬ್ಬ ಪತ್ನಿಯಲ್ಲಿ ಶತಾಜಿತ್, ಸಹಸ್ರಾಜಿತ್, ಅಯುತಾಜಿತ್ ಎಂಬ ಮೂವರು ಹೀಗೆ ಆರು ಜನ ಮಕ್ಕಳಾದರು. ॥೮॥

**ಬಭ್ರುರ್ದೇವಾವೃಧಸುತಸ್ತಯೋಃ ಶ್ಲೋಕಂ ಪಠಂತ್ಯಮುಮ್ ।**
**ಯಥೈವ ಶೃಣುಮೋ ದೂರಾತ್ಸಂಪಶ್ಯಾಮಸ್ತಥಾಂತಿಕಾತ್ ॥೯॥**

**ದೇವಾವೃಧಸುತಃ** ಸಾತ್ವತನ ಐದನೆಯ ಮಗನಾದ ದೇವಾವೃಧನ ಮಗನು **ಬಭ್ರುಃ** ತಂದೆ ಮಗನ ಮಾಹಾತ್ಮ್ಯವನ್ನು ಹೇಳುವ, **ಅಮುಂ** ಈ ಶ್ಲೋಕವನ್ನು **ಪಠಂತಿ** ಪಠಿಸುತ್ತಾರೆ. **ದೂರಾತ್** ದೂರದಿಂದ, **ಯದೇವ** ಏನನ್ನು, **ಶೃಣುಮಃ** ಕೇಳುವೆವೋ, **ಅಂತಿಕಾತ್** ಸಮೀಪದಿಂದ, **ತಥಾ ಏವ** ಹಾಗೆಯೇ, **ಸಂಪಶ್ಯಾಮಃ**

ನೋಡುತ್ತೇವೆ. ಆದರೆ ಬೇರೆಯವರಲ್ಲಿ ದೂರದಲ್ಲಿ ಬಹಳ ಕೇಳಿದ್ದು ಹತ್ತಿರವಾದಾಗ ಸ್ವಲ್ಪವೇ ಗುಣಗಳು ಕಂಡು ಬರುವವು. ಇವರಲ್ಲಿ ಮಾತ್ರ ಕೇಳಿದಂತೆಯೇ ಎಲ್ಲ ಗುಣಗಳು ಇದ್ದುದು ಕಂಡುಬರುವದು ಎಂದರ್ಥ. ।।೯।।

**ತಾತ್ಪರ್ಯ-** ಸತ್ವತನ ಐದನೆಯ ಮಗನಾದ ದೇವಾವೃಧನಿಗೆ ಬಭ್ರು ಎಂಬ ಮಗನಾದನು. ಈ ತಂದೆ ಮಕ್ಕಳ ಪ್ರಭಾವವನ್ನು ಕುರಿತು ಆರ್ಯರಿಂದ ಕೀರ್ತಿಸಲ್ಪಟ್ಟ ಶ್ಲೋಕ ಉಂಟು. ಅದರ ಭಾವವು ಹೀಗಿದೆ. ''ನಾವು ದೇವಾವೃಧ, ಬಭ್ರುಗಳ ಪ್ರಭಾವವನ್ನು ದೂರದಲ್ಲಿದ್ದು ಕಿವಿಯಿಂದ ಹೇಗೆ ಕೇಳುತ್ತಿದ್ದೇವೋ ಅದೇ ವಿಧವಾಗಿ ಪ್ರತ್ಯಕ್ಷದಲ್ಲಿಯೂ ಸಮೀಪದಲ್ಲಿದ್ದು ಕಾಣುತ್ತಿರುವೆವು. ।।೯।।

**ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಃ ಸಮಃ ।**
**ಪುರುಷಾಃ ಪಂಚಷಷ್ಟಿಶ್ಚ ಷಟ್ ಸಹಸ್ರಾಣಿ ಚಾಷ್ಟ ಚ ।।೧೦।।**

**ಯೇಽಮೃತತ್ವಮನುಪ್ರಾಪ್ತಾ ಬಭ್ರೋರ್ದೇವಾವೃಧಾದಪಿ ।**

**ಬಭ್ರುಃ** ಬಭ್ರುವು **ಮನುಷ್ಯಾಣಾಂ** ಮನುಷ್ಯರ ಮಧ್ಯದಲ್ಲಿ, **ಶ್ರೇಷ್ಠಃ** ಉತ್ತಮನು, **ದೇವಾವೃಧಃ** ದೇವಾವೃಧನು, **ದೇವೈಃ** ದೇವತೆಗಳಿಂದ, **ಸಮಃ** ಸಮನು **ಬಭ್ರೋಃ ದೇವಾವೃಧಾದಪಿ** ಇವರಿಬ್ಬರೂ ತಂದೆ ಮಕ್ಕಳಿಂದ, (ಉಪದೇಶವನ್ನು ಪಡೆದ) **ಪಂಚಷಷ್ಟಿಃ** ಅರವತ್ತೈದು, **ಷಟ್ ಸಹಸ್ರಾಣಿ** ಆರು ಸಾವಿರ, **ಅಷ್ಟ** ಎಂಟು, ಅಂತೂ ಆರು ಸಾವಿರದ ಎಪ್ಪತ್ತುಮೂರು, **ಪುರುಷಾಃ** ಜನರು, **ಅಮೃತತ್ವಂ** ಮುಕ್ತಿಯನ್ನು, **ಅನುಪ್ರಾಪ್ತಾಃ** ಹೊಂದಿದರು. ।।೧೦।।

**ತಾತ್ಪರ್ಯ-** ಮನುಷ್ಯರಲ್ಲಿ ಬಭ್ರುವಿಗಿಂತ ಗುಣಾಢ್ಯರು ಬೇರೊಬ್ಬರಿಲ್ಲ. ದೇವಾವೃಧನು ದೇವತೆಗಳಿಗೆ ಸಮಾನನು. ಈ ತಂದೆಮಕ್ಕಳಿಬ್ಬರೂ ತಮ್ಮ ಉಪದೇಶ ಮಹಿಮೆಯಿಂದ ಆರುಸಾವಿರದ ಎಪ್ಪತ್ಮೂರು ಜನರನ್ನು ಮುಕ್ತಿ ಹೊಂದಿಸಿದರು. ಈ ರೀತಿಯಾಗಿ ವರ್ಣಿತವಾಗಿದೆ. ।।೧೦।।

**ಮಹಾಭೋಜೋಽತಿಧರ್ಮಾತ್ಮಾ ಭೋಜಾ ಆಸಂಸ್ತದನ್ವಯೇ ।।೧೧।।**

**ಮಹಾಭೋಜಃ** ಸಾತ್ವತನ ಏಳನೆಯ ಮಗನು, **ಅತಿಧರ್ಮಾತ್ಮಾ** ಪರಮ ಧಾರ್ಮಿಕನು, **ತದನ್ವಯೇ** ಆ ಮಹಾಭೋಜನ ವಂಶದಲ್ಲಿ, **ಭೋಜಾಃ** ಭೋಜರೆಂಬ ಹೆಸರಿನವರು, **ಆಸನ್** ಆದರು. ।।೧೧।।

**ತಾತ್ಪರ್ಯ-** ಸಾತ್ವತನ ಏಳನೆಯ ಪುತ್ರನಾದ ಮಹಾಭೋಜನು ಮಹಾ-ಧರ್ಮಾತ್ಮನೆನಿಸಿಕೊಂಡಿದ್ದನು. ಇವನಿಂದ ಹುಟ್ಟಿದ ರಾಜರೆಲ್ಲರೂ ಭೋಜರೆಂದೇ ಕರೆಯಲ್ಪಡುವರು. ।।೧೧।।

**ವೃಷ್ಣೇಃ ಸುಮಿತ್ರಃ ಪುತ್ರೋಽಭೂದ್ಯುಧಾಜಿಚ್ಚ ಪರಂತಪ ।**
**ಶಿನಿಸ್ತಸ್ಯಾನಮಿತ್ರಶ್ಚ ನಿಮ್ನೋಽಭೂದನಮಿತ್ರತಃ ॥೧೨॥**

**ಪರಂತಪ** ಶತ್ರುತಾಪಕನಾದ ರಾಜನೇ! **ವೃಷ್ಣೇಃ** ಸಾತ್ವತನ ನಾಲ್ಕನೆಯ ಮಗನಾದ ವೃಷ್ಣಿಗೆ **ಸುಮಿತ್ರಃ** ಸುಮಿತ್ರನು **ಚ** ಮತ್ತು **ಯುಧಾಜಿತ್** ಯುಧಾಜಿತನು **ಪುತ್ರಃ** ಮಗನು **ಅಭೂತ್** ಜನಿಸಿದನು. **ತಸ್ಯ** ಸುಮಿತ್ರನಿಗೆ (ಯುಧಾಜಿತ್ತಿಗೆ) **ಶಿನಿಃ** ಶಿನಿಯು **ತಸ್ಯ** ಶಿನಿಗೆ **ಅನಮಿತ್ರಃ** ಅನಮಿತ್ರನು (ಯುಧಾಜಿತ್ತಿಗೆ ಶಿನಿ, ಅನಮಿತ್ರರು ಪುತ್ರರು ಇಬ್ಬರೆಂದು ಛಲಾರಿ) **ಅನಮಿತ್ರತಃ** ಅನಮಿತ್ರನಿಂದ **ನಿಮ್ನಃ** ನಿಮ್ನನು **ಅಭೂತ್** ಜನಿಸಿದನು. ॥೧೨॥

**ತಾತ್ಪರ್ಯ-** ಸಾತ್ವತನ ನಾಲ್ಕನೇ ಮಗನಾದ ವೃಷ್ಣಿಗೆ ಸುಮಿತ್ರ, ಯುಧಾಜಿತ್ತೆಂಬ ಇಬ್ಬರು ಮಕ್ಕಳಾದರು. ಇವರಲ್ಲಿ (ಯುಧಾಜಿತ್ತಿಗೆ) ಸುಮಿತ್ರನಿಗೆ ಶಿನಿ, ಅನಮಿತ್ರರೆಂದು ಈರ್ವರು ಪುತ್ರರು ಅನಮಿತ್ರನಿಗೆ ನಿಮ್ನನು ಜನಿಸಿದನು.

**ಸತ್ರಾಜಿತಃ ಪ್ರಸೇನಶ್ಚ ನಿಮ್ನಸ್ಯಾಪ್ಯಾಸತುಃ ಸುತೌ ।**
**ಅನಮಿತ್ರಸುತೋ ಯೋಽನ್ಯಃ ಶಿನಿಸ್ತಸ್ಯ ಚ ಸತ್ಯಕಃ ॥೧೩॥**

**ನಿಮ್ನಸ್ಯ ಅಪಿ** ನಿಮ್ನನಿಗಾದರೂ, **ಸತ್ರಾಜಿತಃ** ಸತ್ರಾಜಿತನು, (ಅಕಾರಾಂತ ಶಬ್ದ) **ಪ್ರಸೇನಃ ಚ** ಪ್ರಸೇನನೂ ಸಹ, **ಸುತೌ** ಮಕ್ಕಳು **ಆಸತುಃ** ಆದರು, **ಅನಮಿತ್ರಸುತಃ** ಅನಮಿತ್ರನ ಮಗನಾದ, **ಅನ್ಯಃ** ಹಿಂದೆ ಹೇಳಿದ ನಿಮ್ನನಿಂದ ಭಿನ್ನನಾದ (ಛಲಾರಿ ಪ್ರಕಾರ) ಸುಮಿತ್ರನ ಮಗನಾದ ಶಿನಿಯಿಂದ ಭಿನ್ನನಾದ **ಯಃ** ಯಾವ **ಶಿನಿಃ** ಶಿನಿಯೋ **ತಸ್ಯ** ಅವನಿಗೆ **ಸತ್ಯಕಃ** ಸತ್ಯಕನು. ॥೧೩॥

**ತಾತ್ಪರ್ಯ-** ನಿಮ್ನನಿಗೆ ಸತ್ರಾಜಿತ್ ಪ್ರಸೇನರೆಂಬ ಇಬ್ಬರು ಮಕ್ಕಳು. ಅನಮಿತ್ರನಿಗೆ ನಿಮ್ನನಲ್ಲದೆ ಶಿನಿ, ಪೃಶ್ನಿಯೆಂದೂ ಬೇರಿಬ್ಬರು ಪುತ್ರರಿದ್ದರು. ಶಿನಿಯಿಂದ (ಸುಮಿತ್ರನ ಮಗನಲ್ಲ) ಸತ್ಯಕನು ಜನಿಸಿದನು. ॥೧೩॥

**ಯುಯುಧಾನಃ ಸಾತ್ಯಕಿರ್ವೈ ಜಯಸ್ತಸ್ಯ ಕುಣಿಸ್ತತಃ ।**
**ಯುಗಂಧರೋಽನಮಿತ್ರಸ್ಯ ಪೃಶ್ನಿಃ ಪುತ್ರೋಽಪರಸ್ತತಃ ॥೧೪॥**

**ಸಾತ್ಯಕಿಃ** ಸತ್ಯಕನ ಮಗನು **ಯುಯುಧಾನಃ** ಯುಯುಧಾನನು (ಇದು ರೂಢನಾಮವು, ತ್ರಿಯುತ ಎಂದೂ ಹೆಸರು ಇದೆ. ಸಾತ್ಯಕಿ ಎಂಬ ಪ್ರಸಿದ್ಧಿ ಇದೆ). **ತಸ್ಯ** ಸಾತ್ಯಕಿಗೆ **ಜಯಃ** ಜಯನು, **ತತಃ** ಜಯನಿಂದ **ಕುಣಿಃ** ಕುಣಿ ಎಂಬುವನು ಈ ಕುಣಿಗೆ, **ಯುಗಂಧರಃ** ಯುಗಂಧರನು **ಅನಮಿತ್ರಸ್ಯ** ಅನಮಿತ್ರನಿಗೆ **ಪೃಶ್ನಿಃ** ಪೃಶ್ನಿಯು **ಅಪರಃ** ಬೋರೊಬ್ಬ **ಪುತ್ರಃ** ಮಗನು. (ಅಂತೂ ಅನಮಿತ್ರನಿಗೆ ನಿಮ್ನ, ಶಿನಿ, ಪೃಶ್ನಿ ಎಂದು ಮೂರು ಮಕ್ಕಳೆಂದಾಯಿತು)

**ತಾತ್ಪರ್ಯ-** ಸತ್ಯಕನ ಮಗನು ಯುಯುಧಾನನು. ಸಾತ್ಯಕಿಯೆಂದು ಇವನನ್ನೇ ಕರೆಯುವರು. ಯುಯುಧಾನನಿಂದ ಜಯನು, ಜಯನಿಗೆ ಕುಣಿಯು ಕುಣಿಗೆ ಯುಗಂಧರನು ಹೀಗೆ ಜನಿಸಿದರು. ಅನಮಿತ್ರನಿಗೆ ಪೃಶ್ನಿ ಎಂಬ ಇನ್ನೊಬ್ಬ ಮಗನಿದ್ದನು.

**ಶ್ವಫಲ್ಕಶ್ಚಿತ್ರರಥಶ್ಚೈವ ಗಾಂದಿನ್ಯಾಂ ತು ಶ್ವಫಲ್ಕತಃ ।**
**ಅಕ್ರೂರಪ್ರಮುಖಾ ಆಸನ್ ಪುತ್ರಾ ದ್ವಾದಶ ವಿಶ್ರುತಾಃ ।।೧೫।।**

**ತತಃ** ಪೃಶ್ನಿಯಿಂದ **ಶ್ವಫಲ್ಕಃ** ಶ್ವಫಲ್ಕನು **ಚಿತ್ರರಥಃ** ಚಿತ್ರರಥನೂ ಕೂಡ ಜನಿಸಿದರು. **ಶ್ವಫಲ್ಕಾತ್** ಶ್ವಫಲ್ಕನಿಂದ **ಗಾಂದಿನ್ಯಾಂ** ಗಾಂದಿನಿ ಎಂಬುವಳಲ್ಲಿ (ಇದರಿಂದ ಅವಳು ಪುಣ್ಯಶಾಲಿಯೆಂದು ಸೂಚಿಸುವರು) **ಅಕ್ರೂರಪ್ರಮುಖಾಃ** ಅಕ್ರೂರನೇ ಮುಖ್ಯನಾಗಿ ಉಳ್ಳ **ದ್ವಾದಶ** ಹನ್ನೆರಡು **ವಿಶ್ರುತಾಃ** ಪ್ರಸಿದ್ಧರಾದ **ಪುತ್ರಾಃ** ಮಕ್ಕಳು **ಆಸನ್** ಆದರು. ಅಕ್ರೂರನನ್ನು ಬಿಟ್ಟು ಹನ್ನೆರಡು ಅಥವಾ ಸೇರಿ ಹನ್ನೆರಡು ಎರಡು ಪಕ್ಷವಿದೆ.

**ತಾತ್ಪರ್ಯ-** ಈ ಪೃಶ್ನಿಗೆ ಶ್ವಫಲ್ಕ ಚಿತ್ರರಥರೆಂದು ಈರ್ವರು ಸುತರು ಜನಿಸಿದರು. ಇವರಲ್ಲಿ ಶ್ವಫಲ್ಕನಿಗೆ ಗಾಂದಿನಿಯೆಂಬ ಭಾಗ್ಯವಂತಳಾದ ಪತ್ನಿಯಲ್ಲಿ ಅಕ್ರೂರನೇ ಪ್ರಧಾನವಾಗಿ ಉಳ್ಳ ಹನ್ನೆರಡು ಜನ ಮಕ್ಕಳು ಜನಿಸಿದರು. ।।೧೫।।

**ಆಸಂಗಃ ಸಾರಮೇಯಶ್ಚ ಮೃದುರೋ ಮೃದುವಿದ್ಗಿರಿಃ ।**
**ಧರ್ಮೋ ವಿಧೃಷ್ಟಕರ್ಮಾ ಚ ಕ್ಷೇತ್ರೋಪೇಕ್ಷೋಽರಿಮರ್ದನಃ ।।೧೬।।**

**ಶತ್ರುಘ್ನೋ ಗಂಧಮೋದಾಹ್ವಃ ಪ್ರತಿಬಾಹುಶ್ಚ ದ್ವಾದಶ ।**
**ತೇಷಾಂ ಸ್ವಸಾ ಸುಚಾರಾಖ್ಯಾ ದ್ವಾವಕ್ರೂರಸುತಾವಪಿ ।।೧೭।।**

**ದೇವವಾನುಪದೇವಶ್ಚ ತಥಾ ಚಿತ್ರರಥಾತ್ಮಜಃ ।**
**ಪೃಥುರ್ವಿಪೃಥುಧಾತಾದ್ಯಾ ಬಹವೋ ವೃಷ್ಣಿನಂದನಾಃ ।।೧೮।।**

**ಆಸಂಗಃ, ಸಾರಮೇಯಃ ಮೃದುರಃ, ಮೃದುವಿದ್‌ಗಿರಿಃ, ಧರ್ಮಃ, ವಿಧೃಷ್ಟಕರ್ಮಾ, ಕ್ಷೇತ್ರಃ, ಉಪೇಕ್ಷಃ, ಅರಿಮರ್ದನಃ, ಶತ್ರುಘ್ನಃ, ಗಂಧಮೋದ, ಪ್ರತಿಬಾಹು, ಇತಿ** ಹೀಗೆ, **ದ್ವಾದಶ** ಹನ್ನೆರಡು **ತೇಷಾಂ** ಇವರುಗಳಿಗೆ **ಸುಚಾರಾಖ್ಯಾ** ಸುಚಾರಾ ಎಂಬ, **ಸ್ವಸಾ** ತಂಗಿಯು, **ಅಕ್ರೂರ ಸುತೌ ಅಪಿ** ಹಿರಿಯನಾದ ಅಕ್ರೂರನ ಮಕ್ಕಳಾದರೂ, **ದೇವವಾನ್** ದೇವವಾನನು, **ಉಪದೇವಃ ಚ** ಉಪದೇವನೂ ಎಂದು, **ದ್ವೌ** ಇಬ್ಬರು, **ತಥಾ** ಹಾಗೂ **ಚಿತ್ರರಥಾತ್ಮಜಃ** ಶ್ವಫಲ್ಕನ ತಮ್ಮನಾದ ಚಿತ್ರರಥನ ಮಗನು, **ಪೃಥುಃ** ಪೃಥುವು, **ವಿಪೃಥುಧಾತಾದ್ಯಾಃ** ವಿಪೃಥುಧಾತಾ ಮೊದಲಾದ **ಬಹವಃ** ಬಹಳ ಜನರು, **ಚಿತ್ರರಥಾತ್ಮಜಾಃ** ಚಿತ್ರರಥನ ಮಕ್ಕಳು, **ವೃಷ್ಣಿನಂದನಾಃ** ಹಿಂದೆ ಹೇಳಿದವರೆಲ್ಲರೂ ಸಾತ್ವತನ ಮಗ ವೃಷ್ಣಿ ಕುಲಕ್ಕೆ ಆನಂದಕಾರಕರು. ।।೧೬-೧೭-೧೮।।

**ತಾತ್ಪರ್ಯ-** ಆಸಂಗ, ಸಾರಮೇಯ, ಮೃದುರ, ಮೃದುವಿದ್‌ಗಿರಿಃ, ಧರ್ಮ ವಿಧೃಷ್ಟಕರ್ಮ, ಕ್ಷೇತ್ರ , ಉಪೇಕ್ಷ, ಶತ್ರುಘ್ನ, ಗಂಧಮೋದ, ಪ್ರತಿಬಾಹು ಈ ರೀತಿ ಹನ್ನೆರಡು ಮಂದಿ ಪುತ್ರರಾದರು. ಇವರೆಲ್ಲರೂ ಅರಿಮರ್ದನರಾಗಿದ್ದರು. ಇವರಿಗೆ ಸುಚಾರಾ ಎಂಬ ಸಹೋದರಿಯೊಬ್ಬಳುಂಟು. ಹಿರಿಯನಾದ ಅಕ್ರೂರನಿಗೆ ಇಬ್ಬರು ಮಕ್ಕಳಿದ್ದರು. ।।೧೬.೧೭।।

**ತಾತ್ಪರ್ಯ-** ದೇವವಂತನೆಂದೂ ಉಪದೇವನೆಂದೂ ಆ ಇಬ್ಬರು ಪ್ರಸಿದ್ಧರಾಗಿದ್ದರು. ಅಕ್ರೂರನ ಕಕ್ಕನಾದ (ಶ್ವಫಲ್ಕನ ತಮ್ಮ) ಚಿತ್ರರಥನಿಗೆ ಪೃಥು, ವಿಪೃಥು, ಧಾತಾ ಮುಂತಾದ ಅನೇಕ ಮಕ್ಕಳಿದ್ದರು. ಇವರೆಲ್ಲರೂ ಸಾತ್ವತನ ಮಗ ವೃಷ್ಣಿ ಕುಲಕ್ಕೆ ಆನಂದದಾಯಕರು. ।।೧೮।।

ಸಾತ್ವತನ ಮಗನಾದ ಅಂಧಕನ ವಂಶವನ್ನು ಹೇಳುವರು.

**ಕುಕುರೋ ಭಜಮಾನಶ್ಚ ಶುಚಿಃ ಕಂಬಲಬರ್ಹಿಷಃ ।**
**ಕುಕುರಸ್ಯ ಸುತೋ (ವಹ್ನಿ) ವೃಷ್ಣಿರ್ವಿಲೋಮಾಸ್ತನಯಸ್ತತಃ ।।೧೯।।**

**ಕುಕುರಃ ಭಜಮಾನಃ ಶುಚಿಃ, ಕಂಬಲಬರ್ಹಿಷಃ** ಇವರು ನಾಲ್ಕು ಜನ ಅಂಧಕನ ಮಕ್ಕಳು. **ಕುಕುರಸ್ಯ** ಕುಕುರನಿಗೆ, **ವೃಷ್ಣಿಃ** ವೃಷ್ಣಿಯು **ಸುತಃ** ಮಗನು. **ತತಃ** ವೃಷ್ಣಿಯಿಂದ **ವಿಲೋಮಾಃ** ವಿಲೋಮನು **ತನಯಃ** ಮಗನು. ।।೧೯।।

**ತಾತ್ಪರ್ಯ-** ಕುಕುರ, ಭಜಮಾನ, ಶುಚಿ, ಕಂಬಲಬರ್ಹಿಷರು ನಾಲ್ಕು ಜನರು ಅಂಧಕನ ಮಕ್ಕಳು ಎಂದು ತಿಳಿಯಬೇಕು. ಈ ವಿಷಯ ವಿಷ್ಣುಪುರಾಣದಲ್ಲಿ ಹೇಳಿದೆ. ಈ ಕುಕುರನ ಸುತನು. ವೃಷ್ಣಿ (ವಹ್ನಿ)ಯೂ ಅವನಿಂದ ವಿಲೋಕಮನು ಜನಿಸಿದನು. ।।೧೯।।

**ಕಪೋತರೋಮಾ ತಸ್ಯಾನುಃ ಸಖಾ ಯಸ್ಯ ಚ ತುಂಬುರುಃ ।**
**ಅನೋಶ್ಚ ದುಂಧುಭಿಸ್ತಸ್ಯ ದರಿದ್ಯೋತಃ ಪುನರ್ವಸುಃ ।।೨೦।।**

**ತಸ್ಯ** ವಿಲೋಮನಿಗೆ **ಕಪೋತರೋಮಾ** ಕಪೋತರೋಮನು **ತಸ್ಯ** ಕಪೋತರೋಮನಿಗೆ **ಅನುಃ** ಅನುವು **ಯಸ್ಯ** ಯಾವನಿಗೆ **ಸಖಾ** ಸ್ನೇಹಿತನು **ತುಂಬುರುಃ** ದೇವಗಂಧರ್ವನಾದ ತುಂಬುರುವು **ತಸ್ಯ** ಅನುವಿಗೆ **ಅಂಧಕಃ** ಅಂಧಕನು ಅಂಧಕನಿಂದ **ದುಂದುಭಿಃ** ದುಂದುಭಿಯು ಹೀಗೆ ಮಧ್ಯದಲ್ಲಿ ಅಂಧಕನನ್ನು ಸೇರಿಸಬೇಕು. ಏಕೆಂದರೆ ಪರಾಶರರು ''ಕುಕುರಭಜಮಾನ-ಶುಚಿಕಂಬಲಬರ್ಹಿಷಸ್ತಥಾಽಂಧಕಸ್ಯ ಪುತ್ರಾ ಇತಿ'' ಹೀಗೆ ಹೇಳಿದ್ದಾರೆ. (ಸತ್ಯಧರ್ಮರು ೩) ಛಲಾರಿ ಪ್ರಕಾರ ಅನುವಿಗೆ **ದುಂಧುಭಿಃ ತಸ್ಯ** ದುಂದುಭಿಗೆ

ದರಿದ್ಯೋತನು. **ತಸ್ಮಾತ್** ದರಿದ್ಯೋತನಿಂದ **ಪುನರ್ವಸುಃ** ಪುನರ್ವಸುವು ಮಗನು. ॥೨೦॥

**ತಾತ್ಪರ್ಯ-** ವಿಲೋಮಕನಿಂದ ಕಪೋತರೋಮನು ಜನಿಸಿದನು. ಈ ಕಪೋತರೋಮನಿಗೆ ಅನು ಎಂಬ ಪುತ್ರನು. ಇವನಿಗೆ ತುಂಬುರು ಎಂಬ ದೇವಗಂಧರ್ವನು ಸ್ನೇಹಿತನು. ಅನುವಿಗೆ ಅಂಧಕನು ಅಂಧಕನಿಂದ ದುಂಧುಬಿಯು ನಂತರ ದರಿದ್ಯೋತನು ಇವನಿಂದ ಪುನರ್ವಸುವು ಜನಿಸಿದನು. ॥೨೦॥

**ತಸ್ಯಾಹುಕಶ್ಚಾಹುಕೀ ಚ ಕನ್ಯಾ ದ್ವಾವಾಹುಕಾತ್ಮಜೌ ।**
**ದೇವಕಶ್ಚೋಗ್ರಸೇನಶ್ಚ ಚತ್ವಾರೋ ದೇವಕಾತ್ಮಜಾಃ ॥೨೧॥**

**ತಸ್ಯ** ಪುನರ್ವಸುವಿಗೆ, **ಆಹುಕಃ** ಆಹುಕನೆಂಬ ಮಗನು, **ಆಹುಕೀ ಚ** ಆಹುಕೀ ಎಂಬ **ಕನ್ಯಾ** ಮಗಳು, ಹೀಗೆ ಇಬ್ಬರು ಮಕ್ಕಳು. **ದೇವಕಃ** ದೇವಕನು **ಉಗ್ರಸೇನಃ** ಉಗ್ರಸೇನನು ಎಂಬ **ದ್ವೌ** ಇಬ್ಬರು **ಆಹುಕಾತ್ಮಜೌ** ಆಹುಕನ ಮಕ್ಕಳು **ದೇವಕಾತ್ಮಜಾಃ** ದೇವಕನ ಮಕ್ಕಳು **ಚತ್ವಾರಃ** ನಾಲ್ಕು ಜನರು ಇವರನ್ನೇ ಹೇಳುನಾರು.

**ತಾತ್ಪರ್ಯ-** ಪುನರ್ವಸುವಿಗೆ ಆಹುಕನು ಜನಿಸಿದನು. ಆಹುಕಿ ಎಂಬ ಕನ್ಯೆಯೂ ಇದ್ದಳು. ಆಹುಕನಿಗೆ ದೇವಕ ಉಗ್ರಸೇನರೆಂಬ ಇಬ್ಬರು ಪುತ್ರರು. ದೇವಕನಿಗೆ ನಾಲ್ಕುಜನ ಮಕ್ಕಳಾದರು. ॥೨೧॥

**ದೇವವಾನುಪದೇವಶ್ಚ ಸುದೇವೋ ದೇವವರ್ಧನಃ ।**
**ತೇಷಾಂ ಸ್ವಸಾರಃ ಸಪ್ತಾಸನ್ ಶಾಂತಿದೇ[೧]ವಾದಯೋ ನೃಪ ॥೨೨॥**

**ದೇವವಾನ್, ಉಪದೇವ, ಸುದೇವಃ, ದೇವವರ್ಧನಃ** ಹೀಗೆ ನಾಲ್ಕು ಜನ ದೇವಕನ ಮಕ್ಕಳು. **ನೃಪ** ರಾಜನೇ **ತೇಷಾಂ** ದೇವವಂತ, ಮೊದಲಾದವರಿಗೆ **ಶಾಂತಿದೇವಾದಯಃ** ಶಾಂತಿದೇವಾ (ಧೃತದೇವಾ) ಮೊದಲಾದ **ಸಪ್ತ** ಏಳು **ಸ್ವಸಾರಃ** ತಂಗಿಯರು, **ಆಸನ್** ಇದ್ದರು.॥೨೨॥

**ತಾತ್ಪರ್ಯ-** ದೇವವಂತ, ಉಪದೇವ, ಸುದೇವ, ದೇವವರ್ಧನರೆಂದು ಅವರು ಪ್ರಸಿದ್ಧರಾದರು. ಈ ನಾಲ್ಕು ಜನರಿಗೆ ಶಾಂತಿದೇವಾ ಮುಂತಾದ ಹೆಸರಿನ ಏಳು ಜನ ತಂಗಿಯರಿದ್ದರು. ॥೨೨॥

**ಶಾಂತಿದೇವೋ[೨]ಪದೇವಾ ಚ ಶ್ರೀದೇವಾ ದೇವರಕ್ಷಿತಾ ।**
**ಸಹದೇವಾ ದೇವಕೀ ಚ ವಸುದೇವ ಉವಾಹ ತಾಃ ॥೨೩॥**

---

೧ 'ಧೃತದೇ' ಇತಿ ಪಾಠಾಂತರಮ್ ।

೨ 'ಶಾಂತಿರ್ದೇವೋ' ಇತಿ ಪಾಠಾಂತರಮ್ ।

ಹಿಂದಿನ ಶ್ಲೋಕದಲ್ಲಿ ಹೇಳಿದ **ಧೃತಿದೇವಾ, ಶಾಂತಿದೇವಾ, ಉಪದೇವಾ, ಶ್ರೀದೇವಾ, ದೇವರಕ್ಷಿತಾ, ಸಹದೇವಾ, ದೇವಕಿ** ಹೀಗೆ ಏಳು ಜನ (ಎರಡೂ ಶ್ಲೋಕದಲ್ಲಿ ಶಾಂತಿರ್ದೇವಾ ಎಂದು ಪಾಠವಿದ್ದಾಗ ಶಾಂತಿಃ ದೇವಾ, ಹೀಗೆ ಎರಡು ಮಾಡಬೇಕು) **ತಾಃ** ಈ ಏಳು ಜನರನ್ನು, **ವಸುದೇವಃ** ವಸುದೇವನು, **ಉವಾಹ** ಮದುವೆಯಾದನು. ವಸುದೇವನ ಉತ್ಪತ್ತಿಯನ್ನು ಶೀಘ್ರದಲ್ಲಿಯೇ ಹೇಳುವರು. ದೇವಕನ ತಮ್ಮ ಉಗ್ರಸೇನನ ವಂಶವನ್ನು ಹೇಳುವರು.

**ತಾತ್ಪರ್ಯ-** ಶಾಂತಿದೇವಾ, ಧೃತಿದೇವಾ, ಉಪದೇವಾ, ಶ್ರೀದೇವಾ, ದೇವರಕ್ಷಿತಾ, ಸಹದೇವಾ, ದೇವಕೀ ಹೀಗೆ ಏಳು ಜನ ತಂಗಿಯರು. ಈ ಏಳು ಮಂದಿ ಕನ್ಯೆಯರನ್ನು ವಸುದೇವನು ವಿವಾಹ ಮಾಡಿಕೊಂಡನು. ।।೨೩।।

**ಕಂಸಃ ಸುನಾಮಾ ನ್ಯಗ್ರೋಧಃ ಕಂಹ್ವಃ ಶಂಕುಃ ಸುಭೂಸ್ತಥಾ ।**
**ರಾಷ್ಟ್ರಪಾಲೋಽಬ್ದಸೃಷ್ಟಿಶ್ಚ ತುಷ್ಟಿಮಾನೌಗ್ರಸೇನಯಃ ।।೨೪।।**

**ಕಂಸ, ಸುನಾಮಾ, ನ್ಯಗ್ರೋಧ, ಕಂಹ್ವ, ಶಂಕು, ಸುಭು, ರಾಷ್ಟ್ರಪಾಲ, ಅಬ್ದಸೃಷ್ಟಿ, ತುಷ್ಟಿಮಾನ್** ತುಷ್ಟಿಮಂತನು, ಹೀಗೆ ಒಂಭತ್ತು ಜನರು **ಔಗ್ರಸೇನಯಃ** ಉಗ್ರಸೇನನ ಮಕ್ಕಳು. ।।೨೪।।

**ತಾತ್ಪರ್ಯ-** ಉಗ್ರಸೇನನಿಗೆ ಕಂಸ, ಸುನಾಮ, ನ್ಯಗ್ರೋಧ, ಕಂಹ್ವ, ಶಂಕು, ಸುಭು, ರಾಷ್ಟ್ರಪಾಲ, ಅಬ್ದಸೃಷ್ಟಿ, ತುಷ್ಟಿಮಂತರೆಂಬ ಒಂಬತ್ತು ಜನ ಪುತ್ರರಿದ್ದರು. ।।೨೪।।

**ಕಂಸಾ ಕಂಸವತೀ ಕಂಕಾ ಸೂರಭೂ ರಾಷ್ಟ್ರಪಾಲಿಕಾ ।**
**ಔಗ್ರಸೇನಾ ದುಹಿತರೋ ವಸುದೇವಾನುಜಸ್ತ್ರಿಯಃ ।।೨೫।।**

**ಕಂಸಾ, ಕಂಸವತೀ, ಕಂಕಾ, ಸುರಭೂ, ರಾಷ್ಟ್ರಪಾಲಿಕಾ,** ಎಂಬ ಐದುಜನ, **ಔಗ್ರಸೇನಾಃ** ಉಗ್ರಸೇನನ **ದುಹಿತರಃ** ಕನ್ಯೆಯರು, **ವಸುದೇವಾನುಜಸ್ತ್ರಿಯಃ** ವಸುದೇವನ ತಮ್ಮಂದಿರಾದ ದೇವಭಗ ಮುಂತಾದವರ ಪತ್ನಿಯರು. ।।೨೫।।

**ತಾತ್ಪರ್ಯ-** ಕಂಸಾ, ಕಂಸವತಿ, ಕಂಕಾ, ಸುರಭೂ, ರಾಷ್ಟ್ರಪಾಲಿಕಾ ಎಂಬ ಐದು ಕನ್ಯೆಯರು ಜನಿಸಿದರು. ಇವರನ್ನು ವಸುದೇವನ ಸಹೋದರರಾದ ದೇವಭಾಗಾದಿಗಳು ವಿವಾಹವಾದರು. ।।೨೫।।

**ಶೂರೋ ವಿದೂರಥಾದಾಸೀದ್ಭಜಮಾನಸುತಾತ್ತತಃ ।**
**ಶಿನಿಸ್ತಸ್ಮಾತ್ಸ್ವಯಂಭೋಜೋ ಹೃದಿಕಸ್ತತ್ಸುತೋ ಮತಃ ।।೨೬।।**

**ಭಜಮಾನಸುತಾತ್** ಭಜಮಾನನ ಮಗನಾದ, **ವಿದೂರಥಾತ್** ವಿದೂರಥನಿಂದ **ಶೂರಃ** ಶೂರನು, (ಇವನು ವಸುದೇವನ ತಂದೆ ಅಲ್ಲ) **ತತಃ** ಶೂರನಿಂದ, **ಶಿನಿಃ** ಶಿನಿಯು (ಸುಮಿತ್ರನ ಮಗನಲ್ಲ) ತಸ್ಮಾತ್ ಶಿನಿಯಿಂದ **ಸ್ವಯಂಭೋಜಃ** ಸ್ವಯಂಭೋಜನು, **ಹೃದಿಕಃ** ಹೃದಿಕನು **ತತ್ಸುತಃ ಮತಃ** ಸ್ವಯಂಭೋಜನ ಮಗನೆಂದು ಸಮ್ಮತನು. ।।೨೬।।

**ತಾತ್ಪರ್ಯ-** ಭಜಮಾನನ ಸುತನಾದ ವಿದೂರಥನಿಂದ ಶೂರನೂ (ವಸುದೇವನ ತಂದೆಯಲ್ಲ) ಶೂರನಿಂದ ಶಿನಿಯೂ, ಶಿನಿಯಿಂದ ಸ್ವಯಂಭೋಜನು ನಂತರ ಹೃದಿಕನು ಜನಿಸಿದರು. ।।೨೬।।

**ದೇವಬಾಹುಃ ಶತಧನುಃ ಕೃತವರ್ಮೇತಿ ತತ್ಸುತಾಃ ।**
**ದೇವಮೀಢಸ್ಯ ಶೂರಸ್ಯ ಮಾರಿಷಾ ನಾಮ ಪತ್ನ್ಯಭೂತ್ ।।೨೭।।**

**ದೇವಬಾಹುಃ, ಶತಧನುಃ, ಕೃತವರ್ಮಾ, ದೇವಮೀಢಃ ಇತಿ** ಹೀಗೆ **ತತ್ಸುತಾಃ** ಹೃದಿಕನ ಮಕ್ಕಳು ನಾಲ್ಕು ಜನರು, **ದೇವಮೀಢಸ್ಯ** ದೇವಮೀಢನ ಮಗನಾದ **ಶೂರಸ್ಯ** ಶೂರನಿಗೆ **ಮಾರಿಷಾ ನಾಮ** ಮಾರಿಷಾ ಎಂಬ **ಪತ್ನೀ** ಹೆಂಡತಿಯು, **ಅಭೂತ್** ಇದ್ದಳು. ।।೨೭।।

**ತಾತ್ಪರ್ಯ-** ಹೃದಿಕನಿಗೆ ದೇವಬಾಹು, ಶತಧನು, ಕೃತವರ್ಮರೆಂದೂ ದೇವಮೀಢನೆಂದೂ ನಾಲ್ಕು ಮಕ್ಕಳು ಇದ್ದರು. ದೇವಮೀಢನ ಮಗನಾದ ಶೂರನೆಂಬುವನಿಗೆ ಮಾರೀಷಾ ಎಂಬ ಪತ್ನಿ ಇದ್ದಳು. ।।೨೭।।

**ತಸ್ಯಾಂ ಸಂಜನಯಾಮಾಸ ದಶಪುತ್ರಾನಕಲ್ಮಷಾನ್ ।**
**ವಸುದೇವಂ ದೇವಭಾಗಂ ದೇವಶ್ರವಸಮಾನಕಮ್ ।।೨೮।।**
**ಸೃಂಜಯಂ ಶ್ಯಾಮಕಂ ಕಂಕಮನೀಕಂ ವತ್ಸಕಂ ವೃಕಮ್ ।**
**ದೇವದುಂದುಭಯೋ ನೇದುರಾನಕಾ ಯಸ್ಯ ಜನ್ಮನಿ ।।೨೯।।**

ಶೂರನು **ತಸ್ಯಾಂ** ಆ ಮಾರೀಷಾಳಲ್ಲಿ, **ವಸುದೇವಂ** ವಸುದೇವನನ್ನು **ದೇವಭಾಗಂ** ದೇವಭಾಗನನ್ನು, **ದೇವಶ್ರವಸಂ** ದೇವಶ್ರವಸನನ್ನು, **ಆನಕಂ** ಆನಕನನ್ನು, **ಸೃಂಜಯಂ** ಸೃಂಜಯನನ್ನು, **ಶ್ಯಾಮಕಂ** ಶ್ಯಾಮಕನನ್ನು, **ಕಂಕಂ** ಕಂಕನನ್ನು, **ಅನೀಕಂ** ಅನೀಕನನ್ನು, **ವತ್ಸಕಂ** ವತ್ಸಕನನ್ನು, **ವೃಕಂ** ವೃಕನನ್ನು, ಈ ರೀತಿಯಾಗಿ **ಅಕಲ್ಮಷಾನ್** ನಿರ್ದುಷ್ಟರಾದ, **ದಶ** ಹತ್ತು, **ಪುತ್ರಾನ್** ಮಕ್ಕಳನ್ನು **ಸಂಜನಯಾಮಾಸ** ಹುಟ್ಟಿಸಿದನು. **ಯಸ್ಯ** ಯಾವ ವಸುದೇವನ **ಜನ್ಮನಿ** ಜನಿಸುವಾಗ **ದೇವದುಂದುಭಯಃ** ದೇವದುಂದುಭಿಗಳು **ದೇವಾನಕಾಃ** ದೇವಾನಕಗಳು ಪಟಹಗಳು, **ನೇದುಃ** ಮೊಳಗಿದವು. ।।೨೮-೨೯।।

**ತಾತ್ಪರ್ಯ-** ಶೂರನಿಗೆ ಮಾರಿಷಾ ಎಂಬ ಪತ್ನಿಯಲ್ಲಿ ವಸುದೇವ, ದೇವಭಾಗ, ದೇವಶ್ರವಸ, ಆನಕ, ಸೃಂಜಯ ಶ್ಯಾಮಕ, ಕಂಕ, ಅನೀಕ, ವತ್ಸಕ, ವೃಕರೆಂಬ ಹತ್ತುಮಂದಿ ಪುತ್ರರು ಜನಿಸಿದರು. ಇವರೆಲ್ಲರೂ ನಿರ್ದುಷ್ಟರಾಗಿದ್ದರು. ಇವರಲ್ಲಿ ವಸುದೇವನು ಜನಿಸುವಾಗ ದೇವದುಂದುಭಿಗಳು ಮತ್ತು ಪಟಹಗಳು ಮೊಳಗಿದವು. ||೨೮-೨೯||

**ವಸುದೇವಂ ಹರೇಃ ಸ್ಥಾನಂ ವದಂತ್ಯಾನಕದುಂದುಭಿಮ್ ।**
**ಪೃಥಾ ಚ ಶ್ರುತದೇವಾ ಚ ಶ್ರುತಕೀರ್ತಿಃ ಶ್ರುತಶ್ರವಾಃ ||೩೦||**

**ರಾಜಾಧಿದೇವೀ ಚೈತೇಷಾಂ ಭಗಿನ್ಯಃ ಪಂಚಕನ್ಯಕಾಃ ।**
**ಕುಂತೇಃ ಸಖ್ಯುಃ ಪಿತಾ ಶೂರೋ ಹ್ಯಪುತ್ರಸ್ಯ ಪೃಥಾಮದಾತ್ ||೩೧||**

**ವಸುದೇವಂ** ವಸುದೇವನನ್ನು, **ಹರೇಃ** ಪರಮಾತ್ಮನ, **ಸ್ಥಾನಂ** ಪ್ರಾದುರ್ಭಾವ ಸ್ಥಳವೆಂದೂ **ಆನಕದುಂದುಭಿಂ** ಜನ್ಮಕಾಲದಲ್ಲಿ ದೇವಾನಕಗಳು ಮೊಳಗಿದ್ದರಿಂದ ಆನಕದುಂದುಭಿ ಎಂದೂ **ವದಂತಿ** ಕರೆಯುತ್ತಾರೆ, **ಏತೇಷಾಂ** ವಸುದೇವ ಮೊದಲಾದವರಿಗೆ, **ಭಗಿನ್ಯಃ** ಸಹೋದರಿಯರಾದ, **ಪೃಥಾ** ಪೃಥಾಯಂತಲೂ, **ಶ್ರುತದೇವಾ ಚ** ಶ್ರುತದೇವಾ ಎಂಬುವಳು, **ಶ್ರುತಕೀರ್ತಿಃ** ಶ್ರುತಕೀರ್ತಿಯು, **ಶ್ರುತಶ್ರವಾಃ** ಶ್ರುತಶ್ರವಾ ಎನ್ನುವಳು, **ರಾಜಾಧಿದೇವೀ ಚ** ರಾಜಾಧಿದೇವೀ ಎಂದೂ **ಪಂಚ** ಐದು **ಕನ್ಯಕಾಃ** ಹೆಣ್ಣು ಮಕ್ಕಳು. **ಪಿತಾ** ತಂದೆಯಾದ, **ಶೂರಃ** ಶೂರನು, **ಸಖ್ಯುಃ** ತನ್ನ ಸ್ನೇಹಿತನಾದ **ಅಪುತ್ರಸ್ಯ** ಮಕ್ಕಳಿಲ್ಲದ, **ಕುಂತೇಃ** ಕುಂತಿಭೋಜನಿಗೆ, **ಪೃಥಾಂ** ಪೃಥೆಯನ್ನು (ಇವಳು ಕುಂತಿ) **ಅದಾತ್** ರಕ್ಷಣೆಗಾಗಿ ಕೊಟ್ಟನು.

**ತಾತ್ಪರ್ಯ-** ಇವರಲ್ಲಿ ವಸುದೇವನು ಪರಮಾತ್ಮನ ಅವತಾರಕ್ಕೆ ಸ್ಥಾನ ಎಂದು ಸೂಚಿಸುವುದಕ್ಕಾಗಿ ಈತನ ಜನನ ಕಾಲದಲ್ಲಿ ಆನಕ-ದುಂದುಭಿಗಳು ಮೊಳಗಿದವು. ಆದ್ದರಿಂದ ಆನಕದುಂದುಭಿ ಎಂಬ ನಾಮದಿಂದ ಪ್ರಸಿದ್ಧನಾಗಿದ್ದಾನೆ. ಶೂರನಿಗೆ ಹತ್ತು ಪುತ್ರರು ಅಲ್ಲದೇ ಪೃಥಾ, ಶ್ರುತದೇವಾ, ಶ್ರುತಕೀರ್ತಿ, ಶ್ರುತಶ್ರವಾ ರಾಜಾಧಿದೇವಿಯರೆಂಬ ಐದು ಮಂದಿ ಕುವರಿಯರು ಜನಿಸಿದರು. ವಸುದೇವನ ತಂದೆಯಾದ ಶೂರನು ತನಗೆ ಮಿತ್ರನಾದ ಕುಂತೀಭೋಜನಿಗೆ ಸಂತಾನವಿಲ್ಲದ್ದರಿಂದ ತನ್ನ ಹಿರಿಯ ಮಗಳಾದ ಪೃಥಾ (ಕುಂತಿಯನ್ನು)ಳನ್ನು ದತ್ತು ಕೊಟ್ಟನು. ಕುಂತಿಭೋಜನ ದತ್ತುಪುತ್ರಿಯಾದ ಇವಳು ಕುಂತೀ ಎಂದು ಪ್ರಸಿದ್ಧಳಾದಳು.

**ಸಾಽಽಪ ದುರ್ವಾಸಸೋ ವಿದ್ಯಾಂ ದೇವಹೂತೀಂ ಪ್ರತೋಷಿತಾತ್ ।**
**ತಸ್ಯಾ ವೀರ್ಯಪರೀಕ್ಷಾರ್ಥಮಾಜುಹಾವ ರವಿಂ ಶುಚಿಃ ||೩೨||**

**ಸಾ** ಆ ಕುಂತಿಯು **ಪ್ರತೋಷಿತಾತ್** ಸೇವೆಯಿಂದ ಸಂತೋಷಪಡಿಸಿದ **ದುರ್ವಾಸಸಃ** ದುರ್ವಾಸ ಋಷಿಗಳಿಂದ **ದೇವಹೂತೀಂ** ದೇವತೆಗಳನ್ನು ಆಹ್ವಾನ ಮಾಡುವ, (ದೇವಾಃ ಹೂಯಂತೇ ಅನಯಾ ಇತಿ ದೇವಹೂತೀ ತಾಂ ದೇವರು ಬರುವಂತೆ ಮಾಡುವ) **ವಿದ್ಯಾಂ** ವಿದ್ಯೆಯನ್ನು **ಆಪ** ಹೊಂದಿದಳು. **ತಸ್ಯಾಃ** ಆ ವಿದ್ಯೆಯ **ವೀರ್ಯಪರೀಕ್ಷಾರ್ಥಂ** ಮಂತ್ರಸಾಮರ್ಥ್ಯ ಪರೀಕ್ಷೆಗಾಗಿ **ಶುಚಿಃ** ಋತು ಸ್ನಾತಳಾದ ಕುಂತಿಯು **ರವಿಂ** ಸೂರ್ಯನನ್ನು **ಆಜುಹಾವ** ಕರೆದಳು. ।।೩೨।।

**ತಾತ್ಪರ್ಯ-** ಈ ಕುಂತಿಯು ವಿವಾಹವಾಗುವುದಕ್ಕೆ ಮೊದಲು ತಂದೆಯ ಮನೆಯಲ್ಲಿರುವಾಗ ದೂರ್ವಾಸಮುನಿಯು ಒಮ್ಮೆ ಇಲ್ಲಿಗೆ ಬಂದನು. ಆಗ ಕುಂತಿಯು ಅವರನ್ನು ಭಕ್ತ್ಯುಪಚಾರಗಳಿಂದ ಸೇವಿಸಿದಳು. ಇವಳ ಶುಶ್ರೂಷೆಗೆ ಸಂತೋಷಪಟ್ಟು ದೂರ್ವಾಸಮುನಿಯು ಅವಳಿಗೆ ದೇವಹೂತಿ ಎಂಬ ಒಂದಾನೊಂದು ಮಂತ್ರವಿದ್ಯೆಯನ್ನು ಅನುಗ್ರಹಿಸಿ ಆ ಮಂತ್ರಶಕ್ತಿಯಿಂದ ಉದ್ದೇಶಿಸಿದ ದೇವತೆಗಳನ್ನು ಪ್ರತ್ಯಕ್ಷವಾಗಿ ಕರೆತರಿಸಬಹುದೆಂದು ಹೇಳಿ ಹೊರಟು ಹೋದರು. ಆಮೇಲೆ ಕುಂತಿಯು ಒಮ್ಮೆ ಸ್ನಾನಾದಿಗಳಿಂದ ಶುದ್ಧಳಾಗಿ ದೂರ್ವಾಸನು ಉಪದೇಶಿಸಿದ ಮಂತ್ರದ ಮಹಿಮೆಯನ್ನು ಪರೀಕ್ಷಿಸಬೇಕೆಂದು ಸೂರ್ಯದೇವರನ್ನು ಕುರಿತು ಆ ಮಂತ್ರವನ್ನು ಜಪಿಸಿದಳು. ।।೩೨।।

**ತದೈವೋಪಾಗತಂ ದೇವಂ ವೀಕ್ಷ್ಯ ವಿಸ್ಮಿತಮಾನಸಾ ।**
**ಪ್ರತ್ಯಯಾರ್ಥೇ ಪ್ರಯುಕ್ತಾ ಮೇ ಯಾಹಿ ದೇವ ಕ್ಷಮಸ್ವ ಮೇ ।।೩೩।।**

**ತದಾ ಏವ** ಮಂತ್ರವನ್ನು ಉಚ್ಚಾರ ಮಾಡಿದೊಡನೆ **ವಿಸ್ಮಿತಮಾನಸಾ ಸತೀ** ಆಶ್ಚರ್ಯಯುತ ಮನಸ್ಸುಳ್ಳವಳಾಗಿ **ಭೋ ದೇವ** ಸೂರ್ಯದೇವನೇ **ಮೇ** ನನ್ನಿಂದ **ಪ್ರತ್ಯಯಾರ್ಥೇ** ಮಂತ್ರದಲ್ಲಿ ವಿಶ್ವಾಸ ಪಡೆಯಲು **ಪ್ರಯುಕ್ತಾ** ವಿದ್ಯೆಯು ಪ್ರಯೋಗಿಸಲ್ಪಟ್ಟಿತು **ಕ್ಷಮಸ್ವ** ಈ ಅಪರಾಧವನ್ನು ಕ್ಷಮಿಸು **ಯಾಹಿ** ನಿನ್ನ ಲೋಕಕ್ಕೆ ಹೋಗು ವಿಶ್ವಾಸಕ್ಕಾಗಿ ಉಪಯೋಗಿಸಿದ್ದರಿಂದ ಮಂತ್ರಮಾಹಾತ್ಮ್ಯದಿಂದ ನಡೆದ ಅಕಾರ್ಯದಿಂದ ನನ್ನನ್ನು ಜನಾಪವಾದದಿಂದ ರಕ್ಷಿಸು ಹೊರಟು ಹೋಗೆಂದು ಹೇಳಿಸಿಕೊಂಡ ರವಿಯು ಕುಂತಿಯನ್ನು ಸಮಾಧಾನ ಪಡಿಸುತ್ತಾ ಹೇಳಿದನು. ।।೩೩।।

**ತಾತ್ಪರ್ಯ-** ಒಡನೆಯೇ ಸೂರ್ಯನು ಅವಳ ಮುಂದೆ ಬಂದು ನಿಂತನು. ಸೂರ್ಯನನ್ನು ನೋಡಿ ಅವಳಿಗೆ ಅತ್ಯಾಶ್ಚರ್ಯವು ಭಯವು ಉಂಟಾಯಿತು. ಆಗ ಆಕೆಯು ಆ ಸೂರ್ಯನಿಗೆ ಕೈ ಮುಗಿದು ದೇವ! ನಾನು ದೂರ್ವಾಸನ ಮಂತ್ರಶಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ನಿನ್ನನ್ನು ಕರೆದೆನೆ ಹೊರತು ಬೇರೆ ಯಾವ

ಉದ್ದೇಶದಿಂದಲೂ ಕರೆಯಲಿಲ್ಲ. ನಿನಗೆ ವ್ಯರ್ಥವಾಗಿ ಶ್ರಮಕೊಟ್ಟಿದ್ದಕ್ಕೆ ನನ್ನನ್ನು ಕ್ಷಮಿಸಬೇಕು ಎಂದು ಕೇಳಿ ಇನ್ನು ನೀನು ಹೋಗಬಹುದು ಎಂದಳು. ।।೩೩।।

**ಅಮೋಘಂ ದೇವಸಂದರ್ಶಮಾಧಾಸ್ಯೇ ತ್ವಯಿ ಚಾತ್ಮಜಮ್ ।**
**ಯೋನಿರ್ಯಥಾ ನ ದುಷ್ಯೇತ ಕರ್ತಾऽಹಂ ತೇ ಸುಮಧ್ಯಮೇ ।।೩೪।।**

**ದೇವಸಂದರ್ಶಂ** ದೇವನಾದ ನನ್ನ ದರ್ಶನವು **ಅಮೋಘಂ** ಸಫಲವೆಂದು ತಿಳಿದ ಕಾರಣ, **ತ್ವಯಿ** ನಿನ್ನಲ್ಲಿ **ಆತ್ಮಜಂ** ಪುತ್ರನನ್ನು **ಆಧಾಸ್ಯೇ** ಆಧಾನ ಮಾಡುವೆನು. ನಾನಿನ್ನೂ ಚಿಕ್ಕವಳೆಂದು ಭಯಪಡಬೇಡ ಎಂದು ಹೇಳುವನು. **ಸುಮಧ್ಯಮೇ** ಸುಂದರಿಯೇ **ತೇ** ನಿನ್ನ **ಯೋನಿಃ** ಯೋನಿಯು **ಯಥಾ ನ ದುಷ್ಯೇತ** ದೂಷಿತವಾಗಬಾರದು **ತಥಾ** ಹಾಗೆ **ಕರ್ತಾ** ಮಾಡುವವನು **ಅಹಂ** ನಾನು ಎಂದು ಹೇಳಿದನು. ಲೋಕಾಪವಾದದಿಂದ ದೂಷಿತವಾಗದಂತೆ ನೋಡುವೆನು ಎಂದು ಹೇಳಿದನು. ।।೩೪।।

**ತಾತ್ಪರ್ಯ-** ಅದಕ್ಕೆ ಆ ಸೂರ್ಯನು ಓ ಸುಂದರಿ ನಮ್ಮಂತಹ ದೇವತೆಗಳ ಸಂದರ್ಶನವು ಎಂದಿಗೂ ವ್ಯರ್ಥವಾಗಲಾರದು. ಆದುದರಿಂದ ನನಗೆ ಸಮಾನನಾದ ಪುತ್ರನು ನಿನ್ನ ಗರ್ಭದಲ್ಲಿ ಜನಿಸುವನು. ಆದರೆ ವಿವಾಹವಾಗುವುದಕ್ಕೆ ಮೊದಲು ಈ ಕನ್ಯಾವಸ್ಥೆಯಲ್ಲಿ ಗರ್ಭವನ್ನು ಧರಿಸುವ ವಿಷಯದಲ್ಲಿ ನೀನು ಭಯಪಡಬೇಕಾದುದು ಇಲ್ಲ. ನಿನಗೆ ಕನ್ಯಾತ್ವವು ಕೆಡದಂತೆ ವರವನ್ನು ಕೊಡುವೆನು.

**ಇತಿ ತಸ್ಯಾಂ ಸಮಾಧಾಯ ಗರ್ಭಂ ಸೂರ್ಯೋ ದಿವಂಗತಃ ।**
**ಸದ್ಯಃ ಕುಮಾರಃ ಸಂಜಜ್ಞೇ ದ್ವಿತೀಯ ಇವ ಭಾಸ್ಕರಃ ।।೩೫।।**

**ಇತಿ** ಈ ರೀತಿಯಾಗಿ **ತಾಂ** ಕುಂತಿಯನ್ನು **ಸಮಾಧಾಯ** ಸಮಾಧಾನ ಮಾಡಿ **ತಸ್ಯಾಂ** ಅವಳಲ್ಲಿ **ಗರ್ಭಂ** ಗರ್ಭವನ್ನು **ಸಮಾಧಾಯ** ಇಟ್ಟು **ಸೂರ್ಯಃ** ಸೂರ್ಯನು **ದಿವಂ** ತನ್ನ ಸ್ಥಾನಕ್ಕೆ **ಗತಃ** ಹೋದನು. **ಸದ್ಯಃ** ತತ್‌ಕ್ಷಣದಲ್ಲಿ **ದ್ವಿತೀಯಃ** ಎರಡನೇ **ಭಾಸ್ಕರಃ ಇವ** ಸೂರ್ಯನಂತಿರುವ **ಕುಮಾರಃ** ಮಗನು **ಸಂಜಜ್ಞೇ** ಹುಟ್ಟಿದನು. ।।೩೫।।

**ತಾತ್ಪರ್ಯ-** ಹೀಗೆಂದು ಹೇಳಿ ಅವಳ ಗರ್ಭದಲ್ಲಿ ತನ್ನ ತೇಜಸ್ಸನ್ನು ಇಟ್ಟು ಹೊರಟುಹೋದನು. ಆಗಲೇ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಮಗುವು ಜನಿಸಿತು. ।।೩೫।।

**ತಂ ಸಾऽತ್ಯಜನ್ನದೀತೋಯೇ ಕೃಚ್ಛ್ರಾಲ್ಲೋಕಸ್ಯ ಬಿಭ್ಯತೀ ।**
**ಪ್ರಪಿತಾಮಹಸ್ತಾಮುವಾಹ ಪಾಂಡುರ್ವೈ ಸತ್ಯವಿಕ್ರಮಃ ।।೩೬।।**

**ಲೋಕಸ್ಯಕೃಚ್ಛ್ರಾತ್** ಜನಗಳು ಅಪವಾದದಿಂದ ಉಂಟಾಗುವ ಕಷ್ಟದಿಂದ **ಬಿಭ್ಯತೀ** ಹೆದರಿದ **ಸಾ** ಕುಂತಿಯು **ತಂ** ಆ ಕುಮಾರನನ್ನು **ನದೀತೋಯೇ** ನದಿಯ ನೀರಿನಲ್ಲಿ **ಕೃಚ್ಛ್ರಾತ್** ಕಷ್ಟದಿಂದ **ಅತ್ಯಜತ್** ಪೆಟ್ಟಿಗೆಯಲ್ಲಿ ಇಟ್ಟು ತೇಲಿಬಿಟ್ಟಳು. **ಸತ್ಯವಿಕ್ರಮಃ** ಪರಾಕ್ರಮಿಯಾದ **ಪ್ರಪಿತಾಮಹಃ** ನಿನ್ನ ತಾತನಾದ **ಪಾಂಡುಃ** ಪಾಂಡುರಾಜನು **ತಾಂ** ಆ ಕುಂತಿಯನ್ನು, **ಉವಾಹ** ಮದುವೆ ಮಾಡಿಕೊಂಡನು.

**ತಾತ್ಪರ್ಯ-** ಕುಂತಿಯು ಲೋಕಾಪವಾದಕ್ಕೆ ಭಯಪಟ್ಟು, ಆ ಶಿಶುವನ್ನು ಒಂದು ಪೆಟ್ಟಿಗೆಯಲ್ಲಿಟ್ಟು ನದಿಯ ಪ್ರವಾಹದಲ್ಲಿ ತೇಲಿಬಿಟ್ಟಳು. ಈ ಕುಂತಿಯನ್ನು ನಿನ್ನ ಮುತ್ತಾತನಾದ ಪಾಂಡುರಾಜನು ಮದುವೆಯಾದನು. ॥೩೬॥

ವಸುದೇವನ ತಂಗಿಯರ ವಿವಾಹವನ್ನೂ ಪುತ್ರರನ್ನೂ ಹೇಳುವರು.

**ಶ್ರುತದೇವೀಂ ತು ಕಾರೂಷೋ ವೃದ್ಧಶರ್ಮಾ ಸಮಗ್ರಹೀತ್ ।**
**ಯಸ್ಯಾಮಭೂದ್ದಂತವಕ್ತ್ರಃ ಋಷಿಶಪ್ತೋ[೧] ದಿತೇಃ ಸುತಃ ॥೩೭॥**

**ಕಾರೂಷಃ** ಕರೂಶದೇಶಾಧಿಪತಿಯಾದ **ವೃದ್ಧಶರ್ಮಾ** ವೃದ್ಧಶರ್ಮ ಎಂಬುವನು **ಶ್ರುತದೇವೀಂ** ಶ್ರುತದೇವಿಯನ್ನು **ಸಮಗ್ರಹೀತ್** ವಿವಾಹವಾದನು. **ಯಸ್ಯಾಂ** ಯಾವ ಶ್ರುತದೇವಿಯಲ್ಲಿ **ಋಷಿಶಪ್ತಃ** ಸನಕಾದಿಗಳಿಂದ ಶಪಿಸಲ್ಪಟ್ಟ ವಿಜಯನು, **ದಿತೇಃ** ದಿತಿದೇವಿಯ **ಸುತಃ** ಹಿರಣಾಕ್ಷ ಎಂಬ ಮಗನು ಅವನೇ ಈಗ **ದಂತವಕ್ತ್ರಃ** ದಂತವಕ್ತ್ರನೆಂದು **ಅಭೂತ್** ಹುಟ್ಟಿದನು. ಪಾಠಾಂತರದಲ್ಲಿ **ದಿತೇಃ ಸುತಃ ಇತಿ ಶಬ್ದಃ** ಪೂರ್ವದಲ್ಲಿ ದಿತಿಯ ಮಗನೆಂದು ಕರೆಸಿಕೊಂಡ ವಿಜಯನೇ ಈಗ ದಂತವಕ್ತ್ರನಾಗಿ ಜನಿಸಿದನು. ॥೩೭॥

**ತಾತ್ಪರ್ಯ-** ಕುಂತಿಯ ಸಹೋದರಿಯಾದ ಶ್ರುತದೇವಿಯನ್ನು ಕರುಷದೇಶದ ಅಧಿಪತಿಯಾದ ವೃದ್ಧಶರ್ಮನೆಂಬುವನು ವಿವಾಹ ಮಾಡಿಕೊಂಡನು. ಈ ದಂಪತಿಗಳಿಗೆ ದಂತವಕ್ತ್ರನೆಂಬ ದೈತ್ಯನು ಜನಿಸಿದನು. ಇವನು ಪೂರ್ವದಲ್ಲಿ ಸನಕಾದಿಗಳಿಂದ ಶಪಿಸಲ್ಪಟ್ಟ ವಿಜಯನು, ದಿತಿಯ ಮಗನಾಗಿ ಹಿರಣ್ಯಾಕ್ಷ ಎಂದು ಜನಿಸಿದನು. ಅವನೇ ಈಗ ದಂತವಕ್ತ್ರನೆಂದು ಹುಟ್ಟಿದ್ದಾನೆ. ॥೩೭॥

**ಕೈಕಯೋ ಧೃಷ್ಟಕೇತುಶ್ಚ ಶ್ರುತಕೀರ್ತಿಮವಿಂದತ ।**
**ಸಂತರ್ದನಾದಯಸ್ತಸ್ಯಾಃ ಪಂಚಾಸುಃ ಕೈಕಯಾಃ ಸುತಾಃ ॥೩೮॥**

**ಕೈಕಯಃ** ಕೈಕಯ ದೇಶಕ್ಕೆ ಪತಿಯಾದ **ಧೃಷ್ಟಕೇತುಃ ಚ** ಧೃಷ್ಟಕೇತುವಾದರೂ **ಶ್ರುತಕೀರ್ತಿಂ** ಶ್ರುತಕೀರ್ತಿಯನ್ನು **ಅವಿಂದತ** ಪತ್ನಿಯಾಗಿ ಪಡೆದನು. **ತಸ್ಯಾಃ** ಅವಳಿಗೆ

---

೧ 'ಇತಿ ಶಬ್ದೋ' ಇತಿ ಪಾಠಾಂತರಮ್ ।

**ಸಂತರ್ದನಾದಯಃ** ಸಂತರ್ದನ ಮೊದಲಾದ **ಪಂಚ** ಐದು, **ಸುತಾಃ** ಮಕ್ಕಳು. **ಕೈಕಯಾಃ** ಕೈಕಯರೆಂಬುವರು **ಆಸುಃ** ಇದ್ದರು. ॥೩೮॥

**ತಾತ್ಪರ್ಯ–** ಕುಂತಿಯ ಮತ್ತೊಬ್ಬ ತಂಗಿಯಾದ ಶ್ರುತಕೀರ್ತಿಯನ್ನು ಧೃಷ್ಟಕೇತು ಎಂಬ ಕೇಕಯ ರಾಜನು ಮದುವೆಯಾದನು. ಇವರಿಗೆ ಸಂತರ್ದನರೇ ಮೊದಲಾದ ಐದು ಮಂದಿ ಪುತ್ರರು ಹುಟ್ಟಿದರು. ಇವರು ಕೈಕಯರೆಂದೇ ಪ್ರಸಿದ್ಧರಾದರು.

**ರಾಜಾಧಿದೇವ್ಯಾಮಾವಂತ್ಯೌ ಜಯತ್ಸೇನೋಽಜನಿಷ್ಟ ಹ ।**
**ದಮಘೋಷಶ್ಚೇದಿರಾಜಃ ಶ್ರುತಶ್ರವಸಮಗ್ರಹೀತ್ ॥೩೯॥**

**ಜಯತ್ಸೇನಃ** ಜಯತ್ಸೇನನು **ರಾಜಾಧಿದೇವ್ಯಾಂ** ರಾಜಾಧಿದೇವಿಯಲ್ಲಿ **ಆವಂತ್ಯೌ** ಅವಂತಿದೇಶದಲ್ಲಿರುವ, ವಿಂದ-ಅನುವಿಂದರನ್ನು **ಅಜನಿಷ್ಟ** ಹುಟ್ಟಿಸಿದನು. **ಚೇದಿರಾಜಃ** ಚೇದಿದೇಶಕ್ಕೆ ಒಡೆಯನಾದ **ದಮಘೋಷಃ** ದಮಘೋಷನು **ಶ್ರುತಶ್ರವಸಂ** ಶ್ರುತಶ್ರವಸಳನ್ನು **ಸಮಗ್ರಹೀತ್** ಪಾಣಿಗ್ರಹಣ ಮಾಡಿದನು. ॥೩೯॥

**ತಾತ್ಪರ್ಯ–** ಕುಂತಿಯ ಬೇರೊಬ್ಬ ಸಹೋದರಿಯಾದ ರಾಜಾಧಿದೇವಿಯನ್ನು ಅವಂತಿಯ ರಾಜನಾದ ಜಯತ್ಸೇನನು ಮದುವೆಯಾದನು. ಅವಳಲ್ಲಿ ವಿಂದಾನುವಿಂದರೆಂಬ ಇಬ್ಬರು ಮಕ್ಕಳನ್ನು ಪಡೆದನು. ಚೇದಿದೇಶದ ರಾಜನಾದ ದಮಘೋಷನು ಶ್ರುತಶ್ರವಸ ಎಂಬ ಕುಂತಿಯ ಇನ್ನೊಬ್ಬ ಸಹೋದರಿಯನ್ನು ಮದುವೆಯಾದನು. ॥೩೯॥

**ಶಿಶುಪಾಲಃ ಸುತಸ್ತಸ್ಯಾಃ ಕಥಿತಸ್ತಸ್ಯ ಸಂಭವಃ ।**
**ದೇವಭಾಗಸ್ಯ ಕಂಸಾಯಾಂ ಚಿತ್ರಕೇತುಬೃಹದ್ಬಲೌ ॥೪೦॥**

**ತಸ್ಯಾಃ** ಶ್ರುತಶ್ರವಸಾಳಿಗೆ ದಮಘೋಷನಿಂದ **ಶಿಶುಪಾಲಃ** ಶಿಶುಪಾಲನು **ಸುತಃ** ಮಗನು **ತಸ್ಯ** ಶಿಶುಪಾಲನ **ಸಂಭವಃ** ಪೂರ್ವ ಜನನ ವೃತ್ತಾಂತವು **ಕಥಿತಃ** ಹೇಳಲ್ಪಟ್ಟಿದೆ. ಅದೇನೆಂದರೆ ಹರಿಯ ದ್ವಾರಪಾಲಕನಾದ ವಿಜಯನು ಹಿರಣ್ಯಾಕ್ಷನಾಗಿ ಜನಿಸಿದಂತೆ, ಜಯನು ಹಿರಣ್ಯಕಶಿಪುವಾಗಿ ದಿತಿಯಲ್ಲಿ ಜನಿಸಿದ್ದನು. ಎಂದು ಪೂರ್ವದಲ್ಲೇ ಹೇಳಿದೆ. ಇಲ್ಲಿಯವರೆಗೆ ವಸುದೇವನ ಎಲ್ಲ ಸಹೋದರಿಯರ ಪತಿ-ಪುತ್ರರನ್ನು ಹೇಳಿ ಸಹೋದರನಿಗೆ **ಕಂಸಾಯಾಂ** ಕಂಸನ ಸಹೋದರಿಯಾದ ಕಂಸಾ ಎಂಬುವಳಲ್ಲಿ **ಚಿತ್ರಕೇತುಬೃಹದ್ಬಲೌ** ಚಿತ್ರಕೇತು, ಬೃಹದ್ಬಲರೆಂಬ ಇಬ್ಬರು ಮಕ್ಕಳು **ಜಾತೌ** ಹುಟ್ಟಿದರು. ॥೪೦॥

**ತಾತ್ಪರ್ಯ–** ಇವರಲ್ಲಿ ಶಿಶುಪಾಲನೆಂಬ ಪುತ್ರನು ಹುಟ್ಟಿದನು. ಈ ಶಿಶುಪಾಲನು ಹಿಂದೆ ದಿತಿದೇವಿಯಲ್ಲಿ ಹಿರಣ್ಯಕಶಿಪುವೆಂದು ಹುಟ್ಟಿದನು. ಎಂಬುವ ವಿಷಯ ನಿನಗೆ

ಸಪ್ತಮಸ್ಕಂಧದಲ್ಲೇ ಹೇಳಿರುವೆನು. ಇದುವರೆಗೆ ವಸುದೇವನ ಸಹೋದರಿಯರ ವೃತ್ತಾಂತವನ್ನು ತಿಳಿಸಿದೆನಷ್ಟೇ. ಇನ್ನು ಈತನ ಸಹೋದರರ, ಪತ್ನಿ ಪುತ್ರರ ವಿಷಯವನ್ನು ಹೇಳುವೆನು ಕೇಳು. ವಸುದೇವನ ತಮ್ಮನಾದ ದೇವಭಾಗನಿಗೆ ಕಂಸಾ ಎಂಬ ಭಾರ್ಯೆಯಲ್ಲಿ ಚಿತ್ರಕೇತು, ಬೃಹದ್ಬಲರೆಂಬ ಮಕ್ಕಳಾದರು. ।।೪೦।।

**ಕಂಸವತ್ಯಾಂ ದೇವಶ್ರವಸಃ ಸುವೀರ ಇಷುಮಾಂಸ್ತಥಾ ।**
**ಕಂಕಾಯಾಮಾನಕಾಜ್ಜಾತಃ ಸತ್ಯಜಿತ್ ಪುರುಜಿತ್ತಥಾ ।।೪೧।।**

**ದೇವಶ್ರವಸಃ** ಇನ್ನೊಬ್ಬ ವಸುದೇವ ಸಹೋದರನಾದ ದೇವಶ್ರವಸನಿಗೆ **ಕಂಸವತ್ಯಾಂ** ಕಂಸವತಿ ಎಂಬ ಮತ್ತೊಬ್ಬ ಕಂಸನ ತಂಗಿಯಲ್ಲಿ **ಸುವೀರಃ** ಸುವೀರನು **ಜಾತಃ** ಹುಟ್ಟಿದನು. **ತಥಾ** ಹಾಗೂ **ಇಷುಮಾನ್** ಇಷುಮಂತನು **ಜಾತಃ** ಹುಟ್ಟಿದನು. **ಕಂಕಾಯಾಂ** ಕಂಕಾ ಎಂಬ ಕಂಸನ ತಂಗಿಯಲ್ಲಿ **ಆನಕಾತ್** ಆನಕನೆಂಬ ವಸುದೇವನ ತಮ್ಮನಿಂದ **ಸತ್ಯಜಿತ್** ಸತ್ಯಜಿತನು **ತಥಾ** ಹಾಗೂ **ಪುರುಜಿತ್** ಪುರುಜಿತ್ ಎಂಬುವನೂ **ಜಾತಃ** ಹುಟ್ಟಿದನು. ।।೪೧।।

**ತಾತ್ಪರ್ಯ–** ಮತ್ತೊಬ್ಬ ಸಹೋದರನಾದ ದೇವಶ್ರವಸ್ಸಿಗೆ ಕಂಸವತಿ ಎಂಬ ಭಾರ್ಯೆಯಲ್ಲಿ ಸುವೀರನೆಂದು ಇಷುಮಂತರೆಂಬ ಇಬ್ಬರು ಮಕ್ಕಳಾದರು. ಆನಕ ಎಂಬ ಮತ್ತೊಬ್ಬ ಸಹೋದರನಿಗೆ ಕಂಕಾ ಎಂಬ ಕಂಸನ ತಂಗಿಯಲ್ಲಿ ಸತ್ಯಜಿತ್, ಪುರುಜಿತ್ ಎಂಬುವರು ಹುಟ್ಟಿದರು. ।।೪೧।।

**ಸೃಂಜಯೋ ರಾಷ್ಟ್ರಪಾಲ್ಯಾಂ ತು ವೃಷದುರ್ಮರ್ಷಣಾದಿಕಾನ್ ।**
**ಹರಿಕೇಶಹಿರಣ್ಯಾಕ್ಷೌ ಸೂರಭೂಮ್ಯಾಂ ತು ಶ್ಯಾಮುಕಃ ।।೪೨।।**

**ಸೃಂಜಯಃ** ಸೃಂಜಯನೆಂಬ ವಸುದೇವ ಸಹೋದರನು **ರಾಷ್ಟ್ರಪಾಲ್ಯಾಂ** ರಾಷ್ಟ್ರಪಾಲೀ ಎಂಬ ಕಂಸನ ಸಹೋದರಿಯಲ್ಲಿ **ವೃಷದುರ್ಮರ್ಷಣಾದಿಕಾನ್** ವೃಷ, ದರ್ಮರ್ಷಣ ಮೊದಲಾದವರನ್ನು ಪಡೆದನು. **ಶ್ಯಾಮುಕಃ** ಇನ್ನೊಬ್ಬ ವಸುದೇವನ ತಮ್ಮನಾದ ಶ್ಯಾಮುಕನು, **ಸೂರಭೂಮ್ಯಾಂ** ಸೂರಭೂಮಿ ಎಂಬ ಕಂಸನ ಸಹೋದರಿಯಲ್ಲಿ **ಹರಿಕೇಶಹಿರಣ್ಯಾಕ್ಷೌ** ಹರಿಕೇಶ, ಹಿರಣ್ಯಾಕ್ಷರನ್ನು ಪಡೆದನು. ।।೪೨।।

**ತಾತ್ಪರ್ಯ–** ಸೃಂಜಯನೆಂಬ ಸಹೋದರನು ರಾಷ್ಟ್ರಪಾಲಿ ಎಂಬುವಳಲ್ಲಿ ವೃಷ, ದುರ್ಮರ್ಷಾದಿಗಳನ್ನು ಪಡೆದನು. ಮತ್ತೊಬ್ಬ ಸಹೋದರನಾದ ಶ್ಯಾಮುಕನಿಗೆ ಶೂರಭೂ ಎಂಬುವಳಲ್ಲಿ ಹರಿಕೇಶ, ಹಿರಣ್ಯಾಕ್ಷರೆಂಬ ಪುತ್ರರು ಜನಿಸಿದರು. ।।೪೨।।

**ಮಿತ್ರಕೇಶ್ಯಾಮಪ್ಸರಸಿ ವೃಕಾದೀನ್ ವತ್ಸಕಸ್ತಥಾ ।**
**ತಕ್ಷಪುಷ್ಕರಸಾಲಾದೀನುರ್ವಶ್ಯಾಂ ವೃಕ ಆದಧೇ ।।೪೩।।**

**ವತ್ಸಕಃ** ವತ್ಸಕನೆಂಬ ವಸುದೇವನ ತಮ್ಮನು **ಮಿತ್ರಕೇಶ್ಯಾಂ** ಮಿತ್ರಕೇಶಿ ಎಂಬ **ಅಪ್ಸರಸಿ** ಅಪ್ಸರಾ ಸ್ತ್ರೀಯಲ್ಲಿ **ವೃಕಾದೀನ್** ವೃಕ ಮೊದಲಾದವರನ್ನು **ಜನಯಾಮಾಸ** ಹುಟ್ಟಿಸಿದನು. **ತಥಾ** ಹಾಗೆಯೇ **ವೃಕಃ** ವೃಕನು **ಊರ್ವಶ್ಯಾಂ** ಊರ್ವಶಿಯಲ್ಲಿ **ತಕ್ಷಪುಷ್ಕರಸಾಲಾದೀನ್** ತಕ್ಷ, ಪುಷ್ಕರ, ಸಾಲ ಮೊದಲಾದವರನ್ನು **ಆದಧೇ** ಹುಟ್ಟಿಸಿದನು. ।।೪೩।।

**ತಾತ್ಪರ್ಯ-** ಈ ಐದು ಜನ ಸ್ತ್ರೀಯರು ಕಂಸನ ತಂಗಿಯರು. ವತ್ಸನೆಂಬ ಮತ್ತೊಬ್ಬ ಸಹೋದರನಿಗೆ ಮಿತ್ರಕೇಶಿ ಅಪ್ಸರೆಯಲ್ಲಿ ವೃಕನೇ ಮೊದಲಾದ ಕೆಲವು ಮಕ್ಕಳಾದರು. ವೃಕನೆಂಬ ಮತ್ತೊಬ್ಬ ಸಹೋದರನು ಊರ್ವಶಿ ಎಂಬುವಳಲ್ಲಿ ತಕ್ಷ, ಪುಷ್ಕರ, ಸಾಲ, ಮೊದಲಾದವರನ್ನು ಪಡೆದನು. ।।೪೩।।

**ಸುಮಿತ್ರಾರ್ಜುನಬಾಣಾದೀನನೀಕಾತ್ತು ಸುದಾಮನೀ ।**
**ಕಂಕಶ್ಚ ಕರ್ಣಿಕಾಯಾಂ ವೈ ಋತಧಾಮಜಯಾವಪಿ ।।೪೪।।**

**ಸುದಾಮನೀ** ಸುದಾಮನೀ ಎಂಬುವಳು **ಅನೀಕಾತ್** ಅನೀಕನೆಂಬ ವಸುದೇವನ ಸಹೋದರನಿಂದ, **ಸುಮಿತ್ರಾರ್ಜುನಬಾಣಾದೀನ್** ಸುಮಿತ್ರ , ಅರ್ಜುನ ಬಾಣರನ್ನು **ಕಂಕಶ್ಚ** ಕಂಕನಾದರು **ಕರ್ಣಿಕಾಯಾಂ** ಕರ್ಣಿಕಾ ಎನ್ನುವಳಲ್ಲಿ **ಋತುಧಾಮಜಯೌ ಅಪಿ** ಋತಧಾಮ ಜಯರೆಂಬ ಈರ್ವರನ್ನು ಕೂಡ ಪಡೆದನು. ।।೪೪।।

**ತಾತ್ಪರ್ಯ-** ಅನೀಕನೆಂಬ ಬೇರೊಬ್ಬ ಸಹೋದರನಿಗೆ ಸುಧಾಮಾ ಎಂಬ ಭಾರ್ಯೆಯಲ್ಲಿ, ಸುಮಿತ್ರ ಅರ್ಜುನ, ಬಾಣರೆಂಬ ಮಕ್ಕಳು ಆದರು. ಕಂಕನೆಂಬ ಇನ್ನೊಬ್ಬಸಹೋದರನ ದೆಸೆಯಿಂದ ಕರ್ಣಿಕಾ ಎಂಬ ಭಾರ್ಯೆಯಲ್ಲಿ ಋತಧಾಮ, ಜಯ, ಎಂಬುವರು ಜನಿಸಿದರು. ।।೪೪।।

ಇನ್ನು ವಸುದೇವನ ಪತ್ನೀ ಪುತ್ರರನ್ನು ಹನ್ನೊಂದು ಶ್ಲೋಕಗಳಿಂದ ಹೇಳುವರು-

**ಪೌರವೀ ರೋಹಿಣೀ ಭದ್ರಾ ಮದಿರಾ ರೋಚನಾ ಇಲಾ ।**
**ದೇವಕೀಪ್ರಮುಖಾ ಆಸನ್ ಪತ್ನ್ಯ ಆನಕದುಂದುಭೇಃ ।।೪೫।।**

**ಆನಕದುಂದುಭೇಃ** ವಸುದೇವನಿಗೆ, **ಪೌರವೀ, ರೋಹಿಣೀ, ಭದ್ರಾ, ಮದಿರಾ, ರೋಚನಾ, ಇಲಾ, ದೇವಕೀ, ಪ್ರಮುಖಾಃ** ಇವರೇ ಮೊದಲಾದ **ಪ್ರಸ್ರಮ, ಪ್ರಧೃತಿ, ದೇವಾ**, ಮುಂತಾಗಿ **ಪತ್ನ್ಯಃ** ಅನೇಕ ಪತ್ನಿಯರು **ಆಸನ್** ಇದ್ದರು. ದೇವಕಿಯು ಪೂರ್ವದಲ್ಲಿ ಅದಿತಿಯು. ।।೪೫।।

**ತಾತ್ಪರ್ಯ-** ಇನ್ನು ಜ್ಯೇಷ್ಠನಾದ ವಸುದೇವನ ಸಂತತಿಯನ್ನು ಹೇಳುವೆನು ಕೇಳು. ವಸುದೇವನಿಗೆ ದೇವಕಿ, ರೋಹಿಣಿ, ಪೌರವಿ, ಭದ್ರೆ , ಮದಿರೆ, ರೋಚನಾ, ಇಳಾ ಎಂಬ ಅನೇಕ ಪತ್ನಿಯರು. ಇವರಲ್ಲಿ ದೇವಕಿಯೇ ಪ್ರಧಾನಳು. ।।೪೫।।

**ಬಲಂ ಗದಂ ಸಾರಣಂ ಚ ದುರ್ಮದಂ ವಿಪುಲಂ ಧ್ರುವಮ್ ।**
**ವಸುದೇವಸ್ತು ರೋಹಿಣ್ಯಾಂ ಕೃತಧೀರುಪಾದಯತ್ ।।೪೬।।**

**ಕೃತಧೀಃ** ಶಿಕ್ಷಿತ ಬುದ್ಧಿ ಉಳ್ಳ **ವಸುದೇವಃ** ವಸುದೇವನು (ಈತನು ಪೂರ್ವದಲ್ಲಿ ಕಶ್ಯಪನು) **ರೋಹಿಣ್ಯಾಂ** ರೋಹಿಣಿಯಲ್ಲಿ (ಇವಳು ಪೂರ್ವದಲ್ಲಿ ಕಶ್ಯಪ ಭಾರ್ಯೆ ಸುರಭಿಯು) **ಬಲಂ** ಬಲರಾಮನನ್ನು (ಇವನು ಶೇಷಾವತಾರನು ಹರಿಯ ಶುಕ್ಲಕೇಶಾಂಶದಿಂದ ಕೂಡಿದವನು) **ಚ** ಮತ್ತು **ಗದಂ** ಗದನನ್ನು **ಸಾರಣಂ** ಸಾರಣನನ್ನು **ದುರ್ಮದಂ** ದುರ್ಮದನನ್ನು **ವಿಪುಲಂ** ವಿಪುಲನನ್ನು **ಉದಪಾದಯತ್** ಉತ್ಪಾದನ ಮಾಡಿದನು. ।।೪೬।।

**ತಾತ್ಪರ್ಯ-** ವಸುದೇವ ಶ್ರೀಹರಿಯಲ್ಲಿಯೇ ಮನಸ್ಸನ್ನು ಇರಿಸಿದವನು. ಇವನು ರೋಹಿಣಿಯಲ್ಲಿ ಬಲರಾಮ, ಗದ, ಸಾರಣ, ದುರ್ಮದ, ವಿಪುಲ, ಧ್ರುವರೆಂಬ ಮಕ್ಕಳನ್ನು ಪಡೆದನು. ।।೪೬।।

**ಸುಭದ್ರೋ ಭದ್ರಬಾಹುಶ್ಚ ದುರ್ಮದೋ ಭದ್ರ ಏವ ಚ ।**
**ಪೌರವ್ಯಾಸ್ತನಯಾ ಹ್ಯೇತೇ ಭೂತಾದ್ಯಾ ದ್ವಾದಶಾಭವನ್ ।।೪೭।।**

**ಸುಭದ್ರಃ** ಸುಭದ್ರನು **ಭದ್ರಬಾಹುಃ** ಭದ್ರಬಾಹುವು **ದುರ್ಮದಃ** ದುರ್ಮದನು **ಭದ್ರಃ** ಭದ್ರನು **ಚ** ಮತ್ತು **ಭೂತಾದ್ಯಾಃ** ಭೂತನೇ ಮೊದಲಾದ **ದ್ವಾದಶ** ಹನ್ನೆರಡು ಜನ **ಪೌರವ್ಯಾಃ** ಪೌರವಿಯಲ್ಲಿ ಜನಿಸಿದ **ತನಯಾಃ** ಮಕ್ಕಳುಗಳು. ।।೪೭।।

**ತಾತ್ಪರ್ಯ-** ಪೌರವಿಯಲ್ಲಿ ಸುಭದ್ರ , ಭದ್ರಬಾಹು, ದುರ್ಮದ, ಭದ್ರ ಭೂತನೇ ಮೊದಲಾದ ೧೨ ಮಂದಿ ಮಕ್ಕಳನ್ನು ಪಡೆದನು. ।।೪೭।।

**ನಂದೋಪನಂದಕೃತಕಶೂರಾದ್ಯಾ ಮದಿರಾತ್ಮಜಾಃ ।**
**[1]ಭದ್ರಾಖ್ಯಾ ಕೇಶಿನಂ ತ್ವೇಕಂ ಕೌಸಲ್ಯಾ ಕುಲನಂದನಮ್ ।।೪೮।।**

**ನಂದಃ** ನಂದನು **ಉಪನಂದಃ** ಉಪನಂದನು **ಕೃತಕಃ** ಕೃತಕನು **ಶೂರಾದ್ಯಾಃ** ಶೂರನೇ ಮುಂತಾದವರು **ಮದಿರಾತ್ಮಜಾಃ** ಮದಿರಾಳಲ್ಲಿ ಜನಿಸಿದವರು. **ಕೌಸಲ್ಯಾ** ಕೌಸಲಪುತ್ರಿಯಾದ **ಭದ್ರಾಖ್ಯಾ** ಭದ್ರಾ ಎಂಬುವಳು **ಕುಲನಂದನಂ** ಕುಲದೀಪಕನಾದ **ಕೇಶಿನಂ** ಕೇಶಿ ಎಂಬ **ಏಕಂ ತು** ಒಬ್ಬನನ್ನು **ಅಸೂತ** ಪ್ರಸವಿಸಿದಳು. ।।೪೮।।

---

೧ 'ಕೌಸಲ್ಯಾ ಕೇಶಿನಂ ತ್ವೇಕಮಸೂತ' ಇತಿ ಪಾಠಾಂತರಮ್ ।

**ತಾತ್ಪರ್ಯ-** ಮದಿರಾ ಎಂಬುವಳಲ್ಲಿ ನಂದ, ಉಪನಂದ, ಕೃತಕ, ಶೂರನೇ ಮೊದಲಾದ ಪುತ್ರರು ಹುಟ್ಟಿದರು. ಭದ್ರೆಯಲ್ಲಿ ಕುಲವರ್ಧಕನಾದ ಕೇಶಿ ಹುಟ್ಟಿದನು. ||೪೮||

**ರೋಚನಾಯಾಂ ತತೋ ಜಾತಾ ಹಸ್ತಹೇಮಾಂಗದಾದಯಃ |**
**ಇಲಾಯಾಂ ಪುರುವಲ್ಕಾದೀನ್ಯದುಮುಖ್ಯಾನಜೀಜನತ್ ||೪೯||**

**ತತಃ** ವಸುದೇವನಿಂದ **ರೋಚನಾಯಾಂ** ರೋಚನಾದೇವಿಯಲ್ಲಿ **ಹಸ್ತ ಹೇಮಾಂಗದಾದಯಃ** ಹಸ್ತ , ಹೇಮಾಂಗದ ಮುಂತಾದವರು **ಜಾತಾಃ** ಹುಟ್ಟಿದರು. **ಯದುಮುಖ್ಯಾನ್** ಯದುವೇ ಪ್ರಧಾನನಾಗಿ ಉಳ್ಳ **ಪುರುವಲ್ಕಾದೀನ್** ಪುರುವಲ್ಕ ಮೊದಲಾದ ಮಕ್ಕಳನ್ನು **ಇಲಾಯಾಂ** ಇಲಾಳಲ್ಲಿ **ಅಜೀಜನತ್** ಹುಟ್ಟಿಸಿದನು. ||೪೯||

**ತಾತ್ಪರ್ಯ-** ರೋಚನಾ ಎಂಬುವಳಲ್ಲಿ ಹಸ್ತ ಹೇಮಾಂಗದರೇ ಮೊದಲಾದವರು ಹುಟ್ಟಿದರು. ಇಳಾ ಎಂಬುವಳಲ್ಲಿ ಪುರುವಲ್ಕನೇ ಮೊದಲಾದ ಕೆಲವು ಯದು-ಶ್ರೇಷ್ಠರು ಜನಿಸಿದರು. ||೪೯||

**ತ್ರಿಪೃಷ್ಠೋ ಧೃತದೇವಾಯಾಂ ಜಾತ ಆನಕದುಂದುಭೇಃ |**
**ಶಾಂತಿದೇವಾತ್ಮಜಾ ರಾಜನ್ ಪ್ರಶ್ರಮಪ್ರಶ್ರಿತಾದಯಃ ||೫೦||**

**ಆನಕದುಂದುಭೇಃ** ವಸುದೇವನಿಗೆ **ಧೃತದೇವಾಯಾಂ** ಧೃತದೇವಾಳಲ್ಲಿ **ತ್ರಿಪೃಷ್ಠಃ** ತ್ರಿಪೃಷ್ಠನೆಂಬ ಮಗನು **ಜಾತಃ** ಹುಟ್ಟಿದನು. **ರಾಜನ್** ಪರೀಕ್ಷಿತನೇ! **ಪ್ರಶ್ರಮ-ಪ್ರಶ್ರಿತಾದಯಃ** ಪ್ರಶ್ರಮ, ಪ್ರಶ್ರಿತರೇ ಮೊದಲಾದವರು **ಶಾಂತಿದೇವಾತ್ಮಜಾಃ** ಶಾಂತಿದೇವಿಯ ಮಕ್ಕಳು. ||೫೦||

**ತಾತ್ಪರ್ಯ-** ಉಗ್ರಸೇನನ ಅಣ್ಣ ದೇವಕನ ಏಳು ಮಂದಿ ಹೆಣ್ಣುಮಕ್ಕಳನ್ನು ವಸುದೇವನು ಮದುವೆಯಾದನೆಂದು ಹೇಳಿದ್ದೇವೆ. ಧೃತದೇವಾ ಎಂಬುವಳಲ್ಲಿ ತ್ರಿಪೃಷ್ಠನೆಂಬುವನು ಹುಟ್ಟಿದನು. ಶಾಂತಿದೇವಿಯಲ್ಲಿ ಪ್ರಶ್ರಮ, ಪ್ರಶ್ರಿತರು ಜನಿಸಿದರು. ||೫೦||

**ರಾಜಾನಃ ಕಲ್ಪವರ್ಷಾದ್ಯಾ ಉಪದೇವ್ಯಾಃ ಸುತಾ ದಶ |**
**ವಸುಹಂಸಸುಧನ್ವಾದ್ಯಾಃ ಶ್ರೀದೇವಾಯಾಶ್ಚ ಷಟ್ ಸುತಾಃ ||೫೧||**

**ಉಪದೇವ್ಯಾಃ** ಉಪದೇವಿಯ **ಸುತಾಃ** ಮಕ್ಕಳು **ಕಲ್ಪವರ್ಷಾದ್ಯಾಃ** ಕಲ್ಪವರ್ಷ ಮುಂತಾದ **ದಶ** ಹತ್ತು ಜನ ಮಕ್ಕಳು **ರಾಜಾನಃ** ರಾಜರಾದವರು **ಶ್ರೀದೇವಾಯಾಃ**

**ಚ** ಶ್ರೀದೇವಾಳಿಗಾದರೂ **ವಸುಹಂಸಸುಧನ್ವಾದ್ಯಾಃ** ವಸು, ಹಂಸ, ಸುಧನ್ವರೇ ಮೊದಲಾದ **ಷಟ್** ಆರು **ಸುತಾಃ** ಮಕ್ಕಳು. ॥೫೧॥

**ತಾತ್ಪರ್ಯ–** ಉಪದೇವಿಯಲ್ಲಿ ಕಲ್ಪವರ್ಷನೇ ಮೊದಲಾದ ಹತ್ತು ಜನರು ಹುಟ್ಟಿದರು. ಶ್ರೀದೇವಾ ಎಂಬುವಳಲ್ಲಿ ವಸು, ಹಂಸ, ಸುಧನ್ವರೇ ಮೊದಲಾದ ಆರು ಜನ ಮಕ್ಕಳು ಹುಟ್ಟಿದರು. ॥೫೧॥

**ದೇವರಕ್ಷಿತಯಾ ಲಬ್ಧಾ ನವ ಚಾತ್ರ ಗದಾದಯಃ ।**
**ವಸುದೇವಃ ಸುತಾನಷ್ಟಾವಾದಧೇ ಸಹದೇವಯಾ ॥೫೨॥**

**ದೇವರಕ್ಷಿತಯಾ** ದೇವರಕ್ಷಿತೆಯಿಂದ **ಗದಾದಯಃ** ಗದನೇ ಮುಂತಾದವರು **ನವ** ಒಂಭತ್ತು **ಪುತ್ರಾಃ** ಮಕ್ಕಳು **ಲಬ್ಧಾಃ** ಜನ್ಮ ತಾಳಿದರು. (ಈ ಗದನು ರೋಹಿಣೀ ಮಗನಿಂದ ಬೇರೆಯವನು) ಸಹದೇವಾಳಲ್ಲಿ **ವಸುದೇವಃ** ವಸುದೇವನು **ಅಷ್ಟೌ** ಎಂಟು **ಸುತಾನ್** ಮಕ್ಕಳನ್ನು **ಆದಧೇ** ಪಡೆದನು. ॥೫೨॥

**ತಾತ್ಪರ್ಯ–** ದೇವರಕ್ಷಿತೆ ಎಂಬುವಳಲ್ಲಿ ಗದನೇ ಮೊದಲಾದ ಒಂಭತ್ತು ಜನರು ಹುಟ್ಟಿದರು. ಸಹದೇವಾ ಎಂಬುವಳಲ್ಲಿ ಪುರುವತ್ಸ, ಮೃದು ಮೊದಲಾದ ಎಂಟು ಮಕ್ಕಳನ್ನು ಪಡೆದನು. ॥೫೨॥

**ಪುರುವತ್ಸಮೃದುಮುಖ್ಯಾನ್ ಸಾಕ್ಷಾದ್ಧರ್ಮೋ ವಸೂನಿವ ।**
**ವಸುದೇವಸ್ತು ದೇವಕ್ಯಾಮಷ್ಟಪುತ್ರಾನಜೀಜನತ್ ॥೫೩॥**

**ಸಾಕ್ಷಾತ್ ಧರ್ಮಃ** ಸಾಕ್ಷಾತ್ ಧರ್ಮರಾಜನು **ಪುರುವತ್ಸಮೃದುಮುಖ್ಯಾನ್** ಪುರುವತ್ಸ, ಮೃದುವೇ ಮೊದಲಾದ **ವಸೂನ್ ಇವ** ವಸು ಎಂಬ ಪತ್ನಿಯಲ್ಲಿ ಅಷ್ಟ ವಸುಗಳನ್ನು ಪಡೆದಂತೆ **ವಸುದೇವಸ್ತು** ವಸುದೇವನಾದರೋ **ದೇವಕ್ಯಾಂ** ದೇವಕಿಯಲ್ಲಿ **ಅಷ್ಟಪುತ್ರಾನ್** ಎಂಟುಮಕ್ಕಳನ್ನು **ಅಜೀಜನತ್** ಹುಟ್ಟಿಸಿದನು. ॥೫೩॥

**ತಾತ್ಪರ್ಯ–** ಧರ್ಮರಾಜನು ಪುರುವತ್ಸ, ಮೃದುವೇ ಮೊದಲಾದ ಎಂಟುಜನ ವಸುಗಳನ್ನು ತನ್ನ ಹೆಂಡತಿಯಾದ ವಸುವಿನಲ್ಲಿ ಪಡೆದಂತೆ ವಸುದೇವನು ದೇವಕೀ ಎಂಬ ಪತ್ನಿಯಲ್ಲಿ ಎಂಟು ಜನ ಮಕ್ಕಳನ್ನು ಪಡೆದನು. ॥೫೩॥

**ಕೀರ್ತಿಮಂತಂ ಸುಷೇಣಂ ಚ ಭದ್ರಸೇನಮುದಾರಧೀಃ ।**
**ಋಜುಂ ಸಂಮರ್ದನಂ ಭದ್ರಂ ಸಂಕರ್ಷಣಮಹೀಶ್ವರಮ್ ॥೫೪॥**

**ಉದಾರಧೀಃ** ಬಹಳ ಬುದ್ಧಿವಂತನಾದ ವಸುದೇವನು **ಕೀರ್ತಿಮಂತಂ** ಕೀರ್ತಿಮಂತನನ್ನು **ಸುಷೇಣಂ** ಸುಷೇಣನನ್ನು **ಭದ್ರಸೇನಂ** ಭದ್ರಸೇನನ್ನು **ಋಜುಂ**

ಋಜುವನ್ನು **ಸಂಮರ್ದನಂ** ಸಂಮರ್ದನನ್ನು **ಭದ್ರಂ** ಭದ್ರನನ್ನು **ಅಹೀಶ್ವರಂ** ಸರ್ಪಗಳ ರಾಜನಾದ **ಸಂಕರ್ಷಣಂ** ದುರ್ಗಾದೇವಿಯಿಂದ ದೇವಕಿ ಗರ್ಭದಿಂದ ಕಿತ್ತಿ ರೋಹಿಣಿಯಲ್ಲಿ ತಂದಿಟ್ಟು ಅಲ್ಲಿ ಬೆಳೆದ ಶೇಷಾಂಶನಾದ ಸಂಕರ್ಷಣನನ್ನು ಹೀಗೆ ಏಳು ಜನರನ್ನು ಪಡೆದನು. ।।೫೪।।

**ತಾತ್ಪರ್ಯ-** ವಸುದೇವನು ತನ್ನ ಪ್ರಧಾನಪತ್ನಿಯಾದ ದೇವಕಿಯಲ್ಲಿ ಎಂಟು ಮಕ್ಕಳನ್ನು ಪಡೆದನು. ಮೊದಲಿನ ಏಳು ಮಕ್ಕಳಿಗೂ ಕ್ರಮವಾಗಿ, ಕೀರ್ತಿವಂತ, ಸುಷೇಣ, ಭದ್ರಸೇನ, ಋಜು, ಸಮ್ಮರ್ದನ, ಭದ್ರ, ಸಂಕರ್ಷಣ, ಎಂದು ಹೆಸರು. ಈ ಏಳನೆಯವನಾದ ಸಂಕರ್ಷಣನು ಶೇಷಾಂಶನು. ದುರ್ಗಾದೇವಿಯಿಂದ ದೇವಕಿಗರ್ಭದಿಂದ ತೆಗೆದು ರೋಹಿಣಿಯ ಗರ್ಭಕ್ಕೆ ಕರ್ಷಣ ಮಾಡಿದ್ದರಿಂದ ಸಂಕರ್ಷಣನೆಂದು ಹೆಸರು ಬಂದಿತು. ।।೫೪।।

**ಅಷ್ಟಮಸ್ತು ತಯೋರಾಸೀತ್ ಸ್ವಯಮೇವ ಹರಿಃ ಕಿಲ ।**
**ಸುಭದ್ರಾ ಚ ಮಹಾಭಾಗಾ ತವ ರಾಜನ್ ಪಿತಾಮಹೀ ।।೫೫।।**

**ತಯೋಃ** ವಸುದೇವ-ದೇವಕಿಯರಿಂದ **ಅಷ್ಟಮಃ ತು** ಎಂಟನೆಯವನಾದ **ಹರಿಃ** ಸಾಕ್ಷಾನ್ನಾರಾಯಣನು **ಸ್ವಯಮೇವ** ಸ್ವೇಚ್ಛೆಯಿಂದ **ಆಸೀತ್** ಅವತಾರ ಮಾಡಿದನು, ಕರ್ಮದಿಂದಲ್ಲ. **ಕಿಲ** ಶ್ರುತಿಪ್ರಸಿದ್ಧವು. **ಹೇ ರಾಜನ್** ರಾಜನೇ! **ತವ** ನಿನ್ನ **ಪಿತಾಮಹೀ** ತಂದೆಯಾದ ಅಭಿಮನ್ಯುವಿನ ತಾಯಿ **ಸುಭದ್ರಾ ಚ** ಮಹಾಭಾಗಾ ಪುಣ್ಯಶಾಲಿನಿಯು ಸಹ ಜನಿಸಿದಳು. ।।೫೫।।

**ತಾತ್ಪರ್ಯ-** ಸಾಕ್ಷಾತ್ ವಿಷ್ಣುವೇ ದೇವಕಿಯ ಎಂಟನೆಯ ಗರ್ಭದಲ್ಲಿ ಅವತರಿಸಿದನು. ಈ ಎಂಟು ಗಂಡು ಮಕ್ಕಳಲ್ಲದೆ, ಸುಭದ್ರೆಯೆಂಬ ಕನ್ಯೆಯೂ ಜನಿಸಿದಳು. ಈ ಸುಭದ್ರೆಯೇ ನಿನ್ನ ತಂದೆಯಾದ ಅಭಿಮನ್ಯುವಿನ ತಾಯಿಯು.

ಈ ಹರಿಯು ಭೂಮಿಯಲ್ಲಿ ಮನುಷ್ಯನಂತೆ ಅವತರಿಸಿದ್ದಾದರೆ ಜೀವಸಮನಾಗುತ್ತಾನೆ. ಅವತರಿಸಿದರೂ, ಪಾಪವಿಲ್ಲದವನು ಎಂದರೆ ಪಾಪರಹಿತನಾದ ಇವನಿಗೆ ಅವತಾರದಿಂದ ಫಲವೆಲ್ಲಿ ಎಂದು ಹೇಳಬೇಕು. ಇಲ್ಲವಾದರೆ ಅಪೂರ್ಣತೆ ಬರುವದು. ಪ್ರಯೋಜನವಿಲ್ಲದ ಪ್ರವೃತ್ತಿಯು ಕಂಡಿಲ್ಲ. ಕೇಳಿಲ್ಲ. ಇವೇ ಮೊದಲಾದ ಶಂಕಾಗಳನ್ನು ಹುಟ್ಟಿಸುತ್ತಾ ''ಆಸೀತ್ಸ್ವಯಮೇವ ಹರಿಃ ಕಿಲ'' ಎಂದು ವ್ಯಾಸರೇ ಪರಮಾತ್ಮನ ಅವತಾರದ ಯುಕ್ತತೆಯನ್ನು ಈ ಸ್ಕಂಧ ಪೂರ್ತಿ ಹೇಳುತ್ತಾ ವಿಸ್ತಾರ ಮಾಡುತ್ತಾರೆ.

**ಯದಾ ಯದಾ ಹಿ ಧರ್ಮಸ್ಯ ಕ್ಷಯೋ ವೃದ್ಧಿಶ್ಚ ಪಾಪ್ಮನಃ ।**

**ತದಾ ತು ಭಗವಾನೀಶ ಆತ್ಮಾನಂ ಸೃಜತೇ ಹರಿಃ ॥೫೬॥**

**ಯದಾ ಯದಾ** ಯಾವಾಗ ಯಾವಾಗ **ಧರ್ಮಸ್ಯ ಕ್ಷಯಃ** ಧರ್ಮದ ನಾಶವು **ಪಾಪ್ಮನಃ** ಪಾಪದ **ವೃದ್ಧಿಃ ಚ** ಹೆಚ್ಚಾಗುವಿಕೆಯ ಆಗುವದೋ **ತದಾ ತು** ಅವಾಗಲೆಲ್ಲ **ಭಗವಾನ್** ಷಡ್ಗುಣಸಂಪನ್ನನಾದ **ಈಶಃ** ಸರ್ವೇಶ್ವರನಾದ **ಹರಿಃ** ನಾರಾಯಣನು **ಆತ್ಮಾನಂ** ತನ್ನನ್ನು **ಸೃಜತೇ** ಸೃಷ್ಟಿಸುತ್ತಾನೆ (ವ್ಯಕ್ತೀಕರಿಸುತ್ತಾನೆ) ಇದರಿಂದ ಇವನ ಶರೀರ ಕರ್ಮನಿರ್ಮಿತವಲ್ಲ ಎಂದು ಸೂಚಿಸುವರು. ಹಾಗಾದರೆ ಅವತಾರವೇಕೆಂದರೆ? ಮಿಕ್ಕವರಂತೆ ಪ್ರಯೋಜನಕ್ಕಾಗಿ ಅಲ್ಲ ಕೇವಲ ಧರ್ಮ ರಕ್ಷಣೆಗಾಗಿ ಲೀಲಾಮಾತ್ರವು. ಸಂಕ್ಷೇಪ ಹೇಳಿದ್ದನ್ನೇ ವಿವರಿಸುವರು. ॥೫೬॥

**ತಾತ್ಪರ್ಯ-** ರಾಜನೇ! ಲೋಕದಲ್ಲಿ ಯಾವಾಗ ಧರ್ಮಕ್ಕೆ ಕ್ಷೀಣದಶೆ ಉಂಟಾಗುವದೋ ಅಧರ್ಮವು ಹೆಚ್ಚಾಗುವದೋ ಆಗ ಶ್ರೀಹರಿಯು, ಸ್ವೇಚ್ಛಾದಿಂದ ಅವತರಿಸುವನು. ಈಗ ಅಧರ್ಮವು ಹೆಚ್ಚಿದ್ದರಿಂದ ದುಷ್ಟನಿಗ್ರಹಕ್ಕಾಗಿ ಕೃಷ್ಣನಾಗಿ ಅವತರಿಸಿದನು. ॥೫೬॥

**ನ ಹ್ಯಸ್ಯ ಜನ್ಮನೋ ಹೇತುಃ ಕರ್ಮಣಾಂ ವಾ ಮಹೀಪತೇ ।**
**ಆತ್ಮಮಾಯಾಂ ವಿನೇಶಸ್ಯ ಪರಸ್ಯ ದ್ರಷ್ಟುರಾತ್ಮನಃ ॥೫೭॥**

(ಪರಮಾತ್ಮನಿಗೆ ಜನ್ಮಮರಣಗಳಿದ್ದುದಾದರೆ ಸಂಸಾರನಿವಾರಣೆಗಾಗಿ ಅವನ ಸೇವೆ ಮಾಡುವದು ವೃಥಾ ಎಂಬ ಶಂಕೆಗೆ ಉತ್ತರ ಹೇಳುವರು. ಜೀವನದೃಷ್ಟಾಂತವು ವಿಷಮವು. ಜೀವನಿಗೆ ಜನ್ಮಾದಿಗಳು ಬರುವದಕ್ಕೆ ಪುಣ್ಯಪಾಪಗಳು ಕಾರಣಗಳಾಗಿವೆ. ಇವನು ವಿಧಿಬದ್ಧನು. ಈಶ್ವರನು ವಿಧಿ ಬದ್ಧನಲ್ಲವಾದ್ದರಿಂದ ಅವನಿಗೆ ಪುಣ್ಯಪಾಪಗಳು ಇಲ್ಲ ಹಾಗಾದರೆ ಕಾರಣವಿಲ್ಲದೇ ಕಾರ್ಯವಾಗಲಾರದು ಎಂಬ ನ್ಯಾಯದಿಂದ ಅವತಾರ ಕಾರಣವೇನೆಂದರೆ ಲೋಕಾನುಗ್ರಹಕ್ಕಾಗಿ ವ್ಯಕ್ತವಾದ ಇಚ್ಛೆಯೆಂದು ತಿಳಿಯಬೇಕು. ಇಚ್ಛೆ ವ್ಯಕ್ತಿಗೆ ಕಾರಣ ಪುಣ್ಯಪಾಪಗಳ ಕ್ಷಯವೃದ್ಧಿಗಳೆಂದು ಹೇಳಿಯಾಗಿದೆ. ಕಾರಣ ಅವನ ಸೇವೆಯು ವ್ಯರ್ಥವಲ್ಲ. ಹರಿಯು ವಿಧಿಬದ್ಧನಲ್ಲದಿದ್ದರೂ ಜನ್ಮಾದಿಗಳು ಕಂಡದ್ದರಿಂದ ಅನಿರೀಕ್ಷಿತಪುಣ್ಯಪಾಪಲೇಪದಿಂದ ದುಃಖಿಯಾಗಬಹುದಲ್ಲಾ ಎಂದರೆ **ಈಶಸ್ಯ**ಯಾವ ಕಾಲದಲ್ಲಿಯೂ ಯಾವುದೇ ಕಾರಣದಿಂದ ನನಗೆ ದುಃಖ ಬರದಿರಲಿ ಎಂಬ ನಿವಾರಣಾ ಸಮರ್ಥನಾಗಿದ್ದಾನೆ. ಉಳಿದವರಿಗೆ ಸಾಮರ್ಥ್ಯ ಇಲ್ಲ. ಇನ್ನು ಜೀವನೇ ಈಶ್ವರನಲ್ಲವೇ ಎಂದರೆ ಪರಸ್ಯ ಜೀವವಿಲಕ್ಷಣನು. ಏನು ವೈಲಕ್ಷಣ್ಯ ಎಂದರೆ **ದ್ರಷ್ಟುಃ** ಸರ್ವಜ್ಞನು ಅದು ಸ್ವರೂಪವು ಎಂದು **ಆತ್ಮನಃ** ಎಂದು ಹೇಳಿದ್ದಾರೆ).

ಶ್ಲೋಕಾರ್ಥ ಸತ್ಯಧರ್ಮರ ಪ್ರಕಾರ **ಅಸ್ಯ** ಪ್ರತ್ಯಕ್ಷಸಿದ್ಧವಾದ ದೇಹ ಉಳ್ಳ ಪರಮಾತ್ಮನಿಗೆ **ಜನ್ಮನಃ** ಉತ್ಪತ್ತಿಗೆ **ಹೇತುಃ** ಕಾರಣವು **ನಹಿ** ಇಲ್ಲ **ಕರ್ಮಣಾಂ ವಾ** ಅವತಾರದಲ್ಲಿ ಮಾಡಿದ ಕಾರ್ಯಗಳಿಗಾಗಲಿ **ಹೇತುಃ** ಬರಬೇಕಾದ ಫಲರೂಪಕಾರಣವೇ **ನ ಹಿ** ಇಲ್ಲ. ಹಾಗಾದರೆ ಜನ್ಮಕಾರಣ ಯಾರಿಗುಂಟು ಎನ್ನುವದನ್ನೂ ಇದೇ ವಾಕ್ಯದಿಂದ ಹೇಳುವರು. **ನಹ್ಯಸ್ಯ** ಹರಿಯಿಂದ ವಧ್ಯರಾದ ಜೀವರಿಗೆ **ಜನ್ಮನಃ ಕರ್ಮಣಃ ಹೇತುಃ** ಉತ್ಪತ್ತಿಗೂ ಯಾವುದೇ ಕಾರ್ಯಮಾಡಲು ಪುಣ್ಯಪಾಪಪ್ರಯೋಜನರೂಪಕಾರಣ ಉಂಟು ಜಗತ್ತಿನಲ್ಲಿ ಕಾರಣವಿಲ್ಲದೇ ಕಾರ್ಯದಲ್ಲಿ ಪ್ರವೃತ್ತಿ ಕಂಡಿಲ್ಲವೆಂದರೆ ಉತ್ತರ **ಆತ್ಮ** ಜಗತ್ತಿನಲ್ಲಿ ಕಾರಣವಿಲ್ಲದೇ ಕಾರ್ಯದಲ್ಲಿ ಪ್ರವೃತ್ತಿ ಕಂಡಿಲ್ಲವೆಂದರೆ ಉತ್ತರ **ಆತ್ಮಮಾಯಾಂ ವಿನಾ** ತನ್ನ ಇಚ್ಛೆಯನ್ನು ಬಿಟ್ಟು ಬೇರೆ ಕಾರಣವಿಲ್ಲ ತನ್ನ ಇಚ್ಛೆಯೇ ಕಾರಣ. ಫಲವಿಲ್ಲದೆ ವ್ಯಾಪಾರಮಾಡುವದು ಅಸಂಭಾವಿತ ಎಂಬ ಶಂಕೆಗಳನ್ನು ನಿರ್ಮೂಲನ ಮಾಡಲು ಪ್ರಮಾಣಾನುಸಾರ ಕಾರಣಗಳನ್ನು ಹೇಳುವರು. ಈಶಸ್ಯ ಮುಂತಾಗಿ ಸ ಈಶಃ ಎಂದು ಪ್ರಮಾಣಾನುಸಾರ ಜೀವವಿಲಕ್ಷಣತ್ವ ರೂಪವಾದ ಸರ್ವೇಶ್ವರನಾದವನು ಕಾರಣ ''ಉತ್ತಮಃ ಪುರುಷಸ್ತ್ವನ್ಯಃ'' ಎಂಬ ಪ್ರಮಾಣಾನುಸಾರ ವಿಲಕ್ಷಣನು **ದ್ರಷ್ಟುಃ** ಸಾಕ್ಷಾತ್ಕಾರ ಉಳ್ಳ **ಯಃ ಸರ್ವಜ್ಞಃ ಸರ್ವವಿತ್** ಎಂಬ ಪ್ರಮಾಣಾನುಸಾರ ಕೇವಲ ಈ ಮೂರು ಪದದಿಂದ ಹೇಳಿದ ಮೂರು ಗುಣಗಳಷ್ಟೇ ಅಸಂಭಾವನಾನಿರಾಸಕಗಳಲ್ಲ ಆತ್ಮಶಬ್ದಕ್ಕೆ ಸಕಲ ಗುಣಗಳಿಂದಲೂ ಸಹ ಎಂದೇ ಸೂಚಿಸುವರು ಆತ್ಮನಃ ಎಂದು. ಸರ್ವಾನ್ ಗುಣಾನ್ ಆತ್ಮಶಬ್ದೋ ಬ್ರವೀತಿ ಎಂದು ಪ್ರಮಾಣ ಉಂಟು. ವಿಶೇಷಾರ್ಥ ಅನ್ವಯಾನುಸಾರ ಅರ್ಥ **ಮಹೀಪತೇ** ರಾಜನೇ **ಆತ್ಮನಃ** ಸಕಲಗುಣಪೂರ್ಣನಾದ **ದ್ರಷ್ಟುಃ** ಸರ್ವಜ್ಞನಾದ **ಪರಸ್ಯ** ಲೋಕವಿಲಕ್ಷಣನಾದ **ಈಶಸ್ಯ** ಸರ್ವಸಮರ್ಥನಾದ ಪ್ರತ್ಯಕ್ಷಸಿದ್ಧ ದೇಹವಿರುವ **ಪರಸ್ಯ ಆತ್ಮನಃ** ಪರಮಾತ್ಮನಿಗೆ **ಆತ್ಮಾಮಾಯಾಂ ವಿನಾ** ತನ್ನ ಇಚ್ಛೆಯ ಹೊರತು ಬೇರೆ **ಜನ್ಮನಃ** ಅವತಾರಕ್ಕಾಗಲೀ **ಕರ್ಮಣಃ ವಾ** ಆ ಆ ಅವತಾರದಲ್ಲಿ ನಡೆಸಿದ ವ್ಯಾಪಾರಗಳಿಗಾಗಲಿ **ಹೇತುಃ** ಕಾರಣವು **ನ ಹಿ** ಇರುವದಿಲ್ಲ. ||೫೭||

**ತಾತ್ಪರ್ಯ-** ಆ ಪರಮಪುರುಷನು ಈ ವಿಧವಾದ ಅವತಾರ ಮಾಡುವುದಕ್ಕೂ ತನ್ನ ಸಂಕಲ್ಪವಲ್ಲದೇ ಬೇರೆ ಕಾರಣವಿಲ್ಲ. ಇವನೇ ಎಲ್ಲಕ್ಕೂ ನಿಯಾಮಕನು. ಈತನನ್ನು ನಿಯಮಿಸತಕ್ಕವರು ಬೇರೋಬ್ಬರಿಲ್ಲ. ಈತನು ಸಮಸ್ತ ಪ್ರಪಂಚದಲ್ಲಿ ವ್ಯಾಪ್ತನು. ||೫೭||

**ಯನ್ಮಾಯಾಚೇಷ್ಟಿತಂ ಪುಂಸಃ ಸ್ಥಿತ್ಯುತ್ಪತ್ತ್ಯಪ್ಯಯಾಯ ಹಿ ।**
**ಅನುಗ್ರಹಸ್ತನ್ನಿವೃತ್ತೇರಾತ್ಮಲಾಭಾಯ ಚೇಷ್ಯತೇ ॥೫೮॥**

**ಯನ್ಮಾಯಾ** ಯಾವ ಪರಮಾತ್ಮನ ಅಧೀನವಾದ ತ್ರಿಗುಣಾತ್ಮಕವಾದ ಪ್ರಕೃತಿಯ **ಚೇಷ್ಟಿತಂ** ವ್ಯಾಪಾರವು **ಪುಂಸಃ** ಪುರುಷನ **ಅರ್ಥಾತ್** ಎಲ್ಲ ಪ್ರಪಂಚದ **ಸ್ಥಿತ್ಯುತ್ಪತ್ತ್ಯಪ್ಯಯಾಯ** ಸ್ಥಿತಿ-ಉತ್ಪತ್ತಿ-ಸಂಹಾರಗಳಿಗೆ (**ಭವತಿ**) ಆಗುತ್ತದೆ. ಅಂದರೆ ಭಗವಂತನೇ ಸತ್ವಾದಿ ಗುಣಗಳಿಂದ ಸೃಷ್ಟ್ಯಾದಿಗಳನ್ನು ಮಾಡುವನು ಎಂದರ್ಥ. **ಅನುಗ್ರಹಃ** ಹರಿಯ ಅನುಗ್ರಹವು **ತನ್ನಿವೃತ್ತಯೇ** ಮಾಯಾನಿವೃತ್ತಿಗೆ **ಹೇತುಃ** ಕಾರಣವು. ಈ ಸಂಸಾರನಿವೃತ್ತಿಯು **ಆತ್ಮಲಾಭಾಯ** ಸ್ವರೂಪಾನಂದಾವಿರ್ಭಾವಕ್ಕೆ **ಇಷ್ಯತೇ** ಕಾರಣವಾಗುತ್ತದೆ.

ಇಲ್ಲಿ ಸಂಸಾರನಿವೃತ್ತಿಗೆ ಅನುಗ್ರಹವು ಕಾರಣವೆಂದು ಹೇಳಿದ್ದರಿಂದ ಅದಕ್ಕೆ ಪ್ರತಿಯಾಗಿ ನಿಗ್ರಹವು ಸಂಸಾರಕ್ಕೆ ಕಾರಣವೆಂದು ತಿಳಿಯಬೇಕು. ಕಾರಣ **ಯಸ್ಯ** ಯಾವ ಪರಮಾತ್ಮನ **ಮಾಯಯಾ** ಇಚ್ಛೆಯ **ಚೇಷ್ಟಿತಂ** ನಿಗ್ರಹರೂಪ ವ್ಯಾಪಾರವು ಸೃಷ್ಟ್ಯಾದಿಗಳಿಗೆಕಾರಣ ಹೀಗೆ ಅರ್ಥ ಮಾಡಬೇಕು. ಜೀವವ್ಯಾವರ್ತಕ ಲಕ್ಷಣವಾದ ಜಗತ್ಕರ್ತೃತ್ವಾದಿಗಳು ಪ್ರವೃತ್ತಿಗೆ ಉಂಟು. ಆದ್ದರಿಂದ ಸಾರ್ವಜ್ಞ್ಯಮಾತ್ರದಿಂದ ಜೀವನಿಂದ ಈಶ್ವರನು ಬೇರೆ ಎಂದು ಹೇಳಲು ಸಾಧ್ಯ. ಮತ್ತು ಸರ್ವಜ್ಞಃ ತ್ರಿಪುರಾಂತಕಃ ಮುಂತಾಗಿ ಬೇರೆಯವರಿಗೆ (ರುದ್ರಾದಿಗಳಿಗೆ) ಹೇಳಿದೆಯೆಂಬ ಶಂಕೆಗೆ ಉತ್ತರ ಮೇಲಿನ ಶ್ಲೋಕದಲ್ಲಿ ಹೇಳಿದೆ. ''ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ'' ಎಂಬ ಪ್ರಮಾಣಾನುಸಾರ, ಪ್ರಕೃತಿ ಮುಂತಾದವುಗಳಿಗೆ ಇರುವ ಕರ್ತೃತ್ವ ಕಾರಣತ್ವಾದಿಗಳು ಹರಿಯ ಪ್ರೇರಣೆಯಿಂದಲೇ ಆದ್ದರಿಂದ ಮುಖ್ಯವಾಗಿ ಕಾರಣನು ಶ್ರೀಹರಿಯೇ. ಅವನ ಅನುಗ್ರಹದಿಂದಲೇ ಜನನ ಮರಣ ರೂಪ ಸಂಸಾರನಿವೃತ್ತಿಯು ಹರಿಗೆ ಸರ್ವಪ್ರಪಂಚನಿರ್ಮಾಣಾದಿಗಳು ಆ ಆ ಪದಾರ್ಥಗಳ ವಿಶೇಷಜ್ಞಾನವಿಲ್ಲದೇ ಕೂಡಲಾರವು. ಕಾರಣ ನಿರುಪಚರಿತ-ಸಾರ್ವಜ್ಞವು ಹರಿಗೇನೇ ಉಂಟು. ಮಿಕ್ಕಾದವರಿಗೆ ಔಪಚಾರಿಕವು ಆದ್ದರಿಂದ ಜೀವಭೇದಕ ಲಕ್ಷಣವಿದ್ದುದರಿಂದ ಜೀವಭೇದವು ಯುಕ್ತವಾದುದು. ಕಾರಣ ಹಿಂದಿನ ಶ್ಲೋಕದಲ್ಲಿ ಹೇಳಿದ ಸ್ವೇಚ್ಛೆಯ ವಿನಃ ಪುಣ್ಯಾಪಾಪಗಳು ಜನನಾದಿಗಳು ಕಾರಣವಲ್ಲ ಎಂಬುದು ಸಿದ್ಧವಾಯಿತು. ಭಗವಂತನ ಚರಿತ್ರಶ್ರವಣದಿಂದ ಕೀರ್ತನದಿಂದ ಅನುಗ್ರಹವು ಆದರಿಂದ ಲಿಂಗದೇಹಭಂಗವು. ನಂತರ ಆನಂದಾನುಭವವು ಆಗುವದು. ಕಾರಣ ಚರಿತ್ರೆಯನ್ನು ವರ್ಣಿಸುವರು. ॥೫೮॥

**ತಾತ್ಪರ್ಯ-** ಈತನ ಸಂಕಲ್ಪ ಮಾತ್ರದಿಂದ ಸೃಷ್ಟಿ ಸ್ಥಿತಿ, ಸಂಹಾರಗಳು ನಡೆಯುವವು. ಪರಮಾತ್ಮನ ನಿಗ್ರಹದಿಂದ ಸಂಸಾರವು, ಅನುಗ್ರಹದಿಂದ ಸಂಸಾರನಿವೃತ್ತಿಯೂ ಆಗುವವು. ।।೫೮।।

**ಅಕ್ಷೌಹಿಣೀನಾಂ ಪತಿಭಿರಸುರೈರ್ನೃಪಲಾಂಛನೈಃ ।**
**ಭುವ ಅಕ್ರಮ್ಯಮಾಣಾನಾಮಭಾವಾಯ ಕೃತೋದ್ಯಮಃ ।।೫೯।।**

**ನೃಪಲಾಂಛನೈಃ** ರಾಜನ ಚಿಹ್ನೆಗಳನ್ನು ಧರಿಸಿದ ವಸ್ತುತಃ ರಾಜರಲ್ಲದ (ದುಷ್ಟರ) **ಅಕ್ಷೌಹಿಣೀನಾಂ** ಅನೇಕ ಅಕ್ಷೌಹಿಣಿಗಳಿಗೆ **ಪತಿಭಿಃ** ಒಡೆಯರಾದ **ಅಸುರೈಃ** ಜರಾಸಂಧ ಮೊದಲಾದ ದೈತ್ಯರಿಂದ **ಭುವಃ** ಭೂಮಿಯು **ಅಕ್ರಮ್ಯಮಾಣಾಯಾಂ ಸತ್ಯಾಂ** ಅಕ್ರಮಿಸುತ್ತಿರಲು **ಅಭಾವಾಯ** ಅಸುರರು ಇಲ್ಲದಂತೆ ಮಾಡಲು ಅವರ ನಾಶಕ್ಕಾಗಿ **ಕೃತೋದ್ಯಮಃ** ಮಾಡಲ್ಪಟ್ಟ ಉತ್ಕೃಷ್ಟವಾದ ಪ್ರಯತ್ನ ಉಳ್ಳವನಾಗಿ,

**ತಾತ್ಪರ್ಯ-** ಈ ದ್ವಾಪರಯುಗದಲ್ಲಿ ದುಷ್ಟಕ್ಷತ್ರಿಯರ ವೇಷದಲ್ಲಿ ಜರಾಸಂಧ ಮುಂತಾದವರೆಲ್ಲರೂ ಇದ್ದಾರೆ. ಈ ಭೂಮಿಗೆ ಭಾರಭೂತರಾದ ರಾಜಾಧಮರಾದ ದೈತ್ಯರನ್ನು ಅಡಗಿಸುವುದಕ್ಕಾಗಿ ಶ್ರೀಕೃಷ್ಣನು ಪ್ರಯತ್ನ ಮಾಡಿದನು. ।।೫೯।।

**ಕರ್ಮಾಣ್ಯಪರಿಮೇಯಾನಿ ಮನಸಾಽಪಿ ಸುರೇಶ್ವರೈಃ ।**
**ಸಹಸಂಕರ್ಷಣಶ್ಚಕ್ರೇ ಭಗವಾನ್ ಮಧುಸೂದನಃ ।।೬೦।।**

**ಭಗವಾನ್** ಭಗವಂತನಾದ **ಮಧುಸೂದನಃ** ಮಧುನಾಮಕ ದೈತ್ಯನಾಶಕ-ನಾದ ಕೃಷ್ಣನು **ಸುರೇಶ್ವರೈಃ** ರಮಾ, ಬ್ರಹ್ಮ, ವಾಯು, ಭಾರತಿ, ಸರಸ್ವತಿ, ಇಂದ್ರ ಮೊದಲಾದವರಿಂದ **ಮನಸಾಽಪಿ** ಮನಸ್ಸಿನಿಂದಲೂ **ಅಪರಿಮೇಯಾನಿ** ಆಲೋಚಿಸಲಶಕ್ಯಗಳಾದ **ಕರ್ಮಾಣಿ** ದುಷ್ಟನಿಗ್ರಹ ಮುಂತಾದವುಗಳನ್ನು **ಸಹಸಂಕರ್ಷಣಃ** ಸಂಕರ್ಷಣನಿಂದ ಕೂಡಿಕೊಂಡು **ಚಕ್ರೇ** ಮಾಡಿದನು. ಇಚ್ಛಾ ಮಾತ್ರದಿಂದ ಭೂಭಾರಹರಣ ಸಮರ್ಥನಾದರೂ ಕೀರ್ತಿಯ ವಿಸ್ತಾರದಿಂದ ಭಕ್ತಾನುಗ್ರಹಕ್ಕಾಗಿ ಅನೇಕ ವ್ಯಾಪಾರ ಮಾಡಿದನು ಎಂದು ಹೇಳುವರು. ।।೬೦।।

**ತಾತ್ಪರ್ಯ-** ಶ್ರೀಕೃಷ್ಣನು ತನ್ನ ಅಣ್ಣನಾದ ಬಲರಾಮನೊಡಗೂಡಿ ನಡೆಸಿದ ಅದ್ಭುತ ಕಾರ್ಯಗಳು ಈ ಬ್ರಹ್ಮಾದಿ ದೇವತೆಗಳಿಗೂ ಊಹಿಸಲು ಅಸಾಧ್ಯ-ವಾಗಿರುವವು. ।।೬೦।।

**ಕಲೌ ಜನಿಷ್ಯಮಾಣಾನಾಂ ದುಃಖಶೋಕತಮೋನುದಮ್ ।**
**ಅನುಗ್ರಹಾಯ ಭೂತಾನಾಂ ಸುಪುಣ್ಯಂ ವ್ಯತನೋದ್ಯಶಃ ।।೬೧।।**

**ಕಲೌ** ಕಲಿಯುಗದಲ್ಲಿ **ಜನಿಷ್ಯಮಾಣಾನಾಂ** ಮುಂದೆ ಹುಟ್ಟುವ **ಭೂತಾನಾಂ ಅನುಗ್ರಹಾಯ** ಅನುಗ್ರಹಕ್ಕಾಗಿ **ದುಃಖಶೋಕತಮೋನುದಂ** ಬಾಹ್ಯದುಃಖ ಅಂತಸ್ತಾಪ ಅಜ್ಞಾನಗಳನ್ನು ಕಳೆಯುವ **ಸುಪುಣ್ಯಂ** ಪರಮಮಂಗಳವಾದ **ಯಶಃ** ಕೀರ್ತಿಯನ್ನು **ವ್ಯತನೋತ್** ವಿಸ್ತರಿಸಿದನು. ॥೬೧॥

**ತಾತ್ಪರ್ಯ–** ಶ್ರೀಕೃಷ್ಣನು ತನ್ನ ಅವತಾರಸಮಯದಲ್ಲಿ ಮಾತ್ರವೇ ಅಲ್ಲದೇ ಮುಂದೆ ಕಲಿಯುಗದಲ್ಲಿ ಹುಟ್ಟತಕ್ಕ ತನ್ನ ಭಕ್ತರ ಪ್ರಯೋಜನಕ್ಕಾಗಿ ಪರಮ-ಪಾವನವಾದ ತನ್ನ ಕೀರ್ತಿಯನ್ನು ಲೋಕದಲ್ಲಿ ವಿಸ್ತಾರಗೊಳಿಸಿದನು. ॥೬೧॥

**ಯಸ್ಮಿನ್ ಸತ್ಕರ್ಣಪೀಯೂಷೇ ಯಶಸ್ತೀರ್ಥವರೇ ಸಕೃತ್ ।**
**ಶ್ರೋತ್ರಾಂಜಲಿರುಪಸ್ಪೃಶ್ಯ ಧುನುತೇ ಕರ್ಮವಾಸನಾಃ ॥೬೨॥**

**ಯಸ್ಮಿನ್** ಯಾವ **ಸತ್ಕರ್ಣಪೀಯೂಷೇ** ಸಜ್ಜನರ ಕಿವಿಗಳಿಗೆ ಅಮೃತದಂತಿರುವ **ಯಶಸ್ತೀರ್ಥವರೇ** ಶ್ರೇಷ್ಠವಾದ ಕೀರ್ತಿ ಪ್ರತಿಪಾದಕ ಶಾಸ್ತ್ರವೆಂಬ ಪವಿತ್ರ ಜಲದಲ್ಲಿ **ಸಕೃತ್** ಒಮ್ಮೆ **ಶ್ರೋತ್ರಾಂಜಲಿಃ** ಕಿವಿಗಳೆಂಬ ಬೊಗಸೆಯುಳ್ಳ (ಪಾತ್ರೆಯುಳ್ಳ) **ಪುಮಾನ್** ಮನುಷ್ಯನು **ಉಪಸ್ಪೃಶ್ಯ** ಶ್ರವಣಾದಿ ರೂಪ ಸ್ನಾನಾದಿಗಳನ್ನು ಮಾಡಿ **ಕರ್ಮವಾಸನಾಃ** ಪಾಪಕರ್ಮ ವಾಸನೆಯನ್ನು **ಧುನುತೇ** ನಾಶ ಪಡಿಸುತ್ತಾನೆ. ॥೬೨॥

**ತಾತ್ಪರ್ಯ–** ಈ ಪರಮಪವಿತ್ರವಾದ ಕೀರ್ತಿಯನ್ನು ಒಂದಾವರ್ತಿ ಕಿವಿಯಿಂದ ಕೇಳಿದವರು ತಮ್ಮ ಕರ್ಮವಾಸನೆಗಳನ್ನು ಕಳೆದುಕೊಂಡು ಸದ್ಗತಿಯನ್ನು ಹೊಂದುವರು. ॥೬೨॥

**ಭೋಜವೃಷ್ಣ್ಯಂಧಕಮಧುಶೂರಸೇನದಶಾರ್ಹಕೈಃ ।**
**ಶ್ಲಾಘನೀಯೇಹಿತಃ ಶಶ್ವತ್ಕುರುಸೃಂಜಯಪಾಂಡುಭಿಃ ॥೬೩॥**

**ಸ್ನಿಗ್ಧಸ್ಮಿತೇಕ್ಷಿತೋದಾರೈರ್ವಾಕ್ಯೈರ್ವಿಕ್ರಮಲೀಲಯಾ ।**
**ನೃಲೋಕಂ ರಮಯಾಮಾಸ ಮೂರ್ತ್ಯಾ ಸರ್ವಾಂಗರಮ್ಯಯಾ ॥೬೪॥**

**ಭೋಜವೃಷ್ಣ್ಯಂಧಕಮಧುಶೂರಸೇನದಶಾರ್ಹಕೈಃ** ಭೋಜರು ವೃಷ್ಣಿಗಳು ಅಂಧಕರು ಮಧು ಶೂರಸೇನ ದಶಾರ್ಹರಿಂದ ಮತ್ತು **ಕುರುಸೃಂಜಯಪಾಂಡುಭಿಃ** ಕುರು ಸೃಂಜಯ ಪಾಂಡು ಮೊದಲಾದವರಿಂದ **ಶಶ್ವತ್** ಯಾವಾಗಲೂ **ಶ್ಲಾಘನೀಯೇಹಿತಃ** ಕೊಂಡಾಡಲ್ಪಡುವ ಅದ್ಭುತ ವ್ಯಾಪಾರ ಉಳ್ಳ ಶ್ರೀಕೃಷ್ಣನು **ಸ್ನಿಗ್ಧಸ್ಮಿತೇಕ್ಷಿತೋದಾರೈಃ** ಸ್ನೇಹ ಪೂರಿತವಾದ ಮಂದಹಾಸ ನೋಟಗಳಿಂದ ಉತ್ಕೃಷ್ಟಗಳಾದ **ವಾಕ್ಯೈಃ** ಮಾತುಗಳಿಂದ **ವಿಕ್ರಮಲೀಲಯಾ** ಪರಾಕ್ರಮ-

ವಿಲಾಸಗಳಿಂದ **ಸರ್ವಾಂಗಸುಂದರಯಾ** ಸರ್ವಾಂಗಗಳಿಂದ ರಮಣೀಯವಾದ **ಮೂರ್ತ್ಯಾ** ತನ್ನ ಶರೀರದಿಂದ **ನೃಲೋಕಂ** ಮನುಷ್ಯರ ಮಧ್ಯದಲ್ಲಿ ಜ್ಞಾನಿಗಳನ್ನು **(ನೃಣಾಂ ಲೋಕಃ) ರಮಯಾಮಾಸ** ಸಂತೋಷ- ಗೊಳಿಸಿದನು. ।।೬೩-೬೪।।

**ತಾತ್ಪರ್ಯ-** ಭೋಜ, ವೃಷ್ಣಿ ಅಂಧಕ ಮಧು, ಶೂರಸೇನ, ದಶಾರ್ಹ, ಕುರು, ಸೃಂಜಯ, ಪಾಂಡು ಮೊದಲಾದ ಕ್ಷತ್ರಿಯ ಕುಲದಿಂದ ಅನವರತವೂ ಕೊಂಡಾಡಲ್ಪಡುತ್ತಿರುವ ಅದ್ಭುತ ವ್ಯಾಪಾರವುಳ್ಳ ಶ್ರೀಕೃಷ್ಣನು ಸ್ನೇಹಪೂರಿತವಾದ ತನ್ನ ನೋಟಗಳಿಂದಲೂ, ತನ್ನ ಮೃದು ಗಂಭೀರ ವಾಕ್ಯಗಳಿಂದಲೂ ತನ್ನ ಗಮನ ವಿಲಾಸಗಳಿಂದಲೂ ಸರ್ವಾಂಗ ಸುಂದರವಾದ ತನ್ನ ದಿವ್ಯಮೂರ್ತಿಯಿಂದಲೂ ಜ್ಞಾನಿಗಳನ್ನು ಸಂತೋಷಗೊಳಿಸಿದನು. ।।೬೩-೬೪।।

**ಯಸ್ಯಾನನಂ ಮಕರಕುಂಡಲಚಾರುಕರ್ಣ-**
**ಭ್ರಾಜತ್ಕಪೋಲಸುಭಗಂ ಸವಿಲಾಸಹಾಸಮ್ ।**
**ನಿತ್ಯೋತ್ಸವಂ ನ ತತೃಪುರ್ದೃಶಿಭಿಃ ಪಿಬಂತ್ಯೋ**
**ನಾರ್ಯೋ ನರಾಶ್ಚ ಮುದಿತಾಃ ಕುಪಿತಾ ನಿಮೇಶ್ಚ** ।।೬೫।।

**ಮಕರಕುಂಡಲಚಾರುಕರ್ಣಭ್ರಾಜತ್ಕಪೋಲಸುಭಗಂ** ಮಕರಕುಂಡಲಗಳಿಂದ ಮನೋಹರಗಳಾದ ಕಿವಿಗಳಿಂದ ಶೋಭಿಸುವ ಕಪೋಲಗಳಿಂದ ಸುಂದರವಾದ **ಸವಿಲಾಸಹಾಸಂ** ಭಾವಸಹಿತ ಮಂದಹಾಸ ಉಳ್ಳ **ನಿತ್ಯೋತ್ಸವಂ** ನಿತ್ಯದಲ್ಲಿಯೂ ಉತ್ಸವವುಳ್ಳ ತತ್‌ಕ್ಷಣದಲ್ಲಿ ಆನಂದ ಜನಕವಾದ **ಯಸ್ಯ** ಯಾವ ಶ್ರೀಕೃಷ್ಣನ **ಆನನಂ** ಮುಖವನ್ನು **ದೃಶಿಭಿಃ** ಕಣ್ಣುಗಳಿಂದ **ಪಿಬಂತ್ಯಃ** ನೋಡತಕ್ಕ **ನಾರ್ಯಃ** ಸ್ತ್ರೀಯರು **ನರಾಃ ಚ** ಪುರುಷರೂ ಸಹ **ಮುದಿತಾಃ** ಸಂತೋಷಗೊಂಡರು. **ನ ತತೃಪುಃ** ಎಷ್ಟು ನೋಡಿದರೂ ಅಲಂಬುದ್ಧಿಯನ್ನು ಹೊಂದಲಿಲ್ಲ. **ನಿಮೇಃ** ರೆಪ್ಪೆಗಳ ಮೇಲೆ **ಕುಪಿತಾಃ** ಸಿಟ್ಟಾದರು. ಭಗವಂತನ ದರ್ಶನಕ್ಕೆ ತಡೆಯಾಗುವದರಿಂದ ಕೋಪಗೊಂಡರು. ನಿಮೇಶ್ಚ ಎಂಬ ಚ ಶಬ್ದದಿಂದ ನಿಮೇಷವನ್ನು ನಿರ್ಮಿಸಿದವನ ಮೇಲೂ ಕುಪಿತರಾದರು ಎಂದು ಸೂಚಿಸುವರು. ಮುಂದೆಯೂ ಹೇಳುವರು. ''ಜಡ ಉದೀಕ್ಷತಾಂ ಪಕ್ಷ್ಮಕೃದ್ದೃಶಾಂ'' ಎಂದು. ರೆಪ್ಪೆಯನ್ನು ಮಾಡಿದವನನ್ನು ನಿಂದಿಸುವರೆಂದು ಸಂಕ್ಷೇಪವಾಗಿ ತಿಳಿದರೆ ವಿಸ್ತಾರವಾಗಿ ತಿಳಿಯಲು ಇಚ್ಛಿಸುವರು ಕಾರಣ ಶ್ರೀಕೃಷ್ಣಚರಿತ್ರೆಯನ್ನು ಸಂಕ್ಷೇಪವಾಗಿ ಹೇಳುವರು. ।।೬೫।।

**ತಾತ್ಪರ್ಯ-** ಮಕರಕುಂಡಲದಿಂದ ಶೋಭಿತವಾದ ಕಿವಿಗಳಿಂದ ಸುಂದರವಾದ ಕಪೋಲಗಳಿಂದಲೂ ಮನೋಹರವಾದ ಶ್ರೀಕೃಷ್ಣನು ಮುಖಕಮಲಸೌಂದರ್ಯ- ವನ್ನು ನೋಡಿದ ಸ್ತ್ರೀಪುರುಷರು ಎಷ್ಟು ನೋಡಿದರೂ ತೃಪ್ತಿಯಿಲ್ಲದೆ ತಮ್ಮ

ಕಣ್ಣುಗಳಿಗೆ ಭಗವಂತನ ದರ್ಶನಕ್ಕೆ ತಡೆಯುಂಟುಮಾಡುವ ರೆಪ್ಪೆಗಳ ಅಭಿಮಾನಿಯಾದ ನಿಮಿಯನ್ನು ನಿಂದಿಸಿದರು. ।।೬೫।।

**ಜಾತೋ ಗತಃ ಪಿತೃಗೃಹಾದ್ವ್ರಜಮೇಧಿತೋಽತ್ರ**
**ಹತ್ವಾ ರಿಪೂನ್ ಸುತಶತಾನಿ ಕೃತೋರುದಾರಃ ।**
**ಉತ್ಪಾದ್ಯ ತೇಷು ಪುರುಷಃ ಕ್ರತುಭಿಃ ಸಮೀಜೇ**
**ಆತ್ಮಾನಮಾತ್ಮನಿಗಮಂ ಪ್ರಥಯನ್ ಜನೇಷು ।।೬೬।।**

**ಜಾತಃ** ತತ್‌ಕ್ಷಣದಲ್ಲಿಯೇ ಅವತರಿಸಿದನು. **ಪಿತೃಗೃಹಾತ್** ವಸುದೇವನ ಕಾರಾಗೃಹದಿಂದ **ವ್ರಜಂ** ಗೋಕುಲವನ್ನು ಕುರಿತು **ಗತಃ** ಹೋದನು. **ಅತ್ರ** ಗೋಕುಲದಲ್ಲಿ, **ಏಧಿತಃ ಸನ್** ಲೋಕದೃಷ್ಟಿಯಿಂದ ಬೆಳೆದವನಾಗಿ **ರಿಪೂನ್** ಪೂತನಾಳಿಂದ ಆರಂಭಮಾಡಿ ಕಂಸನ ಪರ್ಯಂತ ಎಲ್ಲ ಶತ್ರುಗಳನ್ನು **ಹತ್ವಾ** ಸಂಹಾರಮಾಡಿ **ಕೃತೋರುದಾರಃ** ವಿವಾಹಿತ ಬಹಳ ಭಾರ್ಯೆಯರುಳ್ಳವನಾಗಿ **ತೇಷು** ಆ ಪತ್ನಿಯರಲ್ಲಿ **ಸುತಶತಾನಿ** ಇಲ್ಲಿ ಶತಯೆಂದರೆ ಬಹಳವೆಂದರ್ಥ. ವಿವಾಹವಾದ ಗೋಪಕನ್ಯೆಯರಲ್ಲಿ ಹತ್ತುಲಕ್ಷಜನ ಮಕ್ಕಳನ್ನು ರುಕ್ಮಿಣಿ ಮುಂತಾದವರಲ್ಲಿ ಪ್ರದ್ಯುಮ್ನಾದಿಗಳನ್ನು ಹದಿನಾರು ಸಾವಿರ ಪತ್ನಿಯರಲ್ಲಿ ಒಬ್ಬೊಬ್ಬರಲ್ಲಿ ಹತ್ತು ಹತ್ತು ಜನ ಗಂಡುಮಕ್ಕಳು ಒಂದೊಂದು ಕನ್ಯಾವನ್ನೂ ಕೂಡಾ **ಉತ್ಪಾದ್ಯ** ಹುಟ್ಟಿಸಿ **ಜನೇಷು** ಸಜ್ಜನರಲ್ಲಿ **ಆತ್ಮನಿಗಮಂ** ತನ್ನಿಂದ ವಿಧಾಯಕವೆಂದು ವಿಹಿತವಾದ ವೇದವನ್ನು **ಪ್ರಥಯನ್** ಪ್ರಸಿದ್ಧಪಡಿಸುತ್ತಾ **ಪುರುಷಃ** ಪೂರ್ಣಷಡ್ಗುಣನಾದ ಕೃಷ್ಣನು **ಕ್ರತುಭಿಃ** ಅಶ್ವಮೇಧಾದಿಗಳಿಂದ **ಆತ್ಮಾನಂ** ತನ್ನನ್ನು **ಸಮೀಜೇ** ಪೂಜಿಸಿದನು. ।।೬೬।।

**ತಾತ್ಪರ್ಯ-** ಇಂತಹ ದಿವ್ಯ ಸುಂದರಮೂರ್ತಿಯಾದ ಕೃಷ್ಣನು ಲೀಲಾಮಾನುಷ ವಿಗ್ರಹದಿಂದ ವಸುದೇವನ ಮನೆಯಲ್ಲಿ ಜನಿಸಿ ನಿತ್ಯವೂ ವೃದ್ಧನಾದರೂ ಲೋಕದೃಷ್ಟಿಯಿಂದ ಗೋಕುಲದಲ್ಲಿ ಬೆಳೆಯುತ್ತಿದ್ದನು. ಬಾಲ್ಯದಲ್ಲಿಯೇ ಪೂತನಾ ಮೊದಲಾಗಿ ಕಂಸಪರ್ಯಂತ ರಾಕ್ಷಸರನ್ನು ಸಂಹರಿಸಿದನು. ಸಾವಿರಾರು ಜನ ಸ್ತ್ರೀಯರನ್ನು ವಿವಾಹವಾದನು. ಒಬ್ಬೊಬ್ಬರಲ್ಲಿ ನೂರು ನೂರು ಜನ ಮಕ್ಕಳನ್ನು ಪಡೆದನು. ಹದಿನಾರು ಸಾವಿರದ ನೂರು ಜನ ಪತ್ನಿಯರಲ್ಲಿ ಹತ್ತು ಜನಪುತ್ರರು ಒಂದೊಂದು ಕನ್ಯೆಯನ್ನು ಪಡೆದನು. ರುಕ್ಮಿಣೀ ಮೊದಲಾದವರಲ್ಲಿ ಪ್ರದ್ಯುಮ್ನಾದಿಗಳನ್ನು ಹುಟ್ಟಿಸಿದನು. ತನ್ನ ಆಜ್ಞಾರೂಪವಾದ ವೇದಪ್ರಾಮಾಣ್ಯವನ್ನು ಲೋಕದಲ್ಲಿ ಸ್ಥಿರಪಡಿಸಲು ತನ್ನ ಕೈಯಿಂದಲೇ ಅನೇಕ ಯಜ್ಞಗಳನ್ನು ನಡೆಸಿ ಆ ಮೂಲಕವಾಗಿ ತನ್ನನ್ನೇ ತಾನು ಆರಾಧಿಸುತ್ತಿದ್ದನು. ।।೬೬।।

**ಪೃಥ್ವ್ಯಾಃ ಸ ವೈ ಗುರುಭರಂ ಕ್ಷಪಯನ್ ಕುರೂಣಾ-**
**ಮಂತಃ ಸಮುತ್ಥಕಲಿನಾ ಯುಧಿ ಭೂಪಬಂಧಮ್** (ವರ್ಯಾನ್) ।
**ದೃಷ್ಟ್ಯಾ ವಿಧೂಯ ವಿಜಯೇ ಜಯಮುದ್ವಿಘುಷ್ಯ**
**ಪ್ರೋಚ್ಯೋದ್ಧವಾಯ ಚ ವರಂ ಸಮಗಾತ್ಸ್ವಧಾಮ ॥೬೭॥**

**ಸಃ** ಕೃಷ್ಣಪರಮಾತ್ಮನು **ಪೃಥ್ವ್ಯಾಃ** ಭೂಮಿಯ **ಗುರುಭರಂ** ಮಹತ್ತರವಾದ ಭಾರವನ್ನು **ಕ್ಷಪಯನ್** ನಾಶಮಾಡುವ ಇಚ್ಛೆಯಿಂದ **ಕುರೂಣಾಂ ಅಂತಃ** ಕೌರವ,ಪಾಂಡವರ ಮಧ್ಯದಲ್ಲಿ **ಸಮುತ್ಥ** ಉಂಟಾದ **ಕಲಿನಾ** ಕಲಹ ನಿಮಿತ್ತದಿಂದ **ಯುಧಿ** ಯುದ್ಧದಲ್ಲಿ **ಭೂಪಬಂಧಂ** ರಾಜರ ಸಮೂಹದಿಂದ ರಚಿತವಾದ ಚಕ್ರಾದಿಬಂಧವನ್ನು (ಭೂಪವರ್ಯಾನ್ ಎಂದೂ ಪಾಠ ಇದೆ. ಆಗ ಶ್ರೇಷ್ಠರಾದ ರಾಜರುಗಳನ್ನು ಎಂದು ಅರ್ಥ.) **ವಿಧೂಯ** ನಾಶಪಡಿಸಿ **ವಿಜಯೇ** ಅರ್ಜುನನಲ್ಲಿ **ಜಯಂ** ಜಯವನ್ನು ಅಂದರೆ ಅರ್ಜುನನೇ ಯುದ್ಧದಲ್ಲಿ ಎಲ್ಲ ಶತ್ರುಗಳನ್ನು ಗೆದ್ದವನೆಂದು **ಉದ್ವಿಘುಷ್ಯ** ಭೇರಿ ತಾಡನಾದಿಗಳಿಂದ ಪ್ರಸಿದ್ಧಗೊಳಿಸಿ, **ಉದ್ಧವಾಯ** ಉದ್ಧವನಿಗೆ, **ವರಂ** ಸ್ವೀಕಾರಯೋಗ್ಯವಾದ ಜ್ಞಾನವನ್ನು **ಪರಂ** ಸರ್ವೋತ್ತಮ ತತ್ತ್ವವನ್ನು **ಪ್ರೋಚ್ಯ** ಉಪದೇಶಿಸಿ, **ಸ್ವಧಾಮ** ಪರಂಧಾಮಕ್ಕೆ **ಸಮಗಾತ್** ಹೋದನು. ಅಥವಾ ತನ್ನ ಮೂಲರೂಪವನ್ನು ಹೊಂದಿದನು. ಒಂದಾದನು.

**ತಾತ್ಪರ್ಯ-** ಭಾರತಯುದ್ಧದಲ್ಲಿ ಪಾಂಡವರಿಗೆ ಸಹಾಯಮಾಡುವ ನೆಪದಿಂದ ಅನೇಕ ದುಷ್ಟಕ್ಷತ್ರಿಯರನ್ನು ತನ್ನ ದೃಷ್ಟಿಮಾತ್ರದಿಂದ ನಿಗ್ರಹಿಸಿ ಭೂಭಾರವನ್ನು ತಗ್ಗಿಸಿ ಅರ್ಜುನನಿಗೆ ಜಯವನ್ನು ಘೋಷಿಸಿ ಕೊನೆಗೆ ಪರಮಭಕ್ತನಾದ ಉದ್ಧವನಿಗೆ ತತ್ತ್ವೋಪದೇಶವನ್ನು ಮಾಡಿ ತನ್ನ ಸ್ಥಾನವಾದ ವೈಕುಂಠಕ್ಕೆ ತೆರಳಿದನು. ಮೂಲರೂಪದಲ್ಲಿ ಐಕ್ಯವನ್ನು ಅಂದರೇ ಸಂಶ್ಲೇಷವಿಶೇಷವನ್ನು ಹೊಂದಿದನು.

**॥ ಇತಿ ಶ್ರೀಮದ್ಭಾಗವತೇ ನವಮಸ್ಕಂಧೇ ಏಕವಿಂಶೋಧ್ಯಾಯಃ ॥**

**॥ ಸಮಾಪ್ತಶ್ಚಾಯಂ ಸ್ಕಂಧಃ ॥**

**॥ಶ್ರೀಕೃಷ್ಣಾರ್ಪಣಮಸ್ತು ॥**

★★★



ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ನಂತರ ಕಲಿಯುಗದಲ್ಲಿ ಧರ್ಮಮಾರ್ಗದ ಪರಿಪಾಲನೆಗಾಗಿ ಶ್ರೀಬಾದರಾಯಣರು ಭಾಗವತವನ್ನು ರಚಿಸಿರುವರು. ಮಹಾಪುರಾಣವಾದರೂ ಇದಕ್ಕೆ ಮೋಕ್ಷಶಾಸ್ತ್ರವೆಂದೇ ಪ್ರಸಿದ್ಧಿಯಿದೆ. ಪುರಾಣಮಾರ್ಗದಲ್ಲಿಯ ಪಥಿಕರಿಗೆ ಮಾರ್ಗದರ್ಶನವನ್ನು ನೀಡುವ ಭಾಗವತತಾತ್ಪರ್ಯವನ್ನು ಶ್ರೀಭಗವತ್ಪಾದರು ಅನುಗ್ರಹಿಸಿರುವರು.

ನವಮಸ್ಕಂಧದಲ್ಲಿ ಸೂರ್ಯವಂಶಕ್ಕೆ ಭೂಷಣನಾದ ಶ್ರೀರಾಮಚಂದ್ರನ ಚರಿತ್ರವೂ, ಚಂದ್ರವಂಶವನ್ನು ಪಾವನಗೊಳಿಸಿದ ಶ್ರೀಕೃಷ್ಣಾವತಾರವೂ ವರ್ಣಿತವಾಗಿದೆ. ಜೊತೆಗೆ ಪುಣ್ಯಸ್ಮರಣರಾದ ಉಭಯವಂಶದ ಅನೇಕ ರಾಜರ್ಷಿಗಳ ಚರಿತ್ರೆಗಳೂ ಕಥಿತವಾಗಿವೆ.

ಶ್ರೀಪಾದಪುತ್ರರಾದ ಶ್ರೀಗುತ್ತಲ ರಂಗಾಚಾರ್ಯರು, ಶ್ರೀವಿಜಯಧ್ವಜತೀರ್ಥೀಯ, ಛಲಾರಿ, ಶ್ರೀಸತ್ಯಧರ್ಮತೀರ್ಥೀಯ ಮೊದಲಾದ ಮಹನೀಯರ ಟಿಪ್ಪಣಿಗಳಿಗನುಗುಣವಾಗಿ ಶ್ಲೋಕಗಳ ಅರ್ಥವನ್ನೂ ತಾತ್ಪರ್ಯವನ್ನೂ ವಿವರಿಸಿದ್ದಲ್ಲದೇ, ಸಂಬಂಧಪಟ್ಟಲ್ಲಿ ಭಾರತದಲ್ಲಿಯ ಕಥಾನಕಗಳನ್ನೂ ತಮ್ಮ ಕನ್ನಡಾನುವಾದದಲ್ಲಿ ನಿರೂಪಿಸಿರುವರು. ಇದರಿಂದ ಪಾಮರರಿಗಷ್ಟೇ ಅಲ್ಲದೇ ಪಂಡಿತರಿಗೂ ಅವರ ಕೃತಿಯು ತುಂಬಾ ಸಹಾಯಕವಾಗಿದೆ.